# ಕರ್ನಾಟಕದಲ್ಲಿ ಬೌದ್ಧಧರ್ಮದ ಪುನರುಜ್ಜೀವನ

## ( ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ )

ಕನ್ನಡ ವಿಶ್ವವಿದ್ಯಾಲಯ, ಹಂಪಿ. ಚರಿತ್ರೆ ವಿಭಾಗಕ್ಕೆ
ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ


ಸಂಶೋಧಕರು

ಬಿ. ಕೆ. ಸಂಘಸೇನಾವರ್ಧನ

ಮಾರ್ಗದರ್ಶಕರು

ಡಾ. ಎನ್. ಚಿನ್ನಸ್ವಾಮಿ ಸೋಸಲೆ



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ
2006

# ಕರ್ನಾಟಕದಲ್ಲಿ ಬೌದ್ಧಧರ್ಮದ ಪುನರುಜ್ಜೀವನ

## (ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ)

ಕನ್ನಡ ವಿಶ್ವವಿದ್ಯಾಲಯ, ಹಂಪಿ. ಚರಿತ್ರೆ ವಿಭಾಗಕ್ಕೆ
ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು

ಬಿ. ಕೆ. ಸಂಘಸೇನಾವರ್ಧನ



ಮಾರ್ಗದರ್ಶಕರು

ಡಾ. ಎನ್. ಚಿನ್ನಸ್ವಾಮಿ ಸೋಸಲೆ



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ. ವಿದ್ಯಾರಣ್ಯ
2006

# ಸಂಶೋಧಕರ ದೃಢೀಕರಣ ಪತ್ರ

ಶ್ರೀ. ಬಿ. ಕೆ. ಸಂಘಸೇನಾವರ್ಧನ ಆದ ನಾನು 'ಕರ್ನಾಟಕದಲ್ಲಿ ಬೌದ್ಧಧರ್ಮದ ಪುನರುಜ್ಜೀವನ' (ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ) ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಡಾ. ಎನ್. ಚಿನ್ನಸ್ವಾಮಿ ಸೋಸಲೆ, ಹಿರಿಯ ಶ್ರೇಣಿ ಅಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದೇನೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 22.02.2006

ಸ್ಥಳ : ವಿದ್ಯಾರಣ್ಯ

ಬಿ. ಕೆ. ಸಂಘಸೇನಾವರ್ಧನ

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ. ಬಿ. ಕೆ. ಸಂಘಸೇನಾವರ್ಧನ ಇವರು 'ಕರ್ನಾಟಕದಲ್ಲಿ ಬೌದ್ಧಧರ್ಮದ ಪುನರುಜ್ಜೀವನ' (ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ) ಎಂಬ ಶೀರ್ಷಿಕೆಯ ಈ ಸಂಶೋಧನಾ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಇವರು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 22-02-06

ಸ್ಥಳ : ವಿದ್ಯಾರಣ್ಯ

ಎನ್. ಚಿನ್ನಸ್ವಾಮಿ ಸೋಸಲೆ 22/02/06

ಡಾ. ಎನ್. ಚಿನ್ನಸ್ವಾಮಿ ಸೋಸಲೆ

ಮಾರ್ಗದರ್ಶಕರು

# ಕೃತಜ್ಞತೆಗಳು

‘ಕರ್ನಾಟಕದಲ್ಲಿ ಬೌದ್ಧಧರ್ಮದ ಪುನರುಜ್ಜೀವನ’ (ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ) ಈ ಸಂಶೋಧನಾ ಅಧ್ಯಯನವನ್ನು ಕೈಗೊಳ್ಳಲು ಅವಕಾಶ ನೀಡಿದ ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಮಾನ್ಯ ಕುಲಪತಿಗಳಾದ ಡಾ. ಬಿ. ಎ. ವಿವೇಕ ರೈ, ಕುಲಸಚಿವರಾದ ಡಾ. ಕರೀಗೌಡ ಬೀಚನಹಳ್ಳಿ ಮತ್ತು ಅಧ್ಯಯನಾಂಗದ ನಿರ್ದೇಶಕರಾದ ಡಾ. ಟಿ. ಆರ್. ಚಂದ್ರಶೇಖರ ಅವರಿಗೆ ಪ್ರಥಮದಲ್ಲಿ ನನ್ನ ಹಾರ್ದಿಕ ವಂದನೆಗಳನ್ನು ಸಲ್ಲಿಸುತ್ತೇನೆ.

ನನ್ನ ಆಸಕ್ತಿಯ ನೆಲೆಗಳ ಭಾಗವಾಗಿದ್ದ ಪ್ರಸ್ತುತ ಅಧ್ಯಯನ ಕ್ಷೇತ್ರಕ್ಕೆ ಸೂಕ್ತ ಶೀರ್ಷಿಕೆ ನೀಡಿ, ಉತ್ತಮ ಸಲಹೆ ಸೂಚನೆಗಳನ್ನು ಕೊಟ್ಟು ಅಧ್ಯಯನವನ್ನು ಯಶಸ್ವಿಯಾಗಿ ಪೂರ್ಣಗೊಳಿಸಲು ಕಾರಣರಾದ ಮಾರ್ಗದರ್ಶಕರಾದ ಚರಿತ್ರೆ ವಿಭಾಗದ ಡಾ. ಎಸ್. ಚಿನ್ನಸ್ವಾಮಿ ಸೋಸಲೆ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಅದೇ ರೀತಿ ಚರಿತ್ರೆ ವಿಭಾಗದ ಮುಖ್ಯಸ್ಥರಾದ ಡಾ. ಕೆ. ಮೋಹನಕೃಷ್ಣ ರೈ ಹಾಗೂ ಪ್ರೊ. ಲಕ್ಷ್ಮಣ್ ತೆಲಗಾವಿ, ಡಾ. ಟಿ. ಪಿ. ವಿಜಯ್, ಡಾ. ಸಿ. ಆರ್. ಗೋವಿಂದರಾಜು, ಡಾ. ವಿರೂಪಾಕ್ಷ ಪೂಜಾರಹಳ್ಳಿ ಮತ್ತು ವಿಭಾಗದ ಸರ್ವ ಸಿಬ್ಬಂದಿಗೆ ನನ್ನ ವಂದನೆಗಳನ್ನು ಸಲ್ಲಿಸುತ್ತೇನೆ.

ಪ್ರಸ್ತುತ ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದ ಸಾಹಿತ್ಯದ ಅನ್ವೇಷಣೆಯಲ್ಲಿ ನೆರವಾದ ಎಲ್ಲ ಗ್ರಂಥಾಲಯಗಳ ಮುಖ್ಯಸ್ಥರುಗಳಿಗೆ, ವಿಶೇಷವಾಗಿ ಕನ್ನಡ ವಿಶ್ವವಿದ್ಯಾಲಯ, ಕರ್ನಾಟಕ ವಿಶ್ವವಿದ್ಯಾಲಯ, ಹೈದರಾಬಾದ್ ಸೆಂಟ್ರಲ್ ವಿಶ್ವವಿದ್ಯಾಲಯ, ಮಿಥಿಕ್ ಸೊಸೈಟಿ, ಸೆರಿಕ್, ಐ.ಸಿ.ಹೆಚ್.ಆರ್, ಐ.ಐ.ಎಂ ಗ್ರಂಥಾಲಯ , ನಿಯಾಸ್ ಗ್ರಂಥಾಲಯ ಬೆಂಗಳೂರು, ಐ.ಸಿ.ಎಸ್.ಎಸ್.ಆರ್. ಗ್ರಂಥಾಲಯ ಹಾಗೂ ಪಾರ್ಲಿಮೆಂಟ್ ಸಂಸದೀಯ ಗ್ರಂಥಾಲಯ, ನವದೆಹಲಿ ಇಲ್ಲಿನ ಸಿಬ್ಬಂದಿ ವರ್ಗಕ್ಕೆ ನನ್ನ ಅನಂತ ವಂದನೆಗಳನ್ನು ಸಲ್ಲಿಸುತ್ತೇನೆ. ಕ್ಷೇತ್ರಕಾರ್ಯಮಾಡಿದ ಸಂದರ್ಭದಲ್ಲಿ ಸಂದರ್ಶನಕ್ಕೆ ಅವಕಾಶ ಕಲ್ಪಿಸಿ ಮಾಹಿತಿ ನೀಡಿದ ಎಲ್ಲ ಬೌದ್ಧ ವಿಹಾರಗಳ ಪೂಜ್ಯ ಬಿಕ್ಕುಗಳಿಗೆ, ಹಿರಿಯ ಬೌದ್ಧ ಉಪಾಸಕ, ಉಪಾಸಕಿಯರಿಗೆ, ಅಂಚೆ ಮೂಲಕ ಮಾಹಿತಿ ನೀಡಿದ ಬೌದ್ಧ ಚಿಂತಕರಿಗೆ, ಸಂಘಸಂಸ್ಥೆಗಳಿಗೆ, ಬೌದ್ಧ ಆಸಕ್ತರಿಗೆ ಹೃತ್ಪೂರ್ವಕ ವಂದನೆಗಳು.

ಪ್ರಸ್ತುತ ಪಿಎಚ್.ಡಿ ಅಧ್ಯಯನ ಕೈಗೊಳ್ಳಲು ಅನುಮತಿಸಿದ ಸಾರ್ವಜನಿಕ ಶಿಕ್ಷಣ ಇಲಾಖೆಯ ಮಾನ್ಯ ಆಯುಕ್ತರಾಗಿದ್ದ ಹಾಗೂ ಇಂದಿನ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣದ ಕಾರ್ಯದರ್ಶಿಗಳಾದ ಮಾನ್ಯಶ್ರೀ. ತ. ಮ. ವಿಜಯಭಾಸ್ಕರ ರವರಿಗೆ, ಸೃಜನಶೀಲತೆಗೆ ಸದಾ ಪ್ರೋತ್ಸಾಹ ನೀಡುವ ಹಾಗೂ ನನಗೆ ಸತತ ಪ್ರೇರಣೆ ನೀಡುತ್ತಿರುವ ಹಿರಿಯ ಐ.ಎ.ಎಸ್ ಅಧಿಕಾರಿಗಳಾದ ಮಾನ್ಯಶ್ರೀ. ವಿ. ಪಿ. ಬಳಿಗಾರ ಮತ್ತು ದೆಹಲಿ ಕಾನೂನು ಸಚಿವಾಲಯದ ಉನ್ನತಾಧಿಕಾರಿಗಳಾದ ಮಾನ್ಯಶ್ರೀ ಶಂಭು ಕಲ್ಲೋಳಿಕರ ಐ.ಎ.ಎಸ್ ಅವರಿಗೆ ಅನಂತ ವಂದನೆಗಳನ್ನು ಸಲ್ಲಿಸುತ್ತೇನೆ. ತಮ್ಮ ಸಂಗ್ರಹದಲ್ಲಿನ ಉತ್ತಮ ಗ್ರಂಥಗಳನ್ನು ನೀಡುವುದರೊಂದಿಗೆ ಆದರ ತೋರಿಸಿದ ಕೊಪ್ಪಳದ ಶ್ರೀ. ಬಿ. ಆರ್. ತುಬಾಕಿಯವರಿಗೆ ಹಾಗೂ ಪ್ರಸ್ತುತ ಅಧ್ಯಯನಕ್ಕೆ ಉತ್ತಮ ಮುನ್ಸೂಚನೆಗಳನ್ನು ನೀಡಿದ ಹಿರಿಯರಾದ ಡಾ. ಮಲ್ಲೇಪುರಂ ಜಿ. ವೆಂಕಟೇಶ ರವರಿಗೆ, ಡಾ. ದೇವರಕೊಂಡಾರೆಡ್ಡಿಯವರಿಗೆ ನನ್ನ ಅನಂತ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ನನ್ನ ಬಗ್ಗೆ ಅಪಾರ ಕಾಳಜಿ ಮತ್ತು ಪ್ರೀತಿ ಹೊಂದಿದ ಹಿರಿಯರಿಗೆ, ಮಿತ್ರಬಾಂಧವರಿಗೆ, ಸಾ.ಶಿ.ಇಲಾಖೆಯ ಸಹೋದ್ಯೋಗಿಗಳಿಗೆ ಹಾಗೂ ನನ್ನ ಪೂಜ್ಯ ತಂದೆ ತಾಯಿಗಳಿಗೆ ಗೌರವದ ವಂದನೆಗಳನ್ನು ಸಲ್ಲಿಸುತ್ತೇನೆ. ನನ್ನ ಸಿಹಿಕಹಿ ಬದುಕಿನಲ್ಲಿ ಸಾಂಗತ್ಯ ನೀಡಿರುವ ಮಡದಿ ಶ್ರೀಮತಿ ಮೀನಾಕ್ಷಿ, ಮಕ್ಕಳಾದ ವೋಲ್ಗಾ, ವರ್ಧಿನಿ ಮತ್ತು ಕಾನ್ಶಿರಾಂ ಇವರುಗಳಿಗೆ ನನ್ನ ಆದರದ ಸ್ಮರಣೆಗಳು.

ಕೊನೆಯದಾಗಿ ಈ ಸಂಶೋಧನಾ ಅಧ್ಯಯನದ ಹಸ್ತಪ್ರತಿಯನ್ನು ಅಚ್ಚುಕಟ್ಟಾಗಿ ಡಿ.ಟಿ.ಪಿ. ಮಾಡಿದ ಕುಮಾರ ಅನಿಲ್ ಮೋದಗಿ, ಶ್ರೀ. ಸಂಗಪ್ಪ ತಿಗಡಿ ಹಾಗೂ ಛಾಯಾ ಚಿತ್ರಗಳನ್ನು ಸ್ಕ್ಯಾನ್‌ಮಾಡಿ ಹೊಂದಿಸಿದ ಕುಮಾರಿ ಸುರೇಖಾ, ಶ್ರೀ. ಅಮೃತ ಜಾಧವ ಇವರುಗಳಿಗೆ ನನ್ನ ವಂದನೆಗಳು ಸಲ್ಲುತ್ತವೆ. ಒಟ್ಟಾರೆ ಈ ಅಧ್ಯಯನವನ್ನು ಯಶಸ್ವಿಯಾಗಿ ಕೈಗೊಳ್ಳಲು ಸಹಾಯಮಾಡಿದ ಸರ್ವರಿಗೂ ಮತ್ತೊಮ್ಮೆ ನನ್ನ ಹೃತ್ಪೂರ್ವಕ ವಂದನೆಗಳನ್ನು ಸಲ್ಲಿಸುತ್ತೇನೆ.

ದಿನಾಂಕ : 22.02.2006

ಸ್ಥಳ : ವಿದ್ಯಾರಣ್ಯ

(ಬಿ. ಕೆ. ಎಸ್. ವರ್ಧನ)

# ಕರ್ನಾಟಕದಲ್ಲಿ ಬೌದ್ಧಧರ್ಮದ ಪುನರುಜ್ಜೀವನ

## (ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ)

ಪರಿವಿಡಿ

## ಅನುಬಂಧಗಳು

I. ಬೌದ್ಧ ವಿಹಾರಗಳು, ಬೌದ್ಧ ಆಚರಣೆಗಳು ಹಾಗೂ ಪ್ರಮುಖ ವಕ್ತಾರರ ಭಾವಚಿತ್ರಗಳು.

II. ಕ್ಷೇತ್ರ ಕಾರ್ಯಕ್ಕೆ ಅಧ್ಯಯನಕ್ಕೆ ಬಳಸಿದ ಪ್ರಶ್ನಾವಳಿಗಳು.

- ಅ) ಬೌದ್ಧ ಉಪಾಸಕ, ಉಪಾಸಕಿಯರ ಸಂದರ್ಶನ, ಮಾಹಿತಿ ಸಂಗ್ರಹ ನಮೂನೆ.
- ಬ) ಬೌದ್ಧ ವಿಹಾರಗಳು ಹಾಗೂ ಸಾಂಸ್ಕೃತಿಕ, ಶೈಕ್ಷಣಿಕ ಸಂಘ ಸಂಸ್ಥೆಗಳ ಸಂದರ್ಶನ, ಮಾಹಿತಿ ಸಂಗ್ರಹ ನಮೂನೆ.
- ಕ) ಕರ್ನಾಟಕದ ಪ್ರಗತಿಪರ ಸಾಹಿತಿಗಳು, ಬುದ್ಧಿ ಜೀವಿಗಳು ಮತ್ತು ದಲಿತ ಬಹುಜನ ಚಳುವಳಿಯ ನೇತಾರರ ಸಂದರ್ಶನ, ಮಾಹಿತಿ ಸಂಗ್ರಹ ನಮೂನೆ.

III. ಅಧ್ಯಯನದಲ್ಲಿ ಸಂದರ್ಶಿಸಿದ, ಅಂಚೆಯಿಂದ ಮಾಹಿತಿ ನೀಡಿದ ವಕ್ತೃಗಳ ಪಟ್ಟಿ

- ಅ) ಸಂಶೋಧನಾರ್ಥಿ ಸಂದರ್ಶಿಸಿದ ಬೌದ್ಧ ಉಪಾಸಕ, ಉಪಾಸಕಿಯರು ಹಾಗೂ ಧಮ್ಮ ಸಂಘಟಕರು.
- ಬ) ಪ್ರಶ್ನಾವಳಿಯ ಮೂಲಕ ಪ್ರತಿಕ್ರಿಯೆ ಕಳುಹಿಸಿದವರು
  - i) ಬೌದ್ಧ ಉಪಾಸಕರು
  - ii) ಬೌದ್ಧ ಸಂಘ ಸಂಸ್ಥೆಗಳು
  - iii) ಬೌದ್ಧ ಚಿಂತಕರು, ಪ್ರಗತಿಪರ ಸಾಹಿತಿಗಳು ಮತ್ತು ದಲಿತ ಬಹುಜನ ಚಳುವಳಿಯ ನೇತಾರರು.

IV. ಬೌದ್ಧಧರ್ಮ ಸ್ವೀಕರಿಸಿದವರಿಗೆ ನೀಡುವ ಪ್ರಮಾಣ ಪತ್ರದ ಮಾದರಿಗಳು.

V. ಅಧ್ಯಯನಕ್ಕೆ ಸಂಬಂಧಿಸಿದ ಸುದ್ದಿ ಪತ್ರಿಕೆಗಳ ಮಹತ್ವದ ಕ್ಲಿಪಿಂಗ್ಸ್‌ಗಳು.

VI. ಬೆಂಗಳೂರಿನಲ್ಲಿ 1920 ರಲ್ಲಿ ನಡೆದ ದಕ್ಷಿಣ ಭಾರತ ಬೌದ್ಧ ಸಮ್ಮೇಳನದ ಗೊತ್ತುವಳಿಗಳು.

VII. ಸಂಶೋಧನಾರ್ಥಿ ಕ್ಷೇತ್ರ ಕಾರ್ಯಕ್ಕಾಗಿ ಸಂದರ್ಶಿಸಿದ ಸ್ಥಳಗಳು.

VIII. ಸಂವಿಧಾನ ತಿದ್ದುಪಡಿ ಆದೇಶ ಸಂಖ್ಯೆ : 15/1990 ರ ಕರ ಪತ್ರ ಮತ್ತು ಜಾತಿ ಪ್ರಮಾಣ ಪತ್ರ ನೀಡುವ ಬಗ್ಗೆ ಸರ್ಕಾರ ನೀಡಿದ ನಿರ್ದೇಶನಗಳು ಹಾಗೂ ಮಾದರಿಗಳು.

- ಅ. ಸಂವಿಧಾನ ತಿದ್ದುಪಡಿಯ ಆದೇಶ ಸಂಖ್ಯೆ : 15/1990 ರ ಪ್ರಕಾರ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ ದಲಿತರಿಗೆ ಮೀಸಲಾತಿ ಸೌಲಭ್ಯ ಕಲ್ಪಿಸಿದ ಆದೇಶವನ್ನು ಕರ್ನಾಟಕ ಬುದ್ಧದಮ್ಮ ಸಮಿತಿ ಪ್ರಚಾರ ಮಾಡಿದ ಕರಪತ್ರ.
- ಬ. 2001 ರ ಜನಗಣತಿಯಂತೆ ಭಾರತದಲ್ಲಿ ಬೌದ್ಧರ ಜನಸಂಖ್ಯೆ (ರಾಜ್ಯವಾರು).
- ಕ. 'ಬೌದ್ಧ' ಎಂದು ನಮೂದಿಸಿ ಪಡೆದ ಜಾತಿ ಪ್ರಮಾಣ ಪತ್ರದ ಮಾದರಿ (ಮಹಾರಾಷ್ಟ್ರದ ಕೊಲ್ಲಾಪೂರದಲ್ಲಿ ನೀಡಿದ್ದು)
- ಡ. ಬೌದ್ಧಧರ್ಮಕ್ಕೆ ಮತಾಂತರ ಹೊಂದಿದ ಪರಿಶಿಷ್ಟ ಜಾತಿ, ಜನಾಂಗದವರಿಗೆ 'ಬೌದ್ಧ' ಎಂದು ನಮೂದಿಸಿ ಪ್ರಮಾಣ ಪತ್ರ ನೀಡಲು ಸಮಾಜ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರ ಇವರು ಜಿಲ್ಲಾಧಿಕಾರಿಗಳಿಗೆ ಬರೆದ ಪತ್ರ.

**IX. ಆಕರ ಗ್ರಂಥ ಸೂಚಿ.**

★★★★★



## ಅಧ್ಯಾಯ-1

# ಪ್ರಸ್ತಾವನೆ

1. ಪ್ರಸ್ತಾವನೆ :
    - 1.1. (ಅ) ಪ್ರಸ್ತುತ ಅಧ್ಯಯನದ ಉದ್ದೇಶಗಳು
    - 1.1. (ಬ) ಪ್ರಸ್ತುತ ಅಧ್ಯಯನದ ತಾತ್ವಿಕ ನೆಲೆಗಟ್ಟುಗಳು.
    - 1.1. (ಕ) ಪ್ರಸ್ತುತ ಅಧ್ಯಯನದ ವ್ಯಾಪ್ತಿ
    - 1.1. (ಡ) ಪ್ರಸ್ತುತ ಅಧ್ಯಯನದ ವಿಧಾನಗಳು

1.2. ಪ್ರಸ್ತುತ ಸಂಶೋಧನಾ ಕ್ಷೇತ್ರಕ್ಕೆ ಸಂಬಂಧಿಸಿದ ಸಾಹಿತ್ಯ ಸಮೀಕ್ಷೆ.

ಅಧ್ಯಾಯ-1

# ಪ್ರಸ್ತಾವನೆ

## 1.1. ಪ್ರಸ್ತಾವನೆ :

''ಕರ್ನಾಟಕದಲ್ಲಿ ಬೌದ್ಧಧರ್ಮದ ಪುನರುಜ್ಜೀವನ'' (ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ) ಎಂಬ ಪ್ರಸ್ತುತ ಸಂಶೋಧನಾ ಅಧ್ಯಯನವು, ವಸಹಾತುಶಾಹಿ ಸಂದರ್ಭದ ಕೊನೆಯ ಕಾಲ ಘಟ್ಟದ ಮತ್ತು ಸ್ವತಂತ್ರ ಭಾರತದ ಸಮಕಾಲೀನ ಸಂದರ್ಭದವರೆಗಿನ ಕರ್ನಾಟಕದಲ್ಲಿ ಬೌದ್ಧಧರ್ಮದ ಪುನರುಜ್ಜೀವನದ ಚರಿತ್ರೆಯನ್ನು ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ ಗ್ರಹಿಸಿ ಅಧ್ಯಯನ ಮಾಡುವುದಾಗಿದೆ. ಈ ಅಧ್ಯಯನವು ಒಂದು ಸೀಮಿತ ಕಾಲಘಟ್ಟ ಅಂದರೆ, ಅಂಬೇಡ್ಕರ್ ಪೂರ್ವದ ಐವತ್ತು ವರ್ಷಗಳಿಂದ ಹಿಡಿದುಕೊಂಡು ಹಾಗೂ ಅವರು ಬೌದ್ಧ ಧರ್ಮಕ್ಕೆ ಐತಿಹಾಸಿಕವಾಗಿ ಮತಾಂತರ ಹೊಂದಿದ ನಂತರದ ಐವತ್ತು ವರ್ಷಗಳಲ್ಲಿ ದಲಿತರ ಒಟ್ಟು ಸಾಂಸ್ಕೃತಿಕ ಬದುಕಿನ ಮೇಲೆ ಅದು ಉಂಟು ಮಾಡಿದ ಪರಿಣಾಮಗಳನ್ನು ಹಾಗೂ 'ದಲಿತರ ಪೂರ್ಣ ಪ್ರಮಾಣದ ವಿಮೋಚನೆ' ಯ ಮಾರ್ಗವಾಗಿ ಬೌದ್ಧಧರ್ಮದ ಸಾಂಸ್ಕೃತಿಕ ಮಾದರಿಯನ್ನು ವಿಶ್ಲೇಷಿಸುವ ಪ್ರಯತ್ನ ಮಾಡಿದೆ.

ಈ ಅಧ್ಯಯನದಲ್ಲಿ 'ಪುನರುಜ್ಜೀವನ' ವೆಂದರೆ ದಲಿತರು ತಮ್ಮ ಧಾರ್ಮಿಕ, ಸಾಂಸ್ಕೃತಿಕ ಐಡೆಂಟಿಟಿಯಾಗಿ ಬೌದ್ಧ ಧರ್ಮವನ್ನು ಪರಿಕಲ್ಪಿಸಿಕೊಂಡು ಆ ಮೂಲಕ ತಮ್ಮ ವಿಮೋಚನೆ ಸಾಧಿಸುವ, ಸಮಾನತೆ ಬದುಕಿನ ಆವರಣ ರೂಪಿಸಿಕೊಳ್ಳುವ ಯತ್ನದ 'ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆ'ಯನ್ನಾಗಿ ಪರಿಕಲ್ಪಿಸಿದೆ. ದಲಿತ ವಿಮೋಚನೆಯೇ ಇಂತಹ ಪುನರುಜ್ಜೀವನದ ಪ್ರಧಾನ ಕಾಳಜಿಯನ್ನಾಗಿ ಪರಿಕಲ್ಪಿಸಿ ಅಧ್ಯಯನ ಕೈಗೊಳ್ಳಲಾಗಿದೆ. ಆದ್ದರಿಂದ 'ಪುನರುಜ್ಜೀವನ' ಪ್ರಸ್ತುತ ಅಧ್ಯಯನದಲ್ಲಿ 'ಭೌತಿಕ' ವಾದ ಪ್ರಗತಿಯ ಆಯಾಮಕ್ಕಿಂತ ಹೆಚ್ಚಾಗಿ 'ಪರಿವರ್ತನಶೀಲ' ಆಯಾಮಕ್ಕೆ ಹೆಚ್ಚು ಒತ್ತು ಕೊಟ್ಟಿದ್ದನ್ನು ಗಮನಿಸಬಹುದಾಗಿದೆ. ಬೌದ್ಧ ಧರ್ಮದ ಪುನರುಜ್ಜೀವನ ಕಳೆದ ಒಂದು ಶತಮಾನದಿಂದ ಹಿಡಿದುಕೊಂಡು ಅವ್ಯಾಹತವಾಗಿ ನಡೆದುಕೊಂಡು ಬಂದಿರುವುದನ್ನು ಕಾಣುತ್ತೇವೆ. 1893 ರಲ್ಲಿಯೇ ಡಬ್ಲ್ಯೂ, ಡಬ್ಲ್ಯೂ. ಹಂಟರ್‌ರವರು ತಮ್ಮ 'Indian Empire' ಕೃತಿಯಲ್ಲಿ ''ಭಾರತದಲ್ಲಿ ಬೌದ್ಧಧರ್ಮದ ಪುನರುಜ್ಜೀವನ ಸರ್ವಕಾಲಿಕ ಸಾಧ್ಯತೆಯಾಗಿದೆ. ಬುದ್ಧನ ಜೀವನ ಮತ್ತು ಬೋಧನೆಗಳು ಯುರೋಪ ಮತ್ತು ಅಮೇರಿಕಾಗಳ ಧಾರ್ಮಿಕ ಚಿಂತನೆಯ ಮೇಲೆ ಘಾಡವಾದ ಹೊಸ ಪ್ರಭಾವ ಬೀರಿವೆ. ಪಾಶ್ಚಾತ್ಯ ಜಗತ್ತಿಗೆ ಖಚಿತವಾಗಿ ಬೌದ್ಧ ಧರ್ಮ ಪರಿಚಿತವಾಗಿದೆ. ಮನುಷ್ಯ ಜಗತ್ತಿನಲ್ಲಿ ತನ್ನನ್ನು ಅರಿತು, ತನ್ನ ಕರ್ತವ್ಯಗಳನ್ನು ಅರಿತುಕೊಂಡು ಸಹಜೀವಿಗಳೊಂದಿಗೆ ಅನ್ಯೋನ್ಯತೆ ಸಾಧಿಸಲು ಸಹಕರಿಸುವ ಬುದ್ಧನ ಸುಂದರ ಜೀವನ ಮತ್ತು ಆದರ್ಶ ಬೌದ್ಧ ಧರ್ಮದ ಜನಪ್ರಿಯತೆಗೆ ಕಾರಣವಾಗಿವೆ. ಆದ್ದರಿಂದ ಮತ್ತೊಮ್ಮೆ ನಾನು ಹೇಳುತ್ತೇನೆ, 'ಭಾರತದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನ' ಒಂದು ಸಮಕಾಲೀನ ಸಾಧ್ಯತೆಯಾಗಿದೆ''[1]. ಹಂಟರ್ ಅವರ ಊಹೆಯಂತೆ ಇಂದು ಭಾರತದಲ್ಲಿ, ವಿಶೇಷವಾಗಿ ಕರ್ನಾಟಕದಲ್ಲಿ 'ಬೌದ್ಧಧರ್ಮದ ಪುನರುಜ್ಜೀವನ' ನಡೆದುಕೊಂಡು ಬಂದು ಹಿಂದೂ ಧಾರ್ಮಿಕ ಚೌಕಟ್ಟಿನಲ್ಲಿ ಜಾತಿ,

ಆಧಾರಿತ ಶೋಷಣೆಗೆ ಒಳಗಾದ ಅಸಂಖ್ಯಾತ ದಲಿತರಿಗೆ ವಿಮೋಚನೆಯ ಮಾರ್ಗವಾಗಿಯೂ ಜಗತ್ತಿನ ಗಮನ ಸೆಳೆಯುತ್ತಿದೆ.

ಬೌದ್ಧ ಧರ್ಮದ ಕುರಿತು, ಅದು ಅಸ್ಪೃಶ್ಯರ, ದಲಿತರ ವಿಮೋಚನೆಗೆ ಪ್ರಭಾವ ಬೀರಿದ ಕುರಿತು ಕಳೆದ ಐವತ್ತು ವರ್ಷಗಳಿಂದ ಸಾಕಷ್ಟು ಅಧ್ಯಯನಗಳು ನಡೆದಿವೆ, ನಡೆಯುತ್ತಿವೆ. ಯಾವ ದೇಶದಲ್ಲಿ ಬೌದ್ಧ ಧರ್ಮದ ಹುಟ್ಟು ಆಗಿದೆಯೋ, ಆ ದೇಶದ ವಿಶ್ವವಿದ್ಯಾಲಯ, ಪಂಡಿತರುಗಳಿಗಿಂತ ಹೆಚ್ಚಾಗಿ ಇತ್ತೀಚೆಗೆ ವಿದೇಶಿ ವಿಶ್ವವಿದ್ಯಾಲಯಗಳು, ಅಲ್ಲಿನ ಸಂಶೋಧಕರು, ಪ್ರಾಧ್ಯಾಪಕರು, ಸತತವಾಗಿ ಈ ಕುರಿತು ಸಂಶೋಧನೆಯಲ್ಲಿ ತೊಡಗಿದ್ದಾರೆ. ಜಗತ್ತಿನ ಬೇರೆ ಯಾವ ಸಾಂಸ್ಥಿಕವಾಗಿರುವ ಧರ್ಮಗಳಿಗಿಂತಲೂ (Institutionalised Religions) ಹೆಚ್ಚಾಗಿ ಸಾಮಾಜಿಕ ಪರಿವರ್ತನೆಗೆ ಸಾಧನವಾಗಿರುವ ಚಲನಶೀಲ ಧರ್ಮವಾದ (Living Religion) ಬೌದ್ಧಧರ್ಮ ಮತ್ತು ಅದರ ವಿವಿಧ ಶಾಖೆಗಳು, ಅವುಗಳ ಪ್ರಭಾವ, ಕುರಿತು ಅಧ್ಯಯನಗಳು ನಡೆದಿವೆ, ನಡೆಯುತ್ತಿವೆ. ಇವುಗಳಲ್ಲಿ ವಿಶಿಷ್ಟವೆಂದರೆ ಬಹಳಷ್ಟು ಅಧ್ಯಯನಗಳು ಚರಿತ್ರಾತ್ಮಕ (Historical) ನೆಲೆಯವುಗಳಾಗಿರದೆ, ಸಮಾಜೋ-ಆರ್ಥಿಕ, ಮನೋವೈಜ್ಞಾನಿಕ, ಮಾನವ ಅಭಿವೃದ್ಧಿಯ ನೋಟದಿಂದ (Human Development Approach) ಕೈಗೊಂಡವುಗಳಾಗಿವೆ. ಅದರಲ್ಲೂ ವಿಶಿಷ್ಟವಾಗಿ, ಹೆಚ್ಚಾಗಿ ಸಮಾಜ ವಿಜ್ಞಾನಿಗಳೂ ಇಂತಹ ಅಧ್ಯಯನಗಳಲ್ಲಿ ತೊಡಗಿಸಿಕೊಂಡಿರುತ್ತಾರೆ. ಇವುಗಳಲ್ಲಿ ಹಲವಾರು ಅಧ್ಯಯನಗಳು ಅಂತರ್‌ಶಿಸ್ತೀಯ ಅಧ್ಯಯನಗಳೇ ಆಗಿವೆ. ಇದರೊಟ್ಟಿಗೆ, ಬೌದ್ಧಧರ್ಮದ ಕುರಿತು ಬೌದ್ಧಿಕ ಜಗತ್ತಿನಲ್ಲಿ (Intellectual World) ಹಾಗೂ ಸಮಾಜ ವಿಜ್ಞಾನಿಗಳಲ್ಲಿ ಬೌದ್ಧ ಧರ್ಮದ ಕುರಿತು ಆಸಕ್ತಿ ಹಾಗೂ ಅನುಭವಾತ್ಮಕ ನೆಲೆಯಲ್ಲಿ ಬುದ್ಧನ ಬೋಧನೆಗಳ ಸ್ವೀಕಾರ ಕಂಡು ಬರುತ್ತಿದೆ. ಖ್ಯಾತಿ ವಿಜ್ಞಾನಿ ಅಲ್ಬರ್ಟ್ ಐನ್‌ಸ್ಟೀನ್ ಕೂಡ "ಆಧುನಿಕ ವಿಜ್ಞಾನದ ಅವಶ್ಯಕತೆಗಳಿಗೆ ಪೂರಕವಾದ, ಮೂಢಸಿದ್ಧಾಂತಗಳಿಗೆ ಹೊರತಾದ ಜೀವನ ಶೈಲಿಗೆ, ನೈಸರ್ಗಿಕವಾಗಿ, ಆಧ್ಯಾತ್ಮಿಕವಾಗಿ ಸ್ಪಂದಿಸುವ ಧರ್ಮವೆಂದರೆ ಬೌದ್ಧ ಧರ್ಮ ಮಾತ್ರ ಎಂದು ಹೇಳಿದ್ದಾರೆ. ಇದು ಬೌದ್ಧ ಧರ್ಮದ ವೈಜ್ಞಾನಿಕ ತಳಹದಿಯ ತತ್ವಗಳು ಮನುಕುಲಕ್ಕೆ ಪ್ರಸ್ತುತವಾಗಿರುವ ಪಥವಾಗಿ ಕಂಡು ಬರುತ್ತಿದೆ". ಆಧುನಿಕ ಜಗತ್ತಿನ ಮ್ಯಾನೇಜಮೆಂಟ್ ಗುರುಗಳೆನ್ನಿಸಿಕೊಂಡವರು ಬೌದ್ಧ ಧರ್ಮದ ತತ್ವಗಳನ್ನಾಧರಿಸಿ ವ್ಯಕ್ತಿತ್ವ ನಿರ್ಮಾಣ (Personality Development) ಕೋರ್ಸುಗಳನ್ನು ತಯಾರಿಸಿ ಕೋಟಿಗಟ್ಟಲೇ ಡಾಲರ್‌ಗಳ ವ್ಯವಹಾರ ಇರುವ ಸಲಹಾ ಕಾರ್ಯದಲ್ಲಿ ತೊಡಗಿಸಿಕೊಂಡಿರುತ್ತಾರೆ. ಜಾಗತಿಕ ಶಾಂತಿಗೆ ಇನ್ನೂ ಮಾರ್ಗದರ್ಶಕವಾಗಿರುವ ಸೂತ್ರಗಳಾದ 'ಪಂಚಶೀಲ' ತತ್ವಗಳು 'ಜಾಗತಿಕ ಅನುಷ್ಠಾನಕ್ಕೆ' ದಾರಿ ಕಾಯುತ್ತಿವೆ. ಇಂತಹ ಸ್ವೀಕಾರದ ರೀತಿಗಳು, ಪ್ರಕಾರಗಳು, ಹಲವಾರು ಶಾಖೆಗಳಲ್ಲಿ ಬೆಳೆದ ಬೌದ್ಧತತ್ವಗಳನ್ನು ಆಧರಿಸಿ ರೂಪಾಂತರಗೊಳ್ಳುತ್ತಾ ಜಗತ್ತಿನ ಅನೇಕ ರಾಷ್ಟ್ರಗಳ ಜನ ಅವರದೇ ಆದ ರೀತಿಯಲ್ಲಿ ಬೌದ್ಧಧರ್ಮವನ್ನು ಅನುಸರಿಸುತ್ತಿದ್ದಾರೆ. ಸಾಂಖಿಕವಾಗಿ ಜಗತ್ತಿನ ಆರು ಜನರಲ್ಲಿ ಇಂದು ಒಬ್ಬ ಬೌದ್ಧನಿರುವುದು ಕಂಡು ಬರುತ್ತದೆ. ಬುದ್ಧನ ತತ್ವಗಳ ಸ್ವೀಕಾರದ ನೆಲೆಯಲ್ಲಿ ನೋಡುವುದಾದರೆ ಈ ಆರು ಜನರಲ್ಲಿ ಕನಿಷ್ಠ ನಾಲ್ಕು ಜನರಾದರೂ ಬುದ್ಧನ ತತ್ವಗಳನ್ನು ಒಪ್ಪಿಕೊಂಡಿರುವುದು ಕಂಡು ಬರುತ್ತದೆ.

ಈ ರೀತಿಯ ವ್ಯಾಪಕವಾದ ಸ್ವೀಕಾರ, 'ಮಧ್ಯಮ ಮಾರ್ಗ' (Middle Path) ದ ಜೀವನ ಶೈಲಿಯನ್ನು ರೂಢಿಸಿ ಕೊಳ್ಳುತ್ತಿರುವ ಪ್ರಕ್ರಿಯೆಯಲ್ಲಿರುವವರೆಲ್ಲರೂ ಬೌದ್ಧರೆಂದು ಹೇಳಿಕೊಳ್ಳದೇ ಇದ್ದರೂ, ತಾವು ಯಾವ

ಬೌದ್ಧರಿಗಿಂತಲೂ ಕಡಿಮೆಯೇನಲ್ಲವೆಂಬ ಆಂತರಿಕ ತೀರ್ಮಾನಗಳು, ಒಂದು ನಾಗರಿಕ ಸಮಾಜದ ವ್ಯಕ್ತಿಗಳು, ಆರೋಗ್ಯಕರ ಜೀವನ ಶೈಲಿ ಮತ್ತು ಪ್ರಜಾಪ್ರಭುತ್ವದ ರೀತಿ ನೀತಿಗಳನ್ನು ಪರಿಪಾಲಿಸುತ್ತಿರುವ ಪ್ರಬಲ ಸಂಕೇತಗಳೆಂದೇ ಹೇಳಬೇಕು. ಭಾರತದಂತಹ ತುಂಬಾ ಸಂಕೀರ್ಣ ಸಾಂಸ್ಕೃತಿಕ ಸ್ತರಗಳನ್ನು ಹೊಂದಿದ ದೇಶದಲ್ಲಿ ಪ್ರಜಾಪ್ರಭುತ್ವ ತನ್ನಷ್ಟಕ್ಕೆ ತಾನೇ ನಡೆದುಕೊಂಡು ಹೋಗುತ್ತಿರಬೇಕಾದರೆ ಈ ಅಪಾರ ಜನಸಮುದಾಯವನ್ನು ಬುದ್ಧನು ಬೋಧಿಸಿದ 'ಮಧ್ಯಮ ಮಾರ್ಗ' (Middle Path) ವು ಆಂತರಿಕವಾಗಿ, ಅಗೋಚರವಾಗಿ ಜನ ಸಮುದಾಯವನ್ನು ಸಾಮಾನ್ಯ ಬಂಧಕ್ಕೆ (Common Bound) ಒಳಪಡಿಸಿದ ಶಕ್ತಿಯೇ ಎಂದು ಹೇಳಬೇಕು. ಆ ದೃಷ್ಟಿಯಿಂದ ನೋಡಿದರೆ ಬೌದ್ಧ ಧರ್ಮ, ನಿಜವಾದ ಅರ್ಥದಲ್ಲಿ 'ಭಾರತದ ರಾಷ್ಟ್ರ ಧರ್ಮವೆಂದೇ' ಹೇಳಿದರೆ ಅತಿಶಯೋಕ್ತಿಯಾಗಲಾರದು. ಈ ಮಾತನ್ನು ಹಿಂದೂ ಮಿಷನರಿ ಸೊಸೈಟಿಯ ಅಧ್ಯಕ್ಷರಾಗಿದ್ದ (1941 ರಿಂದ 1946) ಸ್ವಾಮಿ ಧರ್ಮತೀಥಜ ಮಹಾರಾಜರವರೇ 'ಹಿಂದೂ ಸಾಮ್ರಾಜ್ಯಷಾಹಿ ಇತಿಹಾಸ' ಎಂಬ ಗ್ರಂಥದಲ್ಲಿ "ಹಿಂದೂ ಧರ್ಮ, ಧಾರ್ಮಿಕ ನೆಲೆಗಿಂತ ರಾಜ್ಯಾಧಿಕಾರದ ಹಿತಾಸಕ್ತಿಯನ್ನೇ ಹೊಂದಿರುವ ಸ್ವಭಾವವುಳ್ಳದ್ದಾಗಿದೆ" ಎಂದು ಅಭಿಪ್ರಾಯ ಪಡುತ್ತಾರೆ. ಅದರಿಂದಲೇ ಇಂದಿಗೂ ಕೂಡ ಜಾತಿಗಳನ್ನು ಬಿಟ್ಟು ಈ ದೇಶದಲ್ಲಿ ರಾಜಕಾರಣ ಸಾಧ್ಯವೇ ಇಲ್ಲ ಎನ್ನುವ ಪರಿಸ್ಥಿತಿ ನಿರ್ಮಾಣವಾಗಿದೆ. ಅದೇ ಕಾಲಕ್ಕೆ ಸ್ವಾಮಿ ಧರ್ಮತೀರ್ಥಜ ಮಹಾರಾಜರವರು 'ಬೌದ್ಧ ಧರ್ಮವೇ ಭಾರತವು ಒಂದು 'ರಾಷ್ಟ್ರ' ವೆಂಬ ಹೆಗ್ಗಳಿಕೆಗೆ ಕಾರಣವಾಗಿದೆ . . . . ಬ್ರಾಹ್ಮಣ ಗ್ರಂಥಗಳು ರಾಷ್ಟ್ರೀಯ ಭಾವನೆಯನ್ನು ಪ್ರತಿನಿಧಿಸುವುದಿಲ್ಲ. ಆದ್ದರಿಂದ ಬುದ್ಧ ಧಮ್ಮ ಭಾರತದ ರಾಷ್ಟ್ರೀಯ ಧಮ್ಮ, ಏಕೆಂದರೆ ಬುದ್ಧ ಭಾರತೀಯ ಶಾಕ್ಯ ವಂಶದ ಭಾರತೀಯ ಅರಸರ ಮಗ, ಭಾರತೀಯ ಚಕ್ರಾಧಿಪತ್ಯಗಳಲ್ಲೂ, ಸಾಮ್ರಾಜ್ಯಗಳಲ್ಲೂ ಕಾಣಿಸಿಕೊಂಡ ರಾಷ್ಟ್ರೀಯ ಜಾಗೃತಿಗೆ ಬುದ್ಧ ಧಮ್ಮವೇ ಮೂಲ ಸ್ಫೂರ್ತಿ. ಒಂದು ಸಾವಿರ ವರ್ಷಗಳಿಗೂ ಹೆಚ್ಚು ಕಾಲ ಅದು ಈ ದೇಶದ ಹಣೆ ಬರಹವನ್ನು ತಿದ್ದಿತು. ಮೊಟ್ಟ ಮೊದಲ ಬಾರಿಗೆ ಬುದ್ಧ ಧಮ್ಮ ಸಮಾನವಾದ ಸಾಂಸ್ಕೃತಿಕ ಸಮನ್ವಯ (Common Cultural Co-Ordination) ಮತ್ತು ಸಂಘಟನೆಯಿಂದ ಭಾರತವನ್ನು ಒಗ್ಗೂಡಿಸಿತು. ಬ್ರಾಹ್ಮಣ ಧರ್ಮ ಪ್ರತಿಷ್ಠಿತ ವರ್ಗಗಳ ಧರ್ಮವಾದರೆ, ಬುದ್ಧ ಧಮ್ಮ ಜನ ಸಾಮಾನ್ಯರ ಮೊಟ್ಟ ಮೊದಲ ಧರ್ಮ'[1(ಎ)] ಎಂದು ಹೇಳುತ್ತಾರೆ. ಇಂತಹ ರಾಷ್ಟ್ರೀಯತೆಯ ಶಕ್ತಿ ಕೇಂದ್ರವಾದ ಧರ್ಮಕ್ಕೆ ತಾವು ತಮ್ಮ ಐದು ಲಕ್ಷ ಅನುಯಾಯಿಗಳೊಂದಿಗೆ ಮತಾಂತರ ಹೊಂದಿ ಬೌದ್ಧ ಧರ್ಮವನ್ನು ಮರಳಿ ಭಾರತಕ್ಕೆ ತಂದ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ರಾಷ್ಟ್ರೀಯತೆಯ ನೆಲೆಯಲ್ಲಿಯೇ 'ನಾನು ಭಾರತವನ್ನು ಬೌದ್ಧಮಯ ಮಾಡುತ್ತೇನೆ' ಎಂದು ಹೇಳುತ್ತಿದ್ದುದರ ಮೂಲ ಕಾಳಜಿಯಾಗಿದೆ. ಆ ಕಾಳಜಿಯ ಕೇಂದ್ರ ಶಿಲೆ, ನೆಲೆ ಮತ್ತು ಬೆಲೆ ಸದೃಢವಾದ ರಾಷ್ಟ್ರದ ನಿರ್ಮಾಣದ ಸಂಕಲ್ಪ ಮತ್ತು ಅವರ ಪ್ರಶ್ನಾತೀತವಾದ ರಾಷ್ಟ್ರೀಯತೆಗೆ ಸಾಕ್ಷಿಯಾಗಿದೆ ಎಂದು ಹೇಳಬಹುದು.

ಈ ಅಧ್ಯಯನದಲ್ಲಿ ಇಂತಹ ರಾಷ್ಟ್ರೀಯ ಹಾಗೂ ಕೆಳಸ್ತರದ ವಿಮೋಚನೆಯ ರಾಚನಿಕ ಮಾದರಿಗಳನ್ನು ಅಲ್ಲಲ್ಲಿ ವಿಶ್ಲೇಷಿಸುತ್ತ, ಪ್ರಸ್ತುತ ಅಧ್ಯಯನದ ಹೋಲಿಕೆಗೆ ಬಳಸಿಕೊಳ್ಳಲಾಗಿದೆ. ಇಂತಹ ಗುಂಪಿನಲ್ಲಿ ಮುಖ್ಯವಾಗಿ ಸಾಹಿತಿಗಳು, ವಿಚಾರವಾದಿಗಳು ಮತ್ತು ಸಾಮಾಜಿಕ ರಾಜಕೀಯ ಹೋರಾಟಗಳಲ್ಲಿ ಮುಂಚೂಣಿಯಲ್ಲಿರುವ ಮುಖಂಡರುಗಳ ಅಭಿಪ್ರಾಯಗಳನ್ನು ತುಲನಾತ್ಮಕವಾಗಿ ಅವಲೋಕಿಸಲಾಗಿದೆ. ಹಾಗೆ ಅವಲೋಕಿಸುವಾಗ ಅದು ಅವರ ವಿಚಾರಗಳ, ಅಭಿಪ್ರಾಯಗಳ ಸ್ಮರಣಿಕೆಯೇ ಹೊರತಾಗಿ ವಿಮರ್ಶೆಯಾಗಿರುವುದಿಲ್ಲ.

ಈ ಹಿನ್ನೆಲೆಯಲ್ಲಿ 'ಕರ್ನಾಟಕದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನ' (ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ) ದ ಅಧ್ಯಯನವನ್ನು' ಕೈಗೊಳ್ಳುವ ಪೂರ್ವದಲ್ಲಿ ಈಗಾಗಲೇ ಒಟ್ಟಾರೆ ಬೌದ್ಧಧರ್ಮದ ಅಧ್ಯಯನಗಳನ್ನು ಯಾವ ಯಾವ ನೆಲೆಗಳಲ್ಲಿ ಕೈಗೊಳ್ಳಲಾಗಿದೆ ಎಂಬುದನ್ನು ಸ್ಥೂಲವಾಗಿ ಪರಿಶೀಲಿಸಿದೆ. ಇಂತಹ ಎಲ್ಲಾ ಅಧ್ಯಯನಗಳನ್ನು ಕೆಳಗೆ ವರ್ಗೀಕರಿಸಿದ ರೀತಿಯ ಪ್ರಕಾರಗಳಲ್ಲಿ ನೋಡಬಹುದಾಗಿದೆ. ಈ ಅಧ್ಯಯನಗಳು ದೇಶೀಯ ಹಾಗೂ ವಿದೇಶಿಯ ಸಂಶೋಧಕರಿಬ್ಬರಿಂದಲೂ ಕೈಗೊಂಡವುಗಳಾಗಿವೆ. ಅದೇ ಕಾಲಕ್ಕೆ ಈ ಎರಡೂ ಸಂಶೋಧಕರಿಂದ ನಡೆದ ಅಧ್ಯಯನಗಳಲ್ಲಿ ಕೆಲವೊಂದು ಸ್ಥಳೀಯ ಚರಿತ್ರೆಯ ಅಧ್ಯಯನಗಳು (local history), ಇನ್ನು ಕೆಲವು ಪ್ರಾದೇಶಿಕ (Regional) ನೆಲೆಯಲ್ಲಿ ಮತ್ತು ರಾಷ್ಟ್ರೀಯ, ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಕೈಗೊಂಡ ಅಧ್ಯಯನಗಳೆಂಬ ಅಂಶವನ್ನು ನಾವು ಮರೆಯುವಂತಿಲ್ಲ. ಈ ಅಧ್ಯಯನಗಳಿವೆ ಅವುಗಳದೇ ಆದ ಮಹತ್ವ ಮತ್ತು ಮಿತಿಗಳೆರೆಡೂ ಇವೆ. ಇಂತಹ ಅಧ್ಯಯನಗಳನ್ನು ಈ ಕೆಳಗಿನ ಪ್ರಕಾರಗಳಲ್ಲಿರುವಂತೆ ನೋಡಬಹುದಾಗಿದೆ.

## 1. <u>ಪೂರ್ಣ ಪ್ರಮಾಣದ ಬೌದ್ಧ ಅಧ್ಯಯನಗಳು:</u>

### ಅ) ಬೌದ್ಧ ಪ್ರಾಕ್ತನ ಶಾಸ್ತ್ರದ ನೆಲೆಯಲ್ಲಿ:

ಈ ವಿಂಗಡಣೆಯಲ್ಲಿ ಶುದ್ಧ ಚಾರಿತ್ರಿಕ ಅಧ್ಯಯನಗಳು, ಬೌದ್ಧ ಪ್ರಾಕ್ತನ ಅವಶೇಷಗಳ, ಶಾಸನಗಳ ಅಧ್ಯಯನ. ಮತ್ತೇ ಶಾಸನಗಳ ಅಧ್ಯಯನಗಳಲ್ಲಿಯೇ ಅಶೋಕನ ಶಾಸನಗಳ ಮತ್ತು ತದ ನಂತರದಲ್ಲಿ ಇತರ ರಾಜರು ಕೆತ್ತಿಸಿದ ಶಾಸನಗಳು ದೇವನಾಗರಿ, ಬ್ರಾಹ್ಮಿ ಹಳೆಗನ್ನಡ ಇತ್ಯಾದಿ ಭಾಷೆಗಳಲ್ಲಿ ಮತ್ತು ಇವುಗಳಲ್ಲಿಯೇ ಪರವಿರೋಧದ ಅಂಶಗಳು ಒಳಗೊಂಡಿವೆ. ಲಿಪಿಗಳ ಶೋಧ ಮತ್ತು ಅರ್ಥೈಸುವಿಕೆ, ಬೌದ್ಧ ಹಸ್ತ ಪ್ರತಿಗಳ, ತಾಳೆ ಗರಿ, ಮರದ ಹಲಗೆಯ ಮೇಲೆ ಕೆತ್ತಿದ ಬೌದ್ಧ ಧರ್ಮದ ವಿವರಗಳು ಇತ್ಯಾದಿಗಳ ಸಂಶೋಧನೆ. (ಬಿ.ಎಲ್. ರೈಸ್, ಮಾರ್ಟಿಮರ್ ವ್ಹೀಲರ್, ಜೆ.ಎಫ್. ಪ್ಲೀಟ್, ಡಿ.ಸಿ. ಸರ್ಕಾರ್, ರ್ಹೀಸ್ ಆ್ಯಂಡ್ ಡೇವ್ಹಿಡ್ಸ್, ಡಿ.ಡಿ. ಕೋಸಾಂಬಿ, ಹುಲ್ಸ್ ಐ.ಕೆ. ಶರ್ಮಾ, ರೋಮಿಲಾ ಥಾಪರ್, ಮುಂತಾದವರು ಇದ್ದಾರೆ).

### ಬ) ಸಾಹಿತ್ಯಿಕ ಅಧ್ಯಯನಗಳು:

ಪಾಲಿ, ಸಂಸ್ಕೃತ, ಚೈನಿ, ಟಿಬೆಟ್, ಜರ್ಮನಿ, ರಷ್ಯನ್ ಇತ್ಯಾದಿ ಭಾಷೆಗಳಲ್ಲಿನ ಕೃತಿಗಳ ಸಂಪಾದನೆ, ಪಾಲಿ ವ್ಯಾಕರಣದ ಅಧ್ಯಯನ, ಪರಾಮರ್ಶನ ಹಾಗೂ ವಿದೇಶಿ ಪ್ರವಾಸ ಕಥನಗಳಲ್ಲಿ ಮುಖ್ಯವಾಗಿ ಚೈನಾ ದೇಶದಿಂದ ಬಂದ ಬೌದ್ಧ ಯಾತ್ರಿಕರಾದ ಪಾಹಿಯಾನ, ಹ್ಯೂಯೆನ್‌ತ್ಸಾಂಗ್ ಮತ್ತು ಇತ್ಸಿಂಗ್ ಇವರು ಸಂಗ್ರಹಿಸಿದ ವಿವರಗಳು. (ರಾಹುಲ್ ಸಾಂಕೃತ್ಯಾಯನ, ಮ್ಯಾಕ್ಸ್‌ಮುಲ್ಲರ್, ಗೈಗರ್ ಇತ್ಯಾದಿ)

### ಕ) ಸಾಂಸ್ಕೃತಿಕ ಅಧ್ಯಯನಗಳು:

ಬೌದ್ಧ ಕಲೆ ಮತ್ತು ವಾಸ್ತುಶಿಲ್ಪ ತೈಲವರ್ಣಕೃತಿಗಳು, ಸಂಗೀತ ಮತ್ತು ನಾಟಕ ಕುರಿತಾದ ಅಧ್ಯಯನಗಳು.

ಅಜಂತಾ, ಎಲ್ಲೋರಾ, ಗುಹೆಗಳಲ್ಲಿ ಕಂಡು ಬರುವ ಅಪೂರ್ವ ತೈಲ ವರ್ಣ ಚಿತ್ರಗಳು, ಸ್ತೂಪಗಳು, ಬಿಕ್ಕು ನಿವಾಸಗಳು, ಸಭಾಗ್ರಹಗಳು, ಉತ್ಖನದಲ್ಲಿ ದೊರೆತ ಶಿಲಾ ಫಲಕಗಳಲ್ಲಿನ ಸಾಂಸ್ಕೃತಿಕ ಅಂಶಗಳು, ಉದಾ: ಉಡುಗೆ ತೊಡುಗೆ, ಸಂಗೀತ ಉಪಕರಣಗಳು, ಲೇಖನ ಸಾಮಗ್ರಿಗಳು, ಇತ್ಯಾದಿ., ಇದರಲ್ಲಿ ಪ್ರಮುಖವಾಗಿ ಆನಂದ ಕುಮಾರಸ್ವಾಮಿ, ಹಾವೆಲ್, ಬಾಷಮ್, ಗ್ರನವೆಡಲ್, ಪೌಚರ್, ಎಸ್.ಪಿ. ಗುಪ್ತ ಮೊದಲಾದವರು.

## 2. ಬೌದ್ಧ ಸಮಾಜೋ-ಧಾರ್ಮಿಕ ಅಧ್ಯಯನಗಳು :

**ಅ) ಮಾರ್ಕ್ಸವಾದಿ ನೆಲೆಯಲ್ಲಿ ವಿಶ್ಲೇಷಿಸಿ ಅರ್ಥೈಸಿದ ಬೌದ್ಧ ಅಧ್ಯಯನಗಳು :**
(ಉದಾ : ರೋಮಿಲಾ ಥಾಪರ್, ಆರ್.ಎಸ್. ಶರ್ಮಾ, ಡಿ.ಡಿ. ಕೋಸಾಂಬಿ)

**ಬ) ತುಲನಾತ್ಮಕ ಅಧ್ಯಯನಗಳು :**

ಬೇರೆ ಬೇರೆ ಧರ್ಮಗಳೊಡನೆ, ಪಂಥಗಳೊಡನೆ, ವ್ಯಕ್ತಿಗಳೊಡನೆ ಬೌದ್ಧ ಧರ್ಮವನ್ನು ತತ್ವಗಳನ್ನು ತುಲನಾತ್ಮಕವಾಗಿ ವಿಶ್ಲೇಷಿಸುವ ಅಧ್ಯಯನಗಳು. (ಉದಾ : ಬುದ್ಧ ಮತ್ತು ಬಸವಣ್ಣ, ಬುದ್ಧ ಮತ್ತು ಕಾರ್ಲ್‌ಮಾರ್ಕ್ಸ್, ಬೌದ್ಧ ಧರ್ಮ ಮತ್ತು ಕ್ರೈಸ್ತ ಧರ್ಮ, ಇತ್ಯಾದಿ)

## 3. ಬೌದ್ಧ ಧರ್ಮದ ಪ್ರಭಾವಕ್ಕೆ ಒಳಗಾದವರ ಕುರಿತಾದ ಅಂತರ್‌ಶಿಸ್ತೀಯ ಅಧ್ಯಯನಗಳು:

1) ಭಾರತದಲ್ಲಿ ಬೌದ್ಧ ಧರ್ಮದ ಪುರುಜ್ಜೀವನ ಕುರಿತ ಅಧ್ಯಯನಗಳು.

2) ಅಂಬೇಡ್ಕರ್‌ರವರ ಮತಾಂತರ ಚಳುವಳಿಯ ಪ್ರಭಾವದ ಕುರಿತ ಅಧ್ಯಯನಗಳು. (ಅಂಬೇಡ್ಕರ್‌ರವರ ಬೌದ್ಧ ಧರ್ಮ ಮತಾಂತರ ಚಳುವಳಿ ಮತ್ತು ದಲಿತರ ಮಾನವ ಹಕ್ಕುಗಳು.

3) ಬೌದ್ಧ ಧರ್ಮದ ರೂಪಾಂತರ ಕುರಿತ ಅಧ್ಯಯನಗಳು (ಪಾಶ್ಚಾತ್ಯರಲ್ಲಿ ಹಾಗೂ ಭಾರತದಲ್ಲಿ ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ ಅಳವಡಿಕೆಯಾಗುತ್ತಿರುವ ವೃತ್ತಿಕೌಶಲ್ಯ, ವ್ಯಕ್ತಿತ್ವ ವಿಕಸನ ಪ್ರಾಯೋಗಿಕ ವಿಪಷ್ಯನ ಧ್ಯಾನ ಇತ್ಯಾದಿ ಪರಿಕಲ್ಪನೆಗಳು)

4) ಬೌದ್ಧ ಧರ್ಮವನ್ನು ಜಾಗತಿಕ ಶಾಂತಿಯ ಹಿನ್ನೆಲೆಯಲ್ಲಿ ಅರ್ಥೈಸಿ ಕೈಗೊಳ್ಳುತ್ತಿರುವ ಅಧ್ಯಯನಗಳು. (ಉದಾ : ಜಾಗತಿಕ ಶಾಂತಿ ಮತ್ತು ಬೌದ್ಧ ಧರ್ಮ, ನ್ಯೂಕ್ಲಿಯರ್ ಯುಗ, ಐನ್‌ಸ್ಟೀನ್ ಮತ್ತು ಬುದ್ಧ, ಬದಲಾವಣೆಯಾಗುತ್ತಿರುವ ಜಾಗತಿಕ ಮೌಲ್ಯಗಳು ಮತ್ತು ಬೌದ್ಧ ಧರ್ಮ ಇತ್ಯಾದಿ).

(ಡಿ.ಸಿ. ಅಹಿರ್, ಧರ್ಮಾನಂದ ಕೋಸಂಬಿ, ಪಿ. ಲಕ್ಷ್ಮೀನರಸು, ಪಂಡಿತ ಅಯೋಥಿದಾಸ್, ಅಂಬೇಡ್ಕರ್, ಗೋಪಾಲ ಗುರು, ಕಾಂಚ ಐಲಯ್ಯಾ, ಗೇಲ್ ಓಂವೆಡ್ತ್, ಈಲಿನೋರ್ ಝೆಲಿಟ್, ಓವೆನ್ ಲಿಂಚ್, ಡಿ.ಆರ್. ನಾಗರಾಜ, ವಲೇರಿಯನ್ ರೋಡರಿಗ್ಸ್ ಜೆ. ಅಲೋಸಿಯಸ್, ಮುಂತಾದವರು)

ಈ ಮೇಲಿನ ಪ್ರಕಾರಗಳು ಬೌದ್ಧ ಧರ್ಮ ಕುರಿತಾಗಿ ಕೈಗೊಂಡ ಅಧ್ಯಯನಗಳ ಒಂದು ಅವಲೋಕನಾತ್ಮಕವಾದ ನೆಲೆಯ ಗ್ರಹಿಕೆಯ ಆಧಾರದ ಪ್ರಕಾರವೇ ಹೊರತಾಗಿ, ವ್ಯಾಪಕವಾದ ನೆಲೆಯಲ್ಲಿ ಹೇಳಿದವುಗಳಲ್ಲವೆಂದು ಪರಿಗಣಿಸಬೇಕು. ಇದು ಅಧ್ಯಯನಗಳು ಈ ರೀತಿಯಾಗಿ ನಡೆದಿವೆಯೆಂದು ಹೇಳಲು ಬಳಸಿಕೊಂಡ ಒಂದು ರೀತಿ ಮಾತ್ರವಾಗಿದೆ. ಪ್ರಸ್ತುತ ಅಧ್ಯಯನ ಮೇಲೆ ವರ್ಗೀಕರಿಸಿದ ಪ್ರಕಾರಗಳಲ್ಲಿ ಮೂರನೇ ಪ್ರಕಾರದಲ್ಲಿ ನಿಲ್ಲುವುದೆಂಬುದನ್ನು ನಾವು ಗುರುತಿಸಬಹುದಾಗಿದೆ.

ಆದರೆ ಈ ರೀತಿಯ ಎಲ್ಲಾ ಅಧ್ಯಯನಗಳಿಗೆ ವಿಶೇಷವಾಗಿ ಹೇಳುವುದಾದರೆ ಪ್ರಕಾರ 1) ರಲ್ಲಿ ಪ್ರಭೇದಿಸಿದ ಅಧ್ಯಯನಗಳು 19 ನೇ ಶತಮಾನದಲ್ಲಿ ಬ್ರಿಟಿಷ್ ಅಧಿಕಾರಿಗಳು, ಅವರ ಸಿಬ್ಬಂದಿಯು ನಡೆಸಿದ ಹುಡುಕಾಟದಲ್ಲಿ ಶೋಧಿಸಿದ ಬೌದ್ಧ ಪ್ರಾಕ್ತನ ಅವಶೇಷಗಳು ಅದರಲ್ಲೂ ಮುಖ್ಯವಾಗಿ ಶಾಸನಗಳ ಹುಡುವಿಕೆ ಮತ್ತು ಲಿಪಿಗಳ ಶೋಧ (decipherment of Scripts) ದಿಂದ ಪ್ರಾರಂಭವಾದಂತವುಗಳು. ಆಧುನಿಕ ಕಾಲ ಘಟ್ಟದಲ್ಲಿ ಬೌದ್ಧ ಧರ್ಮದ ಬಗ್ಗೆ ಅದರ ಚರಿತ್ರೆಯ ಬಗ್ಗೆ ನಮಗೆ ಮೊಟ್ಟಮೊದಲ ಸಾಹಿತ್ಯ ಕೃತಿ ಲಭ್ಯವಾದದ್ದು 1879 ರಲ್ಲಿ, ಎಡ್ವಿನ್ ಅರ್ನಾಲ್ಡ್ ಬರೆದ 'ಏಷ್ಯಾದ ಬೆಳಕು' (Light of Asia) ತುಂಬ ಮಹತ್ವದ ಕಾವ್ಯ. ಈ ಜನಪ್ರಿಯ ಕಾವ್ಯ ಕಟ್ಟಿಕೊಡುವುದರ ಜೊತೆಗೆ ಎಡ್ವಿನ್ ಆರ್ನಾಲ್ಡ್ 'ಬೋಧ್‌ಗಯಾ' ಕುರಿತು ಲೇಖನವೊಂದನ್ನು ಬರೆದದ್ದು ಬೌದ್ಧ ಧರ್ಮದ ಬಗ್ಗೆ ಜನರು ಆಕರ್ಷಿತರಾಗಲು ಕಾರಣವಾಯಿತು. ಇದಕ್ಕಿಂತ ಪೂರ್ವದಲ್ಲಿಯೇ ಜನರಲ್ ಕನ್ನಿಂಗ್ ಹ್ಯಾಮ್‌ನ ಭೌಗೋಳಿಕ ಅಧ್ಯಯನಗಳಲ್ಲಿ ಬುದ್ಧನ ಹಾಗೂ ಬೌದ್ಧ ಧರ್ಮದ ಪವಿತ್ರ ಕ್ಷೇತ್ರಗಳ ಬಗ್ಗೆ ಉಲ್ಲೇಖವಿದೆ. ರೆವಿನ್ಯೂ ಅಧಿಕಾರಿ ಎ. ಎಂ. ಬ್ರಾಡ್ಲಿ (1872) ಪ್ರಕಟಿಸಿದ 'ಬಿಹಾರದ ಬೌದ್ಧ ಅವಶೇಷಗಳು'[2] (The Buddhistic Remains of Bihar) ತುಂಬಾ ಮಹತ್ವದ ಚಾರಿತ್ರಿಕ ಅಧ್ಯಯನದ ಆಕರ ಗ್ರಂಥವಾಗಿದೆ. ಆತನು ಚಾರಿತ್ರಿಕ ಅಧ್ಯಯನದ ಬಗ್ಗೆ ಹೊಂದಿದ್ದ ಆಸಕ್ತಿ ಪ್ರತಿಯೊಂದು ಪುಟದಲ್ಲಿ ಎದ್ದು ಕಾಣುತ್ತದೆ. ಈ ಪುಸ್ತಕವನ್ನು ನೂರು ವರ್ಷಗಳ ನಂತರ 1979 ರಲ್ಲಿ ವಾರಣಾಸಿಯ 'ಭಾರತಿ ಪ್ರಕಾಶನ' ದವರು ಪುನರ್ ಪ್ರಕಟಿಸಿದ್ದಾರೆ. 1891 ರಲ್ಲಿ ಬುದ್ಧನ ಅಸ್ಥಿ ಅವಶೇಷಗಳು ಆಂಧ್ರ ಪ್ರದೇಶದ ಭಟ್ಟಿಪ್ರೊಲುವಿನಲ್ಲಿ ರೀ (Rea) ಯವರು ಮಾಡಿದ ಉತ್ಖನನದ ಸಂದರ್ಭಗಳಲ್ಲಿ ದೊರೆತವು. ಇದೇ ಬೌದ್ಧ ಧರ್ಮದ ಕುರಿತ ಮೊದಲ ಚಾರಿತ್ರಿಕ ಶೋಧ ಎನ್ನುವುದಾದರೆ ಒಟ್ಟಾರೆ ಬೌದ್ಧ ಅಧ್ಯಯನಕ್ಕೆ ಸಂಶೋಧನೆಗಳಿಗೆ ಹೆಚ್ಚೆಂದರೆ ನೂರೈವತ್ತು ವರ್ಷಗಳ ಇತಿಹಾಸವಿದೆ ಎಂದು ಗುರುತಿಸಬಹುದು.

1903 ರಲ್ಲಿ ಪ್ರಕಟವಾದ ರ್ಹಿಸ್-ದಾವೀದರು ರಚಿಸಿದ ಬೌದ್ಧ ಭಾರತ (1903) ಗ್ರಂಥವೇ ಅಖಿಲ ಭಾರತ ಮಟ್ಟದಲ್ಲಿ ಬೌದ್ಧ ಧರ್ಮದ ಅಧ್ಯಯನಕ್ಕೆ ಪ್ರಥಮ ಆಕರ ಗ್ರಂಥವೆಂದು ಹೇಳಬಹುದು. ಈ ಗ್ರಂಥಕ್ಕೆ ಹಲವಾರು ಸೀಮಿತ ನೋಟಗಳಿವೆ ಎಂಬುದರ ಹೊರತಾಗಿ, ಆ ಸಂದರ್ಭದ ಸಂಶೋಧನೆಯ ರೀತಿ ರಿವಾಜುಗಳ ಹಿನ್ನಲೆಯಲ್ಲಿ ಇದು ತುಂಬಾ ಮಹತ್ವದ ಅಭಿಪ್ರಾಯಗಳನ್ನು ಹೊಂದಿದ ಗ್ರಂಥವಾಗಿದೆ. ಈ ಗ್ರಂಥವನ್ನು ಅವಲೋಕಿಸಿದಾಗ ವಿಶೇಷವಾಗಿ ರ್ಹಿಸ್-ದಾವೀದರವರ ಮುನ್ನುಡಿಯನ್ನು (ಅಕ್ಟೋಬರ್ 1902) ಗಮನಿಸಿದಾಗ ಮೊದಲು ಬ್ರಿಟಿಷ್ ಸರ್ಕಾರವು ಇಂಡಿಯಾದ ಚಾರಿತ್ರಿಕ ಅಧ್ಯಯನದ ಬಗ್ಗೆ ಅಷ್ಟಾಗಿ ಆಸಕ್ತಿವಹಿಸಿರಲಿಲ್ಲವೆಂದು ಸ್ಪಷ್ಟವಾಗುತ್ತದೆ. ಪ್ಯಾರಿಸ್, ಬರ್ಲಿನ್, ಸೇಂಟ್ ಪೀಟರ್ಸ್ ಬರ್ಗ್, ವಿಯೆನ್ನಾಗಳಲ್ಲಿನ ಪೌರ್ವಾತ್ಯ ಕಲಿಕೆ (oriental learning) ಲಂಡನ್ನಿನಲ್ಲಿಲ್ಲದಿರುದು ದುರ್ದೈವವೆಂದು ''ಇಂಗ್ಲೆಂಡಿನಾದ್ಯಂತ ಈ

ಕುರಿತು ತೀರಾ ಕೆಟ್ಟ ಪರಿಸ್ಥಿತಿ ಇದ್ದು ಇಂಗ್ಲೆಂಡಿನಲ್ಲಿ ಕೇವಲ 2 ಸಂಸ್ಕೃತ ಅಧ್ಯಯನ ಪೀಠಗಳಿದ್ದರೆ, ಜರ್ಮನಿಯಲ್ಲಿನ ಸರ್ಕಾರ 20 ಕ್ಕಿಂತ ಹೆಚ್ಚಿಗೆ ಅಧ್ಯಯನ ಪೀಠಗಳನ್ನು ಸ್ಥಾಪಿಸಿದೆ. ಇದು ಇಂಡಿಯಾದ ಬಗ್ಗೆ ನಮ್ಮ ಇಂಗ್ಲೆಂಡಿಗಿರುವ ಆಸಕ್ತಿಗಿಂತ ಹತ್ತು ಪಟ್ಟು ಹೆಚ್ಚಿಗೆ ಜರ್ಮನಿಯ ಆಸಕ್ತಿಯನ್ನು ತೋರಿಸುತ್ತದೆ''[3] ಎಂದು ಒಟ್ಟಾರೆ ಭಾರತದ ಬಗ್ಗೆ ಸಂಶೋಧನಾ ಅಧ್ಯಯನದ ಅವಶ್ಯಕತೆಯನ್ನು ತಿಳಿಸುತ್ತಾರೆ. ಆದರೆ ರ್‍ಹಿಸ್-ದಾವೀದರವರು ಮೊದಲಿನಿಂದಲೂ ಭಾರತದಲ್ಲಿನ ಬೌದ್ಧಧರ್ಮದ ಇತಿಹಾಸದ ಬಗ್ಗೆ ಆಸಕ್ತಿಯಿಂದ ಕೆಲಸ ಮಾಡುತ್ತಲೇ ಇದ್ದರೆಂಬುದು ಅವರ ಹೇಳಿಕೆಯಲ್ಲಿಯೇ ಗೊತ್ತಾಗುತ್ತದೆ. ಬೌದ್ಧಕಾಲೀನ ಅರ್ಥವ್ಯವಸ್ಥೆಯ ಬಗ್ಗೆ ವಿವರಿಸುವಾಗ ಇಲ್ಲಿನ ವಿಚಾರಗಳನ್ನು ಈಗಾಗಲೇ ಪ್ರಕಟವಾದ ತಮ್ಮ ಲೇಖನಗಳಲ್ಲಿ ಉಲ್ಲೇಖಿಸಲಾಗಿದೆ ಎಂದು ಹೇಳುತ್ತಾರೆ'. Economic Journal (1901), Journal of Royal Asiatic Society (1901) ಮತ್ತು ಮೊದಲ ಪಾಲಿ ಪಠ್ಯ (Pali Text) (1855) ರಲ್ಲಿ ಯುರೋಪನಲ್ಲಿ ಲ್ಯಾಟಿನ್ ಭಾಷೆಯಲ್ಲಿ ಪ್ರಸ್ತಾವನೆ, ಟಿಪ್ಪಣಿ ಮತ್ತು ಅನುವಾದದೊಂದಿಗೆ ಪ್ರಕಟವಾಯಿತೆಂದು ಪ್ರಸ್ತಾಪಿಸುತ್ತಾರೆ'.[4] ಅದೇ ಕಾಲಕ್ಕೆ ಅವರು ತಮ್ಮ ಸಮಕಾಲೀನರಾದ ಪ್ರೊ. ಗೈಗೆರ್ ಅವರು ಅನುವಾದಿಸಿ, ಸಂಪಾದಿಸಿದ 'ದೀಪವಂಶ ಮತ್ತು ಮಹಾವಂಶ' ಕೃತಿಗಳ ಬಗ್ಗೆ ತಮ್ಮ ಮೋನೋಗ್ರಾಫ್‌ನಲ್ಲಿ (1901) ಬರೆದ ವ್ಯಾಖ್ಯಾನಗಳನ್ನು ಉಲ್ಲೇಖಿಸಿ ಭಾರತದ ಇತಿಹಾಸದ ಆಕರಗಳನ್ನು ಎಲ್ಲರೂ ಅಲ್ಲಲ್ಲಿ ತೆಗೆದುಕೊಂಡು ಹೋಗಿದ್ದಾರೆ. ಯೂರೋಪನಲ್ಲಿನ ದಾಖಲೀಕರಣದಂತೆ (Documentation) ಹುದುಗಿ ಹೋಗಿರುವ ಭಾರತದ ಇತಿಹಾಸದ ಆಕರಗಳನ್ನು ಇನ್ನು ಹೆಚ್ಚಿನ ಪ್ರಮಾಣದಲ್ಲಿ ಶೋಧಿಸಿ ಸಂಪಾದಿಸಬೇಕಾಗಿದೆ'[5] ಎಂದು ಅಭಿಪ್ರಾಯಪಡುತ್ತಾರೆ. 'ಇನ್ನು ಹೆಚ್ಚಿನ ಪ್ರಮಾಣದಲ್ಲಿ ಉತ್ಖನನಗಳು ನಡೆಯಬೇಕು, ಬರೀ ಮುದ್ರಿತ ಪಠ್ಯವನ್ನೇ ಮೂಲವಾಗಿರಿಸಿಕೊಳ್ಳದೆ, ಪದಕೋಶ (Dictionaries) ಹಸ್ತಪ್ರತಿ ತಾಮ್ರ, ತಾಳೆಗರಿ ಮತ್ತು ಮರದ ಮೇಲಿನ ಕೆತ್ತನೆಗಳನ್ನು ಆಕರಗಳನ್ನಾಗಿ ಬಳಸಿಕೊಳ್ಳಬೇಕು'[6]. ಆ ಮೂಲಕ ಬೌದ್ಧ ಭಾರತದ ಮರೆಮಾಚಿದ ಇತಿಹಾಸದ ವಲಯಗಳಲ್ಲಿ ಬೆಳಕು ಚೆಲ್ಲಬೇಕೆಂದು ಹೇಳುತ್ತಾರೆ.

ಆದರೆ 'ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ' ಕುರಿತು ತುಂಬಾ ಮಹತ್ವದ ಸಂಶೋಧನಾ ಅಧ್ಯಯನ ಮಾಡಿದ ಡಾ. ತಾಳ್ತಜೆ ವಸಂತ ಕುಮಾರ ಅವರು ಅಭಿಪ್ರಾಯ ಪಡುವಂತೆ 'ಕೇವಲ ಐಹಿತ್ಯಗಳಿಂದ ತುಣುಕು ಆಕರಗಳಿಂದ ಹಿಂದಿನವರ ಬದುಕನ್ನು ಚಾರಿತ್ರಿಕವಾಗಿ ಕಲ್ಪಿಸಿಕೊಳ್ಳುವುದು ಕಷ್ಟವಾದರೂ ಉಳಿದ ಧರ್ಮ ಪರಂಪರೆಗಳಿಗಿಂತ ಹೆಚ್ಚಿನ ಐತಿಹಾಸಿಕ ಸಾಮಗ್ರಿಗಳು ಬೌದ್ಧ ಧರ್ಮಕ್ಕೆ ಸಂಬಂಧಿಸಿ ದೊರೆಯುತ್ತವೆ. ಅಂತೆಯೇ ಗೌತಮ ಬುದ್ಧನ ಬದುಕು, ಸಾಧನಾರಂಗ ಮತ್ತು ಪರಿನಿರ್ವಾಣಗಳ ಬಗೆಗೂ ಕೆಲವು ಖಚಿತ ದಾಖಲೆಗಳು ಸಿಗುತ್ತವೆ. ಈ ಬಗೆಯಲ್ಲಿ ಐತಿಹಾಸಿಕವಾಗಿ ಬುದ್ಧನನ್ನು ಕಲ್ಪಿಸಿಕೊಳ್ಳುವುದು ಸ್ವಲ್ಪ ಕಷ್ಟವಾದರೂ, ಸಾಧ್ಯವಾಗಿದೆ'[7] ಎಂದು ಅಭಿಪ್ರಾಯ ಪಡುತ್ತಾರೆ. ಈಗಾಗಲೇ ಹೇಳಿದಂತೆ ಈ ಮೊದಲು ಗುರುತಿಸಿದ ಪ್ರಕಾರಗಳಲ್ಲಿ ಡಾ. ತಾಳ್ತಜೆಯವರು ಹೇಳುವಂತೆ ''ಪಾಶ್ಚಾತ್ಯ ವಿದ್ವಾಂಸರು ಈ ನಿಟ್ಟಿನ ಪ್ರಯತ್ನ ಮಾಡಿದ್ದಾರೆ. ಅದರಲ್ಲೂ ಓಲ್ಡೆನ್‌ಬರ್ಗ್, ರ್‍ಹಿಸ್-ದಾವೀದ್ ದಂಪತಿ ಹಾಗೂ ಮ್ಯಾಕ್ಸ್‌ಮುಲ್ಲರ್ ಇವರೆಲ್ಲ ಪ್ರಾತಃಸ್ಮರಣೀಯರಾಗುತ್ತಾರೆ. ಇವರ ಗೆಯ್ಮೆಯ ನಂತರ ಭಾರತೀಯರು ಮುಂದುವರೆಸಿದ್ದಾರೆ. ಅವರಲ್ಲಿ ನಲಿನಾಕ್ಷ ದತ್, ಹರಪ್ರಸಾದ ಶಾಸ್ತ್ರಿ, ಬಿನಯ ತೋಷ್ ಭಟ್ಟಾಚಾರ್ಯ, ಬಿ.ವ್ಹಿ.ಬಾಪಟ್, ಪಿ.ಎ. ವೈದ್ಯ, ಲಾಲಮಣಿ ಜೋಷಿ ಇಂಥವರು ಪ್ರಮುಖರು. ಪಾಶ್ಚಾತ್ಯರು ನಿಲ್ಲಿಸಿದ ಎಡೆಗಳಿಂದ ಇವರು ಈ ಜ್ಞಾನದ ಪಂಜನ್ನು ಮತ್ತೆ ಹೊತ್ತು ಸಾಗಿದ್ದಾರೆ. ಆದರೂ ಮಹಾಯಾನ

ಹಾಗೂ ಮಂತ್ರಯಾನಗಳ ಬಗೆಗಿನ ಅಧ್ಯಯನ ಇನ್ನು ಪ್ರಾರಂಭಿಕವಾಗಿಯೇ ಉಳಿದಿವೆ'[8] ಎಂದು ಹೇಳುತ್ತಾ ಬೌದ್ಧ ಧರ್ಮದ ಕುರಿತು ಇನ್ನೂ ಹೆಚ್ಚಿನ ಸಂಶೋಧನೆಗಳು ನಡೆಯಬೇಕಾದ ಅವಶ್ಯಕತೆ ಇದೆ ಎಂದು ಹೇಳುತ್ತಾರೆ.

ಹೀಗೆ ಈ ಅಧ್ಯಯನವನ್ನು ಕೈಗೆತ್ತಿಕೊಳ್ಳುವ ಪೂರ್ವದಲ್ಲಿ ಭಾರತದ ಸಂದರ್ಭದಲ್ಲಿ ಬೌದ್ಧಧರ್ಮದ ಪುನರುಜ್ಜೀವನ ಬೆಳವಣಿಗೆ ಹೇಗೆ ನಡೆದಿದೆ, ಬಾಬಾಸಾಹೇಬ ಡಾ. ಬಿ.ಆರ್. ಅಂಬೇಡ್ಕರ್‌ರವರ ಐತಿಹಾಸಿಕ ಮತಾಂತರ ಚಳುವಳಿಯ ಪ್ರಕ್ರಿಯೆ ಮತ್ತು ಆ ಒಂದು ಮುಂದುವರಿಕೆಯ ಪ್ರಕ್ರಿಯೆಯಲ್ಲಿ ತಮ್ಮನ್ನು ಗುರುತಿಸಿಕೊಂಡ ದಲಿತರ ಬದುಕಿನ ತುಂಬಾ ಮಹತ್ವದ ಆಯಾಮಗಳಲ್ಲಿ ಅಧ್ಯಯನ ನಡೆಯಬೇಕಾಗಿದೆ. ಈ ಅವಶ್ಯಕತೆಯನ್ನು ಮನಗಂಡು ಪ್ರಸ್ತುತ ಅಧ್ಯಯನ ನಡೆಯುತ್ತಿದೆ. ಅಖಿಲ ಭಾರತ ಮಟ್ಟದಲ್ಲಿ ಅಲ್ಲಲ್ಲಿ ಅಲ್ಪ ಸ್ವಲ್ಪ ವ್ಯಾಪ್ತಿಯ ಇಂತಹ ಅಧ್ಯಯನಗಳು ನಡೆದಿವೆಯಾದರೂ, ಕರ್ನಾಟಕದ ಕುರಿತು ಅಂತಹ ವಿವರವಾದ ಅಧ್ಯಯನಗಳಿಲ್ಲ. ಅಲ್ಲಲ್ಲಿ ಪ್ರಸ್ತಾಪಗಳಿವೆಯಾದರೂ, ಅಂಬೇಡ್ಕರರವರ ಮತಾಂತರ ಚಳುವಳಿ, ಅಂತಹ ಚಳುವಳಿಯಲ್ಲಿ ನೇರವಾಗಿ ಭಾಗವಹಿಸಿದವರ ವಿವರಗಳನ್ನು, ಒಟ್ಟಾರೆ ಪ್ರಭಾವವನ್ನು ದಾಖಲಿಸುವ ಕಾರ್ಯ ಹೆಚ್ಚಿನ ರೀತಿಯಲ್ಲಿ ನಡೆದೇ ಇಲ್ಲವೆಂದು ಹೇಳಬೇಕು. ಅಂದು ಅಂಬೇಡ್ಕರರವರ ಜೊತೆಯಲ್ಲಿಯೇ ಬೌದ್ಧಧರ್ಮ ದೀಕ್ಷೆ ಪಡೆದ ಹಲವಾರು ಜನರು ಗಡಿ ಪ್ರದೇಶಗಳಾದ ಬೀದರ, ಗುಲ್ಬರ್ಗಾ, ಬೆಳಗಾವಿ ಜಿಲ್ಲೆಗಳಲ್ಲಿ ಇನ್ನು ಇದ್ದಾರೆಂಬುದೇ ಈ ಅಧ್ಯಯನದ ಮುಖ್ಯ ಪ್ರೇರಣೆಯಾಗಿದೆ. ಅಧ್ಯಯನಕಾರನು ಬೀದರ ಜಿಲ್ಲೆಯ ಬಸವ ಕಲ್ಯಾಣ ತಾಲೂಕಿನ ಮೋರಖಂಡಿ ಗ್ರಾಮದಲ್ಲಿ 1970 ರ ದಶಕದಲ್ಲಿ ಸ್ಥಾಪಿತವಾದ ರಾಜ್ಯದ ಮೊದಲ ಗ್ರಾಮೀಣ 'ಬೌದ್ಧ ವಿಹಾರ' ಎಂಬ ಹೆಗ್ಗಳಿಕೆಯುಳ್ಳ ವಿಹಾರದ ಹಿರಿಯ ಉಪಾಸಕರು ಡಾ. ಅಂಬೇಡ್ಕರ್‌ರವರೊಂದಿಗೆ 1956 ಅಕ್ಟೋಬರ್ 14 ರಂದು ಬೌದ್ಧ ಧಮ್ಮ ದೀಕ್ಷೆ ಸ್ವೀಕರಿಸಿದವರನ್ನು ಭೇಟಿ ಮಾಡಿದಾಗ ಇಂತಹ ಪ್ರೇರಣೆ ಲಭಿಸಿದೆ. ಆದರೆ ಹಲವಾರು ಹಿರಿಯರು ಈಗ ಇಲ್ಲವಾಗಿದ್ದು, ಇದು ಕರ್ನಾಟಕದ ದಲಿತ ಅಧ್ಯಯನಕ್ಕೇನೆ ತುಂಬಲಾರದ ನಷ್ಟವಾಗಿದೆ. ಆದುದರಿಂದ ಲಭ್ಯವಿರುವ ದಲಿತ ಬೌದ್ಧ ಹಿರಿಯರಲ್ಲಿ ಕೆಲವರನ್ನು ಸಾಧ್ಯವಾದ ಮಟ್ಟಿಗೆ ಸಂದರ್ಶನ ಮಾಡಲಾಗಿದೆ. ಆದರೆ ಈ ವ್ಯಾಪ್ತಿ ಆಳ, ಹರವು ಸೀಮಿತವಾದುದೆಂದೇ ಹೇಳಬೇಕು. 1970-80 ದಶಕದಲ್ಲಿ ಅಂಬೇಡ್ಕರರವರ ಸಾಹಿತ್ಯ, ಅದರೊಟ್ಟಿಗೆ ಮರಾಠಿ ದಲಿತ ಸಾಹಿತ್ಯ ಅನುವಾದಗಳೊಂದಿಗೆ ಕರ್ನಾಟಕ ತಲುಪಿ, ಅಸಂಖ್ಯಾತ ಓದುಗರು ಪ್ರೇರಣೆ ಪಡೆದು ಇಲ್ಲಿನ ದಲಿತ ಚಳುವಳಿಯೂ ಬೌದ್ಧಧರ್ಮದ ಕುರಿತು ನಿರ್ಣಾಯಕ ನಿಲುವು ತೆಗೆದುಕೊಂಡಿದ್ದು, ದೇಶದ ಬೇರೆ ಭಾಗಗಳಿಗಿಂತ ಇಲ್ಲಿ ಹೆಚ್ಚು ಸ್ಪಷ್ಟವಾಗಿದೆ. ಅದಕ್ಕೆ ಬಹಳ ಮುಖ್ಯ ಕಾರಣ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ಕರ್ನಾಟಕದ ಪ್ರವಾಸಗಳು ಎಂದು ಖಚಿತವಾಗಿ ಹೇಳಬಹುದು. ಅವರು ಇಲ್ಲಿನ ಹಲವಾರು ಪ್ರದೇಶಗಳಿಗೆ ಅವರ ವಕೀಲಿ ವೃತ್ತಿಗೆ ಸಂಬಂಧಿಸಿದ ಮತ್ತು ಶಿಕ್ಷಣ ಸಂಸ್ಥೆಗಳ ಪ್ರಾರಂಭ ಕುರಿತು ಪ್ರಯತ್ನಗಳಿಗಾಗಿ ಪ್ರವಾಸಗಳನ್ನು ಕೈಗೊಂಡಿದ್ದಾರೆ. ಮುಖ್ಯವಾಗಿ ಬೆಳಗಾವಿ ಜಿಲ್ಲೆಯ ನಿಪ್ಪಾಣಿ, ಚಿಕ್ಕೋಡಿ, ಅಥಣಿ ತಾಲೂಕಿನ ಹಳ್ಳಿಗಳಿಗೆ, ಬೆಳಗಾವಿ ಪಟ್ಟಣಕ್ಕೆ ಮುಂದೆ ಧಾರವಾಡಕ್ಕೆ (ಒಂದು ತಿಂಗಳು ಇದ್ದು ಇಲ್ಲಿ ಒಂದು ವಸತಿ ನಿಲಯ ಪ್ರಾರಂಭಿಸುತ್ತಾರೆ) ಮುಂದೆ ಅವರ ಅಭಿಮಾನಿಗಳು ಹಾಗೂ ವಕೀಲ ವೃತ್ತಿಯ ಶಿಷ್ಯರ ಆಹ್ವಾನದ ಮೇರೆಗೆ ಬಿಜಾಪೂರಕ್ಕೆ ಬಂದಿದ್ದಾರೆ. ಕೋಲಾರದ ಬೌದ್ಧ ಉಪಾಸಕರ ಸಂಪರ್ಕ ಬಂದು ಅಲ್ಲಿನ ಬೌದ್ಧ ವಿಹಾರಗಳಿಗೆ ಭೇಟಿ ನೀಡಿದ್ದಾರೆ. ಮದ್ರಾಸಿಗೆ ಭೇಟಿ ನೀಡಿದಾಗ ಕೋಲಾರ, ಬೆಂಗಳೂರಿಗೆ ಭೇಟಿ ನೀಡಿ ಅಲ್ಲಿನ ಬೌದ್ಧ ಉಪಾಸಕ / ಉಪಾಸಕಿಯರ ಜೊತೆಗೆ ಚರ್ಚೆ ನಡೆಸಿದ್ದಾರೆ. 1950 ರ ದಶಕದ ಪೂರ್ವಾರ್ಧದಲ್ಲಿ ಅವರು ಬೆಂಗಳೂರಿಗೆ ಆಗಮಿಸಿ ಮೈಸೂರು ಮಹಾರಾಜರನ್ನು ಭೇಟಿ ಮಾಡಿದ್ದಾರೆ. ದೇಶಾದ್ಯಂತ ತಮ್ಮೊಂದಿಗೆ

ಬೌದ್ಧ ಧರ್ಮಕ್ಕೆ ಮತಾಂತರ ಹೊಂದುವ ದಲಿತರಿಗೆ ವಿಹಾರ, ಮಾರ್ಗದರ್ಶನಕ್ಕಾಗಿ ಬಿಕ್ಕುಗಳ ಅವಶ್ಯಕತೆಯನ್ನು ಮನಗೊಂಡು ಆ ಕುರಿತು ಮೂಲಭೂತ ಸೌಕರ್ಯಗಳ ನಿರ್ಮಾಣಕ್ಕಾಗಿ ಪ್ರಯತ್ನಗಳನ್ನು ಮಾಡಿರುವುದು ದಾಖಲೆಗಳಿಂದ ಕಂಡು ಬರುತ್ತದೆ. 'ಬೌದ್ಧ ಧರ್ಮದ ಪ್ರಸಾರ ಕಾರ್ಯಕ್ಕೆ ಅಗತ್ಯವಾದ ಬಿಕ್ಕುಗಳನ್ನು ತರಬೇತಿಗೊಳಿಸಲು ಬೆಂಗಳೂರಿನಲ್ಲಿ ಬೌದ್ಧ ಬಿಕ್ಕುಗಳ ತರಬೇತಿಯ ಸಲುವಾಗಿ ದೊಡ್ಡ ವಿಹಾರವನ್ನು ಕಟ್ಟಿಸಬೇಕೆಂಬುದು ಅಂಬೇಡ್ಕರ್‌ವರ ವಿಚಾರವಾಗಿತ್ತು. ಈ ಬಗ್ಗೆ ಎರಡು ವರ್ಷಗಳ ಹಿಂದೆ ಮೈಸೂರು ಮಹಾರಾಜರ ಬಳಿ ವಿಷಯವನ್ನು ಪ್ರಸ್ತಾಪಿಸಿದ್ದಾಗ ಅವರಿಂದ 05 ಎಕರೆ ಭೂಮಿ ನೀಡುವ ಭರವಸೆ ಸಿಕ್ಕಿತು.[9] ಹೀಗೆ ಕರ್ನಾಟಕ ದಲಿತರು ಅಂಬೇಡ್ಕರವರ ಚಳವಳಿಯಿಂದ ನೇರವಾಗಿ ಪ್ರಭಾವಿತರಾಗಿದ್ದಾರೆ. (ಅನುಬಂಧ-1 ಚಿತ್ರ : 27 ಗಮನಿಸಿ) ಡಾ. ಅಂಬೇಡ್ಕರರವರು ಬೌದ್ಧಧರ್ಮಕ್ಕೆ ಮತಾಂತರಗೊಳ್ಳುವ ಪೂರ್ವದಲ್ಲಿ, ತದನಂತರ ಅವರ ಈ ಐತಿಹಾಸಿಕ ತೀರ್ಮಾನದ ಬಗ್ಗೆ ಹೇಳಿಕೆಗಳು, ಪ್ರತಿಕ್ರಿಯೆಗಳು ಕಂಡುಬಂದಿರುವುದನ್ನು ಈ ಅಧ್ಯಯನ ಗಮನಕ್ಕೆ ತಂದುಕೊಂಡಿದೆ. ಅಂತಹ ಹೇಳಿಕೆಗಳು ಪ್ರತಿಕ್ರಿಯೆಗಳಿಂದ ಅವರ ಮತಾಂತರ ಚಳವಳಿಗೆ ಹಿನ್ನೆಡೆಯಾಯಿತೇ ? ಎಂಬ ಅಂಶವನ್ನು ಪರಿಶೀಲಿಸಿದೆ. ಆದರೆ ಅಂತಹ ಯಾವ ಕಾರಣವು ದಲಿತರು ಬೌದ್ಧಧರ್ಮ ಸ್ವೀಕಾರ ಮಾಡುವುದಕ್ಕೆ ಹಿನ್ನೆಡೆಯಾಗಿ ಪರಿಣಮಿಸಿಲ್ಲವೆಂಬುದನ್ನು ಗುರುತಿಸಲಾಗಿದೆ. (ಅನುಬಂಧ-1, ಚಿತ್ರ : 12 ಗಮನಿಸಿ) ಸಾಹಿತಿಗಳು, ದಲಿತ ಚಿಂತಕರೂ ಆದ ಪ್ರೊ.ಮ.ನ. ಜವರಯ್ಯವರು ಅಂಬೇಡ್ಕರರವರ ಸಮಕಾಲೀನರಾದ, ಅಸ್ಪೃಶ್ಯರ ಮುಖಂಡತ್ವಕ್ಕೆ ಸದಾ ಪ್ರಯತ್ನಿಸುತ್ತಿದ್ದ ಎಂ.ಸಿ. ರಾಜಾ (ತಮಿಳುನಾಡು) ಜಿ.ವಿ. ಗವಾಯಿ (ಮಹಾರಾಷ್ಟ್ರ) ಇವರುಗಳ ಉದಾಹರಣೆಯನ್ನು ಕೊಡುತ್ತಾರೆ.

'ತಮ್ಮ ಹಿಂದೂ ಮಾಲಿಕರನ್ನು ಮೆಚ್ಚಿಸುವ ಸಲುವಾಗಿ ಅಸ್ಪೃಶ್ಯರ ಮಾನವ ಹಕ್ಕುಗಳ ವಿರುದ್ಧವೇ ಎದ್ದುನಿಂತ ಗವಾಯ್ ಮತ್ತು ರಾಜಾರಂಥ ದಲಿತ ಮುಖಂಡರು ಇತಿಹಾಸದ ಕಸದ ಬುಟ್ಟಿಗೆ ಸೇರಿಹೋದುದು ಅವರವರ ವೈಯಕ್ತಿಕ ನೆಲೆಯಲ್ಲಿ' ಎಂದು ಹೇಳುತ್ತಾ 'ಅಂಬೇಡ್ಕರ್‌ರವರ ಮತಾಂತರದ ನಂತರ ಅರ್ಧ ಶತಮಾನದ ನಂತರವೂ ಇಂದು ಇಡೀ ದೇಶಾದ್ಯಂತ ಅಂಬೇಡ್ಕರ್‌ರವರು ಕಟ್ಟಿದ ಮತಾಂತರ ಆಂದೋಲನ ಮುನ್ನಡೆದಿದೆಯೋ ಅಥವಾ ರಾಜಾರವರ ಮತಾಂತರ ವಿರೋಧಿ ಆಂದೋಲನ ಮುಂದೆ ಸಾಗಿದೆಯೋ ?'[10] ಎಂಬ ಪ್ರಶ್ನೆಯಲ್ಲಿಯೇ ಅಂತಹ ದುರಂತ ನಾಯಕರುಗಳಿಗೆ (ಎಂ.ಪಿ. ರಾಜಾ, ಗವಾಯ್) ಅಂತಹ ಅಭಿಪ್ರಾಯ ಹೊಂದಿದ, ಯಾರಿಗೇ ಆದರೂ, ಉತ್ತರ ತನ್ನಿಂದ ತಾನೇ ಗೋಚರವಾಗುತ್ತದೆಯೆಂದು ಅಭಿಪ್ರಾಯ ಪಡುತ್ತಾರೆ. ಮುಂದೆ ದಲಿತರ ರಾಜಕೀಯ ನಾಯಕರಾಗಿದ್ದ ಬಾಬು ಜಗಜೀವನ ರಾಂ ಅವರೂ ಕೂಡ ಅನ್ಯ ಧರ್ಮಗಳಿಗೆ ಅಂದರೆ ಕ್ರೈಸ್ತ, ಇಸ್ಲಾಂ ಧರ್ಮಕ್ಕೆ ಮತಾಂತರವಾಗುವುದರ ಬಗ್ಗೆ ಅಸಹನೆ ವ್ಯಕ್ತಡಿಸುತ್ತಾರೆಯೇ ಹೊರತಾಗಿ ಅಂಬೇಡ್ಕರ್‌ರವರ ಮತಾಂತರದ ಬಗ್ಗೆ ಟೀಕೆ ಟಿಪ್ಪಣೆ ಮಾಡಿರುವುದು ಕಂಡು ಬರುವುದಿಲ್ಲ.

1970 ರ ದಶಕದಲ್ಲಿ ಅವರು ದಲಿತರ ಮೇಲೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿರುವ ದಬ್ಬಾಳಿಕೆ ದೌರ್ಜನ್ಯಗಳು, ನಾಗರಿಕ ಸಮಾಜಕ್ಕೆ ಶೋಭೆ ತರುವಂತದಲ್ಲವೆಂದು ಹೇಳುತ್ತಾ ಮೇಲ್ವರ್ಗದ ಉದಾಸೀನತೆಗೆ ಬೇಸರಿಸಿಕೊಂಡು "ಭಾರತೀಯ ಸಮಾಜ ಇದನ್ನೆಲ್ಲ ಮೌನದಿಂದ ಸಹಿಸುತ್ತಿರುವುದು ತುಂಬಾ ವಿಚಿತ್ರವಾಗಿದೆ. ಕೆಲವು ಅರ್ಥದಲ್ಲಿ ಭಾರತೀಯ ಸಮಾಜವೇ ಈ ದಬ್ಬಾಳಿಕೆಗಳ ಸಂಚು ನಡೆಸುತ್ತಿದೆ ಎಂಬ ಆಪಾದನೆಗೆ ಅರ್ಹವಾಗಿದೆ ಎಂದು ಹೇಳುತ್ತಾರೆ".[11] ಮೊದಮೊದಲು ಬಾಬು ಜಗಜೀವನ ರಾಮ್ ಅವರು ಮತಾಂತರ

ಪರಿಶಿಷ್ಟರ ಸಮಸ್ಯೆಗಳಿಗೆ ಪರಿಹಾರವಾಗಲಾರದೆಂದು ಹೇಳಿದರೂ ಇಂತಹ ಅಭಿಪ್ರಾಯ ಕಾಂಗ್ರೆಸ್ ಮನೆಯ ತಮ್ಮ ಹಿರಿಯ ಹಿಂದೂ ಸಹೋದ್ಯೋಗಿಗಳನ್ನು ಮೆಚ್ಚಿಸಲು ಅಥವಾ ವಿರೋಧ ಕಟ್ಟಿಕೊಳ್ಳಲು ಇಚ್ಛಿಸದ ಅವರ ಮೂಲ ಸ್ವಭಾವಕ್ಕೆ ಪೂರಕವಾಗಿಯೇ ಇತ್ತೆಂಬುದು ಈ ಕೆಳಗಿನ ಮಾತುಗಳಿಂದ ಅರ್ಥವಾಗುತ್ತದೆ. ಅವರದು ಧಾರ್ಮಿಕ ಅನುಸಂಧಾನದ ಮಾದರಿ ಎಂಬುದು ಮೇಲ್ನೋಟಕ್ಕೇನೆ ಹೊಳೆಯುತ್ತದೆ. 'ಪರಿಹಾರ ಮತಾಂತರವೇ?' ಎಂಬ ಲೇಖನದಲ್ಲಿ ಅವರ ಹೇಳಿಕೆಗಳನ್ನು ಗಮನಿಸಿದರೆ ಅದು ಗೋಚರಿಸುತ್ತದೆ''.

''ಪರಿಶಿಷ್ಟರ ಸಮಸ್ಯೆಗಳಿಗೆ ಮತಾಂತರ ಮದ್ದಲ್ಲ. ಕೆಲವು ಬುಡಕಟ್ಟು ಜನಾಂಗಗಳಲ್ಲಿ ಮತ್ತು ದುರ್ಬಲ ವಿಭಾಗಗಳಲ್ಲಿ ಮಿಷನರಿಗಳೂ ಅನೇಕ ದಿನದಿಂದ ಕ್ರಿಯಾಶೀಲರಾಗಿದ್ದಾರೆ. ಒಂದಿಲ್ಲೊಂದು ರೂಪದಲ್ಲಿ ಹೇರಳ ಹಣ ಹರಿಸಿದ್ದಾರೆ. ಸಾಮಾನ್ಯವಾಗಿ ಕಡು ಬಡತನಕ್ಕೆ ತುತ್ತಾದ ಪ್ರದೇಶಗಳಲ್ಲಿಯೇ ಅವರು ತಳವೂರುತ್ತಾರೆ. ದಲಿತರ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವ ಮೂಲಕ ಇಂಥ ಮತಾಂತರದ ಪ್ರಕ್ರಿಯೆಗಳಿಗೆ ತಡೆ ಒಡ್ಡಬಹುದು''[12] ಎಂದು ಹಿಂದೂ ಧರ್ಮ ಸುಧಾರಕರಿಗೆ ಸಲಹೆ ನೀಡುತ್ತಾರೆ. ಆದರೆ ಅವರು ಬೌದ್ಧಧರ್ಮಕ್ಕೆ ಮತಾಂತರಗೊಳ್ಳುವವರ ಬಗ್ಗೆ ವಿಶೇಷ ತಕರಾರನ್ನು ಮಂಡಿಸಿಲ್ಲದಿರುವುದು ಅವರ ಈ ಮಾತಿನಲ್ಲಿ ಎದ್ದು ಕಾಣುತ್ತದೆ. ಆಧುನಿಕ ಕಾಲದಲ್ಲಿಯೇ ಇತ್ತೀಚೆಗೆ ದಲಿತ ರಾಜಕೀಯ ಮುಖಂಡರಾದ ಬಾಬು ಜಗಜೀವನರಾಂ ಒಂದು ಸಂದರ್ಭದಲ್ಲಿ ದೇವಾಲಯದ ಗರ್ಭ ಗುಡಿಯ ಒಳಗೆ ಹೋಗಿ ಪುತ್ಥಳಿಯನ್ನು ಉದ್ಘಾಟಿಸಿದರು. ಅವರು ಉದ್ಘಾಟಿಸಿ ಅಲ್ಲಿಂದ ಹೋದ ನಂತರ ಆ ಪುತ್ಥಳಿಯನ್ನು ವೈಧಿಕ ಬ್ರಾಹ್ಮಣರು ಶುದ್ಧೀಕರಿಸಿದ ಉದಾಹರಣೆಯನ್ನು ನೋಡುತ್ತೇವೆ. ವೈಯಕ್ತಿಕ ನೆಲೆಯಲ್ಲಿ ಸವರ್ಣಿಯ ಯಜಮಾನೀ ಸಂಸ್ಕೃತಿ ಅವರನ್ನು ಶೋಷಿಸುತ್ತಿದ್ದರೂ ಅವಮಾನಿಸುತ್ತಿದ್ದರೂ ಜಗಜೀವನರಾಂರವರು ಅಂಬೇಡ್ಕರ್‌ರವರಂತೆ ತಾವಿರುವ ಪರಿಸ್ಥಿತಿಯಿಂದ ಹೊರ ಬರಲು ಸಾಧ್ಯವಾಗದೇ ಹೋಯಿತು. ಜಗಜೀವನರಾಂ ತಮ್ಮ ಜೀವಿತದ ಕೊನೆಯ ಕಾಲಘಟ್ಟದಲ್ಲಿ ''ಒಬ್ಬ ಮೋಚಿ ಎಂದಿಗೂ ಈ ದೇಶದ ಪ್ರಧಾನಿಯಾಗಲಾರ ಎಂದು ವಿಷಾದದಿಂದ ತಮ್ಮ ಅಂತರಾಳದ ನೋವು ಬಿಚ್ಚಿಟ್ಟದ್ದನ್ನು ನೋಡುತ್ತೇವೆ''.

ಅವರು ತಮ್ಮ ಲೇಖನದಲ್ಲಿ ಮುಂದುವರೆದು ಹೇಳುತ್ತ 'ಸವರ್ಣೀಯ ಹಿಂದೂಗಳ ನಿರ್ಲಕ್ಷ ಮತ್ತು ದಬ್ಬಾಳಿಕೆಗೆ ಪ್ರತಿಭಟನೆಯಾಗಿ ಅನೇಕ ಜನ ಪರಿಶಿಷ್ಟರು ಕ್ರಿಶ್ಚಿಯನ್ ಧರ್ಮವನ್ನು ಅಪ್ಪಿಕೊಳ್ಳುತ್ತಿದ್ದಾರೆ. ಇನ್ನು ಕೆಲವರು ಬೌದ್ಧಧರ್ಮವನ್ನು ಸ್ವೀಕರಿಸುತ್ತಿದ್ದಾರೆ. ಆದ್ದರಿಂದ ಪರಿಶಿಷ್ಟ ಬಾಂಧವರನ್ನು ಮಾನವ ಸಹಜೀವಿಗಳೆಂದು ಬಗೆದು ಅವರ ಬದುಕಿನ ಹಕ್ಕು ಅವರಿಗೆ ದಕ್ಕುವಂತೆ ಮಾಡಬೇಕಾದ ತುರ್ತಿನ ಕಾಲ ಈಗ ಬಂದಿದೆ. ಅವರು ಒಂದು ಉತ್ತಮವಾದ ಬದುಕು ನಡೆಸಲು ಅವಶ್ಯವಿರುವ ಅವಕಾಶಗಳನ್ನು ಕಲ್ಪಿಸಿಕೊಡುವುದಕ್ಕೆ ಈಗ ಸಕಾಲವಾಗಿದೆ''[13] ಎಂದು ಅಭಿಪ್ರಾಯ ಪಡುತ್ತಾರೆ. ಹೀಗೆ ಹೇಳುವಲ್ಲಿ ಜಗಜೀವನ ರಾಂ ಅವರು 1970 ರ ದಶಕದಲ್ಲೂ ಹಿಂದೂ ಸವರ್ಣೀಯರು, ದಲಿತರನ್ನು ಧಾರ್ಮಿಕ ದೌರ್ಜನ್ಯಕ್ಕೆ ಒಳಪಡಿಸಿದ್ದರು. ಅವರಲ್ಲಿ ಯಾವುದೇ ನಿಜವಾದ ಕಳಕಳಿ ಇರಲಿಲ್ಲ, ಅದಕ್ಕೆ ದಲಿತರು ಮತಾಂತರ ಹೊಂದುತ್ತಿದ್ದಾರೆಂಬ ತಿಳುವಳಿಕೆಯನ್ನು ಹೊಂದಿದ್ದರೆಂಬುದು ಸ್ಪಷ್ಟವಾಗುತ್ತದೆ. ಆದರೆ ಅವರ ವಿಚಾರಧಾರೆಯ ಮೂಲ ಕೇಂದ್ರದಲ್ಲಿ 'ಧಾರ್ಮಿಕ ಸುಧಾರಣೆಯ ಮಾದರಿಯೇ' ಎದ್ದು ಕಾಣುತ್ತದೆ. ಆದರೆ ಕರ್ನಾಟಕದ ಸಂದರ್ಭದಲ್ಲಿ ಡಾ. ಅಂಬೇಡ್ಕರ್‌ರವರ ವಿಚಾರಧಾರೆಯಿಂದ ಪ್ರಭಾವಿತರಾದ ಬಿ. ಬಸಲಿಂಗಪ್ಪನವರ ಧೋರಣೆಯು ಇದಕ್ಕಿಂತ ಭಿನ್ನವಾಗಿರುವುದನ್ನು ನೋಡುತ್ತೇವೆ. ಅವರೂ ಕಾಂಗ್ರೆಸ್ ಪಾಳೆಯದಲ್ಲಿದ್ದರೂ ಎಂದಿಗೂ ದಲಿತ ವಿಮೋಚನೆಯ ವಿಷಯದಲ್ಲಿ ರಾಜಿ

ಮಾಡಿಕೊಂಡವರಲ್ಲವೆಂಬುದು ಸಮಕಾಲೀನ ಚರಿತ್ರೆಯಲ್ಲಿ ಹಲವಾರು ಘಟನೆಗಳು ಸಾಕ್ಷಿಯಾಗಿವೆ. ಈ ಕುರಿತು, ದಲಿತ ಮುಖಂಡರು ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ಮತಾಂತರ ಆಂದೋಲನವನ್ನು ಸ್ವೀಕರಿಸಿದ ರೀತಿ ಮತ್ತು ಯಾವ ಮಾದರಿಗಳಲ್ಲಿ ನಿಲ್ಲುತ್ತಾರೆಂಬುದನ್ನು ಅಧ್ಯಾಯ-6 ರಲ್ಲಿ ಪ್ರತ್ಯೇಕವಾಗಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

## 1.1. (ಅ) ಅಧ್ಯಯನ ಉದ್ದೇಶಗಳು :

ಪ್ರಸ್ತುತ ಅಧ್ಯಯನವು ಕರ್ನಾಟಕದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನವನ್ನು ವಿವರಿಸುತ್ತಾ ದಲಿತ ವಿಮೋಚನೆಯಲ್ಲಿ ಬೌದ್ಧ ಸಾಂಸ್ಕೃತಿಕ ಮಾದರಿಯನ್ನು, ಸವಾಲುಗಳನ್ನು ಈ ಹೊತ್ತಿನ ದಲಿತರ ಸಾಂಸ್ಕೃತಿಕ ಸಂದಿಗ್ಧತೆಗಳ ಮತ್ತು ಸಂಘರ್ಷಗಳಲ್ಲಿ ಆದ ಬೆಳವಣಿಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿ ತಾಳೆ ನೋಡುತ್ತದೆ. ಹಾಗೆ ತುಲನಾತ್ಮಕವಾಗಿ ನೋಡುತ್ತಲೇ ಇನ್ನೂ ಅವರ ಬದುಕಿನಲ್ಲಿ ಪಡೆದುಕೊಳ್ಳಬೇಕಾದ, ಕಂಡುಕೊಳ್ಳಬೇಕಾದ ಸಾಮಾಜಿಕ, ರಾಜಕೀಯ, ಆರ್ಥಿಕ ಮತ್ತು ಶೈಕ್ಷಣಿಕ ಸಮಾನತೆ ಕುರಿತು ಗಮನ ಸೆಳೆಯುತ್ತದೆ. ದಲಿತರ ವೈಯಕ್ತಿಕ, ಸಾಮಾಜಿಕ ಮತ್ತು ರಾಷ್ಟ್ರೀಯ ಸ್ತರದ ಬದುಕಿನಲ್ಲಿ ಅಂಬೇಡ್ಕರ್‌ರವರ ಬೌದ್ಧ ಧಮ್ಮದ ವಿಮೋಚನಾ ಮಾದರಿಯನ್ನು ಅಳವಡಿಸಿ ನಿರೀಕ್ಷಿತ ಮಾನವ ಅಭಿವೃದ್ಧಿಯನ್ನು (Desired Level of Human Development) ಸಾಧಿಸಲು ಒಂದು ಮಾದರಿಯಾಗಿದೆಯೇ ಎಂಬ ಕುರಿತು ಪರಿಶೋಧಿಸುವುದಾಗಿದೆ. ಈ ಅಧ್ಯಯನ ಒಂದು ರೀತಿಯಲ್ಲಿ ದಲಿತ ಬೌದ್ಧರ ಸೈದ್ಧಾಂತಿಕ ಹಾಗೂ ಪ್ರಾಯೋಗಿಕ (Theory and Practice) ಆಯಾಮಗಳೆರಡರಲ್ಲೂ, ಅವರ ಸಂದಿಗ್ಧ ಬದುಕನ್ನು ವಿಶ್ಲೇಷಿಸಲು ಪ್ರಯತ್ನಿಸುತ್ತದೆ.

ಯಾವುದೇ ಒಂದು ಸಾಂಸ್ಕೃತಿಕ ಅಭಿವೃದ್ಧಿಯ ಮಾದರಿಯನ್ನು, ಜೀವಂತ ಪ್ರಕ್ರಿಯೆಯನ್ನು ಸೀಮಿತ ನೆಲೆಯ ಗ್ರಂಥಸ್ಥವಾದ ರೀತಿಯಲ್ಲಿ ಸಂಶೋಧನಾ ಪಠ್ಯದ ಮಟ್ಟಕ್ಕೆ ಇಳಿಸುವ ಮಿತಿಯನ್ನು ಮೀರುವ ಪ್ರಯತ್ನವನ್ನು ಅಧ್ಯಯನದ ಅಂತ್ಯದವರೆಗೆ ಮಾಡಲಾಗಿದೆ. ಇಂಥಹ ಮಹತ್ವದ ವಿಮೋಚನಾ ಪ್ರಕ್ರಿಯೆಯನ್ನು ಬರೀ ಪಠ್ಯದ ಮಟ್ಟಕ್ಕೆ ಇಳಿಸಿದ್ದಾದರೆ ಬರೀ ಬೌದ್ಧಿಕ ಸರಕಾಗಲು ಕಾರಣವಾದರೆ, ಅದರಿಂದ ಆ ಸಾಂಸ್ಕೃತಿಕ ಪ್ರಕ್ರಿಯೆಗೆ ತುಂಬಲಾರದ ಹಾನಿಯುಂಟಾಗುತ್ತದೆ. ಒಂದು ಸಾಮಾಜಿಕ ವಿಮೋಚನಾ ಪ್ರಕ್ರಿಯೆ ಕೇವಲ ಬೌದ್ಧಿಕ ಕಸರತ್ತಿನ ಶುಷ್ಕ ಕ್ರಿಯೆಯಾಗಬಾರದು. ಪ್ರಸ್ತುತ ಅಧ್ಯಯನಕಾರನೂ ಈ ಸಂಶೋಧನಾ ಅಧ್ಯಯನದ ಒಂದು ಘಟಕವೂ ಆಗಿರುವುದರಿಂದ 'ಸಮಷ್ಟಿ ಪ್ರಜ್ಞೆಯ' ಕಳಕಳಿಗಳೂ 'ವ್ಯಷ್ಟಿ ಪ್ರಜ್ಞೆಯ' ಹಿನ್ನೆಲೆಯಲ್ಲಿ ವಿಶ್ಲೇಷಿತವಾಗುವುದರಿಂದ ಪರಿಣಾಮಗಳು ಧನಾತ್ಮಕವಾಗಿಯೇ ಇರುತ್ತವೆ ಎಂಬ ದೃಢ ನಂಬುಗೆ ಹೊಂದಲಾಗಿದೆ. ಫಲಶ್ರುತಿಯ ಮಟ್ಟ ಅಂತಹ ಹೇಳಿಕೊಳ್ಳಬಹುದಾದ ಎತ್ತರಕ್ಕೆ ಮುಟ್ಟದೇ ಹೋಗಬಹುದು, ಆದರೆ ಸಾಂಸ್ಕೃತಿಕ ಹಾನಿಯನ್ನಂತೂ ಮಾಡಲಾರದು ಎಂಬ ವಿಶ್ವಾಸವನ್ನು ತಾಳಲಾಗಿದೆ. ಈ ಅಧ್ಯಯನದಲ್ಲಿ ಬಳಕೆಯಾಗುವ ಪರಿಭಾಷೆ, ಪರಿಕಲ್ಪನೆ, ಶಾಬ್ದಿಕ ಮಿತಿ, ಸಂಬೋಧಿಸುವ ರೀತಿ ಒಂದೊಂದು ಕಡೆ ಸರ್ವಮಾನ್ಯವಾಗಲು ಸಾಧ್ಯವಾಗದೇ ಇರಬಹುದು. ಆದರೆ ಯಾವುದೇ ಒಂದು ಅಧ್ಯಯನಕ್ಕೆ, ಅಧ್ಯಯನಕಾರನ ಪಠ್ಯಕ್ಕೆ ತನ್ನದೇ ಆದ ಒಂದು ಮಿತಿ ಇದ್ದೇ ಇರುತ್ತದೆ ಎಂಬ ಆಯಾಮವನ್ನೂ ಸಹ ಪರಿಗಣಿಸಬೇಕು ಎಂಬ ಮನವಿಯೂ ಇಲ್ಲಿ ಮುಖ್ಯವಾಗುತ್ತದೆ.

ಆದ್ದರಿಂದ ಈ ಅಧ್ಯಯನಕ್ಕೆ ತನ್ನದೇ ಆದ ಮಿತಿಗಳಿವೆ. ಅದೇ ಕಾಲಕ್ಕೆ ಸಮಕಾಲೀನ ಸಂದರ್ಭದ ಸಾಂಸ್ಕೃತಿಕ ಅಧ್ಯಯನಗಳ ಸಾಮಾಜಿಕ ಅವಶ್ಯಕತೆಯ ಹಂದರಲ್ಲಿ ಪುಟ್ಟದೊಂದು ಬೀಜ ಮೊಳಕೆಯೊಡೆದ ಸಮಾಧಾನವೂ ಇದೆ. ಈ ಮೊಳಕೆಗೆ ನೀರು, ಗಾಳಿ, ಬೆಳಕು ಮತ್ತು ಶಕ್ತಿ ನೀಡಿ ಬೆಳೆಸಬೇಕಾದ್ದು ಮಾನವ ಕಲ್ಯಾಣದಲ್ಲಿ, ಸಾಮಾಜಿಕ ಪರಿವರ್ತನೆಯಲ್ಲಿ ಆರೋಗ್ಯಕರ ಸಮಾಜದ ನಿರ್ಮಾಣದಲ್ಲಿ ನಂಬಿಕೆ ಇರುವ ಎಲ್ಲರ ಜವಾಬ್ದಾರಿಯಾಗಿದೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಡಾ. ಅಂಬೇಡ್ಕರ್‌ರವರು ಬೌದ್ಧ ಧರ್ಮಕ್ಕೆ ಮತಾಂತರಗೊಂಡು ಅವರದೇ ಆದ ಚಾರಿತ್ರಿಕ ವಿಶ್ಲೇಷಣೆಗಳ ಆಧಾರದ ಮೇಲೆ ಪರಿಕಲ್ಪಿಸಿದ 'ಬೌದ್ಧ ಧಮ್ಮವನ್ನು' ದಲಿತ ವಿಮೋಚನೆಯ ಸಾಂಸ್ಕೃತಿಕ ಅಸ್ತ್ರವನ್ನಾಗಿ, ಮಾಧ್ಯಮವಾಗಿ ದಲಿತರಿಗೆ ಬಿಟ್ಟುಹೋಗಿದ್ದಾರೆ. ಅವರ ಮಾದರಿಯನ್ನು ಅನುಸರಿಸುವ, ಅವರ ವಿಚಾರಗಳಿಂದ ಪ್ರೇರಣೆ ಪಡೆದು ಮುನ್ನಡೆಯುತ್ತಿರುವ ಅಸಂಖ್ಯಾತ ದಲಿತ ಹಿಂದುಳಿದ ಬಹುಜನರು ದಿನದಿಂದ ದಿನಕ್ಕೆ ಬೌದ್ಧಧರ್ಮಕ್ಕೆ ಹತ್ತಿರವಾಗುತ್ತಿದ್ದಾರೆ. ತಮ್ಮನ್ನು ತುಚ್ಛವಾಗಿ ಕಂಡು, ತಮ್ಮ ಅಭಿವೃದ್ಧಿಯ ಹಕ್ಕುಗಳನ್ನು ಕಸಿದುಕೊಂಡು, ಸಾಮಾಜಿಕ, ಧಾರ್ಮಿಕ ಆರ್ಥಿಕ ಅಸಮಾನತೆಗೆ ಕಾರಣವಾದ 'ಯಜಮಾನೀ ಸಂಸ್ಕೃತಿಯ ಎಲ್ಲ ಸ್ಥಾಪಿತ ಮೌಲ್ಯಗಳನ್ನು ಧಿಕ್ಕರಿಸುತ್ತಾ ನಡೆದಿದ್ದಾರೆ. ಅಂಬೇಡ್ಕರವರು ಹೇಳಿದ ಸ್ಥಳಾಂತರ ಧರ್ಮಾಂತರ ಮತ್ತು ನಾಮಾಂತರ ಸೂತ್ರವನ್ನು ತಮ್ಮ ಸಾಂಸ್ಕೃತಿಕ ಗುಲಾಮಗಿರಿಯ ಬಿಡುಗಡೆಗೆ ಸೂತ್ರವನ್ನಾಗಿಸಿಕೊಂಡಿದ್ದಾರೆ ಎಂಬುದರ ವಿಶ್ಲೇಷಣೆಗೆ ಈ ಅಧ್ಯಯನ ಪ್ರಯತ್ನ ನಡೆಸಿದೆ. ಅದೇ ಕಾಲಕ್ಕೆ ದಲಿತರಲ್ಲೇ ಉದ್ಭವಿಸಿದ ಅಸಮಾಧಾನದ ಪದರುಗಳನ್ನು ಸಂದಿಗ್ಧ ಸಮಸ್ಯೆಗಳನ್ನು ಈ ಹಿನ್ನಲೆಯಲ್ಲಿ ಅವಲೋಕಿಸಿ ಅವರ ಪೂರ್ಣ ವಿಮೋಚನೆಯ ಮಾದರಿಗಳ ಶೋಧ ಕಾರ್ಯವನ್ನು ಈ ಅಧ್ಯಯನ ಕೈಗೊಂಡಿದೆ.

ಹಿಂದೂ ಜಾತಿ ವ್ಯವಸ್ಥೆಯಲ್ಲಿ ಸಾವಿರಾರು ವರ್ಷಗಳಿಂದ ಶೋಷಣೆಗೊಳಗಾದ ದಲಿತರ ಮಾನವ ಹಕ್ಕುಗಳ ಬೇಡಿಕೆ ಇವತ್ತು ವಿಶ್ವಸಂಸ್ಥೆಯ ಮೆಟ್ಟಿಲೇರಿದೆ. ಭಾರತದ ಹಲವಾರು ದಲಿತರು, ಮಾನವ ಹಕ್ಕುಗಳ ಕಾರ್ಯಕರ್ತರು. ತಮ್ಮನ್ನು ಸಾವಿರಾರು ವರ್ಷಗಳಿಂದ 'ಜಾತಿ' ವ್ಯವಸ್ಥೆಯಲ್ಲಿ ಶೋಷಿಸಲಾಗಿದೆ. ಈ ಜಾತಿ ಆಧಾರಿತ ಶೋಷಣೆ, 'ವರ್ಣಭೇದ ನೀತಿ' (Aparthied) ಗಿಂತಲೂ ಹೇಯವಾಗಿದ್ದು ಅಮಾನವೀಯವಾಗಿದ್ದು ಅಂತರಾಷ್ಟ್ರೀಯ ಸಮುದಾಯ ಈ 'ಜಾತಿ' ವ್ಯವಸ್ಥೆಯಡಿ ಶೋಷಿತರಾದ ದಲಿತರ ಬಗ್ಗೆ ಅವರ ಅಭಿವೃದ್ಧಿಯ ಬಗೆಗೆ ಇರುವ ದೃಷ್ಟಿಕೋನಗಳನ್ನು ಬದಲಾಯಿಸಿಕೊಳ್ಳಬೇಕೆಂದು ಅಂತರರಾಷ್ಟ್ರೀಯ ಸಮುದಾಯದ ಮೇಲೆ ಒತ್ತಡ ಹೇರಿವೆ. ಈ ವಿಷಯದಲ್ಲಿ ಅಂತರರಾಷ್ಟ್ರೀಯ ಸಮುದಾಯದ ದೃಷ್ಟಿಕೋನಗಳು ಬದಲಾವಣೆಯಾಗಿ ಅರೆ ಸರ್ಕಾರಿ ಸಂಸ್ಥೆಗಳಲ್ಲಿ ವಿನಾಕಾರಣ ನಿರುಪಯೋಗಿ, ನಿರೀಕ್ಷಿತ ಫಲ ನೀಡಿದ ಯೋಜನೆಗಳಿಗೆ ಹಣ ದುರುಪಯೋಗವಾಗುವುದನ್ನು ತಪ್ಪಿಸಬಹುದಾಗಿದೆ. ಜಾಗತಿಕ ಬ್ಯಾಂಕ್, ಐ.ಎಂ.ಎಫ್. ಮುಂತಾದ ಅಂತರ್‌ರಾಷ್ಟ್ರೀಯ ಎಜೆನ್ಸಿಗಳು ರೂಪಿಸುವ ಸಾಮಾಜಿಕ, ಆರ್ಥಿಕ ಬದಲಾವಣೆಯ ಯೋಜನೆಗಳ ಕಾರ್ಯತಂತ್ರಗಳನ್ನು ಒತ್ತುಗಳನ್ನು 'ದಲಿತ ವಿಮೋಚನೆಯ' ದೃಷ್ಟಿಕೋನಗಳಿಂದ ಗಮನಿಸಬಹುದಾಗಿದೆ. ಇದು ಒಂದು ರೀತಿ ರೋಗ ಹತ್ತಿದ ಟೊಂಗೆಗಳನ್ನು ಕಡಿದು ಉರುಳಿಸುವ ಬದಲಾಗಿ ಅಂತಹ ಮರದ ಬೇರಿಗೆ ಔಷಧಿ ನೀಡುವ ಪ್ರಕ್ರಿಯೆಯಾಗುತ್ತದೆ. ದಲಿತರಲ್ಲೇ ಹಲವಾರು ಉಪಜಾತಿಗಳು ದೇಶಾದ್ಯಂತ 1500 ಕ್ಕಿಂತಲೂ ಹೆಚ್ಚಿಗೆ ಇವೆ ಎಂದು ಅಂದಾಜಿಸಲಾಗಿದೆ. ಈ ಜನ ಸಮುದಾಯಗಳು ಇಂತಹ ಪ್ರಕ್ರಿಯೆಗಳ ಹೊರಗೊಮ್ಮೆ

ಒಳಗೊಮ್ಮೆ ನಿಂತು ತಮ್ಮ ಸಾಂಸ್ಕೃತಿಕ ಅಭಿವ್ಯಕ್ತಿಯನ್ನು ಪ್ರಕಟಿಸುತ್ತಲೇ ಇದ್ದಾರೆ. ಸಾಂವಿಧಾನಿಕ ಸೌಲಭ್ಯಗಳನ್ನು ಪಡೆಯುವಲ್ಲಿ ದಲಿತರಲ್ಲಿಯೇ ಪೈಪೋಟಿ ಪ್ರಾರಂಭವಾಗಿ ಮೀಸಲಾತಿಯಲ್ಲಿಯೇ ಆಂತರಿಕ ಸಮತಲ ಮೀಸಲಾತಿ (Horizontal Reservation in Reservation) ಗೆ ಬೇಡಿಕೆಗಳು ಪ್ರಾರಂಭವಾಗಿದೆ. ಈ ಹೊತ್ತಿನ ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳಲ್ಲೂ ಒಳ ಮೀಸಲಾತಿ ಸಂಘರ್ಷ ಪ್ರಾರಂಭವಾಗಿರುವುದು, ಜಾತಿಯ ಕ್ರೌರ್ಯದ ವಿವಿಧ ಮುಖಗಳನ್ನು, ರಾಜಕೀಯವಾಗಿ ಅವುಗಳನ್ನು ಬಳಸಿಕೊಳ್ಳುತ್ತಿರುವ ರೀತಿಯನ್ನು ಬಿಂಬಿಸುತ್ತದೆ.

ದೇಶದ ಪ್ರತಿಶತ ಮೂವತ್ತರಷ್ಟಿರುವ ದಲಿತರು ಸ್ವಾತಂತ್ರ್ಯದ ಐದು ದಶಕಗಳಲ್ಲಿ ಹೇಳಿಕೊಳ್ಳುವ ಅಭಿವೃದ್ಧಿಯನ್ನೇನೂ ಸಾಧಿಸದಿದ್ದರೂ, ತಮ್ಮನ್ನು ಶೋಷಿಸುವ ಶಕ್ತಿಗಳ ವಿರುದ್ಧ ದಿಟ್ಟ ಹೋರಾಟ ಮಾಡುವ ಗಟ್ಟಿತನ ದಲಿತ ಚಳುವಳಿಗಳಲ್ಲಿ ಕಂಡುಬಂದಿದೆ. ಚರಿತ್ರೆಯ ಅಧ್ಯಯನಗಳು ಅದರಲ್ಲೂ ವಿಶೇಷವಾಗಿ, ತಳ ಸಮುದಾಯಗಳ (Subaltern Communities) ಕುರಿತು ಇತ್ತೀಚೆಗಷ್ಟೇ ನಡೆಯುತ್ತಿವೆ. ಈ ಅಧ್ಯಯನದ ಉದ್ದೇಶ ಅಂತಹ ಎಲ್ಲಾ ಪ್ರಯತ್ನಗಳನ್ನು ಅವಲೋಕಿಸಿ ಅಧ್ಯಯನ ಮಾಡುವುದರ ಜೊತೆಗೆ ದಲಿತರು, ಅದರಲ್ಲೂ ಮುಖ್ಯವಾಗಿ ಅಂಬೇಡ್ಕರ್‌ರವರ ಸಾಂಸ್ಕೃತಿಕ ವಿಮೋಚನಾ ಮಾದರಿ ಒಪ್ಪಿ ಬೌದ್ಧ ಧರ್ಮ, ಸ್ವೀಕರಿಸಿದ ಪ್ರಭಾವಶಾಲಿ ಗುಂಪುಗಳು, ಈ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ಸಂದರ್ಭದಲ್ಲಿ ಯಾವ ಹಂತಕ್ಕೆ ತಲುಪಿವೆ, ಚರಿತ್ರೆಯಿಂದ ಯಾವ ಸಂದೇಶ ಪಡೆದು ಮುನ್ನಡೆದಿವೆ ಎಂಬುದರ ಅವಲೋಕನ ಮಾಡುವುದು ಅಧ್ಯಯನದ ಉದ್ದೇಶವಾಗಿದೆ. ಅಂಬೇಡ್ಕರ್‌ರವರ ನಂತರದ ಭಾರತದಲ್ಲಿ ಹೇಳಿಕೊಳ್ಳಬಹುದಾದ ಸಾಮಾಜಿಕ, ಆರ್ಥಿಕ, ರಾಜಕೀಯ ಆಂದೋಲನಗಳಿಲ್ಲದೇ ಶೂನ್ಯತೆ ಸೃಷ್ಟಿಯಾಗಿದೆ. ಅಲ್ಲಲ್ಲಿ ಪ್ರಾದೇಶಿಕವಾಗಿ ಅಂಬೇಡ್ಕರ್‌ರವರ ರಾಜಕೀಯ ಸಿದ್ಧಾಂತ ಆಧರಿಸಿ ಸಂಘಟನೆಗಳು ಬೆಳೆದಿವೆ. ಅಂಬೇಡ್ಕರ್‌ರವರ ರಾಜಕೀಯ ಸಿದ್ಧಾಂತವನ್ನೇ ತಾನು ಮಾದರಿಯಾಗಿ ಪಾಲಿಸುತ್ತಿರುವುದಾಗಿ ಮುನ್ನಡೆಯುತ್ತಿರುವ 'ಬಹುಜನ ಸಮಾಜ ಪಕ್ಷ' ಬಹು ಜನರೆಲ್ಲ ಒಂದಾಗಿ 'ಮತ ಶಕ್ತಿ' ಪ್ರದರ್ಶಿಸಿದರೆ ರಾಜಕೀಯ ಅಧಿಕಾರ ಹಿಡಿಯಲು ಸಾಧ್ಯ. ರಾಜಕೀಯ ಅಧಿಕಾರವೇ ದಲಿತರ ಎಲ್ಲಾ ರೀತಿಯ ಶೋಷಣೆಗೆ ಅಂತ್ಯ ಹಾಡಬಲ್ಲದು ಎಂಬುದನ್ನು ಪ್ರಾಯೋಗಿವಾಗಿ ಯಶಸ್ವಿಯಾಗಿ ತೋರಿಸಿದರೂ, ಅಖಿಲ ಭಾರತ ಮಟ್ಟದಲ್ಲಿ ಆ ಸಂಘಟನೆ ದಲಿತ ಬಹುಜನರ ನಂಬಿಕೆಯಲ್ಲಿ ಇನ್ನೂ ಆಳವಾದ ನೆಲೆಗೆ ಇಳಿದಿಲ್ಲವೆಂಬುದನ್ನು ಗಮನಿಸುತ್ತಿದ್ದೇವೆ. ಆದರೆ, 'ಮತಬ್ಯಾಂಕ್' ರಾಜಕಾರಣಕ್ಕೆ ತಿಲಾಂಜಲಿ ಇಡುವ ಪ್ರಯತ್ನ ಜಾರಿಯಲ್ಲಿರುವುದನ್ನು ಕಾಣುತ್ತೇವೆ.

ಚಿಂತಕರಾದ ಡಾ. ಮಲ್ಲೇಪುರಂ ವೆಂಕಟೇಶರವರು ಹೇಳುವಂತೆ 'ದಲಿತರು ಒಂದು ಸಂದಿಗ್ಧ ಕಾಲಘಟದಲ್ಲಿ ಬಂದು ನಿಂತು ಕೊಂಡಿದ್ದಾರೆ'. ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣಗಳ ಸಂಕ್ರಮಣ ಕಾಲದಲ್ಲಿ, ಅಂತರ್‌ರಾಷ್ಟ್ರೀಯ ಸ್ತರದಲ್ಲಿ ಆರ್ಥಿಕ ಸುಧಾರಣೆಗಳು ಭರದಿಂದ ಸಾಗಿರುವ ಕಾಲಘಟದಲ್ಲಿ ಹಲವಾರು ಸಂದಿಗ್ಧತೆ ಮತ್ತು ಸವಾಲುಗಳನ್ನು ಹೊತ್ತು ಮುನ್ನಡೆದಿದ್ದಾರೆ. ಸಾಮಾನ್ಯವಾದ ರಾಷ್ಟ್ರೀಯ ಸ್ತರದಲ್ಲಿ ನೋಡುವುದಾದರೆ ದೇಶಾದ್ಯಂತ ಧಾರ್ಮಿಕ ಹಿಂಸೆಗಳು ಭಯೋತ್ಪಾದನೆಯ ಮಟ್ಟಕ್ಕೆ ಮುಟ್ಟಿವೆ. ಈ ವಿಷಯವನ್ನು ತುಂಬಾ ಗಂಭೀರವಾಗಿ ಪರಿಗಣಿಸುವಂತೆ ಅಮೇರಿಕಾ ಭಾರತವನ್ನು ಈ ವಿಷಯದಲ್ಲಿ ಎಚ್ಚರಿಸಿಯೂ ಆಗಿದೆ. ಅಮೇರಿಕಾದ ವಿದೇಶಾಂಗ ಇಲಾಖೆ ಹೊರಡಿಸಿದ ವಾರ್ಷಿಕ 'ಧಾರ್ಮಿಕ ಸ್ವಾತಂತ್ರ್ಯ'ದ ವರದಿಯಲ್ಲಿ ಭಾರತ ಸರ್ಕಾರದ

(2001 ರಲ್ಲಿ) ಬಗ್ಗೆ ಟೀಕೆ ವ್ಯಕ್ತವಾಗಿದೆ. ವರದಿಯಲ್ಲಿ ತಿಳಿಸಿದಂತೆ ''ಭಾರತೀಯ ಸಂವಿಧಾನ ಜಾತ್ಯತೀತ ಸರ್ಕಾರದ ಆಶ್ವಾಸನೆ ನೀಡುತ್ತದೆ. ಧಾರ್ಮಿಕ ಸ್ವಾತಂತ್ರ್ಯವನ್ನು ಖಾತ್ರಿ ಪಡಿಸುತ್ತದೆ. ಆದರೆ, ಕೆಲವೊಮ್ಮೆ ಕೇಂದ್ರ ಸರ್ಕಾರ ಧಾರ್ಮಿಕ ಅಲ್ಪಸಂಖ್ಯಾತರ ಮೇಲೆ ನಡೆಯುವ ಆಕ್ರಮಣಗಳನ್ನು ತಡೆಯಲು ಸಮರ್ಥ ಕ್ರಮ ಜರುಗಿಸುವುದಿಲ್ಲ'[14] ಮುಂದುವರೆದು ಅದು ನೇರವಾಗಿ ಅಂದಿನ ಬಿ.ಜೆ.ಪಿ. ಮೈತ್ರಿಕೂಟದ ಸರ್ಕಾರವನ್ನು ತರಾಟೆಗೆ ತೆಗೆದುಕೊಳ್ಳುತ್ತದೆ. 'ಬಿ.ಜೆ.ಪಿ. ಒಂದು ಹಿಂದೂ ರಾಷ್ಟ್ರೀಯವಾದಿ ಪಕ್ಷವಾಗಿದ್ದು ಹಿಂದೂ ಉಗ್ರಗಾಮಿ ಸಂಘಟನೆಗಳ ಜೊತೆ ಸಂಪರ್ಕ ಹೊಂದಿದೆ. ಕ್ರಿಶ್ಚಿಯನ್ನರು ಮತ್ತು ಮುಸ್ಲಿಂರ ಮೇಲಿನ ಹಲವಾರು ದೌರ್ಜನ್ಯ ಪ್ರಕರಣಗಳಲ್ಲಿ ಈ ಉಗ್ರಗಾಮಿ ಸಂಘಟನೆಗಳು (Terrorist Outfits) ಭಾಗಿಯಾಗಿರುವುದು ಸಾಬೀತಾಗಿದೆ''[15] ಎಂದು ವರದಿಸುತ್ತ ರಾಜ್ಯಗಳಲ್ಲಿಯೂ ಎಲ್ಲೆಲ್ಲಿ ಬಿ.ಜೆ.ಪಿ. ಸರ್ಕಾರ ಇವೆ, ಆಯಾ ರಾಜ್ಯಗಳಲ್ಲಿ ಅಲ್ಪಸಂಖ್ಯಾತರ ಮೇಲೆ ದಾಳಿ ನಡೆದಾಗ ಅವುಗಳಿಗೆ ಸೂಕ್ತ ಕ್ರಮ ಜರುಗಿಸಲು ಸಾಧ್ಯವಾಗಿಲ್ಲ. ಬಿ.ಜೆ. ಪಿ. ಮತ್ತು ಹಿಂದೂ ಉಗ್ರಗಾಮಿ ಸಂಘಟನೆಗಳ ಬಗ್ಗೆ ಇರುವ ಸಂಬಂಧವೇ (Nexus) ಇದಕ್ಕೆ ಕಾರಣವೆಂದು ವರದಿಯಲ್ಲಿ ಹೇಳಲಾಗಿದೆ. ಈ ರೀತಿಯ ಧಾರ್ಮಿಕ ಭಯೋತ್ಪಾದನೆಯನ್ನು ಸಮರ್ಥವಾಗಿ ನಿಯಂತ್ರಿಸಲು ಈ ಹೊತ್ತಿಗೆ ಸಾಧ್ಯವಾಗದೇ ಇರುವುದು ತುಂಬಾ ಕಳವಳಕಾರಿಯಾದ ಅಂಶವಾಗಿದೆ. ಈ ರೀತಿಯ ಧಾರ್ಮಿಕ ಸಂಘರ್ಷದ ಕ್ಷೋಭೆಯಲ್ಲಿ ರಾಷ್ಟ್ರದ ಪ್ರಗತಿ, ಶೋಷಿತರ ಅಭಿವೃದ್ಧಿ ಮತ್ತು ಅವರ ಹಕ್ಕುಗಳ ರಕ್ಷಣೆಯ ಪ್ರಶ್ನೆಗಳು ತುಂಬಾ ಆತಂಕಕಾರಿಯಾದ ಸ್ಥಿತಿಯಲ್ಲಿರುವುದು ಕಂಡು ಬರುತ್ತದೆ. ಡಾ. ಮಲ್ಲೇಪುರಂ ಅವರು ಮುಂದುವರೆದು ಹೇಳುವಂತೆ 'ಇಪ್ಪತ್ತನೇಯ ಶತಮಾನ ಕಳೆದು ಹೊಸ ಸಹಸ್ರ ಮಾನದಲ್ಲಿರುವ ನಾವು, ಹಲವು ಬಗೆಯ ತೊಡಕುಗಳಲ್ಲಿ ಮತ್ತು ಸಂಕಟಗಳಲ್ಲಿ ಇದ್ದೇವೆ. ಒಂದು ಕಡೆ ಇಪ್ಪತ್ತನೇಯ ಶತಮಾನ ಸಾಹಿತ್ಯಿಕವಾಗಿ ಸಮೃದ್ಧವಾದ ಕಾಲವೇನೋ ನಿಜ. ಮೂಲ ಜ್ಞಾನದ ಬೇರುಗಳು ಹೊರಹೊಮ್ಮಿ ಹಲವು ಬಗೆಯ ವೈವಿಧ್ಯಗಳಿಂದ ವಿರಾಜಮಾನದ ಕಾಲವೂ ಆಗಿದೆ ! ಸಾಹಿತ್ಯಿಕವಾಗಿ ಎಷ್ಟು ಸಮೃದ್ಧವೋ, ಸಾಂಸ್ಕೃತಿಕವಾಗಿಯೋ ಅಷ್ಟೇ ಬಗೆ ಬಗೆಯ ವಾಗ್ವಾದ ಮತ್ತು ಸಂವಾದಗಳಿಂದ ಕೂಡಿದ ಕಾಲವಾಗಿದೆ. ಅನೇಕ ಕೆಳವರ್ಗದ ಜನಸ್ತಾನಗಳು ಮೊದಲ ಬಾರಿಗೆ ಅಕ್ಷರ ಸೂರ್ಯನಿಗೆ ನಮಸ್ಕರಿಸಿದ್ದುಂಟಷ್ಟೆ. ಜ್ಞಾನಾರ್ಜನೆ ಎಂಬುದು ಒಂದು ಶೈಕ್ಷಣಿಕ ಶಿಸ್ತಾಗಿದೆ. ಆದರೆ, ಇದು ಸಮಾಜದ ಅವಿರತ ಹಾಗೂ ಸದಾ ಕಾಲವೂ ಹಂಬಲಿಸುವ ಆಶಯ ಆಗಬೇಕು. ಈ ಆಶಯ, ಹಂಬಲ ಹಲವು ಬಗೆಯ ಸಂಕೇತಗಳಲ್ಲೋ, ರೂಪಕಗಳಲ್ಲೋ ಕಾಣಿಸುತ್ತದೆ. ಪಾರಂಪರಿಕ ಜ್ಞಾನ ಮತ್ತು ಆಧುನಿಕ ಜ್ಞಾನ ಇವೆರಡು ಬೇರುಗಳನ್ನು ಕಸಿ ಹಾಕುವ ಅಗತ್ಯ ನಮ್ಮ ಮುಂದಿದೆ. . . . . . ನಮ್ಮ ಸಂಸ್ಕೃತಿ ಸಮುದಾಯಗಳು ಪಡೆದಿರುವ ಜ್ಞಾನ, ಕೌಶಲ್ಯ, ಜ್ಞಾನ ಸಂಪತ್ತು ಈ ಕಾಲದ ಅಗತ್ಯಗಳಿಗೆ ತಕ್ಕಂತೆ ಮರುಜೋಡಣೆ ಮಾಡುವ ಅಗತ್ಯವಿದೆ'[16]. ಈ ಅಭಿಪ್ರಾಯಗಳ ಹಿನ್ನೆಲೆ ಮತ್ತು ಪ್ರೇರಣೆಯೂ ಸಹಿತ ಪ್ರಸ್ತುತ ಸಂಶೋಧನಾ ಅಧ್ಯಯನದ ಪ್ರಧಾನ ಕಾಳಜಿ (Prime Concern) ಯಾಗಿದೆಯೆಂದು ಪ್ರಾರಂಭದಲ್ಲಿಯೇ ದಾಖಲಿಸಿ ಈ ಅಧ್ಯಯನ ಕೈಗೊಳ್ಳಲಾಗುತ್ತಿದೆ. ಜಾಗತಿಕರಣದ ಸಂದರ್ಭದಲ್ಲಿ ಇಂದಿನ ಒಟ್ಟಾರೆ ಸಾಂಸ್ಕೃತಿಕ ಬದುಕೇ ಬದಲಾಗುತ್ತಿರುವ ಸಂಕ್ರಮಣ ಸ್ಥಿತಿಯಲ್ಲಿ ದಲಿತ ಬೌದ್ಧರ ಸಾಂಸ್ಕೃತಿಕ ಅಧ್ಯಯನವು ಅಂಬೇಡ್ಕರ್‌ರವರು ನಿರೀಕ್ಷಿಸಿದಂತೆ ಬೌದ್ಧ ಧರ್ಮವು ದಲಿತರನ್ನು ಸಮಗ್ರ ವಿಮೋಚನೆಯ ಕಡೆಗೆ ಕೊಂಡೊಯ್ಯುತ್ತಿದೆಯೇ ? ಅವರ ಜೀವನದ ರೀತಿ, ನೀತಿಗಳಲ್ಲಿ ಆದ ಬದಲಾವಣೆಗಳೇನು ? ಯಾವ ಅಸ್ತಿತ್ವವನ್ನು ಅವು ಪಡೆದುಕೊಂಡಿವೆ, ಅವರ ಧಾರ್ಮಿಕ, ಆಧ್ಯಾತ್ಮಿಕ ಜೀವನದಲ್ಲಿ ಕಂಡು ಬರುವ ಆಚಾರ ವಿಚಾರಗಳೇನು ? ಅಂಬೇಡ್ಕರ್‌ರವರು ಗ್ರಹಿಸಿದ ಬೌದ್ಧ ಧರ್ಮದಲ್ಲಿ ಚಲನಶೀಲತೆ ಇದೆಯೇ ? ಎಂದು

ಹೀಗೆ ಒಟ್ಟಾರೆ ಬದಲಾಗುತ್ತಿರುವ ದಲಿತ ಬೌದ್ಧರ ಸಾಂಸ್ಕೃತಿಕ ವಿಮೋಚನೆಯ ಪ್ರಕ್ರಿಯೆ ಮತ್ತು ಸಂದರ್ಭ ಕುರಿತು ಈ ಅಧ್ಯಯನ ನಡೆಯುತ್ತದೆ. ಸಾಂಸ್ಕೃತಿಕ ಎಂಬ ಪದದಲ್ಲಿ ದಲಿತ ವಿಮೋಚನೆಯ ಬೌದ್ಧ ಧರ್ಮ, ಅಂಬೇಡ್ಕರ್‌ರವರು ಪ್ರತಿಪಾದಿಸಿದ ಆಚರಣೆಗಳು, ಶಿಕ್ಷಣ, ಆರ್ಥಿಕ ಅಭಿವೃದ್ಧಿ, ಸಮಾನತೆ ಮತ್ತು ರಾಜಕೀಯ ಪಾಲ್ಗೊಳ್ಳುವಿಕೆ ಈ ಎಲ್ಲಾ ಆಯಾಮಗಳ ಕುರಿತು ವಿವರಣೆ ಮತ್ತು ಅರ್ಥೈಸುವಿಕೆ, ವ್ಯಾಖ್ಯಾನಿಸುವಿಕೆಗೆ ಪ್ರಯತ್ನಿಸಲಾಗಿದೆ.

ಈ ಎಲ್ಲಾ ಸೂಕ್ಷ್ಮಗಳ ಹಿನ್ನೆಲೆಯಲ್ಲಿ ದೇಶದ ಬಹುಪಾಲು ಮಾನವ ಸಂಪನ್ಮೂಲವನ್ನು ಹೊಂದಿದ ದಲಿತರ ಅದರಲ್ಲೂ ವಿಶೇಷವಾಗಿ ಕರ್ನಾಟಕ ದಲಿತ ಬೌದ್ಧರು ತಮ್ಮ ಪೂರ್ಣ ವಿಮೋಚನೆಗೆ, ಮಾನವ ಹಕ್ಕುಗಳ ಸಾಕ್ಷಾತ್ಕಾರಕ್ಕೆ ಯಾವ ರೀತಿಯ ಸಾಂಸ್ಕೃತಿಕ ಬದುಕನ್ನು ಸಾಂಸ್ಕೃತಿಕ ವಿಮೋಚನೆಯ ಸೂತ್ರವನ್ನು ಸಾಧಿಸಿಕೊಂಡು ರಾಷ್ಟ್ರದ ಮುಖ್ಯವಾಹಿನಿಯಲ್ಲಿ ಮುನ್ನಡೆಯುತ್ತಿದ್ದಾರೆ ಎಂಬುದನ್ನು ವಿಶ್ಲೇಷಣಾತ್ಮಕವಾಗಿ ತಿಳಿದುಕೊಳ್ಳುವುದಾಗಿದೆ. ಬೌದ್ಧ ಸಾಂಸ್ಕೃತಿಕ ಆವರಣದಲ್ಲಿ ಬೌದ್ಧ ಧರ್ಮದ ಮನಶಾಸ್ತ್ರದ ಹಿನ್ನಲೆಯಲ್ಲಿ ದಲಿತರ ಸಾಂಸ್ಕೃತಿಕ ವ್ಯಕ್ತಿತ್ವದ ಹುಡುಕಾಟಕ್ಕೆ ವಿಮೋಚನೆಗೆ ಕಾರಣವಾಗಿವೆ ಎಂಬ ತೀರ್ಮಾನಗಳನ್ನು ವಿಶ್ಲೇಷಿಸಿ ದಲಿತರ ಮಾನಸಿಕ ಹಿಂಸೆ ಮತ್ತು ಅದರ ವಿಮೋಚನೆಯ ನೆಲೆಗಳ ಬಗ್ಗೆ ಒಟ್ಟಾರೆ ಧಾರ್ಮಿಕ, ಸಾಂಸ್ಕೃತಿಕ ವಿಮೋಚನೆಯ ಪ್ರಕ್ರಿಯೆ ಕುರಿತು ಬೌದ್ಧಿಕ ಚರ್ಚೆಗೆ ಒಂದು ಹೊಸ ಆಕರವನ್ನು ಒದಗಿಸುವ ಉದ್ದೇಶವನ್ನು ಈ ಅಧ್ಯಯನ ಹೊಂದಿದೆ.

### 1.1 (ಬ) ಅಧ್ಯಯನದ ತಾತ್ವಿಕ ನೆಲೆಗಟ್ಟುಗಳು:

'ಕರ್ನಾಟಕದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನ' (ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ) ಈ ಅಧ್ಯಯನವು ಈ ಹೊತ್ತಿನ ಸಾಂಸ್ಕೃತಿಕ ಸಂಶೋಧನೆಗಳ ಸಾಲಿನಲ್ಲಿ ತುಂಬಾ ವಿಶಿಷ್ಟವಾದ ವಿಭಿನ್ನವಾದ ತಾತ್ವಿಕ ನೆಲೆಗಟ್ಟುಗಳನ್ನು ಹೊಂದಿದೆ. ಇಂದಿನ ''ಮಾಹಿತಿ ಕ್ರಾಂತಿ'' ಯುಗದಲ್ಲಿ ಕೆಳಸ್ತರದ ಸಮುದಾಯಗಳ (Subaltern Groups) ಬಗ್ಗೆ ಭಾರತದ ಸಂದರ್ಭದಲ್ಲಿ ದಲಿತ ಚಳುವಳಿ ಮತ್ತು ಶೋಷಿತರ ಸಾಂಸ್ಕೃತಿಕ ಬದುಕಿನ ಬಗ್ಗೆ ಹಲವಾರು ಅಧ್ಯಯನಗಳು ನಡೆಯುತ್ತಿವೆ. ಜಾಗತಿಕ ಸಂಪರ್ಕ ಜಾಲ (World Wide Web) ದಲ್ಲಿ ಯಾವುದೇ ಮುಖ್ಯ ನೆಲೆಯಲ್ಲಿ (Portal) ಗುಂಡಿ ಒತ್ತಿದರೆ ಸಾಕು ಲಕ್ಷಗಟ್ಟಲೇ ಪುಟಗಳ ಮಾಹಿತಿ ನಮ್ಮೆದುರು ನಿಲ್ಲುತ್ತದೆ. ಈ ಎಲ್ಲ ವಿದ್ಯುನ್ಮಾನ ಪಠ್ಯಗಳಲ್ಲಿ (Electronic Texts) ಲಭ್ಯವಿರುವ ಸಂಶೋಧನಾ ದಾಖಲೆಗಳು (entries) ಶೋಷಿತರ ಬದುಕಿನ ಹಲವಾರು ಅಯಾಮಗಳ ಬಗ್ಗೆ ವಿಶ್ಲೇಷಣಾತ್ಮಕ ವಿವರಣೆಗಳನ್ನು ನೀಡುತ್ತವೆ. ಈ ರೀತಿಯ 'ಮಾಹಿತಿ ಕ್ರಾಂತಿ' ಯಿಂದ ದಲಿತ ಅಭಿವೃದ್ಧಿ ವಿಮೋಚನೆಯ ಸಂದಿಗ್ಧತೆಗಳು, ಮಾನವ ಹಕ್ಕುಗಳ ಪ್ರಶ್ನೆಗಳು. ಅಂತರಾಷ್ಟ್ರೀಯ ಸಮುದಾಯದ, ಸಂಘ ಸಂಸ್ಥೆಗಳ ಗಮನ ಸೆಳೆಯುವಲ್ಲಿ ಸಫಲವಾಗಿಯೆಯಾದರೂ, ಇಲ್ಲಿನ ಬಹಳಷ್ಟು ಮಾಹಿತಿ ಅದೇ ಕಾಲಕ್ಕೆ ದಲಿತರ ವಿಮೋಚನೆಯ ಸ್ವರೂಪದ ಬಗ್ಗೆ, ಪರಿಹಾರಗಳ ಬಗ್ಗೆ ವಿದ್ವತ್ ಜಗತ್ತಿಗೆ ತಪ್ಪು ಅರ್ಥಗಳನ್ನು ಬಿಂಬಿಸುವ ಅಪಾಯವೂ ಎದುರಾಗಿದೆ. ದಲಿತರ ಪಾಲಿಗೆ 'ಮಾಹಿತಿ ತಂತ್ರಜ್ಞಾನ ಕ್ರಾಂತಿ' ವರಕ್ಕಿಂತ ಶಾಪವೂ ಆಗುವ ಲಕ್ಷಣಗಳು ಗೋಚರಿಸಿವೆ. ಉದಾಹರಣೆಗಾಗಿ ಹೇಳುವುದಾದರೆ,

1) ಬೌದ್ಧಧರ್ಮ ಮತ್ತು ಮಾನವ ಹಕ್ಕುಗಳು. [17]
2) ಮಹಿಳೆಯರ ಹಕ್ಕುಗಳು ಮತ್ತು ಬೌದ್ಧಧರ್ಮ.
3) ಮೂಲನಿವಾಸಿಗಳ ಮಾನವ ಹಕ್ಕುಗಳು ಮತ್ತು ಬೌದ್ಧಧರ್ಮ.
4) ಬೌದ್ಧ ಶಿಕ್ಷಣ ಪದ್ಧತಿ.
5) ಮಾನವನ ಮೂಲಭೂತ ಹಕ್ಕುಗಳು ಮತ್ತು ವೈಯಕ್ತಿಕ ಕಾನೂನು (Personal law) : ಬೌದ್ಧಧರ್ಮದ ಅರ್ಥ ವಿವರಣೆ.
6) ಜಾತಿ ಆಧಾರಿತ ದೌರ್ಜನ್ಯಗಳು ಮತ್ತು ಮಾನವ ಹಕ್ಕುಗಳ ಉಲ್ಲಂಘನೆಗಳು.
7) ಬೌದ್ಧ ರಾಷ್ಟ್ರಗಳಲ್ಲಿ ಮಾನವ ಹಕ್ಕುಗಳು.
8) ಜನಾಂಗ ದ್ವೇಷ ಮತ್ತು ಬೌದ್ಧಧರ್ಮದ ನಿಯಮಗಳು.

ಹೀಗೆ ಹತ್ತು ಹಲವಾರು ಕ್ಷೇತ್ರ, ಉಪಕ್ಷೇತ್ರಗಳಲ್ಲಿ 'ಇಂಟರ್‌ನೆಟ್ ತಾಣಗಳಲ್ಲಿ' ತಕ್ಷಣದಲ್ಲೇ ಲಕ್ಷಗಟ್ಟಲೇ ಪುಟಗಳ ಮಾಹಿತಿ ಲಭ್ಯವಾಗುತ್ತದೆ. ಈ ರೀತಿಯ ಮಾಹಿತಿಯ ಜೊತೆಗೆ ಜಗತಿಗೆ ತಪ್ಪು ಮಾಹಿತಿ, ಅಪಾರ್ಥಗಳನ್ನು ಬಿತ್ತರಿಸುವ ಕಾರ್ಯವೂ ನಡೆದಿವೆ. ಉದಾಹರಣೆಗೆ : 'ಬೌದ್ಧಧರ್ಮಕ್ಕೆ ಅಂಬೇಡ್ಕರರವರು ಮತಾಂತರಗೊಂಡ ಬಗ್ಗೆ ದಲಿತ ಯುವಕರ ಪ್ರತಿಕ್ರಿಯೆ' ಏನು? ಎಂದು ಪ್ರಶ್ನಿಸಿದರೆ ಅಂತರ್ಜಾಲ ತಾಣದಲ್ಲಿ ದಲಿತ ಯುವಕರ, ಬುದ್ಧಿ ಜೀವಿಗಳ ಸುಳ್ಳು ಹೆಸರಿನಲ್ಲಿ (Pseudo names) ವಿರುದ್ಧವಾದ ಒಪ್ಪಿಗೆಯಿಲ್ಲದ ಅಭಿಪ್ರಾಯಗಳನ್ನು ಕೂಡ ಬಿತ್ತರಿಸಿದ ಸಾವಿರಾರು ವಿದ್ಯುನ್ಮಾನ ಪುಟಗಳನ್ನು ನೋಡಬಹುದಾಗಿದೆ. ಹೀಗೆ 'ಮಾಹಿತಿ ತಂತ್ರಜ್ಞಾನ' ಜಗತ್ತಿಗೆ ತಪ್ಪು ಮಾರ್ಗದರ್ಶನ ಮಾಡುವ ಸಾಧನವೂ ಆಗಿರುವುದು ಸಮಾಜ ವಿಜ್ಞಾನದ ಸಂಶೋಧಕರಿಗೆ ಒಂದು ದೊಡ್ಡ ಸವಾಲಿನ ಪ್ರಶ್ನೆಯೇ ಆಗಿದೆ.

ಅದೇ ಕಾಲಕ್ಕೆ ದಲಿತ ಬುದ್ಧಿಜೀವಿಗಳ ಮಾರ್ಗದರ್ಶನದಲ್ಲಿ ಕೆಲವು ಉತ್ಸಾಹಿ ದಲಿತ ಕಾರ್ಯಕರ್ತರು ಪ್ರಾರಂಭಿಸಿದ 'ತಾಣಗಳಲ್ಲಿ' ಅಧಿಕೃತವೆನ್ನಬಹುದಾದ ಮಾಹಿತಿ ಪಡೆಯಬಹುದಾಗಿದೆ. ಇನ್ನುಳಿದಂತೆ ಹಲವಾರು 'ತಾಣ' ಗಳಲ್ಲಿ ಲಭ್ಯವಿರುವ ಸಂಶೋಧನಾ ಅಧ್ಯಯನಗಳು ದಲಿತರ, ದಲಿತ ಚಳುವಳಿಯ, ಬುಡಕಟ್ಟು ಜನಾಂಗಗಳ ದೇಸಿ ಸಂಸ್ಕೃತಿಗಳಿಗೆ (ಜಾನಪದ ಸ್ವರೂಪದ) ಹೆಚ್ಚಿನ ಪ್ರಾಧಾನ್ಯತೆ ಕೊಟ್ಟಿವೆಯೇ ಹೊರತಾಗಿ, ಶೋಷಿತ ಸಮುದಾಯಗಳ, ದಲಿತರ ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಧಾರ್ಮಿಕ, ಸಾಂಸ್ಕೃತಿಕ ಬದುಕನ್ನು ವಿಶೇಷವಾಗಿ ದಲಿತರು ಹಿಂದೂ ಧರ್ಮದ ಅಸಮಾನತೆಯ ಸಾಂಸ್ಕೃತಿಕ ಆವರಣದಿಂದ ವಿಮೋಚನೆಗೊಳ್ಳುತ್ತಿರುವ ಮಾದರಿಗಳನ್ನು ತಾತ್ವೀಕರಣಗೊಳಿಸುವ (Theorizing the Dalit Emancipatory Models) ಹಾಗೂ ಸಮಾಜೋ-ಧಾರ್ಮಿಕ ಚಳುವಳಿಗಳ ಕಾರ್ಯತಂತ್ರಗಳನ್ನು (Strategies of Socio-Religious Movements) ದಲಿತರ ಸಮಗ್ರ ವಿಮೋಚನೆಯ ಹಿನ್ನೆಲೆಯಲ್ಲಿ ಅರ್ಥೈಸಬೇಕಾದ ಕೊರತೆಯನ್ನು ಅನುಭವಿಸುತ್ತವೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ತನ್ನದೇ ಆದ ತಾತ್ವಿಕ ನೆಲೆಗಳನ್ನು ಗುರುತಿಸಿಕೊಂಡು ಸಾಗುತ್ತದೆ.

ಪ್ರಸ್ತುತ ಅಧ್ಯಯನದ ತಾತ್ವಿಕ ನೆಲೆಗಟ್ಟುಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

**1) ಕಳಂಕಿತ ಜನಾಂಗಿಕ ಗುರುತಿನ ಚರಿತ್ರೆಯ ನಿರಾಕರಣೆ ಮತ್ತು ಹೊಸ ಚರಿತ್ರೆಯ ಸೃಷ್ಟಿ :**
**(Rejection of Stigmatized Ethnic Identity and Re-construction of History)**

ದಲಿತರು ಹಿಂದೂ ವೈಧಿಕ ಪುರೋಹಿತಶಾಹಿಯಿಂದ ಬರ್ಬರವಾಗಿ ಧಮನಿತರಾಗಿ ತಮ್ಮನ್ನು 'ಮಾನವ' ಸ್ಥಾನಕ್ಕೂ ಪರಿಗಣಿಸದೆ, ತಮ್ಮ ಸಾಕು ಪ್ರಾಣಿಗಳಾದ 'ನಾಯಿ ನರಿ' ಗಳಿಗಿಂತಲೂ ಕನಿಷ್ಟವಾಗಿ ಕಂಡ, ಚಾತುರ್ವರ್ಣ್ಯದಲ್ಲೂ ಸ್ಥಾನ ಕಲ್ಪಿಸದೇ ಒಂದು 'ಕಳಂಕಿತ ಜನಾಂಗ' ವನ್ನಾಗಿ ಗುರುತಿಸಿಕೊಂಡು ಬಂದಿದೆ. ಇಂತಹ ಚರಿತ್ರೆಯನ್ನೇ ನಿರಾಕರಣೆ ಮಾಡುವ ಹಾಗೂ ಹೊಸ ಚರಿತ್ರೆಯನ್ನು ನಿರ್ಮಾಣ ಮಾಡುವ ಪ್ರಕ್ರಿಯೆಯ ಆಂತರಿಕವಾದ ಪ್ರತಿರೋಧ (assertion) ವನ್ನು, ಅದರ ತಾತ್ವಿಕತೆಯನ್ನು ಪ್ರಸ್ತುತ ಆಯಾಮದ ಹಿನ್ನೆಲೆಯಲ್ಲಿ ಅರ್ಥೈಸಲು ಈ ಅಧ್ಯಯನ ಪ್ರಯತ್ನಿಸುತ್ತದೆ.

**2) ದಲಿತ ವಿಮೋಚನೆಯ ಸಾಂಸ್ಕೃತಿಕ ಗುರುತಾಗಿ ಬೌದ್ಧಧರ್ಮ :**
**(Buddhism as Emancipatory Cultural Identity)**

ವಿಶ್ವದ ಒಂದು ಪ್ರಧಾನ ಧರ್ಮ (ಹಿಂದೂ ಧರ್ಮ) ತನ್ನ ಅಸಂಖ್ಯಾತ ದಲಿತವರ್ಗದ ಜನತೆಯನ್ನು 'ಹುಟ್ಟಿನ' ಆಧಾರದ ಮೇಲೆ ಮೂಲಭೂತ ಹಕ್ಕುಗಳನ್ನು ನಿರಾಕರಿಸಿದ್ದನ್ನು ಅದೇ ರೀತಿ, ಜಗತ್ತಿನ ಇನ್ನೊಂದು ಪ್ರಧಾನ ಧರ್ಮ (ಬೌದ್ಧ ಧರ್ಮ) ಆ ಶೋಷಿತ ಜನ ಸಮುದಾಯಗಳಿಗೆ ಅಂತಹ ಶೋಷಕ ವ್ಯವಸ್ಥೆಯಿಂದ ವಿಮೋಚನೆಗೊಳ್ಳುವ ಅವಕಾಶವನ್ನು ಸಾಂಸ್ಕೃತಿಕ ಗುರುತನ್ನೂ (Cultural Identity) ಕಲ್ಪಿಸಿಕೊಟ್ಟ ಮಹತ್ವದ, ಗ್ರಹಿಕೆಯೊಂದಿಗೆ ದಲಿತ ಬೌದ್ಧರ ಧಾರ್ಮಿಕ, ಆಧ್ಯಾತ್ಮಿಕ ಬದುಕನ್ನು ವಿಶ್ಲೇಷಿಸುವ ಪ್ರಯತ್ನ ಮಾಡುತ್ತದೆ.

**3) 'ದಲಿತ ವಿಮೋಚನೆಯ' ಕಾರ್ಯತಂತ್ರವಾಗಿ ಬೌದ್ಧ ಮತಾಂತರ ಚಳುವಳಿ :**
**(Buddhist Conversion Movement as a Strategy of Dalit Liberation)**

ಅಂಬೇಡ್ಕರ್‌ರವರು ದಲಿತರ ವಿಮೋಚನೆಯ ಸೂತ್ರಗಳು, ಅವರ ಧಾರ್ಮಿಕ, ಸಾಂಸ್ಕೃತಿಕ ಪರ್ಯಾಯಗಳ ಮೇಲೆ ಅವಲಂಬಿತವಾಗಿವೆ ಎಂಬ ಸ್ಪಷ್ಟ ನಿಲುವು ತಾಳಿದ್ದರು. ಈ ಸ್ಪಷ್ಟತೆಯೇ ಅವರು ಬೌದ್ಧ ಧರ್ಮಕ್ಕೆ ಮತಾಂತರವಾಗಲು, ಭಾರತದಲ್ಲಿ ಬೌದ್ಧಧರ್ಮದ ಆಧಾರದ ಸಾಮಾಜಿಕ ಪರಿವರ್ತನೆಗೆ ಸ್ಪಷ್ಟರೂಪಕೊಡಲು ಸಾಧ್ಯವಾಯಿತು. ಈ ಹಿನ್ನೆಲೆಯಲ್ಲಿ ಅಂಬೇಡ್ಕರರವರು ಪ್ರತಿಪಾದಿಸಿದ ಬೌದ್ಧ ಮತಾಂತರ ಚಳುವಳಿ ಮತ್ತು ಇಂದಿನ ದಲಿತ ಚಳುವಳಿಗಳ ಸ್ಥಗಿತತೆಯ ಸಂದಿಗ್ಧತೆಗಳನ್ನು ಅರ್ಥೈಸಲು, ಅಂದರೆ ಒಟ್ಟಾರೆ ದಲಿತ ಚಳುವಳಿಗಳ ಬೀಸು ಮತ್ತು ಬೌದ್ಧಧರ್ಮದ ಪುನರುಜ್ಜೀವನದ ಮಜಲುಗಳನ್ನು ವಿಶ್ಲೇಷಿಸುತ್ತದೆ. ಹಾಗೆಯೇ ಒಟ್ಟಾರೆ ಶೋಷಿತ ದಲಿತರು 'ಪ್ರಧಾನ' ಎನ್ನುವ ಸಂಸ್ಕೃತಿಗೆ ಪರ್ಯಾಯವಾಗಿ ರೂಪಿಸಿಕೊಂಡ ಧಾರ್ಮಿಕ, ಸಾಂಸ್ಕೃತಿಕ ಹಂದರವನ್ನು ವಿಶ್ಲೇಷಿಸುತ್ತದೆ. ಹಾಗೆಯೇ ಇತ್ತೀಚಿನ ಒಲವು (Trends) ಗಳನ್ನು ಅರ್ಥೈಸಲು ಪ್ರಯತ್ನಿಸುತ್ತದೆ.

**4) ಮೂಲನಿವಾಸಿಗಳ ಸಾಂಸ್ಕೃತಿಕ ಆವರಣಗಳು ಮತ್ತು ಜಾಗತೀಕರಣದ ಸವಾಲುಗಳು:**
**(Challenges of Globalization and the Cultural Identies of Indigenious People) :**

ಪ್ರಸ್ತುತ ಜಾಗತೀಕರಣ ಪ್ರಕ್ರಿಯೆಯಲ್ಲಿ ಹಿಂದೂ ಆರ್ಥಿಕ ವ್ಯವಸ್ಥೆಯಲ್ಲಿ (Hindu Economic Order) ಅಭಿವೃದ್ಧಿ ವಂಚಿತವಾಗಿ ಸಾವಿರಾರು ವರ್ಷಗಳಿಂದ ನಲುಗಿದ ಶೋಷಿತ ಸಮುದಾಯಗಳು, ಮೂಲ ನಿವಾಸಿ ಜನರು, ಬುಡಕಟ್ಟು ಜನಾಂಗಗಳು, ಜಾಗತೀಕರಣದ ಸವಾಲುಗಳನ್ನು ತಮ್ಮ ಸಾಂಸ್ಕೃತಿಕ ಆವರಣಗಳಲ್ಲೇ ಹೇಗೆ ಎದುರಿಸಬಲ್ಲವು ? ಅವುಗಳಿಗೆ ಅವು ಇರುವ ಸಾಂಸ್ಕೃತಿಕ ಆವರಣಗಳಲ್ಲಿ ಜಾಗತೀಕರಣವನ್ನು ಸಮರ್ಥವಾಗಿ ಎದುರಿಸುವ ಸಾಧನಗಳು ಇವೆಯಾ ? ಅಂತಹ ಅಂತರ್ಗತವಾದ ಶಕ್ತಿ ನೆಲೆಗಳೇನು ? ಇದ್ದರೆ ಅವರು ಬಳಸುವ ಕಾರ್ಯ ತಂತ್ರಗಳೇನು ? ಎಂಬ ಮಹತ್ವದ ಪ್ರಶ್ನೆಗಳ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದ ವಿಶ್ಲೇಷಣೆ ನಡೆಯುತ್ತದೆ.

**5) ದಲಿತ ಬೌದ್ಧರ ಮಾನವ ಹಕ್ಕುಗಳು, ಮಾನವ ಅಭಿವೃದ್ಧಿಯ ಪ್ರಶ್ನೆಗಳು ಮತ್ತು ಅಂತರ್‌ರಾಷ್ಟ್ರೀಯ ಸಮುದಾಯಗಳು:**
**(Human Rights aspects of Dalit Buddhists, Human Development and International Communities) :**

ಇಂದು ದಲಿತರ ಮಾನವ ಹಕ್ಕುಗಳ ಹೋರಾಟ ವಿಶ್ವಸಂಸ್ಥೆಯ ಮತ್ತು ಅದರ ಅಂಗ ಸಂಸ್ಥೆಗಳಲ್ಲಿನ ನೀತಿ ನಿರೂಪಕ ತಜ್ಞರ ಗಮನ ಸೆಳೆದಿದೆ. ಅಲ್ಲಿನ ಹಲವಾರು ಸಮಿತಿ, ಉಪಸಮಿತಿಗಳಲ್ಲಿ 'ಜಾತಿ' ಆಧಾರದ ಅಸಮಾನತೆಯಲ್ಲಿ ಇಂದಿಗೂ ಅಮಾನವೀಯವಾಗಿ ಶೋಷಿತರಾಗುತ್ತಿರುವ ಭಾರತದ ಅಸಂಖ್ಯಾತ ದಲಿತರ ಅಭಿವೃದ್ಧಿಯ ಪ್ರಶ್ನೆಗಳು ಅಂತರಾಷ್ಟ್ರೀಯ ಮಟ್ಟದ ಸಂಘ ಸಂಸ್ಥೆಗಳು, ಬುದ್ಧಿಜೀವಿಗಳ ಚರ್ಚೆಯ ಪ್ರಧಾನ ವಿಷಯಗಳಾಗಿವೆ. ಜನಾಂಗೀಯ ಭೇದ (Racial Discrimination) ವನ್ನು ಕೇವಲ ದಕ್ಷಿಣ ಆಫ್ರಿಕಾದ ಕಪ್ಪು ಜನಾಂಗದ ಹಿನ್ನೆಲೆಯಲ್ಲಿ ಅಂದರೆ ವರ್ಣದ (colour) ಆಧಾರದ ಮೇಲೆ ಪರಿಗಣಿಸಲಾದ ಅಸಮಾನತೆಯ ಆಯಾಮದಂತೆ ಮಾನವ ಹಕ್ಕುಗಳನ್ನು ಅರ್ಥೈಸುವ ದೃಷ್ಟಿಯಿಂದ ಭಾರತದ ಸಂದರ್ಭದಲ್ಲಿನ ಜಾತಿಭೇದ (Caste Discrimination) ಅಸಮಾನತೆಯನ್ನು ಜಾತಿ ಬೇಧದಲ್ಲಿ ಶೋಷಿತರಾಗಿರುವ ಜನರ ವಿರುದ್ಧ ಎಸಗಿದ ಘೋರ ಅನ್ಯಾಯ ಹಾಗೂ ಸಹಿಸಲಾರದ ಒಂದು 'ಸಂಸ್ಥೆ' (intolerable institute) ಎಂದು ಪರಿಗಣಿಸಿ, ಅಂತಹ ಅನ್ಯಾಯಕ್ಕೆ ಒಳಗಾದ ಜನರ ಮಾನವ ಹಕ್ಕುಗಳ ರಕ್ಷಣೆಗೆ ಅಂತರಾಷ್ಟ್ರೀಯ ಸಮುದಾಯಗಳಲ್ಲಿ ಮನವರಿಕೆ ಮಾಡುತ್ತಿರುವ ದಲಿತ ಶಕ್ತಿಗಳ ಪ್ರಯತ್ನಗಳ ಹಿನ್ನೆಲೆಯ ಒತ್ತಡಗಳನ್ನು ಪ್ರಸ್ತುತ ಅಧ್ಯಯನ ವಿಶ್ಲೇಷಿಸುತ್ತದೆ.

ಭಾರತದಲ್ಲಿನ ಜಾತಿ ಭೇದವು ಕಪ್ಪು ವರ್ಣೀಯರಿಗೆ ಅಂಟಿದ ಕಳಂಕಕ್ಕಿಂತ ಇನ್ನು ಅಸಹನೀಯವಾದ ರೀತಿಯಲ್ಲಿ ದಲಿತರ ಮಾನಸಿಕ ಶಕ್ತಿಯನ್ನು ಚಿವುಟಿ ಹಾಕಿದೆ. ಮನುಷ್ಯನ 'ಅದಮ್ಯ ಚೇತನ' ವನ್ನು

ನಾಶಮಾಡುವ 'ಜಾತಿ' ವ್ಯವಸ್ಥೆಯು, ದಲಿತರು 'ಮಾನವ ಹಕ್ಕುಗಳನ್ನು' ಅನುಭವಿಸದಂತೆ, ಅವುಗಳ ಪರಿಕಲ್ಪನೆಯ ಸ್ವಾತಂತ್ರ್ಯವಿಲ್ಲದೇ, ಅವರ ಮೂಲಭೂತ ಹಕ್ಕುಗಳ ಸಾಧನೆಗೆ ಇರುವ ಅಡ್ಡಿ ಆತಂಕಗಳನ್ನು ವಿಶ್ವಸಂಸ್ಥೆ ಯುನೆಸ್ಕೊ, ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಉನ್ನತಾಯುಕ್ತರ ಸಮಿತಿ, ಹೀಗೆ ಹತ್ತಾರು ಅಂತರ್‌ರಾಷ್ಟ್ರೀಯ ವೇದಿಕೆಗಳಲ್ಲಿ ಚರ್ಚಿಸಲಾಗುತ್ತಿದೆ.

ಇತ್ತೀಚೆಗೆ (2001) ದರ್ಬಾನ್‌ನಲ್ಲಿ ನಡೆದ ''ವಿಶ್ವ ಜನಾಂಗಬೇಧ ವಿರುದ್ಧದ ಸಮ್ಮೇಳನ' (World Conference Against Racism) ದಲ್ಲಿ ದಲಿತ ಮಾನವ ಹಕ್ಕುಗಳ ಸಂಘಟನೆಗಳು, ಬುದ್ಧಿಜೀವಿಗಳು ಅಂತರಾಷ್ಟ್ರೀಯ ಸಮುದಾಯಗಳ ಗಮನ ಸೆಳೆಯುವಲ್ಲಿ ಯಶಸ್ವಿಯಾದ ಪ್ರಯತ್ನಗಳನ್ನು ಸಹ ಪ್ರಸ್ತುತ ಅಧ್ಯಯನ ವಿಶ್ಲೇಷಿಸುತ್ತದೆ. (ಅನುಬಂಧ-1, ಚಿತ್ರ : 31, 32, 33 ಮತ್ತು 34 ನೋಡಿ) ಇದರ ಭಾಗವಾಗಿ ದಲಿತ ಬುದ್ಧಿಜೀವಿಗಳು ಮತ್ತು ದಲಿತ ಬೌದ್ಧರಿಗೆ ಮಹಾರಾಷ್ಟ್ರ ರಾಜ್ಯ ಮತ್ತು ಅಖಿಲ ಭಾರತ ಮಟ್ಟದಲ್ಲಿ ಮಾರ್ಗದರ್ಶನ ಮಾಡುತ್ತಿರುವ ಬಿಕ್ಕು ಸುರಾಯಿ ಸುಸಾಯಿಯವರು 'ಬುದ್ಧಗಯಾ' ವನ್ನು ಹಿಂದೂ ಮತಾಂತರ ಆಡಳಿತದಿಂದ ಮುಕ್ತಗೊಳಿಸಿ ಬೌದ್ಧರಿಗೆ ಬಿಟ್ಟುಕೊಡಲು ಸಂಬಂಧಿಸಿದ ಆಡಳಿತಗಳ ಮೇಲೆ ಒತ್ತಡ ತಂದಿರುವ ಪ್ರಯತ್ನಗಳನ್ನು ದಲಿತ ಬೌದ್ಧರ ಮಾನವ ಹಕ್ಕುಗಳ ಸವಾಲುಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ. ಈ ರೀತಿಯ 'ದಲಿತರ ಸಮಗ್ರ ವಿಮೋಚನಾ' ಮಾದರಿಗಳನ್ನು ಅರ್ಥೈಸಿ ಅಧ್ಯಯನದ ತೀರ್ಮಾನಗಳನ್ನು ಪ್ರತಿಪಾದಿಸಲಾಗಿದೆ.

ಹೀಗೆ ಪ್ರಸ್ತುತ ಅಧ್ಯಯನ ದಲಿತರು ಅಂಬೇಡ್ಕರರವರ ಪ್ರಭಾವದಿಂದ ಬೌದ್ಧ ಧರ್ಮವನ್ನು ಸ್ವೀಕರಿಸಿದ ಬಗ್ಗೆ ಮತ್ತು ಅದರ ಪರಿಣಾಮಗಳನ್ನು ಇಂದು ದಲಿತ ವಿಮೋಚನೆಗೆ (Dalit liberation) ಇರುವ ಸಂದಿಗ್ಧತೆಗಳ ಹಿನ್ನೆಲೆಯಲ್ಲಿ ವಿವೇಚಿಸುತ್ತದೆ. ಡಾ. ಮನೋಹರ ಯಾದವ್[18] ಅವರು ಪ್ರತಿಪಾದಿಸಿದ 'ದಲಿತರ ಧಾರ್ಮಿಕ ಮತ್ತು ಸಾಂಸ್ಕೃತಿಕ ಸ್ವಾವಲಂಬನೆ' (Religious and cultural self-reliance) ದಲಿತರು ಸಾಧಿಸಬೇಕಾದ ''ನಿಜವಾದ ಶಕ್ತಿ'' ಯ ಅನಿವಾರ್ಯತೆಯನ್ನು ಅನಾವರಣಗೊಳಿಸುತ್ತದೆ. ದಲಿತರು ಇಂದು ಪಡೆದ ಕೇವಲ ಔಪಚಾರಿಕವಾದ ರಾಜಕೀಯ ಪ್ರಾತಿನಿಧ್ಯದಿಂದ, ಅಧಿಕಾರದಿಂದ ದಲಿತ ಸಮುದಾಯದ ನಿಜವಾದ ಸದೃಢತೆ ಸಾಧ್ಯವಿಲ್ಲ. 'ವ್ಯಕ್ತಿ' ಶಕ್ತಿಯಾಗಬೇಕು, ಅಂತಹ ವ್ಯಕ್ತಿಗಳ 'ಸಾಮೂಹಿಕ ಶಕ್ತಿ' (collective entity) ನಿಜವಾದ ವಿಮೋಚನೆಗೆ ದಾರಿಯಾಗುತ್ತದೆ[19] ಎಂಬ ಅವರ ಮಾತುಗಳು ಅಂಬೇಡ್ಕರರವರು ಪ್ರತಿಪಾದಿಸಿದ 'ಬುದ್ಧ ಧಮ್ಮದ' ಜೀವನದಿಂದ ಸಾಧ್ಯವಾಗಬಲ್ಲುದೆಂಬ ಆಶಯಗಳನ್ನು ಹೊಂದಿದೆ. ಡಾ. ಅಂಬೇಡ್ಕರ್‌ರವರು ದೂರಾಲೋಚನೆ ಮಾಡಿ ಶತ ಶತಮಾನಗಳ ಬೌದ್ಧಿಕ, ಸಾಂಸ್ಕೃತಿಕ ದಬ್ಬಾಳಿಕೆಯಿಂದ ದಲಿತರು ವಿಮೋಚನೆಗೊಳ್ಳಲು ಇದೇ ಪಥ ಸೂಕ್ತವೆಂದು ಪ್ರತಿಪಾದಿಸಿದ ಸಾಂಸ್ಕೃತಿಕ ಮಾದರಿಯ ಸ್ವಾವಲಂಬನೆಯನ್ನು ತರಬಲ್ಲುದು. ಅದೇ ಅಂಬೇಡ್ಕರವಾದದ ನಿಜವಾದ ತಿರುಳು ಕೂಡ. ಈ ಮಾದರಿ ದಲಿತರ ಸ್ವಾಭಿಮಾನ, ಮಾನವ ಘನತೆ (Human Degnity) ಗೆ ಬುನಾದಿಯ ಸಿದ್ಧಾಂತವಾಗಿದೆ. ಪ್ರಸ್ತುತ ಅಧ್ಯಯನ ಇಂತಹ ಚಲನಶೀಲ ಸಿದ್ಧಾಂತದ ಹಿನ್ನೆಲೆಯಲ್ಲಿ ಒಟ್ಟು ದಲಿತ ಬೌದ್ಧರ ಧಾರ್ಮಿಕ, ಸಾಂಸ್ಕೃತಿಕ ಬದುಕನ್ನು ವ್ಯಕ್ತಿಯ ನೆಲೆಯಲ್ಲಿ (Individual level) ಹಾಗೂ ಸಮುದಾಯದ (Collective Level) ಪ್ರಜ್ಞೆಯ ನೆಲೆಯಲ್ಲಿ ಅರ್ಥೈಸಲು ಪ್ರಯತ್ನಿಸುತ್ತದೆ. ಅಂಬೇಡ್ಕರ್‌ರವರು ಧರ್ಮವನ್ನು ಒಂದು 'ಸಾಮಾಜಿಕ ಶಕ್ತಿ' (Social Force) ಯಾಗಿ ಗ್ರಹಿಸಿದ ರು ಅವರ ಮಾತುಗಳಲ್ಲಿಯೇ ಹೇಳುವುದಾದರೆ,

'ಯಾರು ಧರ್ಮದ ಮಹತ್ವವನ್ನು ಅಲ್ಲಗಳೆಯುತ್ತಾರೋ, ಅವರು 'ಜೀವಂತ ತಂತಿ (live wire) ಯನ್ನು ನಿರ್ಲಕ್ಷಿಸಿದ ಹಾಗೆ'[20] ಲೌಕಿಕ ಪ್ರಗತಿಯನ್ನು ನಿರ್ಧರಿಸುವ ಮತ್ತು ಅದನ್ನು ಮಂಜೂರಿಸುವ ಶಕ್ತಿ ಧರ್ಮಕ್ಕಿದೆ ಎಂಬುದನ್ನು ವಿವರಿಸುತ್ತಾರೆ. 'ಅಂಬೇಡ್ಕರ್‌ರವರು ಎಲ್ಲಾ ಧರ್ಮಗಳು ಒಳ್ಳೆಯದೆಂದರೆ ಅದು ಧರ್ಮಗಳನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡದೇ ಹೇಳಿದ ಹಾಗೆ'[21] ಎಂದು ಅಭಿಪ್ರಾಯಪಡುತ್ತಾರೆ. 'ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯದ, ಅವೈಜ್ಞಾನಿಕ ಮತ್ತು ಅತಾರ್ಕಿಕ ವರ್ತನೆಗಳನ್ನು ಪ್ರತಿಪಾದಿಸುವ ಹಿಂದೂ ಧರ್ಮವನ್ನು ಅಂಬೇಡ್ಕರ್‌ರವರು ಸ್ಪಷ್ಟವಾಗಿ ನಿರಾಕರಿಸಿದರು.'[22] ಎಂದು ಪ್ರೊ. ಕೆ. ರಾಘವೇಂದ್ರರಾವ್ ಅವರು ಅಭಿಪ್ರಾಯ ಪಡುತ್ತಾರೆ. ಅವರು 'ಅದು ಅಸಾಮಾನ್ಯ ಮನುಷ್ಯನ ಸ್ವರ್ಗ (Superman's heaven) ಮತ್ತು ಸಾಮಾನ್ಯ ಮನುಷ್ಯನ ನರಕವಾಸ'[23] (Common man's hell) ಎಂಬ ಅಂಬೇಡ್ಕರ್‌ರವರ ಮಾತನ್ನು ನೆನಪಿಸುತ್ತಾರೆ.

ಈ ಮೇಲೆ ಪ್ರತಿಪಾದಿಸಿದ ತಾತ್ವಿಕ ನೆಲೆಗಳನ್ನು ಇನ್ನಷ್ಟು ವಿವರವಾಗಿ ಚರ್ಚಿಸುವುದು ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ಪ್ರಸ್ತುತ ಕಾಲಘಟ್ಟದಲ್ಲಿ ಅವಶ್ಯಕವೆನಿಸುತ್ತದೆ.

ದಲಿತರು ನಿಜವಾದ ಅರ್ಥದಲ್ಲಿ ವಿಮೋಚನೆಗೊಳ್ಳಬೇಕಾದರೆ ಅಂಬೇಡ್ಕರ್‌ರವರು ಪುನರ್ ವ್ಯಾಖ್ಯಾನಿಸಿದ ಭಾರತದ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಅಧ್ಯಯನಗಳಲ್ಲಿ ಬಿಂಬಿಸಿದ ಮಾದರಿಗಳನ್ನು; ಕಾರ್ಯತಂತ್ರಗಳನ್ನು ನಾವು ಅರಿಯಲೇಬೇಕಾಗುತ್ತದೆ. ತೀರಾ ಇತ್ತೀಚಿನವರೆಗೆ ಭಾರತದ ಚರಿತ್ರೆಯ ಪುಟಗಳು ಅಪಾರ್ಥಗಳಿಂದ ತುಂಬಿಕೊಂಡಿದ್ದವು. ಹಲವಾರು ಸಾಂಸ್ಕೃತಿಕ ಮಜಲುಗಳು ಮರೆಮಾಚಲ್ಪಟ್ಟಿದ್ದವು. ಅದರಲ್ಲೂ ವಿಶೇಷವಾಗಿ ಧಾರ್ಮಿಕ, ಸಾಂಸ್ಕೃತಿಕ ಬದುಕಿನ ಕುರಿತ ಏಕಮುಖಿಯಾದ ಅರ್ಥ ವಿವರಣೆಗಳನ್ನೇ ಕಾಣಬಹುದಾಗಿತ್ತು. ಈ ರೀತಿಯ ಪೂರ್ವಾಗ್ರಹದ, ತಪ್ಪು ಮಾಹಿತಿಗಳ, ತೇಲುವ ಸಿದ್ಧಾಂತಗಳನ್ನು ಹೊಂದಿದ ಚರಿತ್ರೆಯನ್ನು ಅಂಬೇಡ್ಕರ್‌ರವರು ನಿರ್ಲಕ್ಷಿಸಿದರು. ಸಂಸ್ಕೃತ, ಪಾಲಿ ಭಾಷೆಗಳಲ್ಲಿ ಕೃತಿಗಳನ್ನು ಅವುಗಳ ಮೇಲಿನ ವ್ಯಾಖ್ಯಾನಗಳನ್ನು (Commentaries) ಕರಾರುವಕ್ಕಾಗಿ ಅಧ್ಯಯನ ಮಾಡಿದರು. ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ "ಮಾನವನ ವಿಮೋಚನೆಗೆ" ನಡೆಸಿದ ಹೋರಾಟಗಳ ಚರಿತ್ರೆಗಳನ್ನು ಅಸಮಾನತೆಯ ವಿರುದ್ಧ ಅವರು ಸಾರಿದ್ದ ಪ್ರತಿಭಟನೆಗಳನ್ನು ಅರ್ಥಮಾಡಿಕೊಂಡು ಭಾರತದ ಅಸ್ಪೃಶ್ಯರ ವಿಮೋಚನೆಗೆ ಮಾರ್ಗೋಪಾಯಗಳನ್ನು ಕಂಡುಹಿಡಿದರು. ಅಂಬೇಡ್ಕರ್‌ರವರು ಜಾತಿ ವ್ಯವಸ್ಥೆ ಹಿಂದೂ ಧರ್ಮಗಳ ಕುರಿತ ಸರಳೀಕರಿಸಿದ ಧಾರ್ಮಿಕ ಮಂಜೂರಿಗಳನ್ನು (Religious Sanctions) ಸರ್ವಮಾನ್ಯ ಮಾಡಲು ಪ್ರಯತ್ನಿಸಿದ ಅಧ್ಯಯನಗಳನ್ನು, ಹಿಂದೂ ಪಂಡಿತರು ವಿಶ್ಲೇಷಿಸಿದ ಚರಿತ್ರೆಯನ್ನು ನಿರಾಕರಿಸಿದರು. ಅವುಗಳ ತೀರ್ಮಾನಗಳನ್ನು ಖಡಾಖಂಡಿತವಾಗಿ ಟೀಕಿಸಿದರು. ಧರ್ಮಶಾಸ್ತ್ರಗಳ ತಳಬುಡಗಳನ್ನು ಶೋಧಿಸಿ ಅಸಮಾನತೆಯ ಮೂಲಗಳನ್ನು ಅನಾವರಣಗೊಳಿಸುತ್ತಾ ಬಂದರು. 'ಹಿಂದೂ' ಧರ್ಮವನ್ನು ಆಳರಸರ ಖಡ್ಗದ ಬಲದಿಂದ ನಡೆಸಿಕೊಂಡು ಅಸಂಖ್ಯಾತ ಜನರನ್ನು ಜಾತಿ ಆಧಾರದ ಮೇಲೆ 'ಖಾಯಂ ಗುಲಾಮಗಿರಿಗೆ' ತಳ್ಳಿದ ಹುನ್ನಾರಗಳನ್ನು ತಮ್ಮ ಆಳವಾದ ಅಧ್ಯಯನಗಳಲ್ಲಿ ವಿಶ್ಲೇಷಿಸಿದರು. ಡಾ.ಡಿ.ಆರ್.ನಾಗರಾಜ್ ಅವರು ಗುರುತಿಸಿದಂತೆ ಎರಡು ರೀತಿಯ ಹಿಂಸೆಗಳನ್ನು ಅಂಬೇಡ್ಕರ್‌ರವರು ಅನಾವರಣಗೊಳಿಸುತ್ತಾರೆ,

1) ವಸಹಾತುಪೂರ್ವ ಸಮಾಜಗಳಿಗೆ ಅನ್ವಯಿಸುವ ಜ್ಞಾನ ಶಾಖೆಗಳ ಹಿಂಸೆ (Epistemological Violence)
2) ರಾಷ್ಟ್ರ ಪ್ರಭುತ್ವದ ಹಿಂಸೆ (State Violence)

ಇದಕ್ಕೆ ಪೂರಕವಾಗಿ ಡಾ. ಡಿ.ಆರ್. ನಾಗರಾಜ್ 'ಈ ಹಿಂಸೆಗಳನ್ನು ನಮ್ಮ ಸಮಾಜದ ಅಂತ್ಯಜರು ಇವತ್ತಿನ ಗ್ಲೋಬಲೈಸೇಷನ್ ಮತ್ತು ಆಧುನಿಕ ಜಗತ್ತಿನ ಸಂದರ್ಭದಲ್ಲೂ ತಮ್ಮದೇ ಆದ ಸಾಂಸ್ಕೃತಿಕ ಜಗತ್ತಿನ ಶ್ರೀಮಂತಿಕೆಯಿಂದ ಕಾರ್ಯತಂತ್ರಗಳಿಂದ ಎದುರಿಸಬೇಕಾಗಿದೆ'[24] ಎಂದು ಅಭಿಪ್ರಾಯಪಡುತ್ತಾರೆ.

ಇತ್ತೀಚಿನ ಹಲವಾರು ಅಧ್ಯಯನಗಳು ಸಮಾಜೋ ಧಾರ್ಮಿಕ ಚಳುವಳಿಗಳ, ದಲಿತ ಚಳುಗಳಿಗಳ ಬಗ್ಗೆ, ಅಂಬೇಡ್ಕರ್‌ರವರ ದಲಿತ ವಿಮೋಚನಾ ಕಾರ್ಯತಂತ್ರಗಳನ್ನು, ವಿಭಿನ್ನ ದೃಷ್ಟಿಕೋನಗಳನ್ನು ಬಿಂಬಿಸುತ್ತ ಅಂಬೇಡ್ಕರ್‌ರವರ ಮೂಲ ವಿಚಾರಧಾರೆಯನ್ನೇ ತಪ್ಪಾಗಿ ಅರ್ಥೈಸುತ್ತ ದಲಿತರನ್ನು ದಾರಿ ತಪ್ಪುವಂತೆ ಮಾಡಿದ ಹುನ್ನಾರಗಳೇ ನಮ್ಮ ಮುಂದಿರುವುದನ್ನು ಕಾಣುತ್ತೇವೆ. ಆಳವಾದ ಅಧ್ಯಯನ, ಎರಡು ದಶಕಗಳ ವಿವೇಚನೆ, ವೈಜ್ಞಾನಿಕ ವಿಶ್ಲೇಷಣೆಯ ನಂತರ ದಲಿತರ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ಬದುಕಿನ ಅಭಿವೃದ್ಧಿಯ ಹಿತಾಸಕ್ತಿಗಳನ್ನು ಗಮನದಲ್ಲಿಟ್ಟುಕೊಂಡು ಅಸಮಾನತೆಯ ವ್ಯವಸ್ಥೆಗೆ ವಿರುದ್ಧವಾಗಿ ದಲಿತರನ್ನು ವಿಮೋಚನೆಯೆಡೆಗೆ ಪ್ರಜ್ಞೆಯಿಂದ ನಡೆಸುವ ಬೌದ್ಧಧರ್ಮವನ್ನು ಒಪ್ಪಿಕೊಂಡರು. ತಮ್ಮ ಐದು ಲಕ್ಷ ಅನುಯಾಯಿಗಳೊಂದಿಗೆ ಬೌದ್ಧಧರ್ಮಕ್ಕೆ ಮತಾಂತರ ಹೊಂದಿದರು. ಈ ಘಟನೆ 'ಜಗತ್ತಿನ ಇತಿಹಾಸದಲ್ಲಿಯೇ ಏಕಮೇವ ಬೃಹತ್ ಮತಾಂತರ ಘಟನೆಯಾಗಿದೆ. ಇಲ್ಲಿಯವರೆಗೆ ಬೇರೆಯಾದ ಭಾಗದಲ್ಲೂ ಇಂತಹ ಘಟನೆ ಜರುಗಿದ ಉದಾಹರಣೆಗಳಿಲ್ಲ'[25] ಎಂದು ಹಲವಾರು ಅಧ್ಯಯನಕಾರರು ಅಭಿಪ್ರಾಯಪಟ್ಟಿರುತ್ತಾರೆ. ಆದರೆ, ತಮ್ಮ ಅಧ್ಯಯನಗಳ ತೀರ್ಮಾನಗಳನ್ನು 'ಐದು ಜನರು' ಒಪ್ಪದಂತಹ ತಜ್ಞರೆಂದು ಅನ್ನಿಸಿಕೊಂಡವರು ಕೂಡ ಅಂಬೇಡ್ಕರರವರ ಮತಾಂತರ ಚಳುವಳಿಯನ್ನು, ದಲಿತ ವಿಮೋಚನಾ ಕಾರ್ಯತಂತ್ರಗಳನ್ನು ಸರಳೀಕರಿಸುವ, ಶುಷ್ಕಬೌದ್ಧಿಕ ಚರ್ಚೆಗೆ ಒಳಪಡಿಸುವ ಕ್ರಿಯೆಯಲ್ಲಿ ತೊಡಗಿರುವುದು ಈ ಸಂದರ್ಭದ ಬೌದ್ಧಿಕ ಬಡತನ (Intellectual Poverty) ಎನ್ನುವುದಕ್ಕಿಂತ ''ಬೌದ್ಧಿಕ ವಿಕೃತಿ'' ಎಂದರೆ ಅತಿಶಯೋಕ್ತಿಯಾಗಲಾರದು. ಅಂತಹ ಅಧ್ಯಯನಕಾರರು ಅಂಬೇಡ್ಕರ್‌ರವರ ಸೈದ್ಧಾಂತಿಕ ನಿಲುವುಗಳನ್ನು ಆಲವಾಗಿ ಅಧ್ಯಯನ ಮಾಡಿ ಅರ್ಥ ಮಾಡಿಕೊಂಡಿಲ್ಲವೆಂದೇ ತೀರ್ಮಾನಿಸಬೇಕಾಗುತ್ತದೆ. ಹಾಗೆಯೇ ಡಾ. ಡಿ.ಆರ್. ನಾಗರಾಜ್‌ರವರು ಹೇಳಿದಂತೆ ದಲಿತರ ಮೇಲೆ, 'ಜ್ಞಾನ ಶಾಖೆಗಳು', ಮುಂದುವರೆಸಿದ ಹಿಂಸೆ (Extention of Epistemological Violence) ಎಂದು ಪರಿಗಣಿಸಬೇಕಾಗುತ್ತದೆ. ಇನ್ನೂ ಸೂಕ್ಷ್ಮವಾಗಿ ವಿಶ್ಲೇಷಿಸಿದರೆ ಹಿಂದೆ ವೈಧಿಕರು ಜನಪ್ರೀಯತೆ ಗಳಿಸಿದ್ದ ಬೌದ್ಧಧರ್ಮದೊಳಗೆ ಪ್ರವೇಶ ಪಡೆದು ಅದನ್ನು ನಿಶಕ್ತಗೊಳಿಸಿದಂತೆ, ಅನಾರ್ಯರ ಸಾಂಸ್ಕೃತಿಕ ಶ್ರೀಮಂತಿಕೆಯಲ್ಲಿ ಪ್ರವೇಶಿಸಿ ಅವರಿಗೆ ಗೊತ್ತಿಲ್ಲದಂತೆ ಅದನ್ನು ನಾಶ ಮಾಡಿದ ಹಿನ್ನೆಲೆಯಲ್ಲಿಯೇ ಇವತ್ತಿನ ಸಂದರ್ಭದಲ್ಲೂ ನಾವು ಈ ಹುನ್ನಾರಗಳನ್ನು ಭೇಧಿಸಲೇಬೇಕಾಗುತ್ತದೆ. 'ದಲಿತಾಲಜಿ'ಯನ್ನು ಸಮರ್ಥವಾಗಿ ತಾತ್ವೀಕರಣ ಮಾಡಿದ ಎಂ.ಸಿ. ರಾಜ್ (2002) ಆರ್ಯರು ಈ ದೇಶಕ್ಕೆ ಮೊದಲು ಬಂದಾಗ, ಅನಾರ್ಯರನ್ನು ಮತ್ತು ಅವರ ಸಂಸ್ಕೃತಿಯನ್ನು ನಾಶಪಡಿಸಿದ ಬಗ್ಗೆ ವಿವರಿಸುತ್ತಾ 'ಹೊಸ ಸನ್ನಿವೇಶದ ಮುಖಾಮುಖಿಯಾಗಿ ಅದನ್ನು ಗೆಲ್ಲುವ ಹೊರತು ಅಥವಾ ತನ್ನ ಸಂಸ್ಕೃತಿಯನ್ನು ಇವರಿಗೆ ಹೇಳಿಕೊಡದ

ಹೊರತು ಅಥವಾ ಆರ್ಯನ್ನರಿಗಿದ್ದ ಪರ್ಯಾಯವೆಮದರೆ, ಈ ಬರ್ಬರ ನೆರೆಹೊರೆಯವರನ್ನು ಸೂಕ್ಷ್ಮವಾಗಿ ನಾಶ ಮಾಡುವುದು ಇಲ್ಲವೆ ಅವರನ್ನು ತಮ್ಮಲ್ಲಿಯೇ ಸೇರಿಸಿಕೊಳ್ಳುವುದು ಮತ್ತು ಅವರನ್ನು ಮೇಲ್‌ಸ್ತರಕ್ಕೆತ್ತುವುದು, ಅಥವಾ ಅವರು ತಮ್ಮನ್ನು ಶಕ್ತಿಗುಂದಿಸುವದರಿಂದಲೇ ನಾಶವಾಗಲು ಅನುವು ಮಾಡಿಕೊಡುವುದು[26] ಆಗಿತ್ತು. ಆದರೆ ಎಂ.ಸಿ. ರಾಜ್‌ರವರು ಗುರುತಿಸಿದಂತೆ ಆರ್ಯರು ಯಾವತ್ತಿಗೂ ಅವರ ಜನಾಂಗ ಗರ್ವ,[27] ಮತ್ತು ಸಾಂಸ್ಕೃತಿಕ ಪರೀಧಿಗಳನ್ನು ಬಿಟ್ಟುಕೊಳ್ಳಲಿಲ್ಲ. ಹಿಂದೂ ವರ್ಣಾಶ್ರಮ ವ್ಯವಸ್ಥೆಯ 'ಜಾತಿ' ಸಂಸ್ಥೆಯನ್ನು ಗಟ್ಟಿಗೊಳಿಸಿ ಅನಾರ್ಯರು ತಮ್ಮ ಸಂಸ್ಕೃತಿಯನ್ನು ಮರೆತು ತಮ್ಮ ಶಕ್ತಿಯನ್ನು ತಾವೇ ಕುಂದಿಸಿಕೊಂಡು, ತಮ್ಮಿಂದಲೇ ನಾಶವಾಗಲು ಅನುವು ಮಾಡಿಕೊಡುವ ತಂತ್ರಾಗಾರಿಕೆನ್ನೆ ತಮ್ಮ ಅಂತರಾಳದಲ್ಲಿಟ್ಟುಕೊಂಡು, ಇಂದಿಗೂ ಒಂದಾಗಿ 'ಚಳುವಳಿ' ಮಾಡದ, ತಮ್ಮ ಸಾಮಾನ್ಯ ಶತ್ರು (Common Enemy) ಯಾರು ಎಂಬುದನ್ನೇ ತಿಳಿದುಕೊಂಡಂತೆ ಮಾಡಿದ ಪ್ರಯತ್ನಗಳೂ ಇಲ್ಲದಿಲ್ಲ. ಇತ್ತ ಅಂಬೇಡ್ಕರ್‌ರವರ ಸೈದ್ಧಾಂತಿಕ ನೆಲೆಯೂ ಇಲ್ಲದೇ, ಅತ್ತ ಬಲವಾದ ತಮ್ಮದೇ ಆದ ಸ್ಪಷ್ಟ ಸೈದ್ಧಾಂತಿಕ ಆಧಾರವೂ ಇಲ್ಲದೆ, ಮೇಲ್ವರ್ಗಗಳ ಅಧಿಕಾರಶಾಹಿಗಳಿಗೆ ಅಡಿಯಾಳಾಗಿ ತಮ್ಮ ನಿಜವಾದ ವಿಮೋಚನೆಯನ್ನು ಸಾಧಿಸದೆ' ತಮ್ಮ ಜಾತಿಯ ಅಸಂಖ್ಯಾತ ಜನರನ್ನು ದಿಕ್ಕು ತಪ್ಪಿಸುತ್ತಿರುವ ಪ್ರಕ್ರಿಯೆಯನ್ನೇ ನಾವು ಕಾಣುತ್ತಿರುವುದು 'ದಲಿತ ವಿಮೋಚನೆ ಮತ್ತು ಅಂಬೇಡ್ಕರ್ ಸಂಕಲ್ಪನೆಗಳಿಗೆ ಹಿನ್ನಡೆಯುಂಟು ಮಾಡುವುದನ್ನು ನೋಡುತ್ತೇವೆ'.

ಡಾ. ಡಿ.ಆರ್. ನಾಗರಾಜ್ ಸಾಂಸ್ಕೃತಿಕ ಸ್ಮೃತಿಯ ಸಮಸ್ಯೆಯ ಕುರಿತು ಪ್ರಸ್ತಾಪಿಸುತ್ತಾ 'ಅಂಬೇಡ್ಕರ್‌ರವರ 'ಸಾಂಸ್ಕೃತಿಕ ರಾಜಕಾರಣ' ಶೋಷಣೆ ಮತ್ತು ಅವಮಾನ ಶೋಷಣಾರಹಿತ 'ಮಾನವ ಘನತೆ', ಸ್ವಾಭಿಮಾನ ಸಂಕೇತಗಳನ್ನು ನಿರ್ಮಿಸುವುದಾಗಿತ್ತು[28] ಎಂದು ಅಭಿಪ್ರಾಯ ಪಡುತ್ತಾರೆ. ಆದರೆ ಅಂಬೇಡ್ಕರರವರು 'ಸಾಂಸ್ಕೃತಿಕ ವಿಸ್ಮೃತಿ' ಯನ್ನು ಮೀರುವ ಒಂದು ಅಭಿವೃದ್ಧಿ ಮಾದರಿ, ವಿಮೋಚನಾ ಮಾದರಿಯನ್ನು ಸಾಮರ್ಥವಾಗಿ ಕಟ್ಟಿದರೆಂಬುದು ಇಲ್ಲಿ ಮುಖ್ಯವಾಗುತ್ತದೆ. ಡಾ. ಡಿ.ಆರ್. ನಾಗರಾಜ್ ಮುಂದುವರೆದು ಹೇಳುತ್ತಾ 'ಸ್ವತಃ ಅಂಬೇಡ್ಕರ್ ನೆನಪುಗಳಿಲ್ಲದ ಸಮಾಜದ ದುರಂತವನ್ನು ಅರ್ಥಮಾಡಕೊಂಡಿದ್ದರು, ಹಾಗೂ ಐತಿಹಾಸಿಕ ಸಂಶೋಧನೆಯ ಪರಿಭಾಷೆಯಲ್ಲಿ ದಲಿತರಿಗೆ ಬೌದ್ಧ ಇತಿಹಾಸವೊಂದನ್ನು (Buddhist History) ಪುನರ್ ರಚಿಸುವ ಯತ್ನದಲ್ಲಿ ತೊಡಗಿದರು. ನನ್ನ ದೃಷ್ಟಿಯಲ್ಲಿ ಇದು ಭಾರತೀಯ ಇತಿಹಾಸದ ಅಂತ್ಯಂತ ಹೃದಯಸ್ಪರ್ಶಿ ಅಧ್ಯಾಯಗಳಲ್ಲಿ ಒಂದು ಏಕೆಂದರೆ ಇದು ನಿಜವಾದ ನೆನಪುಗಳನ್ನು ನಿರಾಕರಿಸಿ ಹೊಸ ಚರಿತ್ರೆಯೊಂದನ್ನು ಕಟ್ಟುವ ಶೈಕ್ಷಣಿಕ ಸಾಹಸವೊಂದನ್ನು ಒಳಗೊಂಡಿದೆ. ಬೌದ್ಧಧರ್ಮಕ್ಕೆ ಮತಾಂತರ ಹೊಂದುವುದು ಈ ನೆನಪನ್ನು ನಿಜವಾಗಿಸುವ ಕ್ರಿಯೆಯಾಗಿತ್ತು. ಹೊಸ ನೆನಪನ್ನು ಕಟ್ಟುವ ಪ್ರಯತ್ನದಲ್ಲಿ ಅಂಬೇಡ್ಕರ್, ಜ್ಞಾನ ಮೀಮಾಂಸೆ ದೃಷ್ಟಿಯ ಆಧುನಿಕತೆಯ ಸಹಾಯದಿಂದ ನಿರ್ಣಾಯಕ ತಿರುವು ಪಡೆದರು,[29] ಎಂದು ತುಂಬಾ ಮಹತ್ವದ ಅವಲೋಕನವನ್ನು ದಾಖಲಿಸುತ್ತಾರೆ. ಮುಂದುವರೆದು 'ಅದು ಕಲ್ಪನೆಯ ಸಮುದಾಯವನ್ನು ಸೃಷ್ಟಿಸುವ ಕ್ರಿಯೆಯಲ್ಲ, ಅನುಭಾವಿಕ ಹಾಗೂ ಆಧ್ಯಾತ್ಮಿಕ ನೆನಪುಗಳನ್ನು ಉದ್ದೀಪಿಸಿ, ರಾಜಕೀಯವನ್ನು ವಿಸ್ತಾರದ ಹರವಿಗೆ ಪರಿವರ್ತಿಸುವ ಘನಕಾರ್ಯ. ಗಾಂಧಿ ಕೂಡ ಇದೇ ಗುರಿಯನ್ನು ಹೊಂದಿದ್ದರು. ಅವರ ಕಾರ್ಯವಿಧಾನಗಳು ಬೇರೆಯಾಗಿದ್ದವು. ಆದರೆ ವಸ್ತುಸ್ಥಿತಿ ಮಾತ್ರ ನಿಜವಾಗಿತ್ತು. ಎರಡೂ ಕಾರ್ಯಯೋಜನೆಗಳ ತಾರ್ಕಿಕ ಗುರಿ ಒಂದೇ ಆಗಿತ್ತು. ಅಭಿವೃದ್ಧಿಯ ಪ್ರಬಲ ಮಾದರಿಯ ಸಮಗ್ರ ವಿಮರ್ಶೆ, ಈ ಸಾಹಸದ ಬಲದ ಮೇಲೆ ಬೆಳೆಸುವ ಹಾಗೂ ಕಟ್ಟುವ ಜವಾಬ್ದಾರಿ ಇಂದಿನ ದಲಿತ ಚಳುವಳಿಯ ಮೇಲಿದೆ. ಆ ಗುರಿಯೆಂದರೆ ಹಳ್ಳಿಯನ್ನು ಜಗತ್ತಿನ

ಜೊತೆಗೆ ಸಂಪರ್ಕಿಸುವ ತಂತ್ರಗಳನ್ನು ಶೋಧಿಸುವುದು. ಈ ಹಿನ್ನೆಲೆಯಲ್ಲಿ ಯಾರಾದರೂ, ಹಳ್ಳಿಯ ಜೀವಂತ ಸಂದರ್ಭದೊಳಗೆ ಅಂಬೇಡ್ಕರ್ ವಾದಿಯಾಗಿ ಅದರ ಹೊರಗೆ ಗಾಂಧಿವಾದಿಯ ಹಾಗೆ ಕಂಡರೆ ಅದು ಅಧಿಕೃತವಾದದ್ದು'[30] ಎಂದು ಹೇಳುತ್ತಾ ಸಮಕಾಲೀನ ದಲಿತ ಚಳುವಳಿ ಎಲ್ಲಿಂದ ತನ್ನ 'ದಲಿತ ರಾಜಕಾರಣ' ಪ್ರಾರಂಭಿಸಬೇಕೆಂಬ ಸುಳಿವು ನೀಡುತ್ತಾರೆ. ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಸಂಸ್ಥಾಪಕರಲ್ಲೊಬ್ಬರು, ಇಂದಿನ 'ಸರ್ವೋದಯ ಕರ್ನಾಟಕ' (ದಲಿತ-ರೈತ ಚಳವಳಿಗಳ ಸಮನ್ವಯ) ರಾಜಕೀಯ ಚಳವಳಿಯ ನಾಯಕರೂ ಆದ ದಲಿತ ಸಾಹಿತಿ ದೇವನೂರು ಮಹಾದೇವ ಅವರು ಇಂತಹ ಮಾದರಿಗೆ ಚಾಲನೆಗೆ ನೀಡಿದಾಗ್ಯೂ ಸಹಿತ ಎರಡೂ ಶಕ್ತಿಗಳಿಗೆ ಹಳ್ಳಿಯ ಮಟ್ಟದಲ್ಲಿ ಸಮನ್ವಯ ಸಾಧ್ಯವಾಗಬೇಕಾಗಿರುವುದರ ಅವಶ್ಯಕತೆಯನ್ನು ನೋಡುತ್ತೇವೆ. ಆದರೆ, ಅಂಬೇಡ್ಕರ್ ಪ್ರತಿಪಾದಿಸಿದ ವಿಮೋಚನಾ ಸಿದ್ಧಾಂತಕ್ಕೆ ಮೊದಲು ದಲಿತರಿಗೆ ಸಾಂಸ್ಕೃತಿಕ ಪರ್ಯಾಯಗಳನ್ನು ಗಟ್ಟಿ ನೆಲೆಯಲ್ಲಿ ನಡೆಸಿಕೊಂಡು ಹೋಗಬೇಕಾದ, 'ಹಳ್ಳಿಯಿಂದಲೇ ದಿಲ್ಲಿ' ನಡೆಯುತ್ತದೆ ಎಂಬ ಅನುಭವ ದಲಿತರಾಗಬೇಕಾಗಿರುವುದು ಈ ಕಾಲದ ಸಾಂಸ್ಕೃತಿಕ ಅವಶ್ಯಕತೆಗಳ -ಲ್ಲೊಂದಾಗಿರುವುದನ್ನು ಈ ಅಧ್ಯಯನ ಮನಗಂಡಿದೆ. ದಲಿತ ಶಕ್ತಿಗಳು ಅಂಬೇಡ್ಕರ್‌ರವರ ಮೂಲ ಕಾಳಜಿಗಳನ್ನು ಅರ್ಥಮಾಡಿಕೊಂಡು ಪರ್ಯಾಯ ಸಾಂಸ್ಕೃತಿಕ, ವಿಚಾರಗಳಿಗೆ ಇಂಬುಗೊಡಬೇಕಾಗಿರುವುದನ್ನು ಸಹಿತ ಪ್ರಸ್ತುತ ಅಧ್ಯಯನದಲ್ಲಿ ಮನಗಾಣಲಾಗಿದೆ. ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಅವರ ರಾಜಕೀಯ ಚಳುವಳಿಗೆ ಸಾಂಸ್ಕೃತಿಕ ನೆಲೆಗಳ ಬುನಾದಿ ರೂಪಿಸುವ ಮಹತ್ವವಿರುವ ಅವಶ್ಯಕತೆಯನ್ನು ವಿಶ್ಲೇಷಿಸುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದ ತಾತ್ವಿಕತೆಯನ್ನು ಸ್ಪೆಂಗ್ಲರ್ ಮತ್ತು ಟಾಯ್ನಬಿಯವರ ಸಂಸ್ಕೃತಿ ಕುರಿತ ವಿಚಾರಗಳಲ್ಲಿನ ವ್ಯತ್ಯಾಸ ಉಲ್ಲೇಖಿಸುವುದರ ಮೂಲಕ ಸ್ಪಷ್ಟಪಡಿಸಬಹುದಾಗಿದೆ. ಸ್ಪೆಂಗ್ಲರ್

'ಅಳಿದು ಹೋದ ಸಂಸ್ಕೃತಿಗೂ ಮುಂದೆ ಉದಯವಾಗುವ ಸಂಸ್ಕೃತಿಗೂ ಯಾವ ಸಂಬಂಧವಿಲ್ಲ'[31] ಎಂದು ಹೇಳುತ್ತಾನೆ, ಆದರೆ ಟಾಯ್ನಬಿ

'ಸಂಸ್ಕೃತಿಯ ಅಭ್ಯುದಯ ಮತ್ತು ಅವನತಿಗಳಲ್ಲಿ ಜನನಾಯಕನ ನೇತೃತ್ವವನ್ನು ಅವಲಂಬಿಸಿವೆ'[32] ಎಂದು ಅಭಿಪ್ರಾಯ ಪಡುತ್ತಾನೆ.

ಈ ಎರಡೂ ಪ್ರಮೇಯಗಳ ಹಿನ್ನೆಲೆಯಲ್ಲಿಯೇ, ಇಂದು ಅಂಬೇಡ್ಕರ್‌ರವರ ಬೌದ್ಧಧರ್ಮ ಮತಾಂತರ ಚಳುವಳಿ, ದಲಿತ ವಿಮೋಚನಾ ಮಾದರಿಗಳು ಹೆಚ್ಚಾಗಿ ವಿಶ್ಲೇಷಿತವಾಗುತ್ತಿವೆ. ಆದರೆ ಇದಕ್ಕೆ ವ್ಯತಿರಿಕ್ತವೆಂಬಂತೆ ಡಾ. ಅಂಬೇಡ್ಕರ್‌ರವರು ಪ್ರತಿಪಾದಿಸಿದ ಸಾಂಸ್ಕೃತಿಕ, ಧಾರ್ಮಿಕ ವಿಮೋಚನಾ ಮಾದರಿ ಸ್ಪೆಂಗ್ಲರ್ ಹೇಳುವಂತೆ ಧಿಡೀರನೇ ಉದಯವಾದದ್ದೂ ಅಲ್ಲ ಅವನತಿ ಹೊಂದುವಂತದ್ದಲ್ಲವೆಂಬುದನ್ನು ನಾವು ಗುರುತಿಸಬೇಕಾಗುತ್ತದೆ. ಹಿಂದೂ ಸಾಂಸ್ಕೃತಿಕ ಆವರಣದಲ್ಲಿ 'ರಾಮ' ಒಬ್ಬನೇ, 'ಕೃಷ್ಣ' ಒಬ್ಬನೇ , ಅಲ್ಲಿಗೆ ಮುಗಿಯಿತು. ಈ ಸಂದರ್ಭದಲ್ಲಿ ಯಾರೊಬ್ಬರು 'ನಾನು ರಾಮ' ನಾಗಿ ಹುಟ್ಟಿ ಬಂದಿದ್ದೇನೆ, 'ಕೃಷ್ಣ' ನಾಗಿ ಹುಟ್ಟಿ ಬಂದಿದ್ದೇನೆ ಎನ್ನಲಿಕ್ಕೆ ಅವಕಾಶವಿಲ್ಲ. ಇನ್ನು ಅಂತಹ ಸಂಸ್ಕೃತಿಗೆ ರಾಮಕೃಷ್ಣರೇ ಧರೆಗಿಳಿದು ಬಂದು ಸಾಂಸ್ಕೃತಿಕ ನೇತಾರಿಕೆ' ವಹಿಸಲು ಸಾಧ್ಯವೇ ಇಲ್ಲ. ಭಾರತ ಎಷ್ಟೇ ಅಧರ್ಮದಿಂದ ತುಂಬಿ ತುಳುಕಿದರೂ,

ಅಂತರಾಷ್ಟ್ರೀಯ ಮಟ್ಟದಲ್ಲಿ 'ಕಪ್ಪುಮಸಿ' ಬಳಿದುಕೊಂಡ ಮುಖ ತೋರಿಸಿದರೂ ಈ ಅಧರ್ಮವನ್ನು ನಾಶಪಡಿಸಲು ಮತ್ತೆ ಬರಲು, 'ಧರ್ಮ' ಸ್ಥಾಪಿಸಲು ಅದೇ ಕೃಷ್ಣನೇ ಬರಲು ಹೇಗೆ ಸಾಧ್ಯ ? ಆದರೆ ಬೌದ್ಧ ಸಾಂಸ್ಕೃತಿಕ ಆವರಣದಲ್ಲಿ ಯಾರೇ ಸಾಮಾನ್ಯ ಮಾನವರು 'ಬುದ್ಧತ್ವ' ಪ್ರಾಪ್ತಿಮಾಡಿಕೊಳ್ಳುವ ಮುಕ್ತ ಅವಕಾಶವಿರುವುದನ್ನು ಅಂಬೇಡ್ಕರ್ ಗುರುತಿಸಿದ್ದರು. ಅಂಬೇಡ್ಕರ್‌ರವರು ಪ್ರತಿಪಾದಿಸಿದ ಬೌದ್ಧಧರ್ಮದಲ್ಲಿ 'ಬುದ್ಧ' 'ಧರ್ಮ' ಮತ್ತು 'ಸಂಘ' ಈ ಮೂರು ಮುಖ್ಯ ಆಯಾಮಗಳಿಗೆ ಚಲನಶೀಲತೆ ಇದೆ. ಅದಕ್ಕಾಗಿಯೇ 'ಅಂಬೇಡ್ಕರ್‌ರವರ ಬೌದ್ಧಧರ್ಮ' ವನ್ನು ಜೀವಂತ ಬೌದ್ಧಧರ್ಮ (Living of Buddhism) ತಮ್ಮದು 'ನವಯಾನ' (New Vehicle) ಎಂದು ಕರೆದಿರುವುದು. ನಾಗಪುರದಲ್ಲಿ ಬೌದ್ಧಧರ್ಮಕ್ಕೆ ಮತಾಂತರವಾಗುವ ಮುನ್ನಾದಿನ 13, ಅಕ್ಟೋಬರ್ 1956 ರಂದು ಅಂಬೇಡ್ಕರ್‌ರವರು ವರದಿಗಾರರ ಪ್ರಶ್ನೆಗಳಿಗೆ ಉತ್ತರಿಸುತ್ತಾ 'ನಾನು ಬುದ್ಧನ ತತ್ವಗಳನ್ನು ಆಧರಿಸಿದ ಬೋಧನೆಯನ್ನು ಸ್ವೀಕರಿಸುತ್ತೇನೆ. ಅದರಲ್ಲಿ ಹೀನಾಯಾನ, ಮಹಾಯಾನ ಎಂಬ ಗೊಂದಲ ಬೇಡ. ನನ್ನ ಬೌದ್ಧ ಧರ್ಮ, 'ನವಬೌದ್ಧ' ಅಥವಾ 'ನವಯಾನ' ಆಗಿರುತ್ತದೆ;[33] ಎಂದು ಹೇಳುತ್ತಾರೆ. ಅವರು ಬೌದ್ಧಧರ್ಮವನ್ನು, ಬುದ್ಧನ ತತ್ವಗಳನ್ನು ಮರು ವಿಶ್ಲೇಷಿಸಿ, ಪ್ರಸ್ತುತ ಕಾಲಘಟ್ಟದಲ್ಲಿ ವೈಜ್ಞಾನಿಕವಾಗಿ ಪುನರ್ ವ್ಯಾಖ್ಯಾನಿಸಿದರು. ಅದೇ ಕಾಲಕ್ಕೆ ಮೂಲ ಬೋಧನೆಗಳಿಗೆ ಧಕ್ಕೆಯಾಗದಂತೆ, ಅತಿರಂಜಿತ ಪರಿಕಲ್ಪನೆಗಳನ್ನು ಪರಿಷ್ಕರಿಸಿ 'ಬುದ್ಧ ಮತ್ತು ಅವನ ಧರ್ಮ' ಎಂಬ ಮಹತ್ ಕೃತಿಯನ್ನು ರಚಿಸಿದರು. ಸಾಂಪ್ರದಾಯಿಕ ಸೈದ್ಧಾಂತಿಕ ವಿಶ್ಲೇಷಣೆಗಳನ್ನು 'ಆರ್ಯ' ಕಥನಗಳನ್ನು ಒರೆಗಲ್ಲಿಗೆ ಹಚ್ಚಿ ಈ ಮೊದಲು ಹೇಳಿದಂತೆ ಬುದ್ಧನ ಬೋಧನೆಗಳಿಗೆ 'ಚಲನಶೀಲ' ಆಯಾಮ ಗುರುತಿಸಿದರು. ಪ್ರಥಮ ಆವೃತ್ತಿಗೆ ಬರೆದ ಮುನ್ನುಡಿಯಲ್ಲಿ ಅಂಬೇಡ್ಕರರವರು ಬೌದ್ಧಸಂಘ, ಬಿಕ್ಕು ಪರಿಕಲ್ಪನೆಗಳು ಇಂದು ಪ್ರಸ್ತುತತೆಯನ್ನು ಕಂಡುಕೊಳ್ಳಬೇಕಾಗಿದೆ. ಸಮಕಾಲೀನ ಅಗತ್ಯಕ್ಕೆ, ಸಮಸ್ಯೆಗಳಿಗೆ ಸ್ಪಂದಿಸಿ 'ಬೌದ್ಧ ಬಿಕ್ಕು' ತನ್ನ ಪಾತ್ರ ನಿರ್ವಹಿಸಬೇಕಾಗಿದೆ ಎಂಬುದನ್ನು ತಿಳಿಸುತ್ತಾರೆ. ಬುದ್ಧನು ಬಿಕ್ಕುವನ್ನು ಯಾಕೆ ರೂಪಿಸಿದ ಎಂಬ ಉದ್ದೇಶದ ವಿವರಣೆ ಕೊಡುತ್ತಾರೆ.

'ಬಿಕ್ಕು ಒಬ್ಬ ಪರಿಪೂರ್ಣ ಮನುಷ್ಯನಾಗಿ ಮಾತ್ರ ಇದ್ದರಾಯಿತೆ? ಜನರಿಗೆ ಸೇವೆಸಲ್ಲಿಸುವ ಜೀವನಕ್ಕೆ ಬದ್ಧನಾಗಿ, ಅವರ ಮಿತ್ರನಾಗಿ, ಮಾರ್ಗದರ್ಶಕನಾಗಿ ಮತ್ತು ತತ್ವಜ್ಞಾನಿಯಾಗಿ ಇರಬೇಡವೇ? ಈ ಪ್ರಶ್ನೆಗಳ ಮೇಲೆ ಬೌದ್ಧಧರ್ಮದ ಭವಿಷ್ಯ ನಿಂತಿದೆ. 'ಬಿಕ್ಕು' ಕೇವಲ ಒಬ್ಬ ಪರಿಪೂರ್ಣ ಮನುಷ್ಯನಾಗಿಯೂ ಧರ್ಮ ಪ್ರಸಾರ ಕಾರ್ಯದಲ್ಲಿ ಉಪಯೋಗಕ್ಕೆ ಬಾರದವನಾದರೆ ಅವನು ಸ್ವಾರ್ಥ ಮನುಷ್ಯನೇ ಸೈ. ಬದಲಾಗಿ ಆತನೊಬ್ಬ ಸಮಾಜ ಸೇವಕ (Social Servant) ನಾಗಿದ್ದರೆ, ಅದುವೇ ಬೌದ್ಧಧರ್ಮಕ್ಕೆ ಇರುವ ಮಹತ್ವಾಕಾಂಕ್ಷೆಯ ನಿರೀಕ್ಷೆಯಾಗಿರುತ್ತದೆ. ಬೌದ್ಧ ಸೂತ್ರಗಳ ಸಿದ್ಧಾಂತದ ಸ್ಥಿರತೆಯ (Doctrinal Consitency) ಹಿನ್ನೆಲೆಯಲ್ಲಿ ಈ ಪ್ರಶ್ನೆಯನ್ನು ವಿಶ್ಲೇಷಿಸಬಾರದು, ಬೌದ್ಧ ಧರ್ಮದ ಭವಿಷ್ಯದ ಹಿತದೃಷ್ಟಿಯಿಂದ ಇದನ್ನು ನಿರ್ಧರಿಸಬೇಕು'[34] ಎಂದು ಹೇಳುತ್ತಾರೆ. ಹೀಗೆ ಬೌದ್ಧಧರ್ಮವನ್ನು ಮರು ವಿಶ್ಲೇಷಿಸುವ ಮೂಲಕ ವೈಜ್ಞಾನಿಕ ತತ್ವಗಳ ಆಧಾರದ ಮೇಲೆ ಮನೋವೈಜ್ಞಾನಿಕ ನೆಲೆಗಳಲ್ಲಿ ಶೋಷಿತಗೊಂಡ ಮನಸ್ಸುಗಳನ್ನು ವಿಮೋಚಿಸಿ, ದಾರಿದ್ರ್ಯ, ಸಂಕೋಲೆಗಳಿಂದ 'ವ್ಯಕ್ತಿ' ಯನ್ನು ಬಿಡುಗಡೆಗೊಳಿಸುವ ಕಾರ್ಯತಂತ್ರವಾಗಿ, ಸಾಧನವಾಗಿ ದಲಿತರಿಗೆ ಬೌದ್ಧಧರ್ಮ ಪಥವನ್ನು ನಿರ್ಮಿಸಿದರು. ಹೀಗಾಗಿ ಇತ್ತೀಚಿಗೆ ಅಂಬೇಡ್ಕರ್‌ರವರು ಗ್ರಹಿಸಿದ ಬುದ್ಧ 'ಡ್ಯೂಯೆನ್ ಬುದ್ಧ' (Deweyan Buddha) ಎಂದು ವಿಶ್ಲೇಷಿಸಿರುವುದನ್ನು ಕಾಣುತ್ತೇವೆ.

ಬೌದ್ಧಧರ್ಮಕ್ಕೆ ಅಂಬೇಡ್ಕರ್‌ರವರು ಮತಾಂತರಗೊಂಡಿದ್ದು ಕೇವಲ ಪ್ರತಿಭಟನಾತ್ಮಕ ನೆಲೆಯದ್ದಾಗಿರಲಿಲ್ಲ. ಬದಲಾಗಿ ಶೋಷಿತ ದಲಿತರಿಗೆ ಧಾರ್ಮಿಕ, ಸಾಂಸ್ಕೃತಿಕ ಪರ್ಯಾಯವನ್ನು ಸೃಷ್ಟಿಸುವುದಾಗಿತ್ತು. ಪ್ರಸ್ತುತ ಅಧ್ಯಯನ ಇಂತಹ ವ್ಯಾಪಕವಾದ ದೃಷ್ಟಿಕೋನಗಳನ್ನು ಹೊಂದಿ ಅಂಬೇಡ್ಕರರವರು ಪ್ರತಿಪಾದಿಸಿದಂತೆ ದಲಿತರ ವಿಮೋಚನೆಯ ಐಡೆಂಟಿಟಿಯಾಗಿ, ಕಾರ್ಯತಂತ್ರವಾಗಿ ಬೌದ್ಧ ಧರ್ಮವನ್ನು ವಿಶ್ಲೇಷಿಸಲು ಪ್ರಯತ್ನಿಸುತ್ತದೆ. ಇಂದು ಬೌದ್ಧ ಅರ್ಥಶಾಸ್ತ್ರದ ಜೊತೆಗೆ ಸಾಂಸ್ಕೃತಿಕ, ಬೌದ್ಧಿಕ ದಬ್ಬಾಳಿಕೆಗೆ ಒಳಗಾದ ದಲಿತರ ಶೋಷಿತ ಮನಸ್ಸುಗಳನ್ನು ವಿಮೋಚನೆ ಉದ್ದೇಶ ಹೊಂದಿರುವ ಬೌದ್ಧ ಮನಶಾಸ್ತ್ರವೂ (Buddhist Psychology) ಇಂದಿನ ಅವಶ್ಯಕತೆಯಾಗಿರುವುದನ್ನು ಈ ಅಧ್ಯಯನ ವಿಶ್ಲೇಷಿಸುತ್ತದೆ. ದಲಿತ ಸಾಂಸ್ಕೃತಿಕ ಲೋಕದೊಳಗೆ ಪ್ರವೇಶಿಸಿದ ಇಂದಿನ ಹಲವಾರು ಅಧ್ಯಯನಗಳು ದಲಿತರ ವಸ್ತ್ರ ವಿನ್ಯಾಸ, ಆಹಾರ, ಇತ್ಯಾದಿ ಬಾಹ್ಯ ಆಯಾಮಗಳಿಗೆ ಒತ್ತು ಕೊಡುತ್ತವೆಯೇ ಹೊರತಾಗಿ ಅಲ್ಲಿನ ಮೂರ್ತ್ರದ್ರವ್ಯವಾದ 'ದಲಿತ ಮನಶಾಸ್ತ್ರ' (Dalit Psychology) ವನ್ನು ಮುಟ್ಟುವುದೇ ಇಲ್ಲ. ಈ ಹಿನ್ನೆಲೆಯಲ್ಲಿಯೇ ಪ್ರಸ್ತುತ ಅಧ್ಯಯನವನ್ನು ಅಂತರ್ ಶಿಸ್ತೀಯ ಅಧ್ಯಯನವೆಂದು ಗುರುತಿಸಿಕೊಳ್ಳಲಾಗಿದೆ. ಈ ರೀತಿಯ ತಾತ್ವಿಕತೆ ಸ್ಪಷ್ಟವಾಗಿಲ್ಲದಿದ್ದರೆ ದಲಿತ ಸಾಂಸ್ಕೃತಿಕ ಲೋಕದೊಳಗಿನ 'ಮನಸ್ಸು' ಅಧ್ಯಯನದ ತೆಕ್ಕೆಗೆ ಸಿಗುವುದಿಲ್ಲ. 'ಮನಸ್ಸನ್ನೇ' ಗುರುತಿಸದ ಅಧ್ಯಯನ ಯಾವ ಪಥವನ್ನು ತಾನೇ ನಮಗೆ ಗೋಚರಿಸುವಂತೆ ಮಾಡಲು ಸಾಧ್ಯ? ಮನಸ್ಸೇ ಎಲ್ಲ ಸೃಷ್ಟಿಗಳ ಮೂಲಸೆಲೆಯಾಗಿದೆ. ಯುದ್ಧ, ಸಮರಶೀಲತೆ, ಶಾಂತಿ, ಅಭಿವೃದ್ಧಿ ಎಲ್ಲಾ ಬೀಜಗಳು ಮೊಳಕೆಯೊಡೆಯುವುದು ಒಂದೇ ಮನಸ್ಸಿನಲ್ಲಿ ಮನಸ್ಸು ಒಳ್ಳೆಯದಿದ್ದರೆ ಸೃಷ್ಟಿಯೂ ಒಳ್ಳೆಯದಿರುತ್ತದೆ. ಒಳ್ಳೆಯ ಸೃಷ್ಟಿಗಳಿಂದ ಸುಂದರ ಜಗತ್ತು ಸುಂದರ ನೋಟ ಸಾಧ್ಯವಾಗುತ್ತದೆ. ಅಷ್ಟಾಂಗ ಮಾರ್ಗದಲ್ಲಿ ಹೇಳಿರುವ 'ಸಮ್ಮಾದಿತ್ತಿ' ಅಂದರೆ ಸರಿಯಾದ ದೃಷ್ಟಿಕೋನ ಮತ್ತು 'ಸಮ್ಮಾಸತಿ' ಅಂದರೆ ಸರಿಯಾದ ಮನಸ್ಸು ಸಮಾನತೆಯ ಸಮಾಜಕ್ಕೆ ಆರೋಗ್ಯಕರ ನಡವಳಿಕೆಗೆ ನಾಂದಿಯಾಗುತ್ತದೆ. ಇದನ್ನೇ ಅಂಬೇಡ್ಕರ್‌ರವರು ಗ್ರಹಿಸಿ ಧಾರ್ಮಿಕ, ಆಧ್ಯಾತ್ಮಿಕ ಮಹತ್ವ ತಿಳಿಸಿ ದಲಿತರು, ಶೋಷಿತರು ಅನುಸರಿಸಬೇಕಾದ ಸಾಂಸ್ಕೃತಿಕ ಮಾದರಿಯನ್ನು ರಚಿಸಿದರು.

ಬದಲಾಗುತ್ತಿರುವ ಜಾಗತಿಕ ಸಂದರ್ಭ, ಮುಕ್ತ ಮಾರುಕಟ್ಟೆಯಲ್ಲಿನ ರಾಚನಿಕ ಹೊಂದಾಣಿಕೆಯ ಕಾರ್ಯಕ್ರಮಗಳು (Structural Adjustment Programmes) ಶೋಷಿತರ, ಮೂಲ ನಿವಾಸಿಗಳ ಮಾನವ ಹಕ್ಕುಗಳನ್ನು ವಂಚಿಸುತ್ತಿರುವ ಅಪಾಯವೇ ನಮ್ಮ ಮುಂದಿರುವಾಗ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಸಂಶೋಧನೆಗಳು ದೇಸಿ ಸಂಸ್ಕೃತಿಗಳ ಸಮಕಾಲೀನ ವಿಮೋಚನಾ ಮಾದರಿಗಳನ್ನು ಅವುಗಳ ವಿಶಿಷ್ಟತೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿ, ಮಾನವ ಹಕ್ಕುಗಳ ರಕ್ಷಣೆಯಲ್ಲಿ ತಮ್ಮ ಪಾಲಿನ ಕೆಲಸ ಮಾಡಬೇಕಾಗಿದೆ. ಸಾಂಸ್ಕೃತಿಕ ದಬ್ಬಾಳಿಕೆಗೆ (Cultural Oppression) ಒಳಗಾಗಿರುವ ಜನಸಮುದಾಯಗಳ ಸಾಂಸ್ಕೃತಿಕ ಸಂಘರ್ಷಗಳಿಗೆ ಮಾನ್ಯತೆ ಕೊಡುವುದರ ಮೂಲಕ ಅವು ನಡೆಯುತ್ತಿರುವ 'ಪಥ' ಗಳಲ್ಲಿ ಬೆಳಕು ಚೆಲ್ಲಬೇಕಾಗಿದೆ. ಹಾಗೆ ಮಾಡದೇ ಧರ್ಮ ಆಧಾರಿತ ಚಿಂತನೆ, ವರ್ಗ ಆಧಾರಿತ ಚಿಂತನೆಗಳನ್ನು ದಲಿತರ ಸಾಂಸ್ಕೃತಿಕ ಸಂದಿಗ್ಧತೆಗಳೊಟ್ಟಿಗೆ ಮಿಶ್ರಣ ಮಾಡಿದರೆ 'ಅತಂತ್ರತೆ' ಅನುಭವಿಸುತ್ತವೆ. ಆ ಮೂಲಕ ಅಭದ್ರತೆಯನ್ನು ಗ್ರಹಿಸುವಂತೆ ಮಾಡಿ ಧಾರ್ಮಿಕ ಶಕ್ತಿಗಳೊಂದಿಗೆ (ಯಜಮಾನಿ ಸಾಂಸ್ಕೃತಿಕ ಶಕ್ತಿಗಳು) ಘರ್ಷಣೆಗೆ ಇಳಿದು ನಿಜವಾದ ಅಭಿವೃದ್ಧಿಯನ್ನು ಮರೆಯುವ ಹಾಗೆ ಮಾಡಿದಂತಾಗುತ್ತದೆ.

ನಮ್ಮ ದೇಶದಲ್ಲಿ ಈ ಹೊತ್ತಿನ ವಿಪರ್ಯಾಯವೆಂದರೆ, ದಲಿತರು ತಮ್ಮ ಅಭಿವೃದ್ಧಿಯನ್ನು ಸಾಂವಿಧಾನಿಕ ಮಾರ್ಗಗಳಿಂದ ಸಾಧಿಸಿಕೊಳ್ಳುವುದನ್ನು ಸಹಿಸದೇ ವಿನಾಕಾರಣ ಅವರ ಸಾಂಸ್ಕೃತಿಕ ಆವರಣಕ್ಕೆ, ಅವರು ನಂಬಿಕೊಂಡು ಹೊರಟಿರುವ ಸಿದ್ಧಾಂತಗಳಿಗೆ ಕೊಳ್ಳಿ ಇಡುವ ಕಾರ್ಯಗಳೇ ಹೆಚ್ಚಾಗಿ ನಡೆದಿವೆ. ಇದಕ್ಕೆ ತಾಜಾ ಉದಾಹರಣೆಯೆಂದರೆ, ಇತ್ತೀಚಿಗೆ ಮಾಜಿಮಂತ್ರಿಗಳಾಗಿದ್ದ ಅರುಣ ಶೌರಿಯವರ 'ವರ್‌ಷಿಪ್ಪಿಂಗ್ ಫಾಲ್ಸ್‌ಗಾಡ್ಸ್' ಕೃತಿಯಲ್ಲಿನ ಚಾರಿತ್ರಿಕ ವಿವರಣೆಗಳು. ಅವರು ಅಂಬೇಡ್ಕರರವರ 'ಮತಾಂತರ' ಕುರಿತು ಮಂಡಿಸಿದ ವಿಚಾರಗಳನ್ನು, ದಲಿತ ವಿಮೋಚನಾ ಮಾದರಿಗಳನ್ನು ಸರಳೀಕರಿಸಿ ಬೌದ್ಧಿಕ ಜಗತ್ತಿಗೆ ತಪ್ಪು ಗ್ರಹಿಕೆಗಳನ್ನು ಬಿತ್ತಲು ಪ್ರಯತ್ನಿಸಿದ ರೀತಿಯನ್ನು ನಾವು ಈ ದೇಶದ ಸಮಗ್ರತೆಯ ಹಿತದೃಷ್ಟಿಯಿಂದ ವಿಶ್ಲೇಷಣೆ ಮಾಡುವುದು ಅಗತ್ಯವೆನಿಸುತ್ತದೆ. ದಲಿತರು ಪ್ರತಿ ಜನಗಣತಿಯ ಅಂಕಿ ಅಂಶಗಳೇ ಹೇಳುವಂತೆ ಬೌದ್ಧಧರ್ಮಕ್ಕೆ ಆಕರ್ಷಿತರಾಗುತ್ತಿದ್ದಾರೆ. ತಮಗೆ ಕನಿಷ್ಟ ಮಾನವ ಹಕ್ಕುಗಳನ್ನು ದಕ್ಕಿಸಿಕೊಟ್ಟ ತಮ್ಮ 'ವಿಮೋಚಕ', ಅಂಬೇಡ್ಕರ್‌ರವರು ಪ್ರತಿಪಾದಿಸಿದಂತೆ ಬೌದ್ಧಧರ್ಮಕ್ಕೆ ಲಕ್ಷ ಲಕ್ಷ ಸಂಖ್ಯೆಯಲ್ಲಿ ಮತಾಂತರ ಹೊಂದುತ್ತಿದ್ದಾರೆ. ಯಥಾಸ್ಥಿತಿ ವಾದಿಗಳಾದ ಶೌರಿಯಂತವರಿಗೆ ಇದು ಸಹನೀಯವಾಗಿಲ್ಲದ್ದನ್ನು ಅವರ ವಿಚಾರಗಳು ಬಿಂಬಿಸುತ್ತವೆ. ಶೌರಿ ಬರೆಯುತ್ತಾರೆ,

'ಅಂಬೇಡ್ಕರ್ ಅಪ್ಪಿಕೊಂಡ ಧರ್ಮ ಬುದ್ಧನ ಧರ್ಮ ಅಲ್ಲವೇ ಅಲ್ಲ; ಧರ್ಮವೊಂದರ ಮಹತ್ತನ್ನು ಅರಿತುಕೊಳ್ಳುವ ಅಂತಃಸಾಕ್ಷಿ ಅಂಬೇಡ್ಕರ್‌ಗೆ ಇರಲಿಲ್ಲ; ''ಜೀವನದ ಅಂತಿಮ ಕಾಲದಲ್ಲಿ'' ಅಂಬೇಡ್ಕರ್ ಧರ್ಮಾಂತರದ ಬಗ್ಗೆ ಚಿಂತಿಸಿದರು. ಪೂರ್ವಾಗ್ರಹ ಹಾಗೂ ಸೇಡಿನ ಭಾವನೆಗಳಿಂದ ಅಂಬೇಡ್ಕರ್ ಮುಕ್ತರಾಗಲೇ ಇಲ್ಲ. ಧರ್ಮಾಂತರದ ಹೆಸರಲ್ಲಿ ಅವರು ಬರೀ ರಾಜಕೀಯ ಮಾಡಿದರು.'[35] ಎಂದು ಹೇಳುತ್ತಾರೆ. 13 ಅಕ್ಟೋಬರ್ 1935 ರಂದು ನಾಸಿಕ್‌ನ ಯವೋಲಾದಲ್ಲಿ ನಡೆದ ದಲಿತ ವರ್ಗಗಳ ಸಮಾವೇಶದಲ್ಲಿ 'ನಾನು ಹಿಂದುವಾಗಿ ಹುಟ್ಟಿದ್ದೇನೆ, ಖಂಡಿತವಾಗಿ ನಾನು ಹಿಂದೂವಾಗಿ ಸಾಯಲಾರೆ'[36] ಎಂದು ಹೇಳಿದ ದಿನದಿಂದ 14, ಅಕ್ಟೋಬರ್ 1956 ರಲ್ಲಿ ನಾಗಪೂರದಲ್ಲಿ ಬೌದ್ಧದೀಕ್ಷೆ ಪಡೆಯುವವರೆಗೆ ಸತತ ಎರಡು ದಶಕಗಳ ಕಾಲ ಅಂಬೇಡ್ಕರ್‌ರವರು ಬೌದ್ಧ ಧರ್ಮದ ಕುರಿತು ನಡೆಸಿದ ಚಿಂತನೆ, ಬೌದ್ಧಿಕ ಅನ್ವೇಷಣೆಗಳು, ಬೌದ್ಧ ಬಿಕ್ಕುಗಳೊಂದಿಗಿನ ಸಂಬಂಧ, ಬೌದ್ಧ ಚಿಂತಕರ ಭೇಟಿ, ಬೌದ್ಧ ವಿಹಾರಗಳಿಗೆ ಭೇಟಿಗಳು, ಮತಾಂತರದ ಬಗ್ಗೆ ಚರ್ಚೆ, ಬೇರೆ ಬೇರೆ ಧರ್ಮಗುರುಗಳೊಟ್ಟಿಗಿನ ಪ್ರತಿಕ್ರಿಯೆಗಳು, ಆಮಂತ್ರಣಗಳು ಬೌದ್ಧಬಿಕ್ಕುಗಳು ಅಂಬೇಡ್ಕರ್‌ರವರಿಗೆ ಬೌದ್ಧಧರ್ಮ ಸ್ವೀಕರಿಸುವಂತೆ ಬರೆದ ಪತ್ರಗಳು[37] ಈ ಬಗ್ಗೆ ಕನಿಷ್ಟ ಮಟ್ಟದ ಜ್ಞಾನವಿದ್ದರೆ ಅರುಣ ಶೌರಿಯವರು ಇಂತಹ ತೀರ್ಮಾನಕ್ಕೆ ಬರುತ್ತಿರಲಿಲ್ಲವೆಂದು ಕಾಣುತ್ತದೆ. ಸಾವಿರಾರು ಪುಟಗಳ ಬೌದ್ಧ ಸಾಹಿತ್ಯವನ್ನು ತಾತ್ವಿಕವಾಗಿ (Theoratical) ಮತ್ತು ಆಚರಣಾತ್ಮಕವಾಗಿ (Ritualistic) ಎರಡೂ ಮಗ್ಗಲುಗಳಲ್ಲಿ ಅಂಬೇಡ್ಕರ್‌ರವರು ಬೌದ್ಧಧರ್ಮದ ಸಾಂಸ್ಕೃತಿಕ ಹಂದರ ನಿರ್ಮಿಸಿದರು. ಒಂದು ಅರ್ಥದಲ್ಲಿ ಅವರ ಮಹತ್ವದ ಕೃತಿಯಾದ 'ಬುದ್ಧ ಮತ್ತು ಅವನ ಧರ್ಮ'[38] ಬೌದ್ಧಿಕ ಜಗತ್ತಿಗೆ (Intellectual World) ನೀಡಿದ ತಾತ್ವಿಕ ಕೊಡುಗೆಯಾದರೆ ತಮ್ಮೊಂದಿಗೆ ಬೌದ್ಧ ಧರ್ಮಕ್ಕೆ ಮತಾಂತರಗೊಳ್ಳುವ ಬೌದ್ಧ ಅನುಯಾಯಿಗಳಿಗೆ ಅನುಕೂಲವಾಗಲೆಂದು ಪಾಲಿ ಭಾಷೆಯಿಂದ ಭಾಷಾಂತರಿಸಿದ 'ಬೌದ್ಧ ಪೂಜಾ ಪಾಠ'[39] ಸಾಂಕೇತಿಕವಾಗಿ ಬೌದ್ಧ ಅನುಯಾಯಿಗಳಿಗೆ ಆಚರಣಾತ್ಮಕ ಆಯಾಮಕ್ಕೆ (Ritualistic Dimension) ನೀಡಿದ ಕೊಡುಗೆ ಎಂದು ಪರಿಗಣಿಸಬಹುದಾಗಿದೆ. ಹೀಗೆ ಅಂಬೇಡ್ಕರರವರು ಸಾಗಿದ ಬೌದ್ಧ ಪಥದ ದರ್ಶನ

ಅರುಣ ಶೌರಿಯವರಿಗಾಗಿದ್ದರೆ, ''ಅಂಬೇಡ್ಕರ್‌ರವರು ಅಂತಿಮ ಕಾಲದಲ್ಲಿ ಮತಾಂತರ ಬಗ್ಗೆ ಚಿಂತಿಸಿದರು'' ಎಂದು ಅವರು ತೀರ್ಮಾನಕ್ಕೆ ಬರುತ್ತಿರಲಿಲ್ಲ.

ಅರುಣ ಶೌರಿಯವರಾದಿಯಾಗಿ, ಹಿಂದೂ ಧಾರ್ಮಿಕ ಶಕ್ತಿಗಳು, ಸಂಘ ಸಂಸ್ಥೆಗಳ ದಲಿತರ ಸಮಸ್ಯೆಗಳ ಕುರಿತು ಇನ್ನೂ ಅವರನ್ನು ಕಾಡುತ್ತಿರುವ ಅಸ್ಪೃಶ್ಯತೆಯ ಸಮಸ್ಯೆಯ ಕುರಿತು ಅಂತಹ ಸಂಘ ಸಂಸ್ಥೆಗಳು ಪ್ರಾರಂಭವಾಗಿ ಏಳೆಂಟು ದಶಕಗಳೂ ಕಳೆದರೂ ಯಾವುದೇ ಸ್ಪಂದನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿಲ್ಲದಿರುವುದನ್ನು ಕಾಣತ್ತೇವೆ. ಒಳಗಿನ ಸುಧಾರಣೆಗೂ (Internal Correction) ಆ ಶಕ್ತಿಗಳು ಗಮನ ಹರಿಸಿಲ್ಲ, ಹೊರಗಿನ ಸುಧಾರಣೆಗೂ ಯಾವುದೇ ನಿರ್ಧಿಷ್ಟ ಕಾರ್ಯಕ್ರಮಗಳಿಲ್ಲ. ಅದರ ಬದಲಾಗಿ ದಲಿತರು ಸ್ವಾಭಿಮಾನಿಗಳಾಗದಂತೆ, ಸ್ವಾಯತ್ತತೆ ಸಾಧಿಸದಂತೆ ತಮ್ಮದೇ ಆದ ಪರ್ಯಾಯ ಸಾಂಸ್ಕೃತಿಕ ಬದುಕು ರೂಪಿಸಿಕೊಳ್ಳದಂತೆ, ಧಾರ್ಮಿಕ, ಸಾಂಸ್ಕೃತಿಕ ಸ್ವಾವಲಂಬನೆ (religious and cultural self-reliance) ಸಾಧಿಸದಂತೆ ತಡೆಯೊಡ್ಡುವ ಪ್ರಯತ್ನಗಳನ್ನೇ ಮಾಡುತ್ತಿವೆ. ಈ ನಿಲುವು ಹಿಂದೂ ಸಮಾಜಕ್ಕೇನೆ ಅಪಾಯ ತಂದೊಡ್ಡುತ್ತದೆ ಎಂಬುದನ್ನು ಆ ಶಕ್ತಿಗಳು ಮರೆತಂತಿದೆ. ಈ ಕುರಿತು ಡಾ. ಅಂಬೇಡ್ಕರ್‌ರವರು ಬಹಳ ಹಿಂದೆಯೇ ಎಚ್ಚರಿಕೆ ನೀಡಿದ್ದನ್ನು ಇವರು ಗಮನಿಸಿದಂತಿಲ್ಲ. ರಾನಡೆ, ಗಾಂಧಿ ಮತ್ತು ಜಿನ್ನಾರವರನ್ನುದ್ದೇಶಿಸಿ ಬರೆದ ಲೇಖನದಲ್ಲಿ ಡಾ. ಅಂಬೇಡ್ಕರ್‌ರವರು 'ಹಿಂದೂ ಎನ್ನಿಸಿಕೊಂಡವನು ತನ್ನ ಸಂಧಿಗ್ಧತೆಗಳಲ್ಲಿಯೂ 'ಜಾತಿ' ತನಗೆ ಸಮಸ್ಯೆಯಾಗಿದೆ ಎಂದು ಬಾವಿಸುವುದೇ ಇಲ್ಲ. 'ಜಾತಿ' ಒಂದು ಅತ್ಯಂತ 'ಹೀನವಾದ' 'ಅನಾಗರಿಕ' ರೂಪವಾಗಿದೆ. ಅಷ್ಟೇ ಅಲ್ಲ, ಅದು ಹಿಂದೂ ಸಮಾಜದ ಸೋಲಿಗೆ ಕಾರಣವಾಗಿ ಹಿಂದೂ ಸಮಾಜವನ್ನೇ ನಾಶಮಾಡುತ್ತದೆ. ಅಸ್ಪೃಶ್ಯರನ್ನು ಅವರ ನೆರಳೂ ಮೈಲಿಗೆ ಎಂಬ ಜನರು ಮತ್ತು ಕಣ್ಣೆತ್ತಿ ನೋಡಲು ಅಸಹ್ಯ ಪಡುವ ಜನರನ್ನು ಬೇರೆ ಯಾವ ಸಾಮಾಜಿಕ ವ್ಯವಸ್ಥೆಯಲ್ಲಿ ಕಾಣಲು ಸಾಧ್ಯ ? ಹಿಂದೂ ಸಾಮಾಜಿಕ, ಧಾರ್ಮಿಕ ವ್ಯವಸ್ಥೆಯಲ್ಲಿ ಸಾಮಾಜಿಕ ಉಪಯುಕತ್ತೆ (social utility) ಮತ್ತು ಸಾಮಾಜಿಕ ನ್ಯಾಯಕ್ಕೆ (Social justice) ಸ್ಥಾನವೇ ಇಲ್ಲ.'[40] ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಇಂತಹ ಎಚ್ಚರಿಕೆಯನ್ನು ಆ ಶಕ್ತಿಗಳು ಗಂಭೀರವಾಗಿ ಸ್ವೀಕರಿಸಿಲ್ಲವೆಂಬುದು ದೃಢಪಟ್ಟ ಸತ್ಯವಾಗಿದೆ. ಯಾಕೆಂದರೆ ಹಿಂದೂ ಸಂಘ ಸಂಸ್ಥೆಗಳಲ್ಲಿ ಈ ಹಿಂದೆ ಸೇರಿಕೊಂಡಿದ್ದ ದಲಿತ ಹಿಂದುಳಿದ ನಾಯಕರು, ಕಾರ್ಯಕರ್ತರು ಅಲ್ಲಿ 'ಆಂತರಿಕ ಪ್ರಜಾಪ್ರಭುತ್ವ' ದ ಅನುಭವ ಕಾಣದೆ, ಸಮಾನತೆಯ, ಪಾರದರ್ಶಕ ನಿಲುವು ಕಾಣದೆ ಬ್ರಮನಿರಸನ ಹೊಂದಿ ಹೊರಗೆ ಬರುತ್ತಿರುವುದನ್ನು ಗಮನಿಸಿದರೆ ಇತ್ತೀಚಿನವರೆಗೂ ಆ 'ಶಕ್ತಿಗಳ' ಕಾರ್ಯಕ್ರಮಗಳೇನು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಸಮಸ್ಯೆ ಇರುವದು 'ಹಿಂದೂ ಧರ್ಮ' ದ ರಕ್ಷಣೆಯ ಗುತ್ತಿಗೆ ಹಿಡಿದವರಂತೆ ಕಂಡು ಬರುತ್ತಿರುವ ಈ 'ಪ್ಯಾಸಿಸ್ಟ ಶಕ್ತಿಗಳು' ದಲಿತರ ಅಭಿವೃದ್ದಿಗೆ ಸ್ಪಂದಿಸುವುದಿರಲಿ, ಶತಮಾನಗಳಿಂದ ಶೋಷಿತರಾಗಿ ಸ್ವಾತಂತ್ರ್ಯ ನಂತರದ ಇತ್ತೀಚಿನ ವರ್ಷಗಳಲ್ಲಿ ಕನಿಷ್ಟ ಪಕ್ಷ ದಲಿತರು ಏನು ಹೇಳುತ್ತಿದ್ದಾರೆ ಎಂಬುದನ್ನು ಕೇಳಿಸಿಕೊಳ್ಳದ ತೀವ್ರ 'ಕೋಮುವಾದಿ ಬಿಕ್ಕಟ್ಟಿಗೆ' (Communal Deadlock) ಸಿಕ್ಕಿ ಹಾಕಿಕೊಂಡಿದ್ದಾರೆ. ಇದೊಂದು ರೀತಿ ''ಜಾಣ ಕಿವುಡು'' ಎಂದು ತಿಳಿದುಕೊಂಡರೂ ಅದು 'ಸೀಸದಂತೆ' ಅವರ ಕಿವಿ ಪ್ರವೇಶಿಸಿ ಕ್ರಮೇಣ ಅವರ ಶ್ರವಣ ಶಕ್ತಿಯನ್ನೇ ನಾಶಮಾಡಿ, ಅಂತಿಮವಾಗಿ ಅವರನ್ನೇ ನುಂಗಿ ಹಾಕುತ್ತದೆ ಎಂಬುದನ್ನು ಅರಿತು ಕೊಳ್ಳುತ್ತಿಲ್ಲ. ಇನ್ನೂ ''ಹುಸಿ ಪಾವಿತ್ರ್ಯ'' ದ ''ಜನಾಂಗ ಗರ್ವ'' ದ ಕೋಮುದ್ವೇಷದ ಬೆಂಕಿಯುಂಡೆಗಳನ್ನೇ ಉಗುಳುತ್ತ ಒಟ್ಟಾರೆ ಇಂಡಿಯಾವನ್ನೇ ಕಲುಷಿತಗೊಳಿಸುವ ಹುನ್ನಾರಗಳನ್ನು ಅರ್ಥ ಮಾಡಿಕೊಳ್ಳುವುದು ಈ ಅಧ್ಯಯನದ ತಾತ್ವಿಕ ನೆಲೆಗಟ್ಟುಗಳಲ್ಲಿನ

ಒಂದು ಮಹತ್ವದ ಆಯಾಮವಾಗಿದೆ. ದಲಿತರು ಇಂದು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಬೌದ್ಧ ಧರ್ಮಕ್ಕೆ ಮತಾಂತರಗೊಂಡು ಅಲ್ಲಲ್ಲಿ ವಿಚಾರ ಸಂಕಿರಣ, ಬೌದ್ಧ ವಿಹಾರ, ಶೈಕ್ಷಣಿಕ, ಸಾಂಸ್ಕೃತಿಕ ಪರಿಕರಗಳನ್ನು ನಿರ್ಮಾಣ ಮಾಡುತ್ತಿರುವ ಪ್ರಕ್ರಿಯೆ 'ಹಿಂದೂ ಶಕ್ತಿ' ಗಳಿಗೆ ಸಹನೆ ಇಲ್ಲದಂತೆ ಮಾಡಿದೆ. ಈ ಕುರಿತು ಒಳ ಕಾರ್ಯಾಚರಣೆಗಳಿಗೆ'[41] ಯೋಚಿಸುತ್ತಾರೆಯೇ ಹೊರತಾಗಿ ನಮ್ಮ ಪ್ರಜಾಪ್ರಭುತ್ವ ಮುಕ್ತ ಮಾರುಕಟ್ಟೆಯ ಸವಾಲುಗಳು, ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಭಾರತದ ಪ್ರತಿಷ್ಟೆ (Image) ಗಳ ಬಗ್ಗೆ ಒಂದಿನಿತೂ ಕಾಳಜಿ ಇಲ್ಲದಂತೆ ವರ್ತಿಸುತ್ತಿವೆ. ಇವರ ಕಾರ್ಯಕ್ರಮಗಳಲ್ಲಾಗಲಿ, ನಡವಳಿಕೆಗಳಲ್ಲಾಗಲಿ ಯಾವುದೇ ಬದಲಾವಣೆಗಳು ಕಾಣುತ್ತಿಲ್ಲ. ಮಹಾರಾಷ್ಟ್ರದಲ್ಲಿ ಬೌದ್ಧಮತಕ್ಕೆ ಮತಾಂತರಗೊಂಡ ಬೌದ್ಧ ಅನುಯಾಯಿಗಳ ಮೇಲೆ, ಹಲ್ಲೆಗಳನ್ನು ನಡೆಸಿದ ಉದಾಹರಣೆಗಳುಂಟು'[42]. ಇತ್ತೀಚಿನ ವರ್ಷಗಳಲ್ಲಿ ಈ ಹಿಂದೂ ಫ್ಯಾಸಿಸ್ಟ್ ಶಕ್ತಿಗಳು ಧಾರ್ಮಿಕ ಭಯೋತ್ಪಾದನೆಗೂ (Religious Terrorism) ಮುಂದಾಗಿ ಅಲ್ಪ ಸಂಖ್ಯಾತರಲ್ಲಿ ದಲಿತ, ಬುಡಕಟ್ಟು ಜನಾಂಗಗಳಲ್ಲಿ ಭಯ ಹುಟ್ಟಿಸುವ ಪ್ರಯತ್ನಗಳನ್ನು ಮಾಡಿರುವುದನ್ನು ಗಮನಿಸಲಾಗಿದೆ. ಮತಾಂತರಗಳನ್ನು ಹಿಂಸಾತ್ಮಕ ನೆಲೆಗಳಿಂದ ನಿಯಂತ್ರಿಸಲು ಸಾಧ್ಯವಿಲ್ಲ ಅಸಮಾನತೆಯೇ ಆಧಾರವಾಗಿರುವ ತಮ್ಮ ವ್ಯವಸ್ಥೆಯಲ್ಲಿ ಬದಲಾವಣೆ ಮಾಡಿಕೊಳ್ಳಬೇಕೆಂಬ ಸತ್ಯದರ್ಶನವಿಲ್ಲದೇ ಈ ಫ್ಯಾಸಿಸ್ಟ್ ಶಕ್ತಿಗಳು ಹಿಂಸಾಕೃತ್ಯಗಳಲ್ಲಿ ತೊಡಗಿವೆ. 'ಗ್ರಹಾಂಸ್ಟೇನ್' ರಂತಹ ಮಿಷನರಿಗಳನ್ನು ಜೀವಂತ ಸುಡುವ ಅಮಾನುಷ ಕೃತ್ಯಗಳನ್ನು ಎಸಗಿ, ಬೆದರಿಕೆಯೊಡ್ಡುವ ವಿಚಿದ್ರಕಾರಿ ಕ್ರಿಯೆಗಳಲ್ಲಿ ತೊಡಗುವ ಬದಲಾಗಿ ದಲಿತರ, ಬುಡಕಟ್ಟು ಜನರ ಅಭಿವೃದ್ಧಿಗೆ, ಅವರ ಕಷ್ಟಗಳಿಗೆ ಸ್ಪಂದಿಸುವ ರಚನಾತ್ಮಕ ಕಾರ್ಯಕ್ರಮಗಳು ಇವರ 'ಅಜೆಂಡಾ' ದಲ್ಲಿ ಇಲ್ಲದಿರುವುದನ್ನು ಗಮನಿಸಬಹುದಾಗಿದೆ. 'ಪ್ರಧಾನ ಸಂಸ್ಕೃತಿಯ' ಈ ಕ್ರೂರತೆಗಳಿಗೆ ಅಂತ್ಯ ಹಾಡಲು ಮಾನವ ಹಕ್ಕುಗಳ ಹೊಸ ಅಧ್ಯಾಯ ತೆರೆಯುವಂತಹ ಅವಶ್ಯಕತೆ ಇದೆಯೆಂದು ಡಾ. ಸುಭಾಷ ಭರಣಿ ಅಭಿಪ್ರಾಯ ಪಡುತ್ತಾರೆ. ಅವರು ತಮ್ಮ ಸಂಶೋಧನೆಯಲ್ಲಿ 'ಹಿಂದೆಂದಿಗಿಂತಲೂ ಹೆಚ್ಚಿನ ಕ್ರೂರ, ಅಪಾಯಕಾರಿ ಹಾಗೂ ನಾಜೂಕಿನ ಸ್ವರೂಪಗಳಲ್ಲಿ ಮುಂದುರೆಯುತ್ತಲೇ ಇರುವ ಪ್ರಧಾನ ಸಂಸ್ಕೃತಿಯ ಒಳ ಹುನ್ನಾರಗಳ ಜಾಗತಿಕ ದಮನಕಾರಿ ನೀತಿಗಳು ಮಾನವ ಹಕ್ಕುಗಳ ಹೊಸ ಅಧ್ಯಾಯವನ್ನೇ ತೆರೆಯುವಂತಹ ಒತ್ತಡವನ್ನೇ ಹೇರಿವೆ ಎಂಬುದೇ ಪ್ರಥಮ ಮತ್ತು ಆದಿಮ ಸಂಸ್ಕೃತಿಗಳ ನಡುವೆ ತೀವ್ರಗೊಳ್ಳುತ್ತಿರುವ ಸಂಘರ್ಷಕ್ಕೆ ಅತ್ಯುತ್ತಮ ಉದಾಹರಣೆಯಾಗಿದೆ, ಜೀವಂತ ನಿದರ್ಶನವಾಗಿದೆ'[43] ಎಂದು ಹೇಳುತ್ತಾ ಮಾನವ ಹಕ್ಕುಗಳ ಚಳುವಳಿಗಳು ಈ ಆಯಾಮವನ್ನು ಗಂಭೀರವಾಗಿ ಪರಿಗಣಿಸಬೇಕೆಂಬ ಅಭಿಪ್ರಾಯ ಮಂಡಿಸಿದ್ದಾರೆ.

ದಲಿತ-ಬಹುಜನರ ಅಭಿವೃದ್ಧಿಯ ಬಗ್ಗೆ ಅಡ್ಡಿ ಆತಂಕಗಳ ಹುನ್ನಾರಗಳನ್ನು ಹೆಣೆಯುವ ಬದಲಾಗಿ, ಒಟ್ಟಾರೆ ಏಷ್ಯಾದ ಪ್ರಮುಖ ಧರ್ಮಗಳಿಗೆ ಎರಗುತ್ತಿರುವ ಅಪಾಯಗಳನ್ನು ಹಿಂದೂ ಫ್ಯಾಸಿಸ್ಟ್ ಶಕ್ತಿಗಳು ಮರೆಯುತ್ತಿರುವುದರ ಬಗ್ಗೆ ಕಳವಳ ಕೂಡ ವ್ಯಕ್ತವಾಗಿದೆ. ಇತ್ತೀಚಿಗೆ ಏಷ್ಯಾದ ಪ್ರಮುಖ ಧರ್ಮಗಳಾದ ಬೌದ್ಧ ಧರ್ಮ, ಹಿಂದೂ ಧರ್ಮ, ಮತ್ತು ಇಸ್ಲಾಂ ಧರ್ಮಗಳಿಗೆ ಸವಾಲೊಡ್ಡುವಂತೆ ಮಾಡಿದ ಕ್ರೈಸ್ತ ಪಾದ್ರಿಗಳ ಸಾಮಾನ್ಯ ಸಭೆಯ ವರದಿ[@] ಈ ಶಕ್ತಿಗಳ ಗಮನಕ್ಕೆ ಬಂದಿಲ್ಲವೆಂಬುದು ತೋರುವುದನ್ನು ದಲಿತ ಬಹುಜನ ಬುದ್ದಿಜೀವಿಗಳಾದ ಡಾ. ಕಾಂಚ ಐಲಯ್ಯ (2000) ನವರು ಈ ವರದಿಯಲ್ಲಿನ ಎರಡನೇ ಪೋಪ್‌ಜಾನ್ ಪಾಲ್ ಅವರು ಇಂಡಿಯಾಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಮಾಡಿದ ಐತಿಹಾಸಿಕ ಭಾಷಣದಲ್ಲಿ ಹೇಳಿದ

@ "Ecclesia in Asia" - adoption of the religious document.

ಧಾರ್ಮಿಕ ಒಕ್ಕಣೆಯನ್ನು ಉಲ್ಲೇಖಿಸುತ್ತಾರೆ. ಪೋಪರು ಮಾತನಾಡುತ್ತಾ 'ಪ್ರಥಮ ಸಹಸ್ರಮಾನದಲ್ಲಿ ಪ್ರಪ್ರಥಮವಾಗಿ 'ಶಿಲುಬೆ' ಯುರೋಪಿನ ನೆಲದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿತು. ಎರಡನೇ ಸಹಸ್ರಮಾನದಲ್ಲಿ ಅಮೇರಿಕಾ ಮತ್ತು ಆಫ್ರಿಕಾದಲ್ಲಿ, ಈಗ ನಾವು ಪ್ರಾರ್ಥಿಸುತ್ತೇವೆ. ಮೂರನೇ ಸಹಸ್ರಮಾನದಲ್ಲಿ ಏಷ್ಯಾದಲ್ಲಿ 'ನಂಬಿಕೆಯ ಸುಗ್ಗಿ' ಬೆಳೆಯಬೇಕಾಗಿದೆ'[44] ಡಾ. ಕಾಂಚ ಐಲಯ್ಯನವರು ಈ ಐತಿಹಾಸಿಕ ಕ್ರೈಸ್ತ ಧಾರ್ಮಿಕ ಒಕ್ಕಣೆಯ ಹಿಂದೆ ಒಂದು ದೊಡ್ಡ ಐರೋಪ್ಯ ರಾಷ್ಟ್ರಗಳ ಪಡೆಯೇ ಇದೆ ಎಂದು ಅಭಿಪ್ರಾಯ ಪಡುತ್ತಾರೆ. 'ಆ ಐರೋಪ್ಯ ರಾಷ್ಟ್ರಗಳು ಚರ್ಚನ ಆದೇಶಗಳನ್ನು ಚಾಚೂ ತಪ್ಪದೇ ಪರಿಪಾಲಿಸುತ್ತವೆ ಎಂಬುದನ್ನು ಮರೆಯುವಂತಿಲ್ಲ. ಹೀಗೆ ಐರೋಪ್ಯ ಒಕ್ಕೂಟ ಕ್ಯಾಥೋಲಿಕ್‌ರ ಪ್ರಭಾವದಲ್ಲಿರುವಾಗಲೇ ಅದು ಪ್ರೊಟೆಸ್ಟಂಟ್ ಪ್ರಭಾವ ಇರುವ ಅಮೇರಿಕಾ ಸಂಯುಕ್ತ ಸಂಸ್ಥಾನವನ್ನು ನಡೆಸಿಕೊಳ್ಳುವ ಚಿತ್ರಣ ನಮಗೆ ಸ್ಪಷ್ಟವಾಗುತ್ತದೆ. ಇತ್ತೀಚೆಗೆ ಕ್ರೈಸ್ತ ಮಿಷನರಿಗಳ ಮೇಲೆ ನಡೆದ ಹಲ್ಲೆಗಳ ಹಿನ್ನೆಲೆಯಲ್ಲಿ ಐರೋಪ್ಯ ಒಕ್ಕೂಟದ ಕ್ಯಾಥಲಿಕ್ ಶಕ್ತಿಗಳು ಪ್ರೊಟೆಸ್ಟಂಟ್ ಪ್ರಭಾವಿ ಅಮೇರಿಕಾದ ಶಕ್ತಿಗಳ ಒಂದಾಗಿ ಏಕರೂಪತೆಯ ಕ್ರೈಸ್ತ ಧರ್ಮ (Christianity as monolith) ದ ದೃಷ್ಟಿಕೋನ ಬಿಂಬಿಸಿವೆ. ಅದರೊಟ್ಟಿಗೆ ಇನ್ನು ಜಾತಿ ಆಧಾರಿತ ವಿಭಜನೆಗಳು ಸಾಮಾಜಿಕ ಘಟಕಗಳು, ಏಷ್ಯಾದಲ್ಲಿರುವುದನ್ನು ಅವಲೋಕನ ಮಾಡಿದ ಕ್ರೈಸ್ತಪಾದ್ರಿಗಳ ಒಕ್ಕೂಟ ಭಾರತದಲ್ಲಿ ಧಾರ್ಮಿಕ "ನಂಬುಗೆಯ ಸುಗ್ಗಿಯನ್ನು ಮಾಡೋಣ" (Reap the harvest of faith) ಎಂಬ ಒಕ್ಕಣೆಯನ್ನು ಪೋಪರ ಮುಖಾಂತರ ಹೇಳಿಸಿತು[45] ಎಂದು ದಾಖಲಿಸುತ್ತಾ, ಪ್ರಸ್ತುತ ಸನ್ನಿವೇಶದಲ್ಲಿ ಧರ್ಮನಾಶದ ಭಯವಿರುವ ಧಾರ್ಮಿಕ ಶಕ್ತಿಗಳು ಏಕೆ ಈ ಕಾರ್ಯಸೂಚಿಯನ್ನು ಅರ್ಥಮಾಡಿಕೊಳ್ಳುತ್ತಿಲ್ಲವೆಂದು ಹೇಳುತ್ತಾರೆ. ಗಾಂಧೀಜಿಯ ನಂತರ ಹಿಂದೂ ಧರ್ಮದಲ್ಲಿ ಸುಧಾರಣೆ ತರಲು ಯಾರೂ ಪ್ರಯತ್ನಿಸದೇ ಇರುವ ಬಗ್ಗೆ, 'ಹಿಂದೂ ಧರ್ಮ' ರಕ್ಷಣೆಗಾಗಿ, ಹಿಂದೂ ರಾಷ್ಟ್ರ ಪ್ರತಿಪಾದನೆಗಾಗಿ, 70-80 ವರ್ಷಗಳ ಹಿಂದೆಯೇ ಹುಟ್ಟಿಕೊಂಡ 'ಸಂಘ ಪರಿವಾರದ' ಶಕ್ತಿಗಳು ಇಲ್ಲಿನ ಜಾತಿ ಅಸಮಾನತೆ, ಹಲವಾರು ಸಾಂಸ್ಕೃತಿಕ ವೈರುಧ್ಯಗಳನ್ನು ಎದುರಿಸಲು ಯಾವುದೇ ನಿರ್ದಿಷ್ಟ ಕಾರ್ಯಸೂಚಿ ಹಾಕಿಕೊಳ್ಳದೇ ಇರುವ ಬಗ್ಗೆ ಆಶ್ಚರ್ಯ ವ್ಯಕ್ತಪಡಿಸುತ್ತಾರೆ. ಧಾರ್ಮಿಕ ಅಸಹಿಷ್ಣುತಾ ನೀತಿಯನ್ನೇ ಅನುಸರಿಸುತ್ತಾ "ಇಲ್ಲಿಯವರೆಗೆ ಭಾರತದಲ್ಲಿ ಜಾತಿ ಶ್ರೇಷ್ಠತೆಯ ಮಾನದಂಡಗಳಿಂದ ಒಡೆದು ಆಳುವ (Devide and Rule) ನೀತಿಯನ್ನು ಪಾಲಿಸುತ್ತಾ ದಿನೇ ದಿನೇ 'ಹಿಂದೂ ಫ್ಯಾಸಿಜಂ' ಕ್ರೌರ್ಯದ ಘಟ್ಟ ತಲುಪುವುದಕ್ಕೆ ಕಾರಣವಾಗಿದ್ದಾರೆ." ಆದರೆ ಹಿಂದೂ ಧರ್ಮದ ರಕ್ಷಕರು ತಿಳಿದಂತೆ ನಾಗರಿಕ ಸಮಾಜದಲ್ಲಿ ಧಾರ್ಮಿಕ ಫ್ಯಾಸಿಸಂ ಮತ್ತು ಸಂಸದೀಯ ಪ್ರಜಾಪ್ರಭುತ್ವ ಒಂದಕ್ಕೊಂದು ಕೂಡಿಕೊಂಡು ಹೋಗಲು ಸಾಧ್ಯವಿಲ್ಲ[46] ವೆಂದು ಹೇಳುತ್ತಾರೆ.

ಆದ್ದರಿಂದ ಸಾಂವಿಧಾನಿಕ ಆಶೋತ್ತರಗಳಂತೆ, ಸಂಸದೀಯ ಪ್ರಜಾಪ್ರಭುತ್ವದ ವಿಧಿ ವಿಧಾನಗಳ ಮೂಲಕ ತಮ್ಮಷ್ಟಕ್ಕೆ ತಾವೇ ಅಭಿವೃದ್ಧಿ ಹೊಂದುತ್ತಿರುವ, ಸಾಂಸ್ಕೃತಿಕ ದಬ್ಬಾಳಿಕೆಯಿಂದ ಶೋಷಿತರಾಗಿರುವ ಜನತೆ ಸಾಮಾಜಿಕ, ಆರ್ಥಿಕ, ವಿಮೋಚನಾ ಪಥವನ್ನು ಅನುಸರಿಸಿಕೊಂಡು ಹೋಗುತ್ತಿರುವ, ತಮಗೆ ಉಚಿತವೆನಿಸಿರುವ ಧಾರ್ಮಿಕ, ಆಧ್ಯಾತ್ಮಿಕ ಪಥವನ್ನು ಅನುಸರಿಸುತ್ತಿರುವ ದಲಿತರ ಬಗ್ಗೆ, ಬಹುಜನರ ಬಗ್ಗೆ ತಲೆಕೆಡಿಸಿಕೊಳ್ಳದೇ ತಮ್ಮ ಮನಸ್ಸನ್ನು ಪರಿಶೋಧಿಸಿಕೊಂಡು ಕ್ರೈಸ್ತಧರ್ಮದಂತೆ, ಬೌದ್ಧಧರ್ಮದಂತೆ ಹಿಂದೂ ಧರ್ಮವನ್ನು ವಿಶ್ವಮಾನ್ಯ ಮಾಡಲು ಪ್ರಯತ್ನಿಸಬೇಕೆಂದು ಹೇಳುತ್ತಾರೆ. ಇದರೊಟ್ಟಿಗೆ ದಲಿತ-ಬಹುಜನರು, ಹಿಂದುಳಿದ ಶೂದ್ರ ಸಮುದಾಯಗಳು ಶತಶತಮಾನಗಳಿಂದ ಅಕ್ಷರ ವಂಚಿತರಾಗಿ ಇದೀಗ ಅಕ್ಷರಲೋಕದಲ್ಲಿ ಪ್ರಕಟಿಸುತ್ತಿರುವ ಬೌದ್ಧಿಕ ಚರ್ಚೆಗಳನ್ನು, ಸಾಹಿತ್ಯವನ್ನು ಸವರ್ಣೀಯರೆನ್ನಿಸಿಕೊಂಡವರು ಮುಕ್ತ ಮನಸ್ಸಿನಿಂದ

ಅಧ್ಯಯನ ಮಾಡುವ, ಧನಾತ್ಮಕ ಅಂಶಗಳನ್ನು ಸ್ವೀಕರಿಸುವ ಮನಸ್ಸು ಅಭಿವೃದ್ಧಿಗೊಳಿಸಿಕೊಳ್ಳಲು ಡಾ. ಕಾಂಚ ಐಲಯ್ಯ ಕರೆ ನೀಡುತ್ತಾರೆ. ಕಾಂಚ ಐಲಯ್ಯ ತಾವು ಬರೆದ "ನಾನೇಕೆ ಹಿಂದೂವಲ್ಲ" (Why, I am not a Hindu) ಎಂಬ ಕೃತಿಯಲ್ಲಿ 'ಬ್ರಾಹ್ಮಣ, ಬನಿಯಾ ಮತ್ತು ನವಕ್ಷತ್ರೀಯ ಬುದ್ಧಿಜೀವಿಗಳಿಗೆ ನನ್ನ ವಿನಮ್ರ ಮನವಿಯೇನೆಂದರೆ : ಮೂರು ಸಾವಿರ ವರ್ಷಗಳವರೆಗೆ ನೀವು ಬೇರೆಯವರಿಗೆ, ದಲಿತ ಬಹುಜನರಿಗೆ, ಏನು ಕಲಿಸಬೇಕು? ಹೇಗೆ ಕಲಿಸಬೇಕು ಎಂಬುದನ್ನಷ್ಟೇ ಕಲಿತು ಕೊಂಡಿರುವಿರಿ. ಈಗ ನಿಮ್ಮ ಹಿತಾಸಕ್ತಿಗಳ ಹಿನ್ನೆಲೆಯಲ್ಲಿ ಹೇಳುತ್ತಿದ್ದೇನೆ. ಈ ದೇಶದ ಹಿತಾಸಕ್ತಿಗಳ ಹಿನ್ನೆಲೆಯಲ್ಲಿ ಹೇಳುತ್ತಿದ್ದೇನೆ. ಈಗ ನೀವು ನೀವು, ನಾವು ದಲಿತ ಬಹುಜನರು ಏನು ಹೇಳುತ್ತಿದ್ದೇವೆ ಎಂಬುದನ್ನು ಕೇಳಿಕೊಕೊಳ್ಳಲು ಕಲಿಯಿರಿ. ಯಾವ ಜನರು ಹೊಸ ಪ್ರಶ್ನೆಗಳನ್ನು ಕೇಳಿಸಿಕೊಳ್ಳಲು ತಿರಸ್ಕರಿಸುತ್ತಾರೋ, ಹೊಸ ಉತ್ತರಗಳನ್ನು ತಂದುಕೊಳ್ಳಲು ತಿರಸ್ಕರಿಸುತ್ತಾರೋ ಆ ಜನ ಪ್ರಗತಿ ಹೊಂದಲಾರರು. ಅಷ್ಟೇ ಅಲ್ಲ, ನಾಶ ಹೊಂದುತ್ತಾರೆ'[47] ಎಂದು ಹೇಳುತ್ತಾರೆ. ಅಂಬೇಡ್ಕರರವರು ಅಂದು ಕೊಟ್ಟ ಎಚ್ಚರಿಕೆಯನ್ನು ಇಂದಿಗೂ ದಲಿತ ಬಹುಜನ ಬುದ್ಧಿಜೀವಿಗಳು ನೆನಪಿಸುತ್ತಿರುವುದಕ್ಕೆ ಇದು ಸ್ಪಷ್ಟ ಉದಾಹರಣೆಯಾಗಿದೆ. ಆದ್ದರಿಂದ ಈ ದೇಶದ ಅಖಂಡತೆಯ ದೃಷ್ಟಿಯಿಂದ 'ಹಿಂದುತ್ವ ಶಕ್ತಿಗಳು' ಅವಾಸ್ತವ ಪರಿಕಲ್ಪನೆಗಳಾದ 'ಹಿಂದೂ ರಾಷ್ಟ್ರೀಯತೆ' ಗೆ ಹಿಂಸಾತ್ಮಕ ಸ್ವರೂಪ ಸೃಷ್ಟಿಸುವುದನ್ನು ಬಿಟ್ಟು ಇತರ ಸಂಸ್ಕೃತಿಗಳನ್ನು ಉದಯಿಸುತ್ತಿರುವ ಜ್ಞಾನಪ್ರಭೆಯನ್ನು ಸಹಿಸಿಕೊಳ್ಳುವುದು ಮುಖ್ಯವಾಗುತ್ತದೆ ಹಾಗೂ ಧಾರ್ಮಿಕ ಭಯೋತ್ಪಾದನೆ ಸೃಷ್ಟಿಸಿ, ಅಮಾನವೀಯ ಕೃತ್ಯಗಳನ್ನು ಎಸಗಿ ಅಂತರಾಷ್ಟ್ರೀಯ ಸಮುದಾಯದ ಮುಂದೆ ಭಾರತ ತಲೆತಗ್ಗಿಸುವುಕ್ಕೆ ಕಾರಣವಾಗುವುದರ ಬದಲಾಗಿ, ಈ ದೇಶದ ಅಸಂಖ್ಯಾತ ಶೋಷಿತರು ಮುಖ್ಯವಾಹಿನಿ ಬರುವಲ್ಲಿ, ಸಹಿಷ್ಣುತೆಯನ್ನಾದರೂ ಬೆಳೆಸಿಕೊಳ್ಳಬೇಕಾಗಿದೆ ಎಂಬ ಹಿನ್ನಲೆಯ ತಾತ್ವಿಕ ನೆಲೆಗಟ್ಟಿನ ಮೇಲೆ ಈ ಅಧ್ಯಯನ ಸಾಗುತ್ತದೆ.

'ಹಿಂದೂ ರಾಷ್ಟ್ರೀಯತೆ' ಯ ಪರಿಕಲ್ಪನೆ ಯಾವ ದೃಷ್ಟಿಯಿಂದಲೂ ಈ ದೇಶದಲ್ಲಿ ಒಳ್ಳೆಯದು ಮಾಡುವುದಿಲ್ಲ. ಯಾಕೆಂದರೆ ಈ ಪರಿಕಲ್ಪನೆಯನ್ನು ಒಪ್ಪದವರು ಸಹಜವಾಗಿಯೇ ತಮ್ಮ ಐಡೆಂಟಿಟಿಯ ಹುಡುಕಾಟಕ್ಕೆ ತೊಡಗುತ್ತಾರೆ. ದಲಿತರು 'ದಲಿತಸ್ಥಾನ' ಕೇಳಬಹುದು, ಸಿಖ್ಖರು ಮತ್ತೆ ಖಲಿಸ್ಥಾನಕ್ಕೆ ಒತ್ತಾಯಿಸಬಹುದು, ಮುಸ್ಲಿಂರು ಇನ್ನೊಂದು ಪಾಕಿಸ್ತಾನಕ್ಕೆ ಒತ್ತಾಯಿಸಬಹುದು. ಆದ್ದರಿಂದ ಅಂಬೇಡ್ಕರ್‌ರವರು ಪ್ರತಿಪಾದಿಸಿದ 'ಬೌದ್ಧ ರಾಷ್ಟ್ರೀಯತೆಯ' ಪರಿಕಲ್ಪನೆಯನ್ನು ಪ್ರಸ್ತುತ ಅಧ್ಯಯನದ ದಲಿತ ಬೌದ್ಧರ ಸಾಂಸ್ಕೃತಿಕ ಐಡೆಂಟಿಟಿಯನ್ನು ವಿಶ್ಲೇಷಿಸಲು ತಾತ್ವಿಕ ನೆಲೆಗಟ್ಟುಗಳ ಹಿನ್ನೆಲೆಯಲ್ಲಿ ಚರ್ಚಿಸುವುದು ಅಗತ್ಯವೆನಿಸುತ್ತದೆ. ಅಂಬೇಡ್ಕರ್‌ರವರು ಪ್ರತಿಪಾದಿಸಿದ ರಾಷ್ಟ್ರೀಯತೆಯ ಸ್ವರೂಪ ದಲಿತರನ್ನು 'ಭಾರತೀಕರಣ' ಗೊಳಿಸಿ ದಲಿತರ ಪೂರ್ಣ ವಿಮೋಚನೆಯನ್ನು ಉದ್ದೇಶವುಳ್ಳದಾಗಿತ್ತು ಎಂಬ ತಾತ್ವಿಕ ನೆಲೆಗಟ್ಟುಗಳ ಆಧಾರದ ಮೇಲೆ ಪ್ರಸ್ತುತ ಅಧ್ಯಯನ ನಡೆಯುತ್ತದೆ.

### ಅಂಬೇಡ್ಕರ್ ಪ್ರತಿಪಾದಿಸಿದ "ಬೌದ್ಧ ರಾಷ್ಟ್ರೀಯತೆ" :

ಮಹಾತ್ಮ ಜೋತಿಬಾ ಫುಲೆಯವರ ನಂತರ ಭಾರತೀಯ ಚರಿತ್ರೆಯನ್ನು 'ರಾಷ್ಟ್ರದ' ಪರಿಕಲ್ಪನೆಯ ಹಿನ್ನೆಲೆಯಲ್ಲಿ ಚರಿತ್ರೆಯ ಬರೆಹಗಳನ್ನು ಮರು ಅರ್ಥೈಸುವಿಕೆಯನ್ನು ನಾವು ಅಂಬೇಡ್ಕರ್‌ರವರ ಬರವಣಿಗೆಗಳಲ್ಲಿ

ಹೆಚ್ಚಾಗಿ ಕಾಣುತ್ತೇವೆ. 'ಹಿಂದೂ ರಾಷ್ಟ್ರೀಯತೆ' ಯ ಪ್ರತಿಪಾದನೆಯಿಂದ ಮುಸ್ಲಿಂ ಕೋಮುವಾದವೂ ಬೆಳೆದು ಒಟ್ಟಾರೆ 'ಭಾರತದ ರಾಷ್ಟ್ರೀಯತೆ' ಯ ಪರಿಕಲ್ಪನೆಗೆ ಅಪಾಯಗಳು ಒದಗಿದ್ದನ್ನು ನಾವು ಕಾಣುತ್ತೇವೆ. ಆರ್ಯನ್ ಜನಾಂಗ ಮೂಲ ಸಿದ್ಧಾಂತ (Aryan Origin Theory) ವೇ ಇಲ್ಲಿಯವರೆಗೆ ಪ್ರಬಲವಾಗಿ ಭಾರತದ ಚರಿತ್ರೆಯ ಅಧ್ಯಯನಗಳಲ್ಲಿ ಸ್ಥಾನ ಪಡೆದುಕೊಂಡಿದೆ. ಭಾರತದ ವಿಶ್ವವಿದ್ಯಾಲಯಗಳೂ ಈ ಸಿದ್ಧಾಂತವನ್ನೇ ಪ್ರತಿಪಾದಿಸುತ್ತ ಯುವಕ ಯುವತಿಯರಲ್ಲಿ ಈ ದೇಶದ ಮುಸ್ಲಿಂರ ಬಗ್ಗೆ ದಲಿತರ ಬಗ್ಗೆ ಪೂರ್ವಾಗ್ರಹಗಳನ್ನು ಬೆಳೆಸುತ್ತ ಬಂದಿದ್ದಾರೆ. ಇಂತಹ 'ಬ್ರಾಹ್ಮಣವಾದೀ ಹಿಂದೂ ರಾಷ್ಟ್ರೀಯತೆ' ಯ ಪರಿಕಲ್ಪನೆಯಲ್ಲಿ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಗಳಿಗೆ ಸ್ಥಾನವೇ ಇಲ್ಲ ಎಂದು ಅಂಬೇಡ್ಕರರವರು ತಮ್ಮ ಚಿಂತನಶೀಲ ಬರವಣಿಗೆಗಳಲ್ಲಿ ಪ್ರತಿಪಾದಿಸುತ್ತ ಬಂದರು. ಅಂಬೇಡ್ಕರ್‌ರವರು, ಈ ರಾಷ್ಟ್ರದಲ್ಲಿ ಬೌದ್ಧ ಅರಸರು ಆಳ್ವಿಕೆ ನಡೆಸಿದಾಗ ಯಾವ ರೀತಿ ಈ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಗಳಿಗೆ ಜೀವ ಬಂದಿತು ಎನ್ನುವುದನ್ನು ಉದಾಹರಣೆಗಳ ಸಮೇತ ವಿವರಿಸಿದ್ದಾರೆ. ಅವರ ಬೌದ್ಧ ರಾಷ್ಟ್ರೀಯತೆಯ ಪರಿಕಲ್ಪನೆಗೆ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ ತತ್ವಗಳೇ ಮೂಲ ಜೀವಾಳ. ಈ ತತ್ವಗಳನ್ನೇ ಅವರು ಸ್ವಾತಂತ್ರ್ಯ ಭಾರತದ ಸಂವಿಧಾನದಲ್ಲಿ ಸೇರಿಸಿದರು. ಈ ಮಹೋನ್ನತ ಪರಿಕಲ್ಪನೆಗಳನ್ನು ಬೇರೆ ಕಡೆಯಿಂದ ಎರವಲು ಪಡೆದುಕೊಳ್ಳಲಿಲ್ಲ ಬದಲಾಗಿ ಈ ನಾಡಿನಲ್ಲೇ ಜನಿಸಿದ ಬುದ್ಧನ ಉಪದೇಶಗಳಿಂದ ಒಂದು ಸಾವಿರ ವರ್ಷಗಳಿಂತಲೂ ಹೆಚ್ಚು ಕಾಲ ಪ್ರವರ್ಧ ಮಾನದಲ್ಲಿದ್ದ ಒಂದು ಪ್ರಮುಖ ವಿಚಾರಧಾರೆಯಿಂದ ಪಡೆದುಕೊಂಡರು. ಅವರು 12, ಮೇ 1956 ರದು ಬಿ.ಬಿ.ಸಿ. ಯಲ್ಲಿ ''ನಾನೇಕೆ ಬೌದ್ಧ ಧರ್ಮವನ್ನು ಇಷ್ಟಪಡುತ್ತೇನೆ'' ಎಂಬ ಭಾಷಣ ಮಾಡುತ್ತ

'ನಾನು ಬೌದ್ಧಧರ್ಮವನ್ನು ಆಯ್ಕೆ ಮಾಡಿಕೊಳ್ಳುತ್ತೇನೆ ಯಾಕೆಂದರೆ, ಅದು ಬೇರೆ ಯಾವುದೇ ಧರ್ಮಗಳು ಕೊಡಮಾಡದ ಮೂರು ತತ್ವಗಳನ್ನು ಕೊಡುತ್ತದೆ. ಉಳಿದ ಎಲ್ಲಾ ಧರ್ಮಗಳು ದೇವರು, ಆತ್ಮ ಮತ್ತು ಮರಣಾನಂತರದ ಜೀವನದ ಬಗ್ಗೆ ತಮ್ಮಷ್ಟಕ್ಕೆ ತಾವೇ ತಲೆಕೆಡಿಸಿಕೊಳ್ಳುತ್ತವೆ. ಬೌದ್ಧಧರ್ಮ ಪ್ರಜ್ಞೆ (ಮೌಢ್ಯ ಮತ್ತು ಅಲೌಕಿಕತೆಗಳ ವಿರುದ್ಧದ ತಿಳುವಳಿಕೆ) ಯನ್ನು ಬೋಧಿಸುತ್ತದೆ. ಕರುಣೆಯನ್ನು (love) ಬೋಧಿಸುತ್ತದೆ. 'ಸಮತೆ' (equality) ಯನ್ನು ಪ್ರೀತಿಯನ್ನು ಬೋಧಿಸುತ್ತದೆ ಒಬ್ಬ ಮನುಷ್ಯನು ಉತ್ತಮ ಮತ್ತು ಸಂತೋಷದ ಜೀವನ ನಡೆಸಲು ಇದನ್ನೇ ಬಯಸುತ್ತಾನಲ್ಲವೇ, ಬೌದ್ಧ ಧರ್ಮದ ಈ ಮೂರು ತತ್ವಗಳು ನನಗೆ ಅತೀವವಾಗಿ ಅರಿಕೆಯಾಗಿವೆ. ಈ ಮೂರು ತತ್ವಗಳೇ ಜಗತ್ತಿಗೂ ಅರಿಕೆಯಾಗುತ್ತವೆ. ದೇವರಿಂದಾಗಲಿ, ಆತ್ಮದಿಂದಾಗಲಿ ಸಮಾಜವನ್ನು ಉಳಿಸಲು ಸಾಧ್ಯವಿಲ್ಲ'[48] ಎಂದು ಹೇಳುತ್ತಾರೆ. 'ದಕ್ಷಿಣ ಏಷ್ಯಾದ ರಾಷ್ಟ್ರಗಳ ರಷ್ಯಾದ ಬಲೆಗೆ ಬೀಳದೆ, ಬುದ್ಧನ ತತ್ವಗಳಿಗೆ ಸರಿಯಾದ ರಾಜಕೀಯ ದಿಸೆಯನ್ನು ಕೊಡಬೇಕೆಂದು ಹೇಳುತ್ತಾರೆ'.[49] ಈ ಹಿನ್ನೆಲೆಯಲ್ಲಿಯೇ ಅಂಬೇಡ್ಕರ್‌ರವರು ಈ ದೇಶದ ಮೂಲ ನಿವಾಸಿಗಳು ದಲಿತರು, ಅವರು ಮೊದಲಿನಿಂದಲೂ ಬೌದ್ಧರಾಗಿದ್ದರು, ಈ ರಾಷ್ಟ್ರ ಬೌದ್ಧಮಯವಾಗಿತ್ತು ಎಂದು ಪ್ರತಿಪಾದಿಸಿದರು. ಮಹಾತ್ಮ ಜೋತಿಬಾ ಫುಲೆ (1827-1890) ಯವರು ಪ್ರತಿಪಾದಿಸಿದ ಅನಾರ್ಯ ಮೂಲ ಸಿದ್ಧಾಂತ (Non-Aryan Origin Theory of race) ಈ ದೇಶದ 'ಮೂಲ ನಿವಾಸಿಗಳು ದಲಿತರೇ' ಆಗಿದ್ದರೆಂಬುದನ್ನು ಪ್ರತಿಪಾದಿಸುತ್ತದೆ. ಫುಲೆಯವರು ತಮ್ಮ ಸಮಕಾಲೀನ ಸಹವರ್ತಿ ಧೋಂಡಿಬಾ ಜತೆ ಚರ್ಚಿಸುವಾಗ 'ಬ್ರಾಹ್ಮಣರು ಇರಾಕ ಮೂಲದ (ಪರ್ಶಿಯಾ) ಜನರು, ಅದು ಅರಬ್ಬಿ ಸಮುದ್ರದ ಆಚೆಗಿದೆ. ಬಹಳಷ್ಟು ಆಂಗ್ಲ ಲೇಖಕರು ತಮ್ಮ ಪುಸ್ತಕಗಳಲ್ಲಿ ಬ್ರಾಹ್ಮಣರು ಇರಾನಿನಿಂದ ಬಂದ ಇರಾನಿಯನ್ನರು, ಅಥವಾ ಆರ್ಯರು ಎಂದು

ದಾಖಲಿಸಿದ್ದಾರೆ. ಭಾರತಕ್ಕೆ ಬಂದು ಇಲ್ಲಿ ಹಲವಾರು ಗೊಂದಲಗಳನ್ನು, ಸಮಸ್ಯೆಗಳನ್ನು ಸೃಷ್ಟಿಸಿ ಇಲ್ಲಿನ ಹಲವಾರು ರಾಜ್ಯಗಳನ್ನು ವಶಪಡಿಸಿಕೊಂಡರು. ವಾಮನ ನಂತರ ಬ್ರಹ್ಮನು ಅವರ ಮುಖ್ಯಸ್ಥನಾದನು. ಅವನು ಬಹಳ ಮೊಂಡನಾಗಿದ್ದನು. ಅವನು ಮೂಲ ವಂಶಜರನ್ನು ಸೋಲಿಸಿ ಅವರನ್ನು ಗುಲಾಮರನ್ನಾಗಿಸಿದನು. ಹೀಗೆ ಅವನು ಇಲ್ಲಿನ ಮೂಲನಿವಾಸಿಗಳ ನಡುವೆ ಆರ್ಯರ ನಡುವೆ ಸತತವಾದ ಕಂದರ ಇರುವಂತ ಕಟ್ಟಳೆಗಳನ್ನು ರೂಪಿಸಿದನು. ಬ್ರಹ್ಮನ ಮರಣಾನಂತರ ಆರ್ಯರು, ಬ್ರಾಹ್ಮಣರೆಂದು ಕರೆಯಲ್ಪಟ್ಟರು. ಬ್ರಹ್ಮನ ನಂತರ ಅವರ ಅಧಿಕಾರಿಯಾದ 'ಮನು' ಬ್ರಹ್ಮನು ರೂಪಿಸಿದ ಕಟ್ಟಳೆಗಳಿಗೆ 'ಕಾನೂನಿ'ನ ರೂಪಕೊಟ್ಟನು[50] ಎಂದು ಹೇಳುತ್ತಾರೆ. ಹೀಗೆ ಖಚಿತವಾದ ನಿಲುವು ತಿಳಿಸುವಲ್ಲಿ ಆಂಗ್ಲ ಲೇಖಕರನ್ನು ಪ್ರಸ್ತಾಪಿಸುವಲ್ಲಿ ಅವರು ಸಾಕಷ್ಟು ಅಧ್ಯಯನಗಳನ್ನು ಮಾಡಿ ಈ ನಿರ್ಣಯಕ್ಕೆ ಬಂದಿರಬಹುದೆಂದು ಕಾಣುತ್ತದೆ. ಈ ಸಿದ್ಧಾಂತವನ್ನು ಅವರು ತಮ್ಮ ಸಹವರ್ತಿ ಧೊಂಡಿಬಾಗೆ ಹೇಳುವುದು ಕೂಡ ಸಾಮಾಜಿಕ ಪರಿವರ್ತನೆಯ ಕುರಿತ ಶಿಕ್ಷಣ ಪ್ರಸಾರ ಕಾರ್ಯವೆಂದೇ ಹೇಳಬೇಕಾಗುತ್ತದೆ. ಅವರು 1841 ರಲ್ಲಿ ಮಾಧ್ಯಮಿಕ ಶಿಕ್ಷಣ ವ್ಯಾಸಂಗ ಮಾಡುತ್ತಿದ್ದಾಗ ಥಾಮಸ್ ಪೇನೆ ವಿರಚಿತ 'The Rights of Man' ಪುಸ್ತಕದಿಂದ ಪ್ರಭಾವಿತರಾಗಿ ಮುಂದೆ 1873 ರಲ್ಲಿ 'Slavery' ಗ್ರಂಥ ರಚಿಸಿದರು. ಆ ಗ್ರಂಥದ ಮುನ್ನುಡಿಯಲ್ಲಿ ಬ್ರಾಹ್ಮಣ ಆಳ್ವಿಕೆ ಈ ದೇಶದಲ್ಲಿ ಪ್ರಾರಂಭವಾದಾಗಿನಿಂದ, ಶತಶತಮಾನಗಳಿಂದ ಭಾರತದಲ್ಲಿ ಶೂದ್ರರು, ಅತೀ ಶೂದ್ರರು, (ನನ್ನ ಪದ) ಅನೇಕ ಕಷ್ಟಕಾರ್ಪಣ್ಯಗಳನ್ನು ಅನುಭವಿಸುತ್ತಿದ್ದಾರೆ. ಅತ್ಯಂತ ದಯನೀಯ ಜೀವನ ನಡೆಸುತ್ತಿದ್ದಾರೆ. ಅಂತಹ ಶೋಷಿತರು ತಮ್ಮ ಈ ಸ್ಥಿತಿಯನ್ನು ಅರಿಯಲು, ಬ್ರಾಹ್ಮಣ ಆಳ್ವಿಕೆಯ ಅಟ್ಟಹಾಸದಿಂದ ಮುಕ್ತರಾಗುವಂತೆ ಮಾಡಲು ಈ ಪುಸ್ತಕ ಬರೆಯಲಾಗಿದೆ'[51] ಎಂದು ಹೇಳುತ್ತಾರೆ. ಡಾ. ಅಂಬೇಡ್ಕರ್‌ರವರು ಈ ವಿಚಾರಗಳನ್ನೇ ನೆಲೆಯಾಗಿಟ್ಟುಕೊಂಡು 'ಜಾತಿ' ಯ ಉಗಮ, ಅದರ ಬೆಳವಣಿಗೆ, ಹಿಂದೂ ರಾಜನೀತಿ ಮತ್ತು ಕೋಮುಶಕ್ತಿಗಳ ಬರ್ಬರತೆಗಳನ್ನು ಅರ್ಥೈಸಿ ಭಾರತೀಯ ಚರಿತ್ರೆಯ ಬಗ್ಗೆ ಒಂದು ಸ್ಪಷ್ಟ ನಿಲುವು ತಾಳಿದರು. ಭಾರತದ ಚರಿತ್ರೆ ಮತ್ತು ಸಂಸ್ಕೃತಿಯನ್ನು ಮರು ವಿಶ್ಲೇಷಿಸುವ, ಮರು ಮೌಲ್ಯಮಾಪನ ಮಾಡುವ ಅವಶ್ಯಕತೆಯನ್ನು ಮನಗಂಡರು. 1940 ರ ದಶಕದಲ್ಲಿ ರಾಜಕೀಯವಾಗಿ ಅವರು ಬಹಳಷ್ಟು ತೊಡಗಿಸಿಕೊಂಡಿದ್ದರೂ ಕೂಡ ರಾಜಕೀಯ, ಆರ್ಥಿಕ ವಿಷಯಗಳ ಚಾರಿತ್ರಿಕ ಅಧ್ಯಯನ, ಬರವಣಿಗೆ ಮತ್ತು ಅರ್ಥೈಸುವಿಕೆಗೆ ಒತ್ತುಕೊಟ್ಟದ್ದನ್ನು ನೋಡುತ್ತೇವೆ.

ಒಂದು 'ರಾಷ್ಟ್ರೀಯತೆ' ಎಂದರೆ ಅಲ್ಲಿ ಒಬ್ಬ ವ್ಯಕ್ತಿಗೆ ಖಚಿತವಾಗಿ ಒಂದು 'ಸಮಾನ ನಾಗರಿಕತ್ವ' ಇರುತ್ತದೆ. ರಾಷ್ಟ್ರೀಯತೆ 'ನಾಗರಿಕತ್ವ' (Citizenship) ವನ್ನು ಖಚಿತಪಡಿಸಬೇಕು. ಟಿ. ಕೆ. ವೊಮೆನ್ ಹೇಳುವಂತೆ ನಾಗರಿಕತ್ವಕ್ಕೆ ಮೂರು ರೀತಿಯ ಹಕ್ಕುಗಳ ಆಯಾಮವಿರುತ್ತದೆ.

(1) ನಾಗರಿಕ ಹಕ್ಕುಗಳು (Civil Rights)

(2) ರಾಜಕೀಯ ಹಕ್ಕುಗಳು (Political Rights)

(3) ಸಾಮಾಜಿಕ ಹಕ್ಕುಗಳು (Social Rights)

ಮೊದಲನೆಯದಾಗಿ, ಎಲ್ಲ ನಾಗರಿಕರಿಗೆ ಆಸ್ತಿ ಹೊಂದಲು, ಮಾರಲು ಇರುವ ಹಕ್ಕುಗಳನ್ನು ಸೂಚಿಸುತ್ತದೆ.

ಎರಡನೆಯದಾಗಿ, ರಾಜಕೀಯ ಹಕ್ಕುಗಳು, ಎಲ್ಲ ನಾಗರಿಕರಿಗೆ, ಸಾರ್ವತ್ರಿಕ ಮತದಾನ ಮತ್ತು ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕುಗಳನ್ನು ಖಾತ್ರಿಗೊಳಿಸುತ್ತವೆ.

ಮೂರನೆಯದಾಗಿ, ಸಾಮಾಜಿಕ ಹಕ್ಕುಗಳು ಎಲ್ಲ ವ್ಯಕ್ತಿಗಳಿಗೆ ಗೌರವಯುತ ಜೀವನ (Dignity of Life) ನಡೆಸಲು ತಮ್ಮ ಸಾಂಸ್ಕೃತಿಕ ಪರಂಪರೆಯನ್ನು ರಕ್ಷಿಸಲು ಇರುವ ಹಕ್ಕುಗಳು'.[52]

ಆದರೆ ಮೇಲಿನ ಮೂರು ಆಯಾಮಗಳಲ್ಲಿ ರಾಜಕೀಯ ಹಕ್ಕುಗಳನ್ನು ಬಿಟ್ಟರೆ ಉಳಿದ ಎರಡು ರೀತಿಯ ಅಂದರೆ, ಆಸ್ತಿಯ ಹಕ್ಕು, ಗೌರವಯುತ ಜೀವನ ನಡೆಸುವ ಹಕ್ಕು, ಸಾಂಸ್ಕೃತಿಕ ಪರಂಪರೆ ಹೊಂದುವ ಹಕ್ಕುಗಳಿಂದ ದಲಿತರು ವಂಚಿತರಾಗಿದ್ದಾರೆ. ಭೂಮಿಯನ್ನು ರಾಷ್ಟ್ರೀಕರಣ ಮಾಡಬೇಕೆಂಬ ಅಂಬೇಡ್ಕರರವರ ಪ್ರತಿಪಾದನೆ ಈ ಹಿನ್ನೆಲೆಯಲ್ಲಿಯೇ ಜನಿಸಿದ್ದು ಅಂಬೇಡ್ಕರ್‌ರವರು ಸಂವಿಧಾನವನ್ನು ಅಂಗೀಕರಿಸುವ ಸಂದರ್ಭದಲ್ಲಿ ಈ ಸಂದಿಗ್ಧತೆಗಳನ್ನು ಸಂಸತ್ತಿನಲ್ಲಿ ಪ್ರಸ್ತಾಪಿಸುತ್ತಾರೆ.

'ಇಂದು **26** ಜನೇವರಿ, **1950** ರಂದು ನಾವು ವಿರೋಧಾಭಾಸಗಳ ಜೀವನಕ್ಕೆ ಕಾಲಿಡುತ್ತಿದ್ದೇವೆ. ರಾಜಕೀಯದಲ್ಲಿ ಸಮಾನತೆಯಿದ್ದರೂ ಸಾಮಾಜಿಕ ಆರ್ಥಿಕ ಜೀವನದಲ್ಲಿ ಅಸಮಾನತೆಯಿರುತ್ತದೆ. ರಾಜಕೀಯ ಕ್ಷೇತ್ರದಲ್ಲಿ ಪ್ರತಿಯೊಬ್ಬರಿಗೂ ಒಂದೊಂದು ವೋಟಿನ ಅಧಿಕಾರವಿದ್ದರೂ, ಸಾಮಾಜಿಕಾರ್ಥಿಕ ಜೀವನದಲ್ಲಿ ಮೌಲ್ಯಗಳು ಮನುಷ್ಯನಿಂದ ಮನುಷ್ಯನಿಗೆ ವ್ಯತ್ಯಾಸಗೊಳ್ಳುತ್ತವೆ. ಈ ಅಸಮಾನತೆಯಿಂದಾಗಿ ಪ್ರಜಾಸತ್ತೆಗೆ ಧಕ್ಕೆ ಖಂಡಿತ. ಈ ಅಸಮಾನತೆಯ ನಿರ್ಮೂಲನದಿಂದ ಮಾತ್ರ ರಾಜಕೀಯ ಸಮಾನತೆ ಸಾರ್ಥಕವಾಗುತ್ತದೆ. ನನ್ನ ಮತ್ತೊಂದು ಶಂಕೆಯೆಂದರೆ ಪ್ರಜಾಪ್ರಭುತ್ವ ರಕ್ಷಣೆ. ಭಾರತ ಪ್ರಜಾಪ್ರಭುತ್ವ ತತ್ವಗಳಿಗೆ ಹೊಸದಲ್ಲ. ಪೂರ್ವ ಕಾಲದ ರಾಜ್ಯಗಳಲ್ಲಿ ಮಾತ್ರವಲ್ಲ, ಬೌದ್ಧರ ಬಿಕ್ಕು ಸಂಘಗಳಲ್ಲಿಯೂ ಪ್ರಜಾತಂತ್ರ ಯಶಸ್ವಿಯಾಗಿ ಚಲಿಸುತ್ತಿತ್ತು. ...... ರಾಜಕೀಯ ಪ್ರಜಾಪ್ರಭುತ್ವದ ಯಶಸ್ವಿಗೆ ಸಾಮಾಜಿಕ ಪ್ರಜಾಪ್ರಭುತ್ವವೇ ಮೂಲ ಕಾರಣ. ರತ್ನತ್ರಯಗಳಿಂದ ಸ್ವಾತಂತ್ರ್ಯ, ಸಮಾನತೆ, ಸೋದರತ್ವಗಳೇ ಸಾಮಾಜಿಕ ಪ್ರಜಾಪ್ರಭುತ್ವದ ಅಡಿಗಲ್ಲು. ಇವುಗಳ ಅನುಷ್ಠಾನವಿಲ್ಲದೇ ಐಕ್ಯವೂ ಇಲ್ಲ. ರಾಷ್ಟ್ರವೂ ಇಲ್ಲ. ಈ ದೇಶದಲ್ಲಿ ರಾಜಕೀಯ ಅಧಿಕಾರ ಕೆಲವರ ಏಕಸ್ವಾಮ್ಯವಾಗಿರುವುದರಿಂದ ಇಷ್ಟು ಮಾತಾಡಬೇಕಾಯಿತು. ಈ ಮಾತುಗಳು ಕೆಲವರಿಗೆ ಕಹಿಯಾಗಿ ಕಂಡಿರಬೇಕು. ಔಷಧಿ ಯಾವಾಗಲೂ ಕಹಿಯೇ ಭಾರತದ ಭದ್ರತೆ ಮತ್ತು ಭವಿಷ್ಯದ ದೃಷ್ಟಿಯಿಂದ ಇಷ್ಟು ಮಾತಾಡಬೇಕಾಯಿತು' ಎಂದು ಎಚ್ಚರಿಕೆ ನೀಡುತ್ತಾರೆ. ಅವರಿಗೆ ರಾಜಕೀಯ ಸ್ವಾತಂತ್ರ್ಯಕ್ಕಿಂತ ಸಾಮಾಜಿಕವಾಗಿ, ಆರ್ಥಿಕವಾಗಿ,[53] ಅಸಮಾನತೆಯ ಧಾರ್ಮಿಕ, ಸಾಂಸ್ಕೃತಿಕ ಆವರಣಗಳಿಂದ, ವ್ಯವಸ್ಥೆಯಿಂದ ದಲಿತರು ವಿಮೋಚನೆಗೊಳ್ಳಬೇಕಾದ ಪ್ರಧಾನ ಪ್ರಕ್ರಿಯೆ ಕಾಡಿಸುತ್ತಿತ್ತು. ಮುಕ್ತ ಮನಸ್ಸಿನಿಂದ ಜೀವಿಸುವುದರಿಂದ, ಗೌರವಯುತ ಬಾಳ್ವೆ ನಡೆಸುವುದರಿಂದ ಆರ್ಥಿಕ ಅಭಿವೃದ್ಧಿ ತಾನಾಗಿಯೇ ಆಗುತ್ತದೆ ಎಂಬುದು ಅವರ ನಿಲುವಾಗಿತ್ತು. ಇನ್ನು ಪ್ರತ್ಯೇಕವಾದ ಸಾಂಸ್ಕೃತಿಕ ಬದುಕನ್ನು ರೂಪಿಸಿಕೊಂಡರೆ, ಉತ್ತಮ ಜೀವನ ನಡೆಸಿ ಆತನೇ ಸಮಾಜಕ್ಕೆ ಒಂದು ಅತ್ಯುತ್ತಮ ಮಾದರಿಯಾಗಬೇಕೆನ್ನುವುದು ಅವರ ಕಳಕಳಿಯಾಗಿತ್ತು. ಈ ಹಿನ್ನೆಲೆಯಲ್ಲಿಯೇ

ಅವರು ದಲಿತರ ರಾಷ್ಟ್ರೀಯತೆಯ ಪ್ರಶ್ನೆಯನ್ನು ವಿಶ್ಲೇಷಿಸಿದರು. 'ಹಿಂದೂ ರಾಷ್ಟ್ರೀಯತೆ' ಅಡಿಯಲ್ಲಿ ದಲಿತರ ವಿಮೋಚನೆ (Dalit Liberation) ಸಾಧ್ಯವೇ ಇಲ್ಲ ಎಂದು ಸ್ಪಷ್ಟವಾಗಿ ಹೇಳಿದರು. ಯಾಕೆಂದರೆ 'ಚಾತುರ್ವರ್ಣ್ಯ' ವ್ಯವಸ್ಥೆಯಲ್ಲಿ ಅಸ್ಪೃಶ್ಯರಿಗೆ ಸ್ಥಾನವನ್ನೇ ಕಲ್ಪಿಸಿಲ್ಲ. ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿ 'ಸ್ಥಾನ' ಇಲ್ಲದ ಮೇಲೆ, ಹಿಂದೂ ಆರ್ಥಿಕ ವ್ಯವಸ್ಥೆಯಲ್ಲಿ 'ಅಸ್ಪೃಶ್ಯರಿಗೆ ಅವರ ಪಾಲು' ಸಿಕ್ಕಿತೇ? ಹೀಗೆ ಬೇರೊಂದು ಪರ್ಯಾಯ ರೂಪಿಸುವ ಸಮಸ್ಯೆ ಅವರಿಗೆ ಎದುರಾಯಿತು. ಆದರೆ, ಈ ಪರ್ಯಾಯ ರೂಪಿಸುವಲ್ಲಿ ಎಂದಿಗೂ ಅವರು 'ರಾಷ್ಟ್ರದ ಹಿತಾಸಕ್ತಿಗಳನ್ನು' ಮರೆತು ನಡೆದುಕೊಳ್ಳಲಿಲ್ಲ.

## ರಾಷ್ಟ್ರೀಯ ಕರೆ V/s ಧರ್ಮದ ಕರೆ

ಭಾರತ ದೇಶದ ಚಾರಿತ್ರಿಕ ಪುಟಗಳಲ್ಲಿ ನೋಡುತ್ತಾ ಬಂದಂತೆ, ರಾಷ್ಟ್ರದ ಕರೆ (Nation's Calling) ಮತ್ತು ಧರ್ಮದ ಕರೆಯಲ್ಲಿ (Religious Calling) ಧರ್ಮ ಆಧರಿತ ಕಾಳಜಿಯ ಕರೆಯೇ ಹೆಚ್ಚು ಪ್ರಬಲವಾಗಿ ತೋರಿರುವುದು ಕಂಡು ಬರುತ್ತದೆ. ಅಂತಹ ಸೀಮಿತ ದೃಷ್ಟಿಕೋನವನ್ನೇ ಹಿಂದೂ ಧರ್ಮ ಹೊಂದಿದೆ ಎಂದು ಅಂಬೇಡ್ಕರ್‌ರವರು ಹೇಳುತ್ತಾ ಅಸ್ಪೃಶ್ಯರು ಎರಡು ವಿಷಯಗಳನ್ನು ಮನಸ್ಸಿನಲ್ಲಿಟ್ಟುಕೊಳ್ಳಬೇಕು.

**ಮೊದಲನೆಯದು :**

ಸಾಮಾಜಿಕ ನ್ಯಾಯವನ್ನು ಸ್ಥಾಪಿಸುವಲ್ಲಿ ಹಿಂದೂ ಧರ್ಮವು ಸಮರ್ಥವಾಗಿದೆ ಎಂದು ಭಾವಿಸುವುದೇ ತಪ್ಪು. ಅಂಥ ಕೆಲಸವನ್ನು ಬೇಕಾದರೆ ಇಸ್ಲಾಂ ಧರ್ಮ, ಕ್ರೈಸ್ತ ಧರ್ಮ ಅಥವಾ ಬೌದ್ಧಧರ್ಮಗಳು ಮಾಡಬಲ್ಲವು. ಹಿಂದೂ ಧರ್ಮವು ಸ್ವತಃ ಅಸ್ಪೃಶ್ಯರ ವಿರುದ್ಧ ಅಸಮಾನತೆ ಹಾಗೂ ಅನ್ಯಾಯಗಳ ಸಾಕಾರ ರೂಪವಾಗಿದೆ. ಅದು ನ್ಯಾಯದ ಬಗ್ಗೆ ಉಪದೇಶ ನೀಡಿದರೆ ತನ್ನ ಅಸ್ತಿತ್ವದ ವಿರುದ್ಧ ಹೋದಂತೇ. ಇದು ಸಾಧ್ಯವಾಗುತ್ತದೆ ಎಂದು ಕನಸು ಕಾಣುವುದೂ ಒಂದೇ, ಪವಾಡಕ್ಕೆ ಕಾಯುವುದೂ ಒಂದೇ.

**ಎರಡನೆಯದಾಗಿ :**

ಹಿಂದೂ ಧರ್ಮವು ಈ ಕೆಲಸವನ್ನು ಕೈಗೆತ್ತಿಕೊಂಡಿದ್ದರೂ ಕೂಡ ಇದನ್ನು ಸಾಧಿಸುವುದು ಮಾತ್ರ ಅಸಾಧ್ಯದ ಮಾತಾಗಿದೆ. ಹಿಂದೂಗಳ ಮತ್ತು ಅಸ್ಪೃಶ್ಯರ ನಡುವಿನ ಸಾಮಾಜಿಕ ವ್ಯತ್ಯಾಸಗಳು ಹಿಂದೂಗಳು ಹಾಗೂ ಅವರ ಜನರ ನಡುವಿನ ವ್ಯತ್ಯಾಸಕ್ಕಿಂತ ಹೆಚ್ಚಾಗಿದೆ. ಒಂದು ಜನಾಂಗ ಅಥವಾ ರಾಷ್ಟ್ರದ ಮಿತಿಯೊಳಗೆ ಧರ್ಮವು ಎಷ್ಟೇ ಅಚ್ಚುಕಟ್ಟಾಗಿದ್ದರೂ ಕೂಡ ಅದು ಈ ವ್ಯತ್ಯಾಸಗಳೆಂಬ ಅಡ್ಡಗೋಡೆಗಳನ್ನು ಉರುಳಿಸಿ ಎರಡನ್ನೂ ಒಂದು ಮಾಡುವಲ್ಲಿ ಅಶಕ್ತವಾಗಿದೆ[54] ಎಂದು ಅಭಿಪ್ರಾಯಪಡುತ್ತಾರೆ. ಇಲ್ಲಿ ಕೊನೆಯಲ್ಲಿ ಬಳಸಿದ 'ಜನಾಂಗ' ಮತ್ತು 'ರಾಷ್ಟ್ರ' ಪದಗಳು ಹಿಂದೂ ಜನಾಂಗ ಮತ್ತು 'ಹಿಂದೂ ರಾಷ್ಟ್ರ' ಎಂಬರ್ಥದಲ್ಲಿ ಬಳಸಿದ ಪದಗಳಾಗಿವೆ. ಈ ಮಾತುಗಳಲ್ಲಿ ದಲಿತರಿಗೆ, ಅಸ್ಪೃಶ್ಯರಿಗೆ ಹಿಂದೂ ಪ್ರಣೀತ ವ್ಯವಸ್ಥೆಯಲ್ಲಿ ನಾಗರಿಕ ಹಕ್ಕುಗಳು

ಲಭಿಸುವುದು, ಸಾಮಾಜಿಕ ನ್ಯಾಯ ಸಿಗುವುದು ಅಸಾಧ್ಯದ ಕೆಲಸವೆಂದು ಸ್ಪಷ್ಟವಾಗಿ ಹೇಳುತ್ತಾರೆ. ಈ ಹಿನ್ನೆಲೆಯಲ್ಲಿ ದಲಿತರಿಗೆ ಸ್ಥಾನ ನೀಡದ ಹಿಂದೂ ಸಾಂಸ್ಕೃತಿಕ ಚೌಕಟ್ಟಿಗೆ ಪರ್ಯಾಯವಾಗಿ, ದಲಿತರು ಅನ್ಯ ಸಾಂಸ್ಕೃತಿಕ ಗುರುತನ್ನು ಹೊಂದುವುದು ಅನಿವಾರ್ಯವಾಗುತ್ತದೆ. ದಲಿತ ಚಳುವಳಿ, ಅಂಬೇಡ್ಕರರವರ ಹೋರಾಟಗಳ ಪ್ರಭಾವ ಕುರಿತು ವ್ಯಾಪಕ ಅಧ್ಯಯನ ಮಾಡಿರುವ ಗೇಲ್ ಓಂವೆಡ್ತ್ ಅವರು ಗಹನವಾದ ಸಾಂಸ್ಕೃತಿಕ ಗುರುತಿನ ಪ್ರಶ್ನೆಯನ್ನು ಈ ಕೆಳಗಿನ ಪ್ರಶ್ನೆಗಳಿಂದ ವಿಶ್ಲೇಷಿಸಬೇಕೆನ್ನುತ್ತಾರೆ.

- ದಲಿತರು ಹಿಂದೂಗಳಲ್ಲವೆಂದರೆ ಅವರು ಯಾರು?
- ಭಾರತೀಯ ಸಮಾಜ ಮತ್ತು ಚರಿತ್ರೆಯಲ್ಲಿ ಅವರ ಸ್ಥಾನವೇನು?
- ವಿಶೇಷವಾಗಿ ಶೂದ್ರರು, ಬ್ರಾಹ್ಮಣೇತರ ಜಾತಿಗಳು ಮತ್ತು ಬ್ರಾಹ್ಮಣರು ಯಾರು?
- ಭಾರತ ದೇಶದ ಚರಿತ್ರೆಯನ್ನು ನಡೆಸಿಕೊಂಡು ಹೋಗುತ್ತಿರುವ ಶಕ್ತಿಗಳು (Driving Forces) ಯಾವವು?
- ಭವಿಷ್ಯದ ಭಾರತೀಯ ಸಮಾಜದಲ್ಲಿ ಪ್ರಜಾ ಪ್ರಭುತ್ವವಾದಿ, ಸಮಾನತೆಯ ತಳಹದಿಗೆ ಕಾರಣವಾಗುವ ಪ್ರವಾಹಿಕ ಶಕ್ತಿಗಳು (Driving Forces) ಯಾವವು?[55]

ಎಂಬ ಪ್ರಶ್ನೆಗಳನ್ನು ಎತ್ತುತ್ತಾರೆ. ಈ ಪ್ರಶ್ನೆಗಳು ಪ್ರಸ್ತುತ ಅಧ್ಯಯನದ ತಾತ್ವಿಕ ನೆಲೆಗಟ್ಟುಗಳನ್ನು ನಿರ್ಧರಿಸಲು ಸಹ ಮುಖ್ಯವಾಗುತ್ತವೆ ಮತ್ತು ಇಂದಿಗೂ ಸಹ ಸಮಕಾಲೀನ ಉತ್ತರಗಳನ್ನು, ಪರಿಹಾರಗಳನ್ನು ನಿರೀಕ್ಷಿಸುತ್ತವೆ.

ಈ ಪ್ರಶ್ನೆಗಳನ್ನು ಕೇಳಿಕೊಳ್ಳುತ್ತಲೇ ಪ್ರಸ್ತುತ ಅಧ್ಯಯನದ ತಾತ್ವಿಕ ನೆಲೆಗಟ್ಟುಗಳನ್ನು ವಿವರಿಸುತ್ತಲೇ, ಒಂದು ದೇಶ, ಒಂದು ನಾಗರಿಕ ಸಮಾಜ ಸ್ವಾತಂತ್ರ್ಯದ ಐದು ದಶಕಗಳ ನಂತರವೂ ತನ್ನ ಅವಿಭಾಜ್ಯ ಅಂಗವಾದ ಇಪ್ಪತ್ತೈದು ಕೋಟಿ ದಲಿತರಿಗೆ ಮಾನವ ಹಕ್ಕುಗಳನ್ನು ಖಚಿತಪಡಿಸುವುದು ಸಾಧ್ಯವಾಗುತ್ತಿಲ್ಲದ್ದರ ಬಗ್ಗೆ ವಿಶ್ಲೇಷಣೆ ಮಾಡುತ್ತದೆ. ಸಾಂವಿಧಾನಿಕವಾಗಿ ದಲಿತರಿಗೆ ಕೊಡಮಾಡಿದ ಮೂಲಭೂತ ಹಕ್ಕುಗಳನ್ನು ಚಲಾಯಿಸದಂತೆ ತಡೆಯೊಡ್ಡುವ ಮತಾಂಧ ಶಕ್ತಿಗಳ ಅಮಾನುಷ ಕ್ರಿಯೆಗಳನ್ನು ಪ್ರಶ್ನಿಸುತ್ತದೆ. ಮೂಲಭೂತ ಹಕ್ಕುಗಳನ್ನು ಅನುಭವಿಸುವ ವಾತಾವರಣ ದಲಿತರಿಗೆ ದಕ್ಕಿದೆಯೇ? ಅವರ ಸಾಂಸ್ಕೃತಿಕ ಹಕ್ಕುಗಳನ್ನು, ಧಾರ್ಮಿಕ ಸ್ವಾತಂತ್ರ್ಯವನ್ನು ಅನುಭವಿಸಲು ಸಾಧ್ಯವಾಗಿದೆಯೇ? ತಮ್ಮ ಸಾಮರ್ಥ್ಯಗಳನ್ನು ಅತ್ಯಂತ ಗರಿಷ್ಟ ಮಟ್ಟದಲ್ಲಿ ಬೆಳೆಸಿಕೊಂಡು, ರಾಷ್ಟ್ರದ ಅಭಿವೃದ್ಧಿಯಲ್ಲಿ ತಮ್ಮ ಪಾಲಿನ ಕರ್ತವ್ಯ ನಿರ್ವಹಿಸಲು ಅವಕಾಶಗಳು ಇವೆಯೇ ? ಎಂಬ ಹಿನ್ನೆಲೆಯನ್ನು ಒರೆಗಲ್ಲಿಗೆ ಹಚ್ಚುತ್ತದೆ. ನಮ್ಮ ಶಿಕ್ಷಣ ವ್ಯವಸ್ಥೆ ದಲಿತರಿಗೆ ಅಂಟಿದ ಕೀಳರಿಮೆಯನ್ನು ತೊಲಗಿಸಿ, ಅವರ ಸಾಂಸ್ಕೃತಿಕ ಪಳೆಯುಳಿಕೆಗಳನ್ನು ಕಟ್ಟಿಕೊಡಲು ಅನುವು ಮಾಡಿಕೊಡುತ್ತಿದೆಯೇ ಎಂಬುದನ್ನು ವಿಶ್ಲೇಷಿಸುತ್ತದೆ. ಧರ್ಮ, ಜಾತಿ, ತಮ್ಮ ಸ್ಥಾನಮಾನ ಕುರಿತು ಅರ್ಧಂಬರ್ಧ ಮಾಹಿತಿ ನೀಡಿ ದಲಿತ ಯುವಕ, ಯುವತಿಯರು ವಿಶ್ವವಿದ್ಯಾಲಯ ಪದವಿ ಪಡೆದರೂ ವೈಚಾರಿಕ, ವೈಜ್ಞಾನಿಕ ಚಿಂತನೆ ರೂಢಿಸಿಕೊಳ್ಳದಂತೆ ಹಾಕಿದ ಕಾಣದ ದಿಗ್ಬಂಧನಗಳನ್ನು ಅನಾವರಣಗಳಿಸಲು ಪ್ರಯತ್ನಿಸುತ್ತದೆ. 'ದಲಿತ ಬೌದ್ಧರ ಸಾಂಸ್ಕೃತಿಕ ಅಧ್ಯಯನ' ಇಂತಹ ಪ್ರಯತ್ನಗಳಲ್ಲಿ ಒಂದು ಅನಿವಾರ್ಯತೆ ಮತ್ತು ಒಂದು ಭಾಗ. ಈ ಅಧ್ಯಯನವೇ 'ದಲಿತ

ವಿಮೋಚನೆಯ' ಗುತ್ತಿಗೆ ಹೊತ್ತುಕೊಂಡಿಲ್ಲ ಮತ್ತು ವ್ಯಾಪಕವಾಗಿ ತಳ ಸಮುದಾಯಗಳನ್ನು ಅಧ್ಯಯನ ಮಾಡಿರುವುಂತದ್ದಲ್ಲ. ಇಲ್ಲಿ ಒಳಗೊಂಡ ಬೌದ್ಧಿಕ ತೀರ್ಮಾನಗಳು, ಮಾಹಿತಿಗಳು, ಬುದ್ಧಿಜೀವಿಗಳ ಪ್ರತಿಕ್ರಿಯೆಗಳು, ಅಭಿಪ್ರಾಯ ನೀಡಿದ ಬೌದ್ಧ ಉಪಾಸಕ, ಉಪಾಸಕಿಯರು ಒಂದು ಸಂಕೇತವಾಗಿ ಈ ಅಧ್ಯಯನದಲ್ಲಿ ಕಾಣಸಿಕೊಳ್ಳುತ್ತಾರೆಯೇ ಹೊರತು ಇಡೀ ದಲಿತ ಲೋಕವನ್ನು, ಬೌದ್ಧಿಕ ಪ್ರಮೇಯಗಳನ್ನು ವ್ಯಾಪಕ ಮಾಹಿತಿಯನ್ನು ಬಿಂಬಿಸುವುದಿಲ್ಲ. ಇದು ಒಂದು ಕಾಲ ಘಟ್ಟದಲ್ಲಿ 'ಬೌದ್ಧ ಧರ್ಮ ಹೇಗೆ ವಿಮೋಚನಾ ಪ್ರಕ್ರಿಯೆಗೆ ಸಾಧನವಾಗಿದೆ' ಎಂಬ ಬಗ್ಗೆ ಅಧ್ಯಯನ ಮಾಡುವ ಪರಿವರ್ತನಶೀಲ ತಾತ್ವಿಕತೆಯನ್ನು ಹೊಂದಿದೆ.

ಕಳೆದ ದಶಕದಲ್ಲಿ 'ಹಿಂದೂ ರಾಷ್ಟ್ರೀಯತೆ' ಗೆ ಪುಷ್ಟಿ ನೀಡುವ ರಾಜಕೀಯ ಶಕ್ತಿಗಳ ಒಕ್ಕೂಟವು 'ಸಂವಿಧಾನವನ್ನು ಪರಿಷ್ಕರಣೆ' ಮಾಡಲು ಮುಂದಾಯಿತು. ಇನ್ನೊಂದು ಬಾರಿ ದೂರ ಆಲೋಚನೆಗಳನ್ನು ಏಕಮುಖಿ ಸಾಂಸ್ಕೃತಿಕ ಹಿತಾಸಕ್ತಿಗಳನ್ನು ಸಂವಿಧಾನದಲ್ಲಿ ಸೇರಿಸಿ ಮತ್ತೆ ದೇಶ ಹಲವಾರು ಶತಮಾನಗಳಷ್ಟು ಹಿಂದೆ ಹೋಗುವಂತೆ ಮಾಡುವಲ್ಲಿ ಸ್ಥಾಪಿತ ಹಿತಾಸಕ್ತಿಗಳು ಪ್ರಯತ್ನಿಸಿದವು. ಆದರೆ ಅಂದಿನ ಪ್ರಜ್ಞಾವಂತ ರಾಷ್ಟ್ರಪತಿಗಳು, ಸಂಸದೀಯ ಪಂಡಿತರು ಆಗಿದ್ದ ಕೆ.ಆರ್. ನಾಯಾಯಣನ್ ಅವರು ''ಪರಿಷ್ಕರಣೆಯಾಗಬೇಕಾದ್ದು ಸಂವಿಧಾನವಲ್ಲ, ಬದಲಾಗಿ ಅದನ್ನು ಐವತ್ತು ವರ್ಷಗಳವರೆಗೆ ವ್ಯವಹರಿಸಿದ ಆಳುವ ಕೈಗಳ ಪರಿಷ್ಕರಣೆಯಾಗಬೇಕಾಗಿದೆ'' ಎಂದು ಹೇಳಿದರು. ಈ ಮಾತಿಗೆ ಹೆಚ್ಚು ವಿವರಣೆ ಕೊಡುವ ಅಗತ್ಯವಿರಲಾರದು. 1950 ಜನೇವರಿ 26 ರಂದು ಸಂವಿಧಾನ ಅಂಗೀಕಾರ ಮಾಡಿದ ದಿನದಂದೇ ಇಂತಹ ಎಚ್ಚರಿಕೆಯನ್ನು ಡಾ. ಅಂಬೇಡ್ಕರ್‌ರವರು ಕೊಟ್ಟಿದ್ದಾರೆ. ದೇಶದ ಭವಿಷ್ಯ, ಭದ್ರತೆಯ ದೃಷ್ಟಿಯಿಂದ ಈ ಪ್ರಕ್ರಿಯೆಯನ್ನು ಎಲ್ಲಾ ರಾಷ್ಟ್ರಾಭಿಮಾನಿಗಳು ಪರಿಶೀಲಿಸಬೇಕಾಗುತ್ತದೆ. ಆ ಸಂದರ್ಭದಲ್ಲಿ ಪ್ರತಿಕ್ರಿಯಿಸಿದ ಕರ್ನಾಟಕದ ಪ್ರಗತಿಪರ ಧರ್ಮಪೀಠಾಧ್ಯಕ್ಷರಾದ ಶ್ರೀ ವೀರಭದ್ರ ಚನ್ನಮಲ್ಲ ಸ್ವಾಮೀಜಿಯವರು ಅಂಬೇಡ್ಕರ್ ಜಯಂತಿಯಲ್ಲಿ ಮಾತನಾಡುತ್ತಾ (1998) ''ಪರಾಮರ್ಶೆಯಾಗಬೇಕಾದ್ದು ಸಂವಿಧಾನವಲ್ಲ, ಹಿಂದೂ ಧರ್ಮ''[56] ಎಂದು ಹೇಳಿದ ಮಾತು ಪ್ರಸ್ತುತ ಅಧ್ಯಯನದ ತಾತ್ವಿಕ ಹಿನ್ನೆಲೆಯಲ್ಲಿ ವಿಶೇಷ ಗಮನ ಸೆಳೆಯುತ್ತದೆ.

ಇಂದು ಸ್ವಾತಂತ್ರ್ಯ ಬಂದು ಐದು ದಶಕಗಳು ಕಳೆದರು ದಲಿತರ ಮೇಲೆ ದೌರ್ಜನ್ಯಗಳು ಹೆಚ್ಚುತ್ತಲೇ ಇವೆ. 1995 ರಿಂದ 1997 ರ ನಡುವೆ ಪೋಲಿಸರಿಂದ ದಾಖಲಾಗಿರುವ ಒಟ್ಟು 91,925 ಪ್ರಕರಣಗಳಲ್ಲಿ 1786 ಜನರು ಮಾರಣಾಂತಿಕವಾಗಿ ಸತ್ತಿದ್ದಾರೆ. 3507 ದಲಿತ ಮಹಿಳೆಯರು ಸವರ್ಣಿಯರ ಮಾನಬಂಗಕ್ಕೆ ಒಳಗಾಗಿದ್ದಾರೆ. 13973 ದಲಿತರು ತೀವ್ರ ಗಾಯಗೊಂಡಿದ್ದಾರೆ. 38610 ಪ್ರಕರಣಗಳಲ್ಲಿ ದಲಿತರ ನಾಗರಿಕ ಹಕ್ಕುಗಳನ್ನು ವಂಚಿಸಲಾಗಿದೆ, ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಈ ಅಂಕಿ ಸಂಖ್ಯೆಗಳನ್ನು ಅಧಿಕೃತವಾಗಿ ರಾಷ್ಟ್ರೀಯ ಪರಿಶಿಷ್ಟ ಜಾತಿ ಮತ್ತು ಜನಾಂಗಗಳ ಆಯೋಗ'[57] ಬಿಡುಗಡೆ ಮಾಡಿದೆಯದರೂ ಅನಧಿಕೃತವಾಗಿ ಲಕ್ಷನುಗಟ್ಟಲೇ ಪ್ರಕರಣಗಳು ದಲಿತರು ಇನ್ನೂ ತಮ್ಮ ಮಾನವ ಹ್ಕುಗಳನ್ನು ಅನುಭವಿಸದಂತೆ ಮಾಡಿವೆ. ಪ್ರತಿನಿತ್ಯ ದಿನಪತ್ರಿಕೆ, ಮಾಧ್ಯಮಗಳಲ್ಲಿ ದಲಿತರ ಮೇಲೆ ದೌರ್ಜನ್ಯ ಎಸಗಿದ, ದಲಿತ ಮಕ್ಕಳ ಶಿಕ್ಷಣ ಪ್ರಕ್ರಿಯೆಯಲ್ಲಿ ದೌರ್ಜನ್ಯವೆಸಗುವ ಪ್ರಕರಣಗಳನ್ನು ನೋಡುತ್ತೇವೆ. ಕರ್ನಾಟಕದಲ್ಲಿ ಇತ್ತೀಚೆಗೆ ಶಾಲೆಯೊಂದರಲ್ಲಿ ದಲಿತ ಮಕ್ಕಳೊಟ್ಟಿಗೆ 'ಬಿಸಿಯೂಟ' ಸ್ವೀಕರಿಸದಂತೆ ಮಾಡಿದ ಬಿಸಿಯೂಟ ಬಹಿಷ್ಕರಿಸಿದ, ಸವರ್ಣೀಯವನ್ನು ಕಂಡಿದ್ದೇವೆ, ಹಾಗೆಯೇ ದಲಿತ ಮಹಿಳೆಯರು ಮಾಡಿದ ಊಟ ತಿರಸ್ಕರಿಸಿ ಪ್ರಕರಣಗಳನ್ನು ಗಮನಿಸಿದ್ದೇವೆ.

ಇದು ದಲಿತರ ಮೇಲಿನ ದೌರ್ಜನ್ಯಗಳ ಹೀನಾಯ ಕಥೆಯಾದರೆ, ಸಾಂವಿಧಾನಿಕ ಸವಲತ್ತುಗಳನ್ನು ನಿರಾಕರಿಸುತ್ತಲೋ, ನಿರ್ಲಕ್ಷಿಸುತ್ತಲೇ ಬಂದಿರುವ ಉದಾಹರಣೆಗಳನ್ನು ಗಮನಿಸುತ್ತೇವೆ. ಒಂದೇ ಒಂದು ಸಾಂಖಿಕ ಉದಾಹರಣೆ ಕೊಡುವುದಾದರೆ '9 ನೇ ಪಂಚವಾರ್ಷಿಕ ಯೋಜನೆಯಲ್ಲಿ ದಲಿತರಿಗೆ, ಅವರ ಅಭಿವೃದ್ಧಿಗೆ ವಿವಿಧ ಕಾರ್ಯಕ್ರಮಗಳಡಿಯಲ್ಲಿ ಬಜೆಟ್‌ನಲ್ಲಿ ತೆಗೆದಿರಿಸಲಾದ ಒಟ್ಟು ಹಣದಲ್ಲಿ ಕೇವಲ ಪ್ರತಿಶತ 2 ರಷ್ಟು ಹಣವನ್ನು ಮಾತ್ರ ಖರ್ಚು ಮಾಡಲಾಗಿದೆ.'[58] ಆದರೆ 2001 ರ ಜನಗಣತಿ ಪ್ರಕಾರ ಒಟ್ಟು ಜನಸಂಖ್ಯೆಯಲ್ಲಿ 25 ಕೋಟಿಗಿಂತಲೂ ಹೆಚ್ಚು ಇರುವ ದಲಿತರು ಇಂತಹ ನಿರ್ಲಕ್ಷ್ಯದಿಂದ ಅಭಿವೃದ್ಧಿ ವಂಚಿತರಾದರೂ ಈ ದೇಶದ ಮಾನವ ಅಭಿವೃದ್ಧಿ (Human Development) ಸೂಚ್ಯಾಂಕದ ಹಿತದೃಷ್ಟಿಯಿಂದ ಗಂಭೀರವಾಗಿ ಪರಿಗಣಿಸಬೇಕಾದ ಗುಂಪಾಗಿದ್ದಾರೆ. ಶತಶತಮಾನಗಳಿಂದ ವಿದ್ಯೆ, ಆರೋಗ್ಯ, ಬೌದ್ಧಿಕ ಸ್ವಾತಂತ್ರ್ಯ, ಮತ್ತು ಸಾಂಸ್ಕೃತಿಕ ಪರಿಕರಗಳಿಂದ ವಂಚಿತರಾದ ದಲಿತರು 'ಮಾನವ ಸಂಪನ್ಮೂಲ'ವಾಗಿ ದೇಶದ ಮುಖ್ಯವಾಹಿನಿಯಲ್ಲಿ ಸೇರುವ ಸಮಸ್ಯೆಯೂ ಇಂತಹ ಸಂದರ್ಭದಲ್ಲಿ ಮುಖ್ಯ ಪ್ರಶ್ನೆಯಾಗುತ್ತದೆ. ಈ ಬೃಹತ್ ಸಂಖ್ಯೆಯ ಶೋಷಿತ ವರ್ಗವನ್ನು, ಅವರ ಸಮಗ್ರ ಅಭಿವೃದ್ಧಿಯನ್ನು ನಿರ್ಲಕ್ಷಿಸಿದರೆ ಭಾರತದ ಮಾನವ ಅಭಿವೃದ್ಧಿ ಸೂಚ್ಯಾಂಕ ಈಗಿರುವ ಸ್ಥಾನದಿಂದ ಸುಧಾರಿಸಿ ಮೇಲೆರಲು ಸಾಧ್ಯವೇ ಎಂಬುದನ್ನು ಈ ದೇಶದ ಅಭಿವೃದ್ಧಿಯ ಬಗ್ಗೆ ಕಳಕಳಿಯುಳ್ಳವರು ಗಮನ ಹರಿಸಬೇಕಾಗಿದೆ.

ಇಂತಹ 'ರಾಷ್ಟ್ರೀಯ ಹಿತಾಸಕ್ತಿಗಳ ಹಿನ್ನೆಲೆಯಲ್ಲಿ ಕಳಕಳಿಯೊಂದಿಗೆ ಪ್ರಸ್ತುತ 'ಕರ್ನಾಟಕದ ದಲಿತ ಬೌದ್ಧರ ಸಾಂಸ್ಕೃತಿಕ' ಅಧ್ಯಯನ ಮೇಲಿನ ತಾತ್ವಿಕ ಹಿನ್ನೆಲೆಗಳಲ್ಲಿ, ಚಾರಿತ್ರಿಕ ಪ್ರಯತ್ನಗಳ ದಲಿತ ವಿಮೋಚನೆಯ ಪ್ರಶ್ನೆಗಳ ತಳಹದಿಯ ಮೇಲೆ ಬೌದ್ಧಧರ್ಮ, ಅಂಬೇಡ್ಕರರವರು ರೂಪಿಸಿದ ಸಾಂಸ್ಕೃತಿಕ ಪಥ ಯಾವ ರೀತಿ ದಲಿತರನ್ನು ಒಟ್ಟು ವಿಮೋಚನೆಗೆ ಕರೆದೊಯ್ಯುತ್ತಿದೆ ಎಂಬುದರ ಕುರಿತು ಬೆಳಕು ಚೆಲ್ಲುತ್ತದೆ.

## 1.1. (ಕ) ಪ್ರಸ್ತುತ ಅಧ್ಯಯನದ ವ್ಯಾಪ್ತಿ:

'ಕರ್ನಾಟಕದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನ - ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ' ಈ ಅಧ್ಯಯನವನ್ನು 'ವಸಹಾತುಶಾಹಿ ಕಾಲಘಟ್ಟದ ಉತ್ತರಾರ್ಧದಲ್ಲಿ ಭಾರತದ ಸಾಮಾಜಿಕ ಪರಿವರ್ತನೆಯ ಇತಿಹಾಸವನ್ನು ಹಿನ್ನಲೆಯಾಗಿರಿಸಿಕೊಂಡು, ಸ್ವತಂತ್ರ ಭಾರತದಲ್ಲಿ ಸಮಕಾಲೀನ ಸಂದರ್ಭದವರೆಗಿನ ಕಾಲಘಟ್ಟದ' ಮಿತಿಯಲ್ಲಿ ನಡೆಸಲಾಗಿದೆ. ''ಪುನರುಜ್ಜೀವನ ಎಂದರೆ ದಲಿತರು ಬೌದ್ಧ ಧರ್ಮವನ್ನು ತಮ್ಮ ಧಾರ್ಮಿಕ ಐಡೆಂಟಿಟಿಯಾಗಿ ತಮ್ಮ ವಿಮೋಚನೆಯ ಸಾಧನವಾಗಿ ಹೊಂದುತ್ತ ಅವರು ರೂಪಿಸಿಕೊಂಡ ಧಾರ್ಮಿಕ ಜೀವನದ ಹಿನ್ನಲೆಯ ಪುನರುಜ್ಜೀವನವೆಂದು'' ಗುರುತಿಸುವುದು ಮುಖ್ಯವಾಗುತ್ತದೆ. ಈ ಅಧ್ಯಯನದಲ್ಲಿ 'ಪುನರುಜ್ಜೀವನ' ವು ಭೌತಿಕ ಸ್ವರೂಪಕ್ಕಿಂತ 'ದಲಿತ ವಿಮೋಚನೆಯ' ಸಾಧನವಾಗಿ ಬೌದ್ಧ ಧರ್ಮವನ್ನು ಒಂದು ಪರಿವರ್ತನ ಪ್ರಕ್ರಿಯೆಯಾಗಿ ಪರಿಕಲ್ಪಿಸಿದೆ. ಐತಿಹಾಸಿಕವಾದ ವಿಶ್ಲೇಷಣೆಗೆ ಎಲ್ಲ ಅಧ್ಯಾಯಗಳಲ್ಲೂ ಸಾಂದರ್ಭಿಕವಾಗಿ ಪ್ರಾಚೀನ ಕಾಲದಿಂದ ಇಲ್ಲಿಯವರೆಗೆ ಬೌದ್ಧ ಧರ್ಮದ ವಿವರಗಳನ್ನು ಅಧ್ಯಯನದ ಅರ್ಥೈಸುವಿಕೆಗೆ ಬುನಾದಿಯಾಗಿ ಬಳಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನದ ಪ್ರಸ್ತಾವನೆಯಲ್ಲಿ ಹೇಳಿದಂತೆ ಈ ಅಧ್ಯಯನಕ್ಕೆ ಕಾಲ ಘಟ್ಟದ ಮಿತಿಯ ಜೊತೆಗೆ ಬೌದ್ಧ ಅಧ್ಯಯನದ ಹಲವಾರು

ಆಯಾಮಗಳಲ್ಲಿ ಭಾರತದ ಸಂದರ್ಭದಲ್ಲಿ ಪ್ರಸ್ತುತವೆನಿಸುವ 'ದಲಿತ ವಿಮೋಚನೆಯ ಸಾಂಸ್ಕೃತಿಕ ಐಡೆಂಟಿಟಿಯಾಗಿ ಬೌದ್ಧ ಧರ್ಮ - ಅಂಬೇಡ್ಕರ್‌ರವರ ಪರಿಕಲ್ಪನೆಗಳು (Buddhist Cultural Identity and Dalit Liberation – Ambedkar's Perspectives) ಎಂಬ ಮಹತ್ವದ ಆಯಾಮ ಕುರಿತು ಮಾತ್ರ ಅಧ್ಯಯನ ಮಾಡುತ್ತದೆ. ಪ್ರಸ್ತುತ ಅಧ್ಯಯನದ ವ್ಯಾಪ್ತಿಗಳನ್ನು ಸಾಮಾನ್ಯವಾಗಿ ಈ ಕೆಳಗಿನಂತೆ ಗುರುತಿಸಲಾಗಿದೆ.

1. ಡಾ. ಅಂಬೇಡ್ಕರ್ ಪೂರ್ವದಲ್ಲಿ ಭಾರತೀಯ ಸಂದರ್ಭ (ವಸಹಾತುಶಾಹಿ ಕಾಲಘಟ್ಟ) ಮತ್ತು ಕರ್ನಾಟಕದಲ್ಲಿ ಬೌದ್ಧ ಧರ್ಮ ಪ್ರಚಲಿತವಿದ್ದ ಬಗ್ಗೆ ಮತ್ತು ಅದರ ಪುನರುಜ್ಜೀವನದ ಬಗ್ಗೆ ಮಾತ್ರ ಈ ಅಧ್ಯಯನ ವಿಶ್ಲೇಷಿಸುತ್ತದೆ.

2. ಡಾ. ಅಂಬೇಡ್ಕರ್‌ರವರ ಸಮಕಾಲೀನ ಸಂದರ್ಭ ಮತ್ತು ಬೌದ್ಧ ಧರ್ಮಕ್ಕೆ ಮತಾಂತರಗೊಳ್ಳಲು ಕಾರಣವಾದ ಸಂದರ್ಭಗಳ ಕುರಿತು ವಿಶ್ಲೇಷಿಸುತ್ತದೆ.

3. ಡಾ. ಅಂಬೇಡ್ಕರ್‌ರವರ ಮತಾಂತರ ಆಂದೋಲನ ದಲಿತರ ಅಭಿವೃದ್ಧಿಯ ಮೇಲೆ ಬೀರಿದ ಪ್ರಭಾವವನ್ನು ಅವಲೋಕನ ಮಾಡುತ್ತದೆ. ದಲಿತರನ್ನು ಹೊರತುಪಡಿಸಿ ಇಂಡಿಯಾದ ಸಂದರ್ಭದಲ್ಲಿ ಬೌದ್ಧರಿರುವುದರಿಂದ ಅವರ ಸಾಂಸ್ಕೃತಿಕ ಅಧ್ಯಯನವನ್ನು ಈ ಅಧ್ಯಯನ ಒಳಗೊಂಡಿರುವುದಿಲ್ಲ.

4. ಕರ್ನಾಟಕದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನದ ಹಿನ್ನೆಲೆಯಲ್ಲಿ ಕರ್ನಾಟಕದ ದಲಿತ ಚಳುವಳಿ, ದಲಿತ ಚಿಂತಕರು, ಸಾಹಿತಿಗಳಲ್ಲಿ ಪ್ರಾತಿನಿಧಿಕವೆನ್ನಬಹುದಾದ ರೀತಿಯಲ್ಲಿ ಬೌದ್ಧ ಧರ್ಮ ಕುರಿತ ನಿಲುವುಗಳನ್ನು ಸಂಗ್ರಹಿಸಿ ಅಧ್ಯಯನದ ಮುಖ್ಯ ಕಾಳಜಿಯ ಹಿನ್ನಲೆಯಲ್ಲಿ ವಿಶ್ಲೇಷಿಸಲಾಗಿದೆ.

5. ದಲಿತರ ಒಟ್ಟು ಅಭಿವೃದ್ಧಿಯ ಸಮಸ್ಯೆಗಳು, ಮಾನವ ಹಕ್ಕುಗಳ ಸಂರಕ್ಷಣೆಯಲ್ಲಿ ಅವರ ಸಾಂಸ್ಕೃತಿಕ ಬದುಕಿನ ಮಹತ್ವವನ್ನು, ಸಾಂಸ್ಕೃತಿಕ ಸಂದಿಗ್ದತೆಗಳಿಂದ ಅವರ ಒಟ್ಟು ಸಮಾಜೋ, ಆರ್ಥಿಕ ಮತ್ತು ರಾಜಕೀಯ ಹಕ್ಕುಗಳ ಸಾಧನೆಗೆ ಹಿನ್ನಡೆಯಾದ ಅಂಶಗಳನ್ನು ಈ ಅಧ್ಯಯನ ವಿಶ್ಲೇಷಿಸುತ್ತದೆ.

6. ಪ್ರಸ್ತುತ ಅಧ್ಯಯನದಲ್ಲಿ ಉದ್ಭವಿಸುವ, ಬೆಳಕು ಕಾಣುವ ಪರಿಹಾರಾತ್ಮಕ ನಿಲುವುಗಳು, ಸಾಂಸ್ಕೃತಿಕ ಮಾದರಿ ವಿನ್ಯಾಸಗಳು, ಅಭಿವೃದ್ಧಿ ಸೂತ್ರಗಳು ಅದನ್ನು ಸ್ವೀಕರಿಸುವ, ಸ್ವತಃ ಅನುಭವಾತ್ಮಕವಾಗಿ ಗ್ರಹಿಸುವ ಜನಮಾನಸಕ್ಕೆ ಮಾತ್ರ ಅನ್ವಯಿಸಿಕೊಳ್ಳಬಹುದಾದ ಮಿತಿಯನ್ನು, ಸೀಮಿತ ವ್ಯಾಪ್ತಿಯನ್ನು ಸಹ ಈ ಅಧ್ಯಯನ ಗುರುತಿಸಿದೆ.

7. ದಲಿತರು 19 ನೇ ಶತಮಾನದ ಉತ್ತರಾರ್ಧದಲ್ಲಿ, 20 ನೇ ಶತಮಾನದ ಪೂರ್ವಾರ್ಧದಲ್ಲಿ, ಸಿಖ್, ಇಸ್ಲಾಂ ಮತ್ತು ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದ ಕುರಿತು ಈ ಅಧ್ಯಯನ ವಿಶ್ಲೇಷಣೆಯನ್ನು

ಹೊಂದಿರುವುದಿಲ್ಲ. ಆದರೆ, ಮತಾಂತರ ಪ್ರಕ್ರಿಯೆಗಳ ತಾತ್ವಿಕ ಅಂಶಗಳನ್ನು ತುಲನಾತ್ಮಕವಾಗಿ ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ.

8. ಡಾ. ಅಂಬೇಡ್ಕರ್‌ರವರು 1956 ರಲ್ಲಿ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ ಸಂದರ್ಭದಲ್ಲಿ ಹಾಗೂ ನಂತರದ ದಿನಗಳಲ್ಲಿ ಉತ್ತರ ಪ್ರದೇಶ, ಪಂಜಾಬ, ಮಹಾರಾಷ್ಟ್ರ, ಕರ್ನಾಟಕ, ಮಧ್ಯ ಪ್ರದೇಶ, ಆಂಧ್ರ ಪ್ರದೇಶ, ಕೇರಳ, ತಮಿಳುನಾಡು ಇತ್ಯಾದಿ ರಾಜ್ಯಗಳಲ್ಲಿ ದಲಿತ ಜಾತಿಗಳ ಜನರು ಬೌದ್ಧ ಧರ್ಮಕ್ಕೆ ಮತಾಂತರಗೊಂಡಿದ್ದು ಇರುತ್ತದೆ. ಕರ್ನಾಟಕದ ಬೌದ್ಧರ ಅಧ್ಯಯನದ ತುಲನಾತ್ಮಕ ಅಧ್ಯಯನಕ್ಕೆ ಮಹಾರಾಷ್ಟ್ರದ ದಲಿತ ಬೌದ್ಧರನ್ನು ಕುರಿತು ಕೈಗೊಂಡ ಅಧ್ಯಯನಗಳನ್ನು ಮಾತ್ರ ಹೆಚ್ಚಾಗಿ ಪ್ರಸ್ತಾಪಿಸಲಾಗಿದೆ.

ದಲಿತ ಬೌದ್ಧರು ಇಂದು ಸಾಮಾನ್ಯವಾಗಿ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ವಾಸಿಸುತ್ತಿದ್ದಾರೆ. ಅಧ್ಯಯನದ ದೃಷ್ಟಿಯಿಂದ 'ದಲಿತ ಬೌದ್ಧ' ಎಂಬ ತಾಂತ್ರಿಕ ಪದ ಬಳಕೆಯಾಗಿದೆಯೇ ವಿನಹ ಡಾ. ಅಂಬೇಡ್ಕರ್‌ರವರ ಪ್ರಭಾವದಿಂದ ಬೌದ್ಧ ಧರ್ಮಕ್ಕೆ ಆಕರ್ಷಿತರಾಗುತ್ತಿರುವ ಮತ್ತು ಬೌದ್ಧ ರೀತಿಯ ಜೀವನವನ್ನು ನಡೆಸುತ್ತಿರುವ ಎಲ್ಲಾ ವರ್ಗದ ಜನತೆಯನ್ನು ಉದ್ದೇಶಿಸಿ ಈ ಪದವನ್ನು ಬಳಕೆ ಮಾಡಿರುವುದಿಲ್ಲ. ಅಧ್ಯಯನಕಾರನು ಸಂಪರ್ಕಿಸಿದ ಕೆಲವು ಬೌದ್ಧ ಉಪಾಸಕರು 'ದಲಿತ ಬೌದ್ಧ' ಬಳಕೆಗೆ ತಮ್ಮ ಅಸಮ್ಮತಿ ವ್ಯಕ್ತಪಡಿಸಿದ್ದು ಉಂಟು. ಇವತ್ತು ದಲಿತ ವೀರಶೈವ, ದಲಿತ ಕ್ರೈಸ್ತ, ದಲಿತ ಸಿಖ್ ಮತ್ತು ದಲಿತ ಮುಸ್ಲಿಂ ಹೀಗೆ ಪದಗಳ ಬಳಕೆ ಆಗುತ್ತಲೇ ಇರುವುದನ್ನು ಗಮನಿಸಿ ಅಂಬೇಡ್ಕರ್‌ವರು ವಿಮೋಚನೆಗೊಳಿಸಲೆತ್ನಿಸಿದ ಜಾತಿ ಆಧಾರಿತ ಶೋಷಣೆಗೆ ಒಳಗಾದ ದಲಿತರನ್ನು ಉದ್ದೇಶಿಸಿ 'ದಲಿತ ಬೌದ್ಧ' ಪದವನ್ನು ಬಳಸಲಾಗಿದೆ.

'ದಲಿತ' ಪದ ಇಂದು ವ್ಯಾಪಕ ಅರ್ಥದಲ್ಲಿ 'ಸಾಮಾಜಿಕವಾಗಿ, ಆರ್ಥಿಕವಾಗಿ ಶೋಷಿತರಾಗಿರುವ ಎಲ್ಲಾ ಜಾತಿಯ ಬಡವರು' ಎಂಬ ಅರ್ಥದಲ್ಲಿ ಬಳಕೆಯಾಗುತ್ತಿದೆ. ಆದ್ದರಿಂದ ಪ್ರಸ್ತುತ ಅಧ್ಯಯನದ ಸಂದರ್ಭದಲ್ಲಿ ದಲಿತರೆಂದರೆ ಎಲ್ಲಾ ಜಾತಿಯ ಬಡವರೆಂದು ಉಲ್ಲೇಖಿಸಲು ಸಂದಿಗ್ದತೆ ಇರುವುದನ್ನು ಒಂದು ಮಿತಿಯಾಗಿ ಗುರುತಿಸಲಾಗಿದೆ. ಅಂಬೇಡ್ಕರ್‌ರವರ ಬೌದ್ಧ ಧರ್ಮ ಮತಾಂತರ ಚಳುವಳಿಯ ಹಿನ್ನಲೆಯಲ್ಲಿ ಈ ಆಧುನಿಕ ದಲಿತ ವ್ಯಾಖ್ಯೆಯನ್ನು ಜಾತಿ ಆಧಾರದ 'ಅಸ್ಪೃಶ್ಯತೆಯ' ಶೋಷಣೆಗೆ ಒಳಗಾದ ಜನಸಮುದಾಯದ ಮಿತಿಯಲ್ಲಿ ಪರಿಗಣಿಸಿ ದಲಿತ ಬೌದ್ಧ ಪದವನ್ನು ಬಳಕೆ ಮಾಡಲಾಗಿದೆ. ಇವತ್ತು ಸಾಂವಿಧಾನಿಕ ಅನುಸೂಚಿತ ಜಾತಿಗಳ ಪಟ್ಟಿಯಲ್ಲಿ ಸೇರಿಕೊಳ್ಳುತ್ತಿರುವ ಎಲ್ಲಾ ಜಾತಿಗಳು ಅಸ್ಪೃಶ್ಯತೆಯ ಆಧಾರದ ಅಸಮಾನತೆಯಲ್ಲಿ ಸಾಮಾಜಿಕ ಮತ್ತು ಆರ್ಥಿಕ ಹಕ್ಕುಗಳಿಂದ ವಂಚಿತವಾದ ಜಾತಿಗಳಾಗಿರುವುದಿಲ್ಲ. ಹಾಗಾಗಿಯೇ ಇಂದು ಕರ್ನಾಟಕದ ದಲಿತ ಚಳುವಳಿಯ ಬಣಗಳಲ್ಲಿ 'ದಲಿತ' ಪದವನ್ನು ಜಾತಿ ಆಧಾರಿತ ಅಂಶಗಳಲ್ಲಿ ಶೋಷಿತವಾಗಿರುವ 'ಅಸ್ಪೃಶ್ಯರನ್ನು' ಉದ್ದೇಶಿಸಿ ವ್ಯಾಖ್ಯಾನಿಸುತ್ತಿರುವುದನ್ನು ಗಮನಿಸಬಹುದಾಗಿದೆ.

ಈ ರೀತಿಯ ದಲಿತ ಬೌದ್ಧ ಪದದ ಬಳಕೆ ಈ ಅಧ್ಯಯನದ ಮಿತಿ ಮತ್ತು ಸಾಂಸ್ಕೃತಿಕ ಸಂದಿಗ್ದತೆಯೂ ಹೌದೆಂದು ಸ್ವೀಕರಿಸಲು ಅಧ್ಯಯನಕಾರನ ಮನವಿ ಇದೆ. ಇದು ಒಂದು ರೀತಿ. ಒಂದು 'ಶೋಷಿತ ಜನಸಮುದಾಯ ಇನ್ನೂ ಆರ್ಥಿಕವಾಗಿ ಅಭಿವೃದ್ಧಿ ಹೊಂದದೇ 'ದಲಿತ' ರಾಗಿಯೇ ಇರುವ

ಆದರೆ ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಬೌದ್ಧರಿರುವ ಸಮಕಾಲೀನ ಭಾರತದ ಸಾಮಾಜಿಕ ಸಂದಿಗ್ಧತೆಯನ್ನು ಸೂಚಿಸುತ್ತದೆಯೇ ಎಂಬುದು ವಿಶ್ಲೇಷಣಾರ್ಹ ಆಯಾಮವಾಗಿದೆ.

ಪ್ರಾರಂಭದಲ್ಲಿ ಪ್ರಸ್ತಾವನೆಯಲ್ಲಿ ನಿವೇದಿಸಿದಂತೆ, ಇಂದು ಅಂಬೇಡ್ಕರ್‌ರವರ ಜೀವನ, ಅವರ ವಿಚಾರಧಾರೆ ಸಮಾಜದ ಎಲ್ಲಾ ವರ್ಗದ ಜನರ ಮೇಲೆ ಪ್ರಭಾವ ಬೀರಿದ್ದನ್ನು ಕಾಣಬಹುದಾಗಿದೆ. ರಾಷ್ಟ್ರೀಯ, ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಅವರ ವಿಚಾರಗಳನ್ನು, ದಲಿತ ವಿಮೋಚನಾ ಮಾದರಿಗಳನ್ನು, ಕಾರ್ಯತಂತ್ರಗಳನ್ನು ವ್ಯಾಪಕವಾಗಿ ಅಧ್ಯಯನ ಮಾಡಲಾಗುತ್ತಿದೆ. ಅನೇಕ ವಿಶ್ವವಿದ್ಯಾಲಯಗಳ ಅಂಬೇಡ್ಕರ್ ಅಧ್ಯಯನ ಪೀಠಗಳು, ಬೌದ್ಧ ಅಧ್ಯಯನ ಪೀಠಗಳನ್ನು ಪ್ರಾರಂಭಿಸಿ ಬೌದ್ಧಿಕ ಸಂವಾದ, ಚಿಂತನ ಗೋಷ್ಠಿ, ವಿಚಾರ ಸಂಕಿರಣಗಳನ್ನು ಹಮ್ಮಿಕೊಳ್ಳಲಾಗುತ್ತಿದೆ. ಅಂಬೇಡ್ಕರ್ ಅನುಯಾಯಿಗಳಲ್ಲಿ ಅನೇಕ ದಲಿತರು ಬೌದ್ಧ ಬಿಕ್ಕುಗಳಿಂದಾಗಲೀ, ಉಪಾಸಕರಿಂದಾಗಲೀ ಬೌದ್ಧ ಧರ್ಮ ದೀಕ್ಷೆ ಪಡೆದು ಪ್ರಮಾಣ ಪತ್ರ ಪಡೆದ ಬೌದ್ಧರಾಗಿರದಿದ್ದರೂ ಅವರ ವೈಯಕ್ತಿಕ ನೆಲೆಯಲ್ಲಿ ಬೌದ್ಧ ಧರ್ಮವನ್ನು ಆಚರಣೆ ಮಾಡುತ್ತಿದ್ದಾರೆ. ನಿಜವಾದ ಅಂಬೇಡ್ಕರ್ ಅಭಿಮಾನಿ, ಒಬ್ಬ ಬೌದ್ಧನೇ ಆಗಿರುತ್ತಾನೆ ಎಂಬುದು ಅವರ ವಿಚಾರಗಳ ಇಂಗಿತವಾಗಿರುವುದನ್ನು ಅಲ್ಲಗಳೆಯಲಾಗದು.

ಮಹಾರಾಷ್ಟ್ರದಲ್ಲಿನ ವಾತಾವರಣಗಳನ್ನು ತೆಗೆದುಕೊಂಡು ನೋಡಿದರೆ, ಅಲ್ಲಿ ಸ್ಪಷ್ಟವಾಗಿ ದಲಿತ ವರ್ಗದಿಂದ ಬೌದ್ಧ ಧರ್ಮದ ಕಡೆಗೆ ಹೋದವರು, ಬೌದ್ಧರೆಂದು ಜನಗಣತಿಯಲ್ಲಿ ಬೌದ್ಧರೆಂದು ನಮೂದಿಸಿಕೊಂಡಿದ್ದರೂ ಅವರು, ದಲಿತ ವಿಮೋಚನೆಯ, ದಲಿತ ಅಭಿವೃದ್ಧಿಯ ಕಾಳಜಿಗಳನ್ನು ಬಿಟ್ಟುಕೊಟ್ಟಿಲ್ಲ. ಇಂದು ಸಾವಿರಾರು ಸಂಖ್ಯೆಯಲ್ಲಿ ಬೌದ್ಧ ಸಾಹಿತ್ಯ ವೇದಿಕೆಗಳು, ಬೌದ್ಧ ಸಾಂಸ್ಕೃತಿಕ ಸಂಘಟನೆಗಳು, ಅಭಿವೃದ್ಧಿ ಸಂಸ್ಥೆಗಳು ಬೌದ್ಧ ಧರ್ಮದ ಪ್ರಚಾರ, ಅಂಬೇಡ್ಕರ್‌ರವರು ತೋರಿಸಿದ ವಿಮೋಚನೆಯ ಮಾರ್ಗ, ದಲಿತರ ಸಮಗ್ರ ಅಭಿವೃದ್ಧಿಯ ಬಗ್ಗೆ ಸಾಕಷ್ಟು ರಚನಾತ್ಮಕ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಿವೆ.

ಹೀಗೆ ದಲಿತ ವರ್ಗದಿಂದ ಬಂದು ಧಾರ್ಮಿಕವಾಗಿ, ಆಧ್ಯಾತ್ಮಿಕವಾಗಿ ಬೌದ್ಧರಾಗಿರುವವರಿಗೆ ವೈಯಕ್ತಿಕ ನೆಲೆಯಲ್ಲಿ, ಸಾಮೂಹಿಕ ನೆಲೆಯಲ್ಲಿ ಬೌದ್ಧರೆಂಬ ಪದವಾಗಲೀ, ನವಬೌದ್ಧರೆಂಬ ಪದವಾಗಲೀ, ದಲಿತ ಬೌದ್ಧರೆಂಬ ಪದವಾಗಲೀ ಮುಖ್ಯವಾಗುವುದಿಲ್ಲ. ಇದನ್ನು ಮೀರಿದ "Dalit is dignified' ಎನ್ನುವ ಐಡೆಂಟಿಟಿಯೂ ಸಹ ತಾನೊಬ್ಬ ಅಂಬೇಡ್ಕರ್‌ವಾದಿ, ಬೌದ್ಧ ಅನುಯಾಯಿ ಎಂಬುದನ್ನು ಸಮರ್ಥವಾಗಿ ಸೂಚಿಸುವ ಪ್ರಕ್ರಿಯೆಯಾಗಿರುವುದನ್ನು ನೋಡುತ್ತೇವೆ. ಹೀಗಾಗಿ, 'ದಲಿತ ಬೌದ್ಧ' ಎಂದು ಈ ಅಧ್ಯಯನದಲ್ಲಿ ಬಳಕೆ ಮಾಡಿದ ಪದ ದಲಿತರ ಒಟ್ಟು ವಿಮೋಚನಾ ಪ್ರಕ್ರಿಯೆಯಲ್ಲಿ ತಾಂತ್ರಿಕವಾಗಿ, ಸಮಾಜ ವಿಜ್ಞಾನದ ವಿಶ್ಲೇಷಣೆಯ ಹಿನ್ನಲೆಯಲ್ಲಿ ಬಳಕೆಯಾಗಿದೆಯಾಗಿದೆಯೇ ಹೊರತು ಧಾರ್ಮಿಕ ಗುಂಪನ್ನು ಸಮುದಾಯವನ್ನು ಸೂಚಿಸುವ ಪದವಾಗಿ ಬಳಸಿಲ್ಲವೆಂಬುದನ್ನು ಗಮನಿಸಬಹುದು.

ಇಂದು ಕ್ರೈಸ್ತ ಧರ್ಮಕ್ಕೆ ಸೇರಿದ ಶೋಷಿತ ಜನರೂ ಸಹ ಅಂತಹ ಒಂದು ಜಾಗತಿಕ 'ಧಾರ್ಮಿಕ ಐಡೆಂಟಿಯ' ನಡುವೆಯೂ ಸಹ 'ದಲಿತ ಕ್ರೈಸ್ತ' ರೆಂದೇ ತಮ್ಮ ಹಕ್ಕು ಪ್ರತಿಪಾದನೆ ಮಾಡುತ್ತಾರೆ. ಅಂಬೇಡ್ಕರ್‌ವರ

ಹೆಸರಿನಲ್ಲಿಯೇ ಡಾ. ಅಂಬೇಡ್ಕರ್ ಸಾಂಸ್ಕೃತಿಕ ಸಂಶೋಧನಾ ಸಂಸ್ಥೆ ಡಾ. ಅಂಬೇಡ್ಕರ್ ದಲಿತ ಅಭಿವೃದ್ಧಿ ಸಂಸ್ಥೆ (ತಮಿಳುನಾಡು) ಗಳನ್ನು ಸ್ಥಾಪಿಸಿಕೊಂಡು ದಲಿತಾಭಿವೃದ್ಧಿಯ ಚಟುವಟಿಕೆಗಳನ್ನು ಹಮ್ಮಿಕೊಂಡಿದ್ದಾರೆ.

ಆದ್ದರಿಂದ, 'ದಲಿತ ಬೌದ್ಧ' ನವಬೌದ್ಧ, ಈ ಎಲ್ಲ ಪದಗಳು ಖಚಿತವಾಗಿ ನಮ್ಮ ದೇಶಕ್ಕೆ ಸಂಬಂಧಿಸಿದಂತೆ ವಿಶ್ಲೇಷಿತಗೊಂಡಾಗ ಒಟ್ಟು ಬೌದ್ಧ ಜನಸಂಖ್ಯೆಯ ಪ್ರತಿಶತ 80 ಕ್ಕಿಂತಲೂ ಹೆಚ್ಚಾಗಿರುವ ಪರಿಶಿಷ್ಟ ಜಾತಿ ಜನಾಂಗಗಳ ಜನ ಸಮುದಾಯವನ್ನು ಹಾಗೂ ಜನಗಣತಿಯಲ್ಲಿ ಬೌದ್ಧರೆಂದು ನೊಂದಾಯಿಸದೆಯೂ ಅಂಬೇಡ್ಕರ್‌ರವರು ಪ್ರತಿಪಾದಿಸಿದ ಬುದ್ಧನ ಮಾರ್ಗದಲ್ಲಿ ಇರುವ ಎಲ್ಲಾ ದಲಿತರನ್ನು ಸೂಚಿಸುತ್ತದೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

ವಿಶ್ವದಲ್ಲಿ ಇಂದು ಬೌದ್ಧ ಧರ್ಮ ಮತ್ತು ಆ ಕುರಿತು ಅಧ್ಯಯನಗಳು ತುಂಬಾ ವ್ಯಾಪಕವಾದ ವಿಶಾಲತೆಯನ್ನು ಪಡೆದುಕೊಳ್ಳುತ್ತಿವೆ. ಸ್ವತಃ ಅಂಬೇಡ್ಕರ್‌ರವರೇ ತಾವು ಅನುಸರಿಸುವ ಒಪ್ಪುವ ಬೌದ್ಧ ಧರ್ಮ 'ಹೀನಾಯಾನವೂ' ಅಲ್ಲದ, 'ಮಹಾಯನ' ವೂ ಅಲ್ಲ ಆದರೆ ಬುದ್ಧನ ಬೋಧನೆಗಳೇ ಕೇಂದ್ರವಾಗಿರುವ 'ನವಯಾನ' (ಧನಂಜಯ ಕೀರ್, 1971) ಎಂದು ಹೇಳುತ್ತಾರೆ. ಅಂಬೇಡ್ಕರ್, ಬೌದ್ಧ ಧರ್ಮ, ದಲಿತ ಚಳುವಳಿ ಕುರಿತು ವ್ಯಾಪಕವಾಗಿ ಅಧ್ಯಯನ ಮಾಡುತ್ತಿರುವ ಸಮಾಜ ವಿಜ್ಞಾನಿಗಳೂ ಸಹಿತ ಅಂಬೇಡ್ಕರ್ ಅವರ ಬೌದ್ಧ ಧರ್ಮವನ್ನು 'ನವಯಾನ' ವೆಂದೇ ಗುರುತಿಸುತ್ತಾರೆ. ಮಹಾಯಾನಿಗಳು ಅರ್ಥೈಸುವ ಕರ್ಮ ಸಿದ್ಧಾಂತ, ಪುನರ್ಜನ್ಮ ಕಲ್ಪನೆಗಳಲ್ಲಿ ಅಂಬೇಡ್ಕರ್‌ವರಿಗೆ ಸಮ್ಮತಿ ಇರಲಿಲ್ಲ, ಆದ್ದರಿಂದ ಅವರದು ಖಂಡಿತವಾಗಿ ಹೊಸ ಬೌದ್ಧ ಧರ್ಮ, 'ನವಯಾನ' ಬೌದ್ಧ ಧರ್ಮ ಎಂದೇ ಇತ್ತೀಚಿನ ಅಧ್ಯಯನಗಳಲ್ಲಿ ಬಳಕೆ ಮಾಡುತ್ತಿದ್ದಾರೆ. (ರೊಡ್ರಿಗ್ಸ್ ವಲೇರಿಯನ್ : 2000, ಗೇಲ್‌ವೊಂವೆಡ್ತ : 2003, ಕ್ರಿಸ್ಟೋಫರ್ ಕ್ವೀನ್ : 2000, ನೀರಾ ಬುರ್ರಾ : 2004).

ಅಂಬೇಡ್ಕರ್‌ರವರ 'ಧಮ್ಮ' ದ ಕಲ್ಪನೆ ಈ ಅಧ್ಯಯನದ ಮುಖ್ಯ ನೆಲೆಯಾಗಿರುತ್ತದೆ. ಈ ಮೊದಲೇ ಹೇಳಿದಂತೆ, ಅಂಬೇಡ್ಕರ್‌ರವರು ಬೌದ್ಧ ಧರ್ಮವನ್ನು ಶೋಷಿತ ವ್ಯಕ್ತಿಯ ಹಾಗೂ ಸಮುದಾಯಗಳ ವಿಮೋಚನೆಯ ಮಾರ್ಗವಾಗಿ ಗ್ರಹಿಸಿದರು. ಅವರೇ ಹೇಳುವಂತೆ ಜಗತ್ತಿನ ಇತಿಹಾಸದಲ್ಲಿ 'ಮುಕ್ತಿ' (Salvation) ಯನ್ನು ಈ ಜನ್ಮದಲ್ಲಿಯೇ ಒಟ್ಟು ವ್ಯಕ್ತಿ ಸಾಧಿಸಬಹುದಾದ 'ಸಂತುಷ್ಟ' ಸ್ಥಿತಿ (State of Happiness) ಮತ್ತು ನಿಬ್ಬಾಣ ಸ್ಥಿತಿ ಎಂಬುದನ್ನು ಬುದ್ಧನ ಬೋಧನೆಗಳು ನಮಗೆ ತೋರಿಸಿವೆ ಎಂದು ಅವರು ಹೇಳುತ್ತಾರೆ. ಗೇಲ್ ಓಂವೆಡ್ತ್ ಅವರು ಗುರುತಿಸುವಂತೆ ಬೌದ್ಧ ಧರ್ಮವನ್ನು 'ವ್ಯಕ್ತಿಯ' ಮತ್ತು 'ಜಗತ್ತಿನ ಪುನರ್ ನಿರ್ಮಾಣ' (Reconstruction of the World) ದ ತಳಹದಿಯಾಗಿ ಗ್ರಹಿಸಿದರು. ಬೌದ್ಧ ಧರ್ಮ ಹೆಚ್ಚಾಗಿ ವ್ಯಕ್ತಿಯ ವೈಯಕ್ತಿಕ ನೆಲೆಯಲ್ಲಿ ಬದಲಾವಣೆಯನ್ನು ತರುವಲ್ಲಿ ಹೆಚ್ಚು ಸಾಧ್ಯತೆಗಳನ್ನು ಹೊಂದಿದೆ. (ಗೇಲ್ ಓಂವೆಡ್ತ, 2003) ಎಂದು ಅಭಿಪ್ರಾಯ ಪಡುತ್ತಾರೆ.

ಹೀಗೆ 'ವ್ಯಕ್ತಿ' ಪ್ರಾಥಮಿಕ ಘಟಕವಾಗಿ ವ್ಯಕ್ತಿಗೆ ಘನತೆಯನ್ನು ಕೊಟ್ಟ ಆ ಮೂಲಕ ವ್ಯಕ್ತಿ ಸಾಮಾಜಿಕವಾಗಿ, ಜಾಗತಿಕವಾಗಿ ಪ್ರಸ್ತುತನಾಗುವ ವಿಶಿಷ್ಟ ಕಲ್ಪನೆಗಳನ್ನು ಬುದ್ಧನ ಬೋಧನೆಗಳು ಒಳಗೊಂಡಿವೆ. ಈ ಹಿನ್ನಲೆಯಲ್ಲಿಯೇ ಬೌದ್ಧ ಧರ್ಮದಲ್ಲಿ ಬೆಳೆದು ಬಂದ ಹೀನಾಯಾನ (Narrow Vehicle)

ಮಹಾಯಾನ (Greater Vehicle), ವಜ್ರಾಯಾನ (Diamond Vehicle), ಅಂಬೇಡ್ಕರವರ 'ನವಯಾನ' (New Vehicle), ಮಾರ್ಗಗಳು ಇವತ್ತು ಎಲ್ಲವೂ ಸೇರಿಕೊಂಡು ಜಾಗತೀಕರಣದ ಸಂದರ್ಭದಲ್ಲಿ ಜಗತ್ತಿಗೆ ಬುದ್ಧನ ಕರುಣೆ, ಸಮತೆ, ಶಾಂತಿಯ ಸೂತ್ರಗಳನ್ನು ಪ್ರಚಾರಗೊಳಿಸುವ ಹಿನ್ನಲೆಯಲ್ಲಿ 'ಲೋಕಯಾನ' ವನ್ನಾಗಿ (Global Vehicle), ಜಗತ್ತಿನ ಎಲ್ಲ ಸಮಾನ ಮನಸ್ಕರು ನಡೆಯಬೇಕಾದ ಪಥವನ್ನಾಗಿ ಸ್ವೀಕರಿಸಬೇಕಾದ ಜಾಗತಿಕ ಪ್ರತಿಪಾದನೆಗಳು (ಕ್ರಿಸ್ಟೋಫರ್ ಕ್ವೀನ್ 2000) ಇಂದು ಜಗತ್ತಿನಾದ್ಯಂತ ಕಾಣಿಸಿಕೊಂಡಿವೆ.

ಹೀಗೆ ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ 'ವ್ಯಕ್ತಿ' ಯನ್ನು ಬೌದ್ಧ ಸಂಸ್ಕೃತಿ ಮೂಲ ಘಟಕವಾಗಿ ವಿಶ್ಲೇಷಿಸುತ್ತಲೇ ಒಟ್ಟು 'ದಲಿತ ವಿಮೋಚನೆಯ ಸಂಕೀರ್ಣತೆಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಹೀಗಾಗಿ ಇಲ್ಲಿ ಬಳಕೆಯಾದ ಪದಗಳು ಧಾರ್ಮಿಕ, ಸಾಂಸ್ಕೃತಿಕ ವಿಮೋಚನೆಯ ಪ್ರಕ್ರಿಯೆಯ ಒಂದು ಭಾಗವಾಗಿ ಬಳಕೆಯಾಗಿರುತ್ತವೆ ಎಂಬುದನ್ನೇ ಈ ಅಧ್ಯಯನದ ಒಂದು ಮಿತಿಯಾಗಿ, ವ್ಯಾಪ್ತಿಯಾಗಿ ಪ್ರಸ್ತುತ ಪಡಿಸಲಾಗಿದೆ.

## 1.1. (ಡ) ಪ್ರಸ್ತುತ ಅಧ್ಯಯನದ ವಿಧಾನಗಳು :

ಈಗಾಗಲೇ ಹೇಳಿದಂತೆ 'ಕರ್ನಾಟಕದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನ (ದಲಿತ ವಿಮೋಚನೆಯ ಪರಿಕಲ್ಪನೆಗಳ ನೆಲೆಯಲ್ಲಿ) ಈ ಅಧ್ಯಯನವು ಮುಖ್ಯವಾಗಿ ಅಂತರ್‌ಶಿಸ್ತೀಯ (Inter-disciplinery) ಸ್ವರೂಪದ ಅಧ್ಯಯನವಾಗಿದೆ.

ಇತ್ತೀಚಿನ ಸಾಂಸ್ಕೃತಿಕ ಅಧ್ಯಯನಗಳು ಹೆಚ್ಚಾಗಿ ಅನುಸರಿಸುವ, ಸಬಾಲ್ಟ್ರನ್ ಪರಿಕಲ್ಪನೆಗಳನ್ನು ಆಧರಿಸಿ ಕೆಳಗಿನಿಂದ ಮೇಲಕ್ಕೆ (Bottom-up approach) ಚರಿತ್ರೆಯನ್ನು ಗ್ರಹಿಸುವ ವಿಧಾನಗಳನ್ನು, ಅವಶ್ಯಕತೆಗಳನ್ನು ಪ್ರಸ್ತುತ ಪಡಿಸುತ್ತವೆ. ಸಾಮಾಜಿಕ ಪರಿವರ್ತನೆ, ಶೋಷಿತರ ವಿಮೋಚನೆಗಳು, ಶೋಷಿತರ ಮಾನವ ಹಕ್ಕುಗಳಿಗೆ ಪ್ರಸ್ತುತವಾಗುವ ಬೌದ್ಧಿಕ ತೀರ್ಮಾನಗಳನ್ನು, ಸಿದ್ಧಾಂತಗಳನ್ನು ಸಮಸ್ಯೆಗಳಿಗೆ ಪರಿಹಾರವಾಗಬಲ್ಲ ಮಾದರಿಗಳನ್ನು ನಿರೀಕ್ಷಿಸುತ್ತವೆ. ಈ ನಿರೀಕ್ಷೆಯನ್ನು ಅಲ್ಪ ಮಟ್ಟಿಗಾದರೂ ಸ್ಪಂದಿಸಲು ಸಮಾಜ ವಿಜ್ಞಾನಗಳ ಸಂಶೋಧನೆಗಳು ಗಮನಾರ್ಹ ಪ್ರಯತ್ನ ಮಾಡಲೇಬೇಕಾಗುತ್ತದೆ. ಅದು ಸಮಾಜ ವಿಜ್ಞಾನಿಯ ಮೂಲಭೂತ ಕರ್ತವ್ಯವೂ ಹೌದು. ಈ ಹಿನ್ನಲೆಯಲ್ಲಿ ಕರ್ನಾಟಕದ ದಲಿತ ಬೌದ್ಧರ ಸಂಸ್ಕೃತಿ ಕುರಿತ ಅಧ್ಯಯನದಲ್ಲಿ ಅಂತಹ ತೀರ್ಮಾನಗಳಿಗೆ ಬರಲು ಇವತ್ತಿನ ಜನಸಮುದಾಯದ ಅಭಿಪ್ರಾಯಗಳನ್ನು ಆಚಾರ ವಿಚಾರಗಳನ್ನು ವಿಶ್ಲೇಷಿಸಲೇಬೇಕಾಗುತ್ತದೆ.

ಆದ್ದರಿಂದ ಪ್ರಸ್ತುತ ಅಧ್ಯಯನ ವಸ್ತುವಿನ ಪರಿಕಲ್ಪನೆಗಳನ್ನು ಲಭ್ಯವಿರುವ ಅಧ್ಯಯನಗಳ ಬೆಳಕಿನಲ್ಲೇ ದಲಿತ ಬೌದ್ಧರ ಅಭಿಪ್ರಾಯಗಳನ್ನು ಸಂಗ್ರಹಿಸಿ ವಿಶ್ಲೇಷಿಸುವ ವಿಧಾನಕ್ಕೆ ಹೆಚ್ಚಿನ ಆದ್ಯತೆ ಕೊಡಲಾಗಿದೆ. ಸಂಗ್ರಹಿಸದ ಮಾಹಿತಿಯಲ್ಲಿ ಲಿಖಿತ ಸಾಮಗ್ರಿಯೂ ಲಭ್ಯವಿದೆ, ಮೌಖಿಕ ಸಾಮಗ್ರಿಯನ್ನೂ ಒಳಗೊಂಡಿದೆ.

ಸಾಂಸ್ಕೃತಿಕ ಬದುಕನ್ನು ಕುರಿತು ಅಧ್ಯಯನ ಮಾಡುವಾಗ 'ಚಲನಶೀಲತೆ' ಯನ್ನು ಆ ಸಂಸ್ಕೃತಿಯ ಶಕ್ತಿ ವಾಹಕಗಳನ್ನು (Driving Forces), ಸಾಂದರ್ಭಿಕವಾಗಿ ಗ್ರಹಿಸುತ್ತ ಮಾಹಿತಿ ಸಂಗ್ರಹಿಸುತ್ತ ಅಭಿಪ್ರಾಯಗಳ, ವಿಚಾರಗಳ ನಿರಂತರತೆಯನ್ನು ಗಮನಿಸುತ್ತಾ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಎರಡು ದಶಕಗಳ ಕಾಲ ಕರ್ನಾಟಕದಲ್ಲಿ ದಲಿತ ಚಳುವಳಿ ಬೌದ್ಧ ಧರ್ಮವನ್ನು ಗ್ರಹಿಸಿದ ಪರಿಯನ್ನೂ, ಸ್ವೀಕರಿಸಿದ ರೀತಿಯನ್ನು ಕ್ರಿಯೆ ಪ್ರತಿಕ್ರಿಯೆಗಳನ್ನು ಸ್ವತಃ ಅಧ್ಯಯನಕಾರನೂ ಒಂದು ಭಾಗವಾಗಿ, ಅನುಭವಾತ್ಮಕ ನೆಲೆಯಲ್ಲಿ ಅವಲೋಕಿಸಿ ಗ್ರಹಿಸಿದ ಮಾಹಿತಿಗಳ ಆಧಾರದ ನೆಲೆಯ ವಿಶ್ಲೇಷಣೆಯೂ ಪ್ರಸ್ತುತ ಅಧ್ಯಯನದ ವಿಶಿಷ್ಟತೆಯಾಗಿದೆ. ಇವತ್ತು ಕರ್ನಾಟಕದಲ್ಲಿ ಬುದ್ಧ ಬಸವ ಮತ್ತು ಅಂಬೇಡ್ಕರ ಈ ಮೂರು ಜನರ ವಿಚಾರಗಳನ್ನೇ ಆಧರಿಸಿ ಹಲವಾರು ವಿಚಾರ ಸಂಕಿರಣ, ಸಂವಾದ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ. ಈ ಸಮನ್ವಯ ಪ್ರಯತ್ನಗಳು ಸಹಿತ ಬೇರೆ ರಾಜ್ಯಗಳಿಗಿಂತ ವಿಭಿನ್ನವಾದ ಅಧ್ಯಯನದ ಆಯಾಮವನ್ನು ಸೂಚಿಸುತ್ತವೆ. 12 ನೇ ಸತಮಾನದಲ್ಲಿ ದೇಶದ ಬೇರೆ ಯಾವ ಭಾಗದಲ್ಲೂ ನಡೆಯದ ಸಮಾಜೋ-ಧಾರ್ಮಿಕ ಚಳವಳಿ ನಮ್ಮ ರಾಜ್ಯದಲ್ಲಿ ನಡೆದಿರುವುದು ಕೂಡ ಪ್ರಸ್ತುತ ಅಧ್ಯಯನದ ಹಿನ್ನೆಲೆಯಲ್ಲಿ ಮಹತ್ವದ ನೆಲೆಯಾಗಿದೆ. ಆದ್ದರಿಂದ ಅಧ್ಯಯನದಲ್ಲಿ ಬೌದ್ಧ ಸಂಸ್ಕೃತಿಯೊಂದಿಗೆ ಬಸವ ತತ್ವವನ್ನು 'ಶರಣರ ಕಾಯಕ ಸಂಸ್ಕೃತಿ' ಯನ್ನು ತೌಲನಿಕವಾಗಿ ಒಂದು ಮಿತಿಯಲ್ಲಿ ವಿಶ್ಲೇಷಿಸಲಾಗಿದೆ. ಹೀಗೆ ವ್ಯಕ್ತಿ ಮತ್ತು ಸಮುದಾಯಗಳ ಏಕಕಾಲಕ್ಕೆ ಇಲ್ಲಿ ವಿಶ್ಲೇಷಿಸಲ್ಪಟ್ಟು ಬೌದ್ಧಧರ್ಮ ದಲಿತರಿಗೆ ಪ್ರಸ್ತುತವಾಗಿರುವ ರೀತಿಯನ್ನು ಅವಲೋಕನಾತ್ಮಕ ವಿಧಾನದಿಂದ (Observation method) ಗ್ರಹಿಸಿ, ತಾತ್ವಿಕಕರಣಗೊಳಿಸಲು (Theorization) ಪ್ರಯತ್ನಿಸಲಾಗಿದೆ.

ಸಾಂಸ್ಕೃತಿಕ ಅಧ್ಯಯನಗಳ ಸಂದರ್ಭಗಳಲ್ಲಿ ವಿಭಿನ್ನ ಸಾಮಾಜಿಕ ಗುಂಪುಗಳು, ವ್ಯಕ್ತಿಗಳು ಒಳಗಿನವರಾಗಿ, ಹೊರಗಿನವರಾಗಿ (Inside the fold, out side the fold) ಬೌದ್ಧ ಧರ್ಮವನ್ನು ಅಂಬೇಡ್ಕರರವರ ವಿಚಾರಧಾರೆಯ ನೆಲೆಗಳನ್ನು ಗ್ರಹಿಸಿದ್ದನ್ನು, ಸ್ವೀಕರಿಸಿದ್ದನ್ನು, ವಿಮರ್ಶಿಸಿದ್ದನ್ನು ಪ್ರಶ್ನಿಸಿ, ತಾತ್ವಿಕ ಚರ್ಚೆಗೊಳಪಡಿಸಿ ವಾಸ್ತವ ಸ್ಥಿತಿಗಳನ್ನು ನಿರ್ವಹಿಸಿದ್ದರಿಂದ ಚರ್ಚಾ ವಿಧಾನ (Discussion Method) ವನ್ನು ಅಲ್ಲಲ್ಲಿ ಅಳವಡಿಸಿಕೊಳ್ಳಲಾಗಿದೆ. ಇಂತಹ ಆಂತರಿಕ, ಬಾಹ್ಯ ಅಭಿಪ್ರಾಯಗಳನ್ನು (Internal and External) ವಿಶ್ಲೇಷಿಸಿ ದಲಿತ ಬೌದ್ಧರ ಸಾಂಸ್ಕೃತಿಕ ಸಂದರ್ಭವನ್ನು ಅರ್ಥೈಸಿ, ವ್ಯಾಖ್ಯಾನಿಸುವ ವಿಧಾನವನ್ನು ಪ್ರಸ್ತುತ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ ಶೋಷಿತ ದಲಿತರ ಸ್ಥಾನಮಾನಗಳನ್ನು ವಿಶ್ಲೇಷಿಸುವುದರಿಂದ ಇದು ದಲಿತ ಸಮಾಜ ಶಾಸ್ತ್ರದ (Dalit Sociology) ಅಧ್ಯಯನ, ಅವರ ಸಮಾಜೋ-ಆರ್ಥಿಕ ಅಭಿವೃದ್ಧಿ ವಿಶ್ಲೇಷಿಸುವದರಿಂದ ಅಭಿವೃದ್ಧಿ ಅಧ್ಯಯನ (Developmental Study) ಅಂಬೇಡ್ಕರ್‌ರವರು ಅಸ್ಪೃಶ್ಯರ ವಿಮೋಚನೆ ಕುರಿತು ಪ್ರತಿಪಾದನೆ ಮಾಡಿ ದಲಿತರ ಸಾಮಾಜಿಕ ಆರ್ಥಿಕ ಸ್ವಾತಂತ್ರ್ಯಕ್ಕೆ ಮಹತ್ವಕೊಟ್ಟಿದ್ದರಿಂದ, ದಲಿತರ ಮಾನವ ಹಕ್ಕುಗಳಿಗೆ ಬೆಳಕು ಚೆಲ್ಲಿದ್ದರಿಂದ ಇದು ದಲಿತ ಧರ್ಮಶಾಸ್ತ್ರದ (Dalitalogy) ಅಧ್ಯಯನವೂ ಹೌದು. ಹಾಗೆಯೇ ಬುದ್ಧನ ಬೋಧನೆಗಳ, ತತ್ವಗಳ ಹಿನ್ನೆಲೆಯಲ್ಲಿ 'ವ್ಯಕ್ತಿ' ಯ ಸ್ಥಾನಮಾನ ವಿಮೋಚನೆ ಹಾಗೂ 'ವ್ಯಕ್ತಿತ್ವ' ನಿರ್ಮಾಣ ಕುರಿತು ವಿಶ್ಲೇಷಿಸುವುದರಿಂದ ಇದು ದಲಿತ ಮನಶಾಸ್ತ್ರದ (Dalit Psychology) ಅಧ್ಯಯನವೂ ಆಗಿದೆ. ಹೀಗಾಗಿ ಪ್ರಸ್ತುತ ಅಧ್ಯಯನ 'ಅಂತರ್‌ಶಾಸ್ತ್ರೀಯ' ಸ್ವರೂಪದ

ಅಧ್ಯಯನವೆಂದು ಪ್ರಾರಂಭದಲ್ಲಿ ನಿವೇದಿಸಲಾಗಿದೆ. ಈ ರೀತಿಯ ಅಧ್ಯಯನದ ಸ್ವರೂಪ, ವಿನ್ಯಾಸ ವಿವಿಧ ಆಯಾಮಗಳಲ್ಲಿ, ಈ ಕ್ಷೇತ್ರದಲ್ಲಿ ಇನ್ನು ಹೆಚ್ಚಿನ ರೀತಿಯಲ್ಲಿ ಆಳವಾದ ಅಧ್ಯಯನಗಳು ನಡೆಯಬೇಕಾದ ಸುಳಿವುಗಳನ್ನು ಕೂಡ ನೀಡುತ್ತದೆ. ಕೈಕೊಳ್ಳಬೇಕಾದ ಅಧ್ಯಯನಗಳ ಅವಶ್ಯಕತೆಗಳನ್ನು ತೆರೆದಿಡುವ ಪ್ರಯತ್ನ ಮಾಡುತ್ತದೆ.

ಅಧ್ಯಾಯ 1 ಮತ್ತು 2 ರಲ್ಲಿ ಅಧ್ಯಯನಕ್ಕೆ ಈಗಾಗಲೇ ಈ ಕ್ಷೇತ್ರಕ್ಕೆ ಸಂಬಂಧಿಸಿದ ಚಾರಿತ್ರಿಕ ಸಮಕಾಲೀನ ಗ್ರಂಥಗಳಲ್ಲಿ ಆಕರಗಳಲ್ಲಿ ಪ್ರಾಥಮಿಕ ಮತ್ತು ದ್ವಿತೀಯ ಹಂತದಲ್ಲಿ ಪರಿಗಣಿಸಬಹುದಾದ ಅಧ್ಯಯನಗಳನ್ನು, ಆಕರಗಳನ್ನು ಬಳಸಿಕೊಳ್ಳಲಾಗಿದೆ. ಈ ಎರಡೂ ಅಧ್ಯಾಯಗಳು ಪೂರ್ತಿಯಾಗಿ ಸಂಶೋಧನಾ ಕ್ಷೇತ್ರಕ್ಕೆ ಸಂಬಂಧಿಸಿದ ಗ್ರಂಥಗಳ, ವರದಿಗಳ ಗ್ರಂಥಸ್ಥ ಸಮೀಕ್ಷೆಯನ್ನಾಧರಿಸಿ, ಸಕಾಲಿಕವಾದ ಸಾಂದರ್ಭಿಕ ಅಂಶಗಳನ್ನು ಅಧ್ಯಯನದ ಅರ್ಥೈಸುವಿಕೆಗೆ ಬಳಸುತ್ತಾ ಬರವಣಿಗೆ ಕೈಗೊಂಡಿದೆ.

ಅಧ್ಯಾಯ 3 ರಲ್ಲಿನ ಆಕರಗಳನ್ನು ಸಂಗ್ರಹಿಸಲು ಅಧ್ಯಯನಕಾರ ಮಹಾರಾಷ್ಟ್ರದ ನಾಗಪುರ, ಕೊಲ್ಹಾಪೂರ, ಔರಂಗಾಬಾದ್ ಪ್ರದೇಶಗಳಲ್ಲಿ ಹಾಗೂ ಕರ್ನಾಟಕದಲ್ಲಿ ಅಂಬೇಡ್ಕರ ಪೂರ್ವದಲ್ಲಿ ಬೌದ್ಧ ಧರ್ಮ ಪ್ರಚಲಿತವಿದ್ದ ಕೋಲಾರ, ಬೆಂಗಳೂರು, ಹುಬ್ಬಳ್ಳಿ ಪ್ರದೇಶಗಳಲ್ಲಿ ಕ್ಷೇತ್ರ ಕಾರ್ಯ (Field Study) ಮಾಡಿ ಆಕರಗಳನ್ನು, ಪ್ರಾಥಮಿಕ ಮಾಹಿತಿಯನ್ನು, ಅಭಿಪ್ರಾಯಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

ಅಧ್ಯಾಯ 4 ರಲ್ಲಿ ಮೂಲ ಮಾಹಿತಿಗಾಗಿ, ಅಂಬೇಡ್ಕರರವರ ಮತಾಂತರ ಚಳುವಳಿಯಲ್ಲಿ ಕರ್ನಾಟಕದಿಂದ ಭಾಗವಹಿಸಿದ ಹಿರಿಯ ಉಪಾಸಕರನ್ನು ಸಂದರ್ಶಿಸಲಾಗಿದೆ. ಗುಲ್ಬರ್ಗಾ, ಬೀದರ್, ಬಿಜಾಪೂರಗಳಲ್ಲಿ ಕ್ಷೇತ್ರ ಕಾರ್ಯ ಮಾಡಿ ಪ್ರಾಥಮಿಕ ಮಾಹಿತಿ ಸಂಗ್ರಹಿಸಲಾಗಿದೆ (ಪ್ರಶ್ನಾವಳಿಯನ್ನು ಅನುಬಂಧಗಳಲ್ಲಿ ಗಮನಿಸಬಹುದು).

ಅಧ್ಯಾಯ 5, 6, 7 ಮತ್ತು 8 ಅಧ್ಯಾಯಗಳು ಕೂಡ ಕ್ಷೇತ್ರ ಕಾರ್ಯ, ಪ್ರಮುಖ ವ್ಯಕ್ತಿಗಳ, ಉಪಾಸಕರ ಸಂದರ್ಶಿಸಿದ ವಿವರಗಳನ್ನು ಆಧರಿಸಿ ಹಾಗೂ ಅಂಚೆ ಮೂಲಕ ಸಂದರ್ಶನ, ಪ್ರಾಥಮಿಕ ಆಕರಗಳನ್ನಾಧರಿಸಿ ಕೈಗೊಂಡಂತವುಗಳಾಗಿವೆ. (ಅಂಚೆ ಮೂಲಕ ಕಳುಹಿಸಿದ ಮಾಹಿತಿ ಸಂಗ್ರಹಣಾ ನಮೂನೆಯನ್ನು ಅನುಬಂಧಗಳಲ್ಲಿ ಗಮನಿಸಬಹುದು)

ಹೀಗೆ ಪ್ರಸ್ತುತ ಅಧ್ಯಯನವನ್ನು ಸಾಹಿತ್ಯ ಸಮೀಕ್ಷೆ, ಕ್ಷೇತ್ರ ಕಾರ್ಯ, ಪ್ರಶ್ನಾವಳಿಗಳ ಮೂಲಕ, ವ್ಯಕ್ತಿಗಳ ವೈಯಕ್ತಿಕ ಸಂದರ್ಶನಗಳ ಮೂಲಕ ಮತ್ತು ಅಂಚೆ ಮೂಲಕ ಮಾಹಿತಿಯನ್ನು ಸಂಗ್ರಹಿಸುವ ವಿಧಾನಗಳ ಮೂಲಕ ಕೈಗೊಳ್ಳಲಾಗಿದೆ. ಹೀಗಾಗಿ ಸಾಧ್ಯವಿದ್ದ ಎಲ್ಲಾ ಸಮಾಜೋ-ಆರ್ಥಿಕ ಬದಲಾವಣೆಯ ಅಧ್ಯಯನದ ಸ್ವರೂಪದ ವಿಧಾನಗಳನ್ನು ಅಳವಡಿಸಿಕೊಂಡು ಈ ಅಧ್ಯಯನ ಕ್ಷೇತ್ರದ ಬಗ್ಗೆ ಒಂದು ವ್ಯಾಪಕವಾದ ದೃಷ್ಟಿಕೋನವುಳ್ಳ ಸಾಂಸ್ಕೃತಿಕ ಪರಿಕಲ್ಪನೆಗಳನ್ನು ಬಿಂಬಿಸಲು ಪ್ರಯತ್ನಿಸಲಾಗಿದೆ.

## 1.2. ಪ್ರಸ್ತುತ ಸಂಶೋಧನಾ ಕ್ಷೇತ್ರಕ್ಕೆ ಸಂಬಂಧಿಸಿದ ಸಾಹಿತ್ಯ ಸಮೀಕ್ಷೆ :

ಈಗಾಗಲೇ ಹೇಳಿದಂತೆ ಪ್ರಸ್ತುತ ಅಧ್ಯಯನವು ವಸಹಾತುಷಾಹಿ ಭಾರತದ ಸಂದರ್ಭದ ಕೊನೆಯ ಕಾಲಘಟ್ಟ ಮತ್ತು ಸಮಕಾಲೀನ ಸಂದರ್ಭದವರೆಗಿನ ಅವಧಿಯ ಸೀಮಿತ ವ್ಯಾಪ್ತಿಯನ್ನು ಹೊಂದಿರುತ್ತದೆ. ಕರ್ನಾಟಕದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿಯೇ ಬ್ರಾಹ್ಮಣೇತರ ಚಳುವಳಿ ಮತ್ತು ಅಸ್ಪೃಶ್ಯರ 'ಜಾಗೃತ ಪ್ರಜ್ಞೆ' ಯ ವಿವಿಧ ಆಯಾಮಗಳನ್ನು ಅನುಲಕ್ಷಿಸಿ ದಲಿತರು ಹಿಂದೂ ಧರ್ಮ ನಿರಾಕರಿಸುತ್ತ ಪರ್ಯಾಯ ಧಾರ್ಮಿಕ, ಸಾಂಸ್ಕೃತಿಕ ಐಡೆಂಟಿಟಿಗಳನ್ನು ಶೋಧಿಸುವ ಮಹತ್ವದ ಪ್ರಕ್ರಿಯೆಯನ್ನು ವಿಶ್ಲೇಷಿಸಲು ಪ್ರಯತ್ನಿಸಿದೆ. ಕರ್ನಾಟಕದಲ್ಲಿ ಅಶೋಕನ ಪೂರ್ವದಲ್ಲಿಯೇ ಬೌದ್ಧ ಧರ್ಮವು ಪ್ರಚಲಿತವಿದ್ದ ಬಗ್ಗೆ ಚರಿತ್ರಕಾರರು ಅಭಿಪ್ರಾಯ ಪಟ್ಟಿರುವುದನ್ನು ಗಮನಿಸುತ್ತೇವೆ. ಪ್ರಸ್ತುತ ಅಧ್ಯಯನ ಚಾರಿತ್ರಿಕ ನೋಟಗಳ ಹಿನ್ನಲೆಯಲ್ಲಿಯೇ ಆಧುನಿಕ ಕಾಲಘಟ್ಟದಲ್ಲಿ ದಲಿತ ವಿಮೋಚನೆಯ ಕಾರ್ಯತಂತ್ರವಾಗಿ ಧಾರ್ಮಿಕ, ಸಾಂಸ್ಕೃತಿಕ ಐಡೆಂಟಿಯಾಗಿ ಗ್ರಹಿಸಿದ್ದರಿಂದ, ಬೌದ್ಧ ಧರ್ಮದ ಮೂಲ ಸಾಹಿತ್ಯ ಆಕರಗಳನ್ನು ತಾತ್ವಿಕ ನೆಲೆಯಲ್ಲಿ ಸ್ವೀಕರಿಸಿ, ಅಂಬೇಡ್ಕರ್‌ರವರು ವ್ಯಾಖ್ಯಾನಿಸಿದ 'ನವಯಾನ' ಬೌದ್ಧ ಧರ್ಮದ ಆಧಾರದಲ್ಲಿಯೇ ವಿಶ್ಲೇಷಿತವಾದ ಆಕರ ಗ್ರಂಥಗಳನ್ನು ಅವಲಂಬಿಸುವುದು ಅನಿವಾರ್ಯವಾಗುತ್ತದೆ.

ತಳಸಮುದಾಯಗಳ ಚಾರಿತ್ರಿಕ ಅಧ್ಯಯನಗಳು ತೀರಾ ಇತ್ತೀಚೆಗೆ ಪ್ರಾರಂಭವಾಗಿ ಹಿಂದೂ ಧಾರ್ಮಿಕ ವ್ಯವಸ್ಥೆ ಜಾತೀಯತೆಯ ಕ್ರೌರ್ಯಗಳಿಗೆ ಸಾಂಸ್ಕೃತಿಕ ದಬ್ಬಾಳಿಕೆಗೆ ಒಳಗಾದ ಜನಸಮುದಾಯಗಳು ಅಖಿಲ ಭಾರತದಾದಿಯಾಗಿ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವಗಳಿಗಾಗಿ ಹಂಬಲಿಸುವ ಪ್ರಕ್ರಿಯೆಗಳ ಕುರಿತು ಹೊಸ ಅರ್ಥ ವಿವರಣೆಗಳು ಇದೀಗ ಸೃಷ್ಟಿಯಾಗುತ್ತಿವೆ. ಇಂತಹ ವೈಚಾರಿಕ ನೆಲೆಯ, ಲೌಕಿಕ ಪ್ರಗತಿ ಮತ್ತು ವಾಸ್ತವವಾದೀ ಧೋರಣೆಯ ಅರ್ಥ ವಿವರಣೆಗಳಿಗೆ ಸ್ವತಃ ಅಂಬೇಡ್ಕರ್‌ರವರೇ ಒಂದು ಅಧ್ಯಯನ ಪರಂಪರೆಯನ್ನು ನಿರ್ಮಿಸಿರುವುದರಿಂದ ಪ್ರಸ್ತುತ ಅಧ್ಯಯನ ಅವರ ಬರಹ ಮತ್ತು ಭಾಷಣಗಳನ್ನೇ ಮೂಲ ಆಕರಗಳೆಂದು ಸ್ವೀಕರಿಸಿದೆ.

ಬೌದ್ಧ ಚಾರಿತ್ರಿಕ ನೆಲೆಗಳು, ಸಾಹಿತ್ಯಿಕ ನೆಲೆಗಳು ಮತ್ತು ಸಾಂಸ್ಕೃತಿಕ ನೆಲೆಗಳ ಅಧ್ಯಯನಗಳು ವಿರಳವಾಗಿ ನಡೆದಿರುವುದು ಕಂಡು ಬರುತ್ತಿದೆಯಾದರೂ ಅವುಗಳಿಗೆ ಸ್ಪಷ್ಟವಾದ, ನಿಖರವಾದ ಪ್ರಾಕ್ತನ ಶಾಸ್ತ್ರಾಧಾರದ ಆಕರಗಳು ಬುನಾದಿಯಾಗಿರುವುದನ್ನು ನೋಡುತ್ತೇವೆ. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಬೌದ್ಧ ಧರ್ಮದ ಅಧ್ಯಯನಗಳನ್ನು ಒಳಗೊಂಡ ಪ್ರೊ. ಬಿ. ಶೇಕ ಅಲಿಯವರ 'ಕರ್ನಾಟಕ ಚರಿತ್ರೆ' ಡಾ. ಎಂ. ಚಿದಾನಂದ ಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಕನ್ನಡ ವಿಶ್ವ ವಿದ್ಯಾಲಯದ ವಿಶಿಷ್ಟ ಪ್ರಯತ್ನವಾದ 'ಧರ್ಮ' ಕುರಿತ ವಿಶ್ವಕೋಶ', ಡಾ. ಚಿದಾನಂದ ಮೂರ್ತಿಯವರ 'ಮಧ್ಯಕಾಲೀನ ಕನ್ನಡ ಸಾಹಿತ್ಯ ಮತ್ತು ಅಸ್ಪೃಶ್ಯತೆ', ಗ್ಯಾಝೆಟಿಯರ್‌ಗಳು, ಆರ್.ಸಿ. ಹಿರೇಮಠ ಇವರ 'ಬುದ್ಧಿಸಂ ಇನ್ ಕರ್ನಾಟಕ' ಧರ್ಮಾನಂದ ಕೋಸಂಬಿ (1956) ಅವರ 'ಭಗವಾನ್ ಬುದ್ಧ' ಕೆ.ಎಸ್.ಭಗವಾನ್ ಅವರು ಅನುವಾದಿಸಿದ ಸ್ವಾಮಿ ಧರ್ಮತೀರ್ಥರ 'ಹಿಂದೂ ಸಾಮ್ರಾಜ್ಯಷಾಹಿಯ ಇತಿಹಾಸ ', ಡಿ.ಆರ್. ನಾಗರಾಜ್ ಅವರ 'ಸಂಸ್ಕೃತಿ ಕಥನ' ಮ.ನ.ಜ. ರವರ 'ಅಂಬೇಡ್ಕರ್ ವಿಚಾರ ಸಾಹಿತ್ಯ', ಇನ್ನೂ ಮುಂತಾದ ಆಕರಗಳಲ್ಲಿ

ಬೌದ್ಧ ಧರ್ಮದ ಕುರಿತ ವಿಶ್ಲೇಷಣೆಗಳನ್ನು ಸಮೀಕ್ಷಿಸಿದೆ. ಈ ಎಲ್ಲ ಗ್ರಂಥಗಳಲ್ಲಿ ಪ್ರಮುಖವಾಗಿ ಪ್ರಾಚೀನ ಕಾಲದಿಂದ ಹಿಡಿದು ಕರ್ನಾಟಕದಲ್ಲಿ 12 ನೇ ಶತಮಾನದವರೆಗೆ 'ಬೌದ್ಧ ಸಂಸ್ಕೃತಿ' ಕುರಿತು ಸಂಶೋಧನೆ ಮಾಡಿರುವ ಡಾ. ತಾಳ್ತಜೆ ವಸಂತ ಕುಮಾರ ಇವರ ಮಹತ್ವದ 'ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ' ಸಂಶೋಧನಾ ಅಧ್ಯಯನವನ್ನು ಸಮೀಕ್ಷಿಸುವುದರ ಮುಖಾಂತರ ಪ್ರಸ್ತುತ ಅಧ್ಯಯನಕ್ಕೆ ಚಾರಿತ್ರಿಕ ದೃಷ್ಟಿಕೋನ ಮತ್ತು ಪ್ರೇರಣೆ ಪಡೆಯಲಾಗಿದೆ.

'ಜಾತಿ, ಅಸ್ಪೃಶ್ಯತೆ, ಒಟ್ಟಾರೆ ಧಾರ್ಮಿಕ ಶೋಷಣೆಯ ಖಚಿತ ಅಧ್ಯಯನಗಳು ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ಸಂಶೋಧನಾ ಅಧ್ಯಯನಗಳಿಂದಲೇ ಪ್ರಾರಂಭವಾಗಿರುವುದರಿಂದ ಮಹಾರಾಷ್ಟ್ರ ಸರ್ಕಾರ ಪ್ರಕಟಿಸಿರುವ ಸಂಪುಟ 1 ರಿಂದ 17 ರ ವರೆಗಿನ ಎಲ್ಲಾ ಸಂಪುಟಗಳಲ್ಲಿ ಬೌದ್ಧ ಧರ್ಮ ಕುರಿತ ವಿವರಗಳನ್ನು ವಿಶ್ಲೇಷಣೆಗಳನ್ನು ಸಮೀಕ್ಷಿಸಲಾಗಿದೆ. ಇವುಗಳೇ ಪ್ರಸ್ತುತ ಅಧ್ಯಯನ ಪ್ರಾಥಮಿಕ ಆಕರಗಳೆಂದರೆ ತಪ್ಪಾಗಲಾರದು.

ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ಕೋಲಂಬಿಯಾ ವಿಶ್ವವಿದ್ಯಾಲಯದಲ್ಲಿ ಮಂಡಿಸಿದ "Annihilation of Caste" ನಿಂದ ಹಿಡಿದು 17 ನೇ ಸಂಪುಟದಲ್ಲಿನ, "Buddhist Movement in India – A Blue Print" ವರೆಗೆ "Why I like Buddhism" ವರೆಗಿನ ಎಲ್ಲಾ ವಿವರಗಳನ್ನು ವಿಶ್ಲೇಷಣೆಗಳನ್ನು ದೃಷ್ಟಿಕೋನಗಳನ್ನು ಪರಿಕಲ್ಪನೆಗಳನ್ನು ಅವರ ಬೌದ್ಧ ಕಾರ್ಯಚಟುವಟಿಕೆಗಳನ್ನು ಸಮೀಕ್ಷಿಸಿ ದಲಿತ ವಿಮೋಚನೆಯ ಕಾರ್ಯತಂತ್ರವಾಗಿ ಬೌದ್ಧಧರ್ಮವನ್ನು ಪ್ರಸ್ತುತ ಅಧ್ಯಯನದಲ್ಲಿ ವಿವರಿಸುವ ಅವಶ್ಯಕತೆಯನ್ನು ಮನಗಾಣಲಾಗಿದೆ.

ಅಧ್ಯಯನಕಾರನು ಕರ್ನಾಟಕದ ವಿಹಾರಗಳು, ಪ್ರಮುಖ ಬೌದ್ಧ ಸಂಸ್ಥೆಗಳಿಗೆ ಸಂದರ್ಶಿಸಿ ಕ್ಷೇತ್ರ ಕಾರ್ಯ ಮಾಡಿದ ಸಂದರ್ಭದಲ್ಲಿ ವಿಹಾರಗಳು, ಬೌದ್ಧ ವಕ್ತಾರರು, ದಲಿತ ಚಳುವಳಿಯ ನೇತಾರರು ಸಂಘಟನೆಗಳು ಪ್ರಕಟಿಸಿದ ವರದಿ, ಕರಪತ್ರ ಮತ್ತು ಸಂದರ್ಶನಾವಳಿಗಳಲ್ಲಿ ಅವರ ನೀಡಿರುವ ಅಭಿಪ್ರಾಯಗಳನ್ನು ಸಹಿತ ಪ್ರಸ್ತುತ ಅಧ್ಯಯನ ಅವುಗಳ ಸಾಂಸ್ಕೃತಿಕ ಆಯಾಮದ ಮಹತ್ವವನ್ನು ಅನುಲಕ್ಷಿಸಿ ಪ್ರಾಥಮಿಕ ಆಕರಗಳೆಂದೇ ಬಳಸಿಕೊಳ್ಳಲು ಪ್ರಯತ್ನಿಸಲಾಗಿದೆ. ಯಾರ ಕುರಿತ ಅಧ್ಯಯನ ಇದಾಗಿದೆಯೋ ಅವರ ಸ್ವಂತ ಅಭಿಪ್ರಾಯಗಳ ವಿಶ್ಲೇಷಣೆಯೇ ಸಬಾಲ್ಟರ್ನ್ ಸ್ವರೂಪದ ಅಧ್ಯಯನಗಳ ಪ್ರಧಾನ ಕಾಳಜಿಯಾಗಿರುವ ಹಿನ್ನೆಲೆಯಲ್ಲಿ ಬೌದ್ಧ ಧರ್ಮ ಸ್ವೀಕರಿಸಿದವರ, ಬೌದ್ಧ ಧರ್ಮವನ್ನು ತಮ್ಮ ಧಾರ್ಮಿಕ, ಸಾಂಸ್ಕೃತಿಕ ಐಡೆಂಟಿಟಿಯನ್ನಾಗಿ ಹೊಂದಿರುವವರ ಅನುಭವಗಳನ್ನು ಇಲ್ಲಿ ವ್ಯಾಪಕವಾಗಿ ಸಮೀಕ್ಷಿಸಿ ಅಧ್ಯಯನದ ಆಶಯಗಳ ಹಿನ್ನೆಲೆಯಲ್ಲಿ ಅರ್ಥೈಸಲು ಪ್ರಯತ್ನಿಸಲಾಗಿದೆ.

ಡಾ. ಅಂಬೇಡ್ಕರ್‌ರವರ 'ಮಹಾನ್ ಮತಾಂತರದ' ನಂತರದಲ್ಲಿ ಅಖಿಲ ಭಾರತ ಮಟ್ಟದಲ್ಲಿ ಮಹಾರಾಷ್ಟ್ರವನ್ನು ಕ್ರೋಢಿಕರಿಸಿ ನಡೆದ ಸಂಶೋಧನಾ ಅಧ್ಯಯನಗಳನ್ನು ಸಹಿತ ಸಮೀಕ್ಷಿಸಲಾಗಿದೆ. ಅದರಲ್ಲಿ ಮುಖ್ಯವಾಗಿ ಗೇಲ್ ಓಂವೆಡ್ತ (1994) Dalits and The Democratic Revolution Dr. Ambedkar and The Dalit Movement in India ಹಾಗೂ Buddhism in India

(2003) ಅವರ ಗ್ರಂಥಗಳ ಅರ್ಥ ವ್ಯಾಖ್ಯಾನಗಳನ್ನು ವ್ಯಾಪಕವಾಗಿ ಗಮನಿಸಿದೆ. ಅದೇ ರೀತಿ ಡಿ.ಸಿ. ಅಹಿರ್ ಅವರ Buddhism: 50 years of Independence, Status, Growth and Development, ಹಾಗೂ ಪ್ರೊ. ಸಿ.ಡಿ. ನಾಯ್ಕ (2004) ಅವರ Ambedkar's Perspetives on Buddhism and other Religions ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್‌ನ Valerian Rodridgres (2002) ರವರ Essential Writings of B.R.Ambedkar ಕೆ.ಎನ್.ಕದಂ ಅವರ, Meaning of Ambedkar's Conversion ಮುಂತಾದ ಮಹತ್ವ ಗ್ರಂಥಗಳು, ಕರ್ನಾಟಕದಲ್ಲಿ ಅಂಬೇಡ್ಕರ್ ಪೂರ್ವದಲ್ಲಿ ದಲಿತ ಸಮುದಾಯಗಳು ತಮ್ಮ ವಿಮೋಚನೆಯ ಐಡೆಂಟಿಟಿಯಾಗಿ ಬೌದ್ಧ ಧರ್ಮವನ್ನು ಸಮರ್ಥವಾಗಿ ಬಳಸಿಕೊಂಡ ಕುರಿತ ಮಹತ್ವದ ಅಧ್ಯಯನ ಜಿ. ಅಲೋಯ್‌ಸಿಸ್ (1998) ಅವರ 'Religion as Emancipatory Identity' ಮತ್ತು 1972 ರಲ್ಲಿ T.S. wilkinson ಮತ್ತು M.M. Thomas ಇವರ Ambedkar and Neo-Buddhist Movement ಗ್ರಂಥಗಳನ್ನು ಸಮೀಕ್ಷಿಸಿ, ಕ್ಷೇತ್ರ ಕಾರ್ಯಗಳಲ್ಲಿ ಅಧ್ಯಯನಕಾರನು ಸಂಗ್ರಹಿಸಿದ ವಿವರಗಳೊಂದಿಗೆ ತುಲನಾತ್ಮಕವಾಗಿ ಸಮೀಕ್ಷಿಸಿ ಅರ್ಥೈಸುವಿಕೆಗಳನ್ನು ರೂಪಿಸಲಾಗಿದೆ.

ಅಧ್ಯಯನದ ತಾತ್ವಿಕ ಹಿನ್ನೆಲೆ, ಅಂಬೇಡ್ಕರ್‌ರವರ ಮತಾಂತರದ ಮಹತ್ವ ದಲಿತರ ಸಾಂಸ್ಕೃತಿಕ, ಧಾರ್ಮಿಕ ನಾಯಕರಾಗಿ ರೂಪುಗೊಂಡ ವಿವರಗಳು, ಅಂಬೇಡ್ಕರ್‌ರವರ ಚಳವಳಿಗಳೊಂದಿಗೆ, ಇನ್ನುಳಿದ ಚಳವಳಿಗಳ ಪ್ರಯತ್ನಗಳು ದಲಿತರ ಮಾನವ ಹಕ್ಕುಗಳ ಪ್ರಶ್ನೆಗಳು ಹೀಗೆ ಹತ್ತು ಹಲವಾರು ಆಯಾಮಗಳಲ್ಲಿ ಬಂದಿರುವ ವಿಪುಲವಾದ ಮಹತ್ವದ ಗ್ರಂಥಗಳನ್ನು ಸಮೀಕ್ಷಿಸಲಾಗಿದೆ.

ಅದೇ ರೀತಿ ಕರ್ನಾಟಕದ ಸಂದರ್ಭದಲ್ಲಿ ಡಾ. ಅಂಬೇಡ್ಕರ್‌ರವರ ವಿಚಾರಧಾರೆ, ಮಹಾರಾಷ್ಟ್ರ ದಲಿತ ಚಳವಳಿ, ಕರ್ನಾಟಕದ ದಲಿತ ಚಳವಳಿ, ದಲಿತ ಬಹುಜನ ಬುದ್ಧಿಜೀವಿಗಳು ದಲಿತ ವಿಮೋಚನೆಯ ಬಗ್ಗೆ ಹೊಂದಿದ ಪರಿಕಲ್ಪನೆಗಳು ಮತ್ತು ಅವರು ಬೌದ್ಧಧರ್ಮ ಮತ್ತು ಅಂಬೇಡ್ಕರ್‌ರವರ ಮತಾಂತರ ಚಳವಳಿಯ ಬಗ್ಗೆ ಹೊಂದಿದ ಧೋರಣೆಗಳನ್ನು ವ್ಯಾಪಕವಾಗಿ ಸಮೀಕ್ಷಿಸಲಾಗಿದೆ. ಅಂತಹ ಹಲವಾರು ಅರ್ಥ ವಿವರಣೆಗಳನ್ನು ಪ್ರಸ್ತುತ ಅಧ್ಯಯನ ಅರ್ಥೈಸುವಿಕೆಗೆ ಆಕರವಾಗಿ ಬಳಸಿಕೊಳ್ಳಲಾಗಿದೆ. ಸಂಬಂಧಿಸಿದ ಅಧ್ಯಾಯಗಳ ಪಠ್ಯಗಳ ಕೊನೆಯಲ್ಲಿ ಈ ಆಕರಗಳನ್ನು ಪಟ್ಟಿ ಮಾಡಲಾಗಿದೆ. ಅಂತಹ ಅಧ್ಯಯನಗಳಲ್ಲಿ ಮುಖ್ಯವಾಗಿ ಡಾ. ಡಿ.ಆರ್. ನಾಗರಾಜ್ ಅವರ 'ಸಂಸ್ಕೃತಿ ಕಥನ' ಡಾ. ಮ.ನ. ಜವರಯ್ಯನವರ ಅಂಬೇಡ್ಕರ್ ವಿಚಾರ ಸಾಹಿತ್ಯ, ಡಾ. ರಹಮತ್ ತರೀಕೆರೆ (1996) 'ಮರದೊಳಗಣ ಕಿಚ್ಚು' ಡಾ. ಎಸ್. ಚಂದ್ರಶೇಖರ ಅವರ 'ದಕ್ಷಿಣ ಭಾರತ, ವಸಹಾತುಷಾಹಿ ರಾಷ್ಟ್ರೀಯತೆ ಮತ್ತು ಸಂಘರ್ಷ' ಡಾ. ಅರವಿಂದ ಮಾಲಗತ್ತಿಯವರು (2002) ಸಂಪಾದಿಸಿದ 'ದಲಿತ ಮಾರ್ಗ' ಮೊಗಳ್ಳಿ ಗಣೇಶ (2002) ರವರು ಸಂಪಾದಿಸಿದ 'ದಲಿತ ಚಿಂತನೆ' ಮುಂತಾದ ಗ್ರಂಥಗಳನ್ನು ಸಮೀಕ್ಷಿಸಿ ದಲಿತರ ಸಾಂಸ್ಕೃತಿಕ ಧಾರ್ಮಿಕ ಐಡೆಂಟಿಟಿಯ ಹುಡುಕಾಟದ ಪ್ರಕ್ರಿಯೆಯನ್ನು ವಿಶ್ಲೇಷಿಸುವ ನೋಟಗಳನ್ನು ಪರಿಕಲ್ಪನೆಗಳನ್ನು ಗ್ರಹಿಸಿ ಪ್ರಸ್ತುತ ಅಧ್ಯಯನದ ತಾತ್ವೀಕರಣ (Theorization) ಮಾಡಲಾಗಿದೆ.

ಆಂಗ್ಲ ಭಾಷೆಯಲ್ಲಿ ಇಂದು ಭಾರತದಾದ್ಯಂತ ದಲಿತ - ಬಹುಜನ ನೆಲೆಯ ಬುದ್ಧಿಜೀವಿಗಳು ಸಹಿತ ದಲಿತರ 'ಧಾರ್ಮಿಕ ಸಾಂಸ್ಕೃತಿಕ ಐಡೆಂಟಿಟಿಯಾಗಿ ಬೌದ್ಧಧರ್ಮ' ವನ್ನು ಪ್ರತಿಪಾದಿಸುವ ಅಧ್ಯಯನಗಳನ್ನು

ಸಮೀಕ್ಷಿಸಲಾಗಿದೆ. ಅದರಲ್ಲಿ ಮುಖ್ಯವಾಗಿ ಕಾಂಚ ಐಲಯ್ಯ ಅವರ ಬೌದ್ಧ ಸಂಶೋಧನಾ ಅಧ್ಯಯನಗಳು, ಸಂಘ ರಕ್ಷಿತ (1986), ಗೇಲ್ ಓಂವೆಡ್ತ್ (1994 : 2003), ಈಲಿನೋರ್ ಝೆಲಿಟ್ (1997), ಗೋಪಾಲ ಗುರು (1998), ಡಾ. ಮನೋಹರ ಯಾದವ (1998); ತಿಮೊಥೆ ಪಿಟ್ಜರಾಲ್ಡ್ (1999), ಘನಶ್ಯಾಮ್ ಶಹಾ (2000), ಇಂತಹ ದಲಿತರ ಸಮಾಜೋ-ಆರ್ಥಿಕ ಅಭಿವೃದ್ಧಿಯ ವಿಶ್ಲೇಷಣೆಗಳ ಅಧ್ಯಯನಗಳನ್ನು ಸಮೀಕ್ಷಿಸಿದೆ. ಅದೇ ರೀತಿ ದಲಿತರ ಮಾನವ ಹಕ್ಕುಗಳ ಅಂತರ್‌ರಾಷ್ಟ್ರೀಯ ಹೋರಾಟ ಮತ್ತು ಅವರ 'ಪೂರ್ಣ ಪ್ರಮಾಣದ ವಿಮೋಚನೆಗೆ' ಹೊಸ ಆಯಾಮ ಕಲ್ಪಿಸಿದ ಪ್ರಯತ್ನಗಳ ಕುರಿತ ಡಾ. ಯೋಗೇಶ ವರ್‍ಹಾಡೆ, ಡಾ. ಬಾಲಚಂದ್ರ ಮುಂಗೇಕರ ಮುಂತಾದ ತಜ್ಞರ ಅಭಿಪ್ರಾಯಗಳನ್ನು ಹಲವಾರು ಸ್ಮರಣ ಸಂಚಿಕೆಗಳಲ್ಲಿ, ಜಾಗತಿಕ ವಿಚಾರ ಸಂಕಿರಣದ ನಡುವಳಿಗಳ ಸಂಚಿಕೆಗಳಲ್ಲಿ ಸಮೀಕ್ಷಿಸಲಾಗಿದೆ.

ಕರ್ನಾಟಕದಲ್ಲಿ ಬೌದ್ಧ ಸಾಹಿತ್ಯ ಇನ್ನೂ ಹೆಚ್ಚಾಗಿ ಬೆಳೆದು ಬರಬೇಕಾಗಿದೆಯಾದಾಗ್ಯೂ ಈಗ ಲಭ್ಯವಿರುವ ಕೃತಿಗಳನ್ನು, ಮಹತ್ವದ ಗ್ರಂಥಗಳನ್ನು ವಿಶೇಷವಾಗಿ ಬೌದ್ಧ ಸಾಹಿತಿ ವೈ.ಬಿ. ನಂದನ ಇವರ 'ನಾವೇಕೆ ಬೌದ್ಧರಾಗಬೇಕು' 'ಬೌದ್ಧಸಾಸನ' ಹಾಗೂ ಬೌದ್ಧ ನಿತ್ಯಾಚರಣೆಗಳು ಇಂತಹ ಮಹತ್ವದ ಕೃತಿಗಳ ಆಧಾರದಿಂದಲೇ ಪ್ರಸ್ತುತ ಅಧ್ಯಯನದಲ್ಲಿ ಬೌದ್ಧ ಆಚರಣೆಗಳನ್ನು ವಿಶ್ಲೇಷಿಸಲಾಗಿದೆ. ಹೀಗೆ ಕನ್ನಡ ಮತ್ತು ಆಂಗ್ಲ ಭಾಷೆಗಳೆರಡಲ್ಲೂ ಬಂದಿರುವ ಮಹತ್ವದ ಗ್ರಂಥಗಳನ್ನು ಸಮೀಕ್ಷಿಸುವುದರ ಜೊತೆಗೆ ಸಾಮಾಜಿಕ ಪರಿವರ್ತನೆಯ ಆಶಯವುಳ್ಳ, ಬೌದ್ಧಧರ್ಮದ ಬಗ್ಗೆ ಅಧಿಕೃತ ಮಾಹಿತಿಗಳನ್ನು ನೀಡುವ ಮಾಸಿಕಗಳನ್ನು ಜರ್ನಲ್‌ಗಳನ್ನು ವಾರ್ಷಿಕ ವರದಿಗಳನ್ನು ಸಮೀಕ್ಷಿಸಲಾಗಿದೆ. ಅದರಲ್ಲಿ ಮುಖ್ಯವಾಗಿ ಕನ್ನಡದ 'ಸಂಕ್ರಮಣ', 'ಸಂವಾದ', 'ಹೊಸತು', 'ಬುದ್ಧಧರ್ಮ', 'ಸಂಬುದ್ಧ', 'ಸಂಘರ್ಷ', 'ಅಂಬೇಡ್ಕರ್ ವಾದ', 'ತರಂಗ', 'ಅಂಬೇಡ್ಕರ್ ವಾಹಿನಿ', ಆಂಗ್ಲ ಭಾಷೆಯಲ್ಲಿನ 'ಧಮ್ಮ' 'ಅಮಿತ' ಮಿಥಿಕ್ ಸೊಸೈಟಿಯ ಜರ್ನಲ್‌ಗಳು, ದಲಿತ ವಾಯ್ಸ್ ಮುಂತಾದ ಮಾಸಿಕಗಳು, ಸಂಯುಕ್ತ ಕರ್ನಾಟಕ, ಪ್ರಜಾವಾಣಿ, ವಿಜಯ ಕರ್ನಾಟಕ, ಹಿಂದೂ ಮುಂತಾದ ದಿನ ಪತ್ರಿಕೆಗಳಲ್ಲಿನ ಬೌದ್ಧ ಧರ್ಮ ಕುರಿತ, ಮತಾಂತರ ಕುರಿತ ವಿವರಣೆಗಳನ್ನು ವರದಿಗಳನ್ನು ಸಮೀಕ್ಷಿಸಲಾಗಿದೆ.

ಮೇಲೆ ವಿವರಿಸಿದ, ಸಮೀಕ್ಷಿಸಿದ ಗ್ರಂಥಗಳು, ಮಾಸಿಕಗಳು, ಸ್ಮರಣ ಸಂಚಿಕೆ, ಪತ್ರಿಕೆ ಇತ್ಯಾದಿ ವಿವರಗಳನ್ನು 'ಆಕರ ಗ್ರಂಥ ಸೂಚಿ'ಯಲ್ಲಿ ಪ್ರತ್ಯೇಕವಾಗಿ ಪಟ್ಟಿಮಾಡಿ ಅನುಬಂಧ-IX ರಲ್ಲಿ ಪ್ರಸ್ತುತ ಪಡಿಸಲಾಗಿದೆ.

ಈ ಹೊತ್ತು ಕೆಲವು ಸಮಾಜ ಶಾಸ್ತ್ರ ಹಾಗೂ ಚಾರಿತ್ರಿಕ ಅಧ್ಯಯನಗಳು, ಸಾಂಸ್ಕೃತಿಕ ಕಥನಗಳು ಸಬಾಲ್ಟರ್ನ್ ನೆಲೆಯವು ಎಂದು ಓದುತ್ತಿರುವಾಗಲೂ ಕೂಡ, ಅವು ಸಹ ಸೀಮಿತ, ಸರಳೀಕರಿಸಿದ ದೃಷ್ಟಿ ಕೋನಗಳನ್ನೇ, ಕಲ್ಪಿತ ಮಾದರಿಗಳನ್ನೇ, ಪರಿಕಲ್ಪನೆಗಳನ್ನೇ ಬಿಂಬಿಸಿರುವುದನ್ನು ಇಂತಹ ಅಧ್ಯಯನಗಳ ಸಮೀಕ್ಷೆಯಲ್ಲಿ ಗಮನಿಸಲಾಗಿದೆ. ಶೋಷಿತ ಜನಸಮುದಾಯಗಳ ಬಗ್ಗೆ ತಜ್ಞರ ಅನುಕಂಪವೇ ಆ ವರ್ಗಗಳ ಹಿತಾಸಕ್ತಿಗಳಿಗೆ ಶಾಪವಾಗಿ ಬಿಡುವ ಸಾಧ್ಯತೆಗಳನ್ನು, ಅಪಾಯಗಳನ್ನು ಅಧ್ಯಯನಕಾರನು ಕಂಡುಕೊಂಡಿರುವುದು ವಿಧಿತವಾಗಿದೆ. ಆಧುನಿಕ ಸಂದರ್ಭದ ಕೆಲವು ಅಧ್ಯಯನಗಳ ತಾತ್ವಿಕತೆಗಳನ್ನು ಉದಾಹರಿಸುವುದಾದರೆ,

1. ಡಾ. ಅಂಬೇಡ್ಕರ್‌ರವರು ಅವರ ಜೀವಿತದ ಅಂತಿಮ ಕಾಲದಲ್ಲಿ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿರುವುದು ಫಲಾಯನದಂತೆ ಅರ್ಥೈಸಲು ಪ್ರಯತ್ನಿಸುವುದು.

2. ದಲಿತ ಚಳವಳಿ ರಾಜಕೀಯ ಪಕ್ಷಗಳ ಜೊತೆ ಗುರುತಿಸಿಕೊಳ್ಳಬಾರದಿತ್ತು ಎಂಬ ಬೌದ್ಧಿಕ ತೀರ್ಮಾನಗಳು.

3. ಜಾತಿ ವಿನಾಶಕ್ಕಿಂತ 'ವರ್ಗ ಹೋರಾಟ'ಕ್ಕೆ ದಲಿತರನ್ನು ಅಣಿಗೊಳಿಸಬೇಕೆಂಬ ಮಾರ್ಕ್ಸ್‌ವಾದೀ ಸಿದ್ಧಾಂತಗಳು, ಇಂತಹ ಎಲ್ಲ ಸರಳೀಕರಿಸಿದ ಅಧ್ಯಯನಗಳ ಹಗರಣಗಳು ಇಡೀ ದಲಿತ ಚಳವಳಿಯ ಹೊಟ್ಟೆಯೊಳಗೆ ಪ್ರಯಾಣಿಸಿ ಅಲ್ಲಿಂದಲೇ ಬಾಂಬು ಸ್ಫೋಟಿಸುವ, ಅಲ್ಪ ಸ್ವಲ್ಪ ಪ್ರಜ್ಞಾ ಪಾತಳಿಯನ್ನು ವಿಮೋಚನಾ ಪ್ರಕ್ರಿಯೆಯನ್ನು ನಾಶಮಾಡುವ ಹುನ್ನಾರಗಳೇ ಆಗಿರುವುದನ್ನು ಅಧ್ಯಯನಕಾರನು ಸಮೀಕ್ಷೆಯಿಂದ ಕಂಡುಕೊಂಡ ದೃಷ್ಟಿಕೋನವಾಗಿದೆ.

ಶೋಷಿತ ಸಮುದಾಯಗಳ ಸಾಂಸ್ಕೃತಿಕ ಬದುಕಿನ ಆಯಾಮಗಳ ಕುರಿತು ಅಧ್ಯಯನ ನಡೆಸುವಾಗ ಅಧ್ಯಯನಕಾರನೂ, ಆ ಜನತೆಯ ಮಾನವ ಹಕ್ಕುಗಳ ಸವಾಲುಗಳನ್ನು ಸಂವೇದನಾಶೀಲತೆ, ಸ್ಪಂದನಾತ್ಮಕ ಪಾತಳಿಯಲ್ಲಿ ಗ್ರಹಿಸಬೇಕಾಗುತ್ತದೆ. ಜಾತಿ ಆಧಾರಿತ ಅಪಮಾನಗಳಿಂದ, ಸಾಂಸ್ಕೃತಿಕ ದಬಾವಣೆಯಿಂದ ಒಂದು ಅಪಮಾನ ವ್ಯವಸ್ಥೆಯಲ್ಲಿ ಬರ್ಬರವಾಗಿ ಧಮನಿತರಾದ ತಳ ಸಮುದಾಯಗಳ ಕುರಿತು ಸಂಶೋಧನೆಗಳು, ಸಂಶೋಧಕರು ಸರಳೀಕರಿಸಿದ ತೀರ್ಮಾನಗಳನ್ನು ನೀಡಿದರೆ ಅದು ಅಂತಹ ಸಮುದಾಯಗಳಿಗೆ, ತಳಸಮುದಾಯಗಳ ಮಾನವ ಹಕ್ಕುಗಳಿಗೆ ಮಾಡುವ ಅಪಮಾನವಾಗುತ್ತದೆ. 'ಸಂಸ್ಕೃತಿ ಅಧ್ಯಯನ'ಗಳ ಹೆಸರಿನಲ್ಲಿ ಆ ಜನರನ್ನು ಅವರ ಮುಗ್ಧತೆಯನ್ನು ದುರುಪಯೋಗಪಡಿಸಿಕೊಂಡ ಉದಾಹರಣೆಗಳೂ ಇಲ್ಲದಿಲ್ಲ. ಬೆಳಗಾವಿ ಜಿಲ್ಲೆಯಲ್ಲಿ ದೇವದಾಸಿ ಪದ್ಧತಿ ಕುರಿತ ಅಧ್ಯಯನ ಮಾಡುವಾಗ ಜನಪದ ಮಹಿಳೆಗೆ ನಿನ್ನ ಜೊತೆ ಮೊದಲು ಸಂಪರ್ಕ ಮಾಡಿದವರಾರು? ಆಗ ನಿನ್ನ ಭಾವನೆ ಹೇಗಿತ್ತು ಎಂಬ ಪ್ರಶ್ನೆಗೆ, 16 ವರ್ಷದಲ್ಲೇ ಲೈಂಗಿಕ ದೌರ್ಜನ್ಯಕ್ಕೆ ಒಳಗಾಗಿ ಘಾಸಿಗೊಂಡ ಮನಸ್ಸು ಏನೆಂದು ತಾನೆ ಉತ್ತರಿಸೀತು? ಆ ಮಹಿಳೆಗೆ ತನ್ನ ಶೋಷಿತ, ದೌರ್ಜನ್ಯದ ಚರಿತ್ರೆಯೇ ಒಂದು ಶಾಪವಾಗಿರುವಾಗ, ಆಕೆ ಅನುಭವಿಸಿದ ಅಸಹನೀಯ ಕ್ರೂರ ಅನುಭವವನ್ನು ನೆನಪಿಸುವ ಬದಲಾಗಿ ನಿನ್ನ ಮಕ್ಕಳು ಯಾವ ಸ್ಥಿತಿಯಲ್ಲಿದ್ದಾರೆ, ನಿನ್ನ ಮಗಳಿಗೆ ಎಂತಹ ಶಿಕ್ಷಣ ಬೇಕು, ಅವರ ಭವಿಷ್ಯದ ಕುರಿತು ನಿನ್ನ ಯೋಚನೆಗಳೇನು? ಎಂದು ಕೇಳಿದರೆ ಅದು ಸ್ಪಂದನಾತ್ಮಕ ಸಂಶೋಧನೆಯ ಮಾರ್ಗವಾಗುತ್ತದೆ.

ಇಂತಹ ವೈರುದ್ಯಗಳು ಬ್ರಾಹ್ಮಣೇತರರಿಂದಲೂ ಕಂಡು ಬಂದಿದ್ದು ಅವು ಅಂತಿಮವಾಗಿ ವೈದಿಕ ಸಿದ್ಧಾಂತಗಳಿಗೇ ಹೋಗಿ ನಿಲ್ಲುವುದನ್ನು ಕಾಣುತ್ತೇವೆ. ಈ ರೀತಿಯ ಅಧ್ಯಯನಗಳ ಬಗ್ಗೆ 'ದಲಿತ ವಿಮೋಚನೆ'ಯ ಬಗ್ಗೆ ಕಾಳಜಿ ಹೊಂದಿದ ಎಲ್ಲ ಶಕ್ತಿಗಳೂ ಗಮನ ಹರಿಸಬೇಕಾದ ಅನಿವಾರ್ಯತೆಯನ್ನು ಪ್ರಸ್ತುತ ಅಧ್ಯಯನದ ಸಾಹಿತ್ಯ ಸಮೀಕ್ಷೆಯಿಂದ ಮನಗಂಡಿದೆ. ಡಾ. ಡಿ.ಆರ್. ನಾಗರಾಜ್ ಅವರು ಈ ರೀತಿಯ ಬೌದ್ಧಿಕ ಅಪಾಯಗಳ ಕುರಿತು ದಲಿತ ಚಳವಳಿಯ ಮುಖಂಡತ್ವಕ್ಕೆ, ಪರಿವರ್ತನೆಯ ಪ್ರವರ್ತಕರಿಗೆ ಸೂಕ್ಷ್ಮ ಎಚ್ಚರಿಕೆಗಳನ್ನು ನೀಡಿರುವುದೂ ಮಹತ್ವದ್ದಾಗಿದೆ. ಅವರ ಈ ಕೊಡುಗೆಯನ್ನು ಮನು ಚಕ್ರವರ್ತಿಯವರು 'ಬ್ರಾಹ್ಮಣೇತರ ಚಿಂತಕರ-ವಕ್ತಾರರ ನಿಲುವುಗಳು ವಸಹಾತು ಪೂರ್ವ ಭಾರತದ ಬಗ್ಗೆ ಸರಳೀಕೃತ ಕಲ್ಪನೆಗಳನ್ನು ಹುಟ್ಟಿಸಿ, ಆ ಮೂಲಕ ಬ್ರಾಹ್ಮಣೇತರ

ಲೋಕಗಳಲ್ಲೇ ಇದ್ದ ಅಂತಃಸತ್ವನ್ನು ಕಡೆಗಣಿಸಿ, ಕೀಳರಿಮೆಯನ್ನು ಬೆಳೆಸಿದ ಹಾಗೂ ಬೆಳೆಸುತ್ತಲೇ ಇರುವ ಪ್ರಕ್ರಿಯೆಗಳನ್ನು ಅವರು ನಿಖಿರವಾಗಿ ತೋರಿಸಿದ ರೀತಿಯಲ್ಲೇ ಅವರ ಅಪಾರ ಕೊಡುಗೆ ಅಡಗಿದೆ,[59] ಎಂದು ದಾಖಲಿಸುತ್ತಾರೆ. ಈ ಅವಲೋಕನ ಬಹಳ ಮಹತ್ವದ್ದು ಹಾಗೂ ಸಮಕಾಲೀನ ಅಧ್ಯಯನಗಳನ್ನು ಹೇಗೆ ವಿಮರ್ಶಾತ್ಮಕವಾಗಿ ಗ್ರಹಿಸಬೇಕೆಂಬ ದೃಷ್ಟಿಕೋನವುಳ್ಳದ್ದು ಆಗಿದೆ. ಯಾವ ಅಧ್ಯಯನಗಳಿಂದ ದಲಿತರ ಬದುಕು ಹಸನಾಗಬೇಕಾಗಿದೆಯೋ, ಯಾವ ಅಧ್ಯಯನಗಳಿಂದ ಅವರ ಪೂರ್ಣ ವಿಮೋಚನಾ ಪ್ರಕ್ರಿಯೆಗೆ ಸಹಾಯಕವಾಗಬಹುದಾದ ಪರಿಕಲ್ಪನೆಗಳನ್ನು ಸೃಜಿಸಬೇಕಾಗಿದೆಯೋ ಅಂತಹ ಅಧ್ಯಯನಗಳೇ ಅವರ ಮಾನವ ಹಕ್ಕುಗಳ ಹೋರಾಟದ ಪ್ರಯತ್ನಗಳನ್ನು ತಪ್ಪಾಗಿ ಅರ್ಥೈಸಿ ಸರಳೀಕರಿಸಿದ ತೀರ್ಮಾನಗಳನ್ನು ಮುಂದಿಟ್ಟರೆ ಅದು ಅಮಾನುಷ ಕೃತ್ಯವಲ್ಲದೇ ಬೇರೆನೂ ಆಗಿರಲಾಗಿರದು.

ಅಕ್ಷರ ಲೋಕಕ್ಕೆ ಇದೀಗ ತೆರೆದುಕೊಂಡಿರುವ ಶೋಷಿತ ಸಮುದಾಯಗಳು ಮೇಲಿನಂತೆ ಯಾವುದೇ ಅಧ್ಯಯನಗಳನ್ನು ತೀರ್ಮಾನಗಳನ್ನು ತಕ್ಷಣವೇ ಅನುಸರಿಸುವ ಪ್ರಮೇಯಗಳೇ ಹೆಚ್ಚಾಗಿರುವುದರಿಂದ, ಅಂತಹ ಸಮುದಾಯಗಳಿಗೆ ತಪ್ಪು ದಾರಿ ತೋರಿಸಬಾರದೆಂಬ ಸೌಜನ್ಯತೆಯೂ ಅಂತಹ ಸಂಶೋಧಕರಿಗೆ ಇರಬೇಕಾಗುತ್ತದೆ. ಇಂದು ದಲಿತ ಚಳುವಳಿ ಹಲವು ಕವಲುಗಳಲ್ಲಿ ಹೋಗಿರುವುದು, ಡಾ. ಅಂಬೇಡ್ಕರ್‌ರವರ ವಿಮೋಚನಾ ಸೂತ್ರಗಳ ಮಹತ್ವ ಅರಿತುಕೊಳ್ಳುವಲ್ಲಿ ನಿಧಾನ ಗತಿಯಾಗಿರುವುದು, ಪ್ರಜಾಸತ್ತಾತ್ಮಕ ಸಂಸದೀಯ ವ್ಯವಸ್ಥೆಯಲ್ಲೂ ಸ್ಪಷ್ಟ ಅಭಿವೃದ್ಧಿ ಪರಿಕಲ್ಪನೆಗಳಿಲ್ಲದಿರುವುದು, ಸ್ಥಾಪಿತ ವ್ಯವಸ್ಥೆಯ ಮೌಲ್ಯಗಳನ್ನೇ ತಮ್ಮ ಮೌಲ್ಯಗಳಾಗಿ ಹೊತ್ತು ಸಾಗುವುದು, ಈ ಎಲ್ಲ ಪ್ರಕ್ರಿಯೆಗಳ ಹಿನ್ನೆಲೆಯಲ್ಲಿ ಮೇಲಿನ ಅಭಿಪ್ರಾಯಗಳನ್ನು ಗಮನಿಸಬೇಕಾಗುತ್ತದೆ. ಅಧ್ಯಯನಕಾರನು ಸಂಶೋಧನಾ ಸಾಹಿತ್ಯ ಸಮೀಕ್ಷಿಸಿ ಅವಶ್ಯಕವಾದ ಪರಿಕಲ್ಪನೆಗಳ ಹಿನ್ನಲೆಯಲ್ಲಿ 'ಪೂರ್ಣ ಪ್ರಮಾಣದ ದಲಿತ ವಿಮೋಚನೆ' ಯನ್ನು ಅರ್ಥೈಸುವ ಅವಶ್ಯಕತೆಯನ್ನು ರೂಪಿಸಿಕೊಂಡದ್ದನ್ನು ಸಂಬಂಧಿಸಿದ ಅಧ್ಯಾಯಗಳ ವಿವರಣೆ ಮತ್ತು ವಿಶ್ಲೇಷಣೆಗಳಲ್ಲಿ ಕಾಣಬಹುದಾಗಿದೆ.

ಜಾತಿ ಆಧಾರಿತ ಶೋಷಣೆಗಳಿಗೆ ಒಳಗಾದ ತಳ ಸಮುದಾಯಗಳು ಮೇಲೆ ವಿವರಿಸಿದಂತೆ ತಮ್ಮದೇ ಆದ ಸಾಂಸ್ಕೃತಿಕ ನೆಲೆಗಟ್ಟುಗಳನ್ನು ಕಟ್ಟಿಕೊಳ್ಳುವ ಬದಲಾಗಿ ಸಂಸ್ಕೃತೀಕರಣಗೊಳ್ಳುವ ಅಪಾಯಗಳೇ ಇರುವುದಕ್ಕೆ ಸಾಕಷ್ಟು ಉದಾಹರಣೆಗಳನ್ನು ನಾವು ಕಾಣುತ್ತೇವೆ. ಉದಾಹರಣೆಗೆ ಡಾ. ಎಸ್. ಶಿವಾನಂದ ಗುರುತಿಸುವಂತೆ 'ಸಂಸ್ಕೃತದ ಪ್ರಾಬಲ್ಯ ಹೆಚ್ಚಾದಂತೆಲ್ಲ ದ್ರಾವಿಡ ಭಾಷೆಗಳ ಶೋಷಣೆಯೂ ನಡೆಯುತ್ತಾ ಬಂತು', ಇಡೀ ಜನಾಂಗದ ಶೋಷಣೆ ಎಂದರೆ ಆ ಜನಾಂಗದ ಭಾಷೆಯೂ ಸಹ ಸಹಜವಾಗಿ ಶೋಷಣೆಗೆ ಒಳಗಾಗಿರುತ್ತದೆಂದೇ ಅರ್ಥ. ಅಲ್ಲದೇ ಸಂಸ್ಕೃತ ಸಾಹಿತ್ಯದ ಪ್ರಾಬಲ್ಯಕ್ಕೊಳಗಾಗಿ ದ್ರಾವಿಡ ಕವಿಗಳು, ವಿದ್ವಾಂಸರು ತಮ್ಮ ಮಾತೃ ಭಾಷೆಗಳಲ್ಲಿ ಸಾಹಿತ್ಯ ರಚಿಸುವುದನ್ನು ಕೀಳರಿಮೆ ಎಂದು ಭಾವಿಸಿಕೊಂಡು, ಸಂಸ್ಕೃತ ಭಾಷೆಯಲ್ಲಿಯೇ ಕೃತಿ ರಚಿಸಿದ್ದು ಮತ್ತೊಂದು ರೀತಿಯ ಅನ್ಯಾಯವಾಗಿದೆ. ಮತ್ತು ಸಂಸ್ಕೃತೀಕರಣದ ಪ್ರಕ್ರಿಯೆಯೂ ಆಗಿದೆ. ಹೀಗಾಗಿ ದ್ರಾವಿಡ ಕವಿಗಳು ತಮ್ಮ ನೆಲದ ಬದುಕನ್ನು, ತಮ್ಮ ಜನತೆಯ ನೋವು, ಅಳಲು, ಸ್ಥಿತಿಗತಿಗಳನ್ನು ಸಂವೇದನೆಗಳನ್ನು ಮರೆತು ಆರ್ಯ ಸಂವೇದನೆ, ಸಂಸ್ಕೃತಿಗಳನ್ನು ಮೆರೆಯುವ ಸಾಹಿತ್ಯವನ್ನು ಸೃಷ್ಟಿಸುತ್ತಾ ಅಥವಾ ಭಟ್ಟಿ ಇಳಿಸುತ್ತಾ ಹೋಗಿ ಭಟ್ಟಂಗಿಗಳಾದರು[60]' ಎಂಬ ಅರ್ಥಪೂರ್ಣ ವಿಶ್ಲೇಷಣೆ ನೀಡುತ್ತಾರೆ. ಈ

ಮಾತನ್ನು ನಾವು ಇವತ್ತಿನ ಆಂಗ್ಲ ಪ್ರಭಾವ ಮತ್ತು ಮೇಲ್ಮೈಯ ಹಿನ್ನೆಲೆಯಲ್ಲಿಯೂ ವಿಶದೀಕರಿಸಿ ನೋಡಬೇಕಾಗುತ್ತದೆ. 'ಇಂಗ್ಲೀಷಿನ ಭಯ' ಇವತ್ತು ಅಸಂಖ್ಯಾತ ದಲಿತರ ಶೂದ್ರರ 'ಶಕ್ತಿಯನ್ನೇ' ತಿಂದು ಹಾಕಿದೆ. ಕಳೆದ ಎರಡು ದಶಕಗಳಿಂದೀಚೆಗೆ ಮಾತ್ರ ವಿಶ್ವವಿದ್ಯಾಲಯಗಳಲ್ಲಿ ಉನ್ನತ ಶಿಕ್ಷಣ ಕೇಂದ್ರಗಳಲ್ಲಿ ಮಾತೃಭಾಷೆಯಲ್ಲಿ ಚರ್ಚಿಸುವ, ಬರೆಯುವ, ಸಂವಾದಿಸುವ, ಸಂವಹನಿಸುವ ಸ್ವಾತಂತ್ರ್ಯ ಲಭಿಸಿರುವುದನ್ನು ಕಾಣುತ್ತೇವೆ. ಈ ಆಯಾಮ 'ದಲಿತ ವಿಮೋಚನೆ'ಯ ಕುರಿತಾಗಿರುವ ಪ್ರಸ್ತುತ 'ಕರ್ನಾಟಕದಲ್ಲಿ ಬೌದ್ಧಧರ್ಮದ ಪುನರುಜ್ಜೀವನ' ಅಧ್ಯಯನದ ದೃಷ್ಟಿಯಿಂದ ಮಹತ್ವದ್ದೆಂದೇ ಹೇಳಬೇಕಾಗಿದೆ. ವೈದಿಕ ವ್ಯವಸ್ಥೆ ಶೋಷಕ ವ್ಯವಸ್ಥೆಯ ಪರವಾಗಿ ನಿಲ್ಲುವ ಮಾರ್ಗದರ್ಶಕರೊಬ್ಬರಡಿಯಲ್ಲಿ ಒಬ್ಬ ವಿದ್ಯಾರ್ಥಿ 'ದಲಿತ ವಿಮೋಚನಾ' ಪರನಾಗಿ 'ವರ್ಣಾಶ್ರಮ ಧರ್ಮ' ವನ್ನು ಖಡಾಖಂಡಿತವಾಗಿ ವಿಶ್ಲೇಷಿಸಲು ಸಾಧ್ಯವೇ ?' ಎಂಬ ಪ್ರಶ್ನೆಯಲ್ಲಿಯೇ ದಲಿತ ಚಳುವಳಿ, ಸಾಂಸ್ಕೃತಿಕ ಬದುಕು, ಧರ್ಮಾಧಾರಿತ ದೌರ್ಜನ್ಯಗಳ ಕುರಿತು ಇಲ್ಲಿಯವರೆಗಿನ ಅಧ್ಯಯನಗಳು ರೂಪಿಸಿದ ತೀರ್ಮಾನಗಳನ್ನು ಅಲ್ಲಲ್ಲಿ ಸಮೀಕ್ಷಿಸಲು ಪ್ರಯತ್ನಿಸಲಾಗಿದೆ. ಈ ರೀತಿಯಾಗಿ ಸಾಂಸ್ಕೃತಿಕ ಅಧ್ಯಯನವು ಗಮನಿಸಬೇಕಾದ ಬಹುತೇಕ ಎಲ್ಲಾ ಆಯಾಮಗಳಲ್ಲಿನ ಲಭ್ಯ ಸಾಹಿತ್ಯ ಸಮೀಕ್ಷಿಸಿ ದಲಿತ ವಿಮೋಚನೆಯ ಕಾರ್ಯತಂತ್ರವಾಗಿ ಅಂಬೇಡ್ಕರ್‌ರವರು ಬೌದ್ಧ ಧಮ್ಮದ ಮೂಲಕ ರೂಪಿಸಿದ ದಲಿತರ ಧಾರ್ಮಿಕ ಸಾಂಸ್ಕೃತಿಕ ಐಡೆಂಟಿಟಿಯ ಕುರಿತು, ಕರ್ನಾಟಕದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನವು, ಅದು ದಲಿತರ ಪೂರ್ಣ ವಿಮೋಚನೆಯ ಹಿನ್ನೆಲೆಯಲ್ಲಿ ಸಾಧನವಾಗಿರುವುದರ ಕುರಿತು ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.



★★★★★

# ಸಂದರ್ಭಸೂಚಿ ಹಾಗೂ ಟಿಪ್ಪಣಿಗಳು


1. Wilkinson T.S., Thomas M.M. (ed), 1972 : Ambedkar and the Neo-Buddhist Movement: The Christian Institute for the study of Religion and Society, Bangalore, The Christian literature Society, Madras. p-14-15.

1(ಎ) ಸ್ವಾಮಿ ಧರ್ಮತೀರ್ಥ (ಮೂಲ) ಕೆ.ಎಸ್.ಭಗವಾನ್ (ಅನು), 1990 : 'ಹಿಂದೂ ಸಾಮ್ರಾಜ್ಯಶಾಹಿಯ ಇತಿಹಾಸ' ಮಹಿಮ ಪ್ರಕಾಶನ, ಮೈಸೂರು, ಪುಟ : 98

2. A.M.Broadley, 1872 : The Buddhistic Remains of Bihar Bharati Prakashan, Varanasi 1979, p.1.

3. Rhys-Davids, T.W., 1903 : Buddhist India Sushil Gupta (India) Ltd., Culcutta, p.viii.

4. ಅದೇ : ಪುಟ ; 56.

5. ಅದೇ : ಪುಟ ; 220.

6. ಅದೇ : ಪುಟ ; vii.

7. ತಾಳ್ತಜೆ ವಸಂತಕುಮಾರ, 1933 : ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ವಿನಯ ಪ್ರಕಾಶನ, ಬೆಂಗಳೂರು, ಪುಟ ; 8.

8. ಅದೇ : ಪುಟ ; 8.

9. ಮಂಗಳೂರ ವಿಜಯ (ಸಂ), 2002 : ಸಂಘರ್ಷ ; ಅಂಬೇಡ್ಕರ್ ಜೀವನ ಸಾಧನೆ, ಸಂಬುದ್ಧ ಪ್ರಕಾಶನ, ಬೆಂಗಳೂರು, ಪುಟ ; 436.

10. ಜವರಯ್ಯ ಮ.ನ., 1991 : ಅಂಬೇಡ್ಕರ್ ವಿಚಾರ ಸಾಹಿತ್ಯ : ಸಮಗ್ರ ಅಧ್ಯಯನ (ಸಂಶೋಧನಾ ಮಹಾಪ್ರಬಂಧ) ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು, ಪುಟ ; 259.

11. ಜಗಜೀವನ ರಾಮ್, 1979 (ಮೂಲ) ಅನೂ ರಾ.ಹು.) : ಜಾತಿ ವ್ಯವಸ್ಥೆ, ಸಮಸ್ಯೆ, ಸವಾಲುಗಳು, ಅನುಭವ ಪ್ರಕಾಶನ ಗುಲ್ಬರ್ಗಾ, 1999, ಪುಟ ; ಮುನ್ನುಡಿಯಲ್ಲಿ.

12. ಅದೇ : ಪುಟ ; 133.

13. ಅದೇ : ಪುಟ ; 115.

14. ವಿಜಯ ಕರ್ನಾಟಕ ದಿನಪತ್ರಿಕೆ : ದಿನಾಂಕ : 28.10.2001.

15. ಅದೇ, ಪತ್ರಿಕೆ : ದಿನಾಂಕ : 28.10.2001.

16. ಅರವಿಂದ ಮಾಲಗತ್ತಿ(ಸಂ),2002 : ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ ; vi.

17. www.ambedkar.org/book : www.saxakali.com ಈ ರೀತಿಯ ಹಲವಾರು ಅಂತರ್ಜಾಲ ತಾಣಗಳಲ್ಲಿ ಇಂತಹ ಶೀರ್ಷಿಕೆಯಡಿ ಸಾಂದರ್ಭಿಕ ವಿದ್ಯುನ್ಮಾನ ಪಠ್ಯ ಲಭ್ಯವಿವೆ. 2003

18. Manohar Yadav, 2003 : Socio-Economic Survey of Scheduled Castes and Scheduled Tribes in Karnataka: A Critical Analysis. Institute for Social and Economic Change, Bangalore-2003, p. 99.

19. ಅದೇ : ಪುಟ, 99.

20. Manohar Yadav, 1998 : 'Career of Dalit Movement in Karnataka' in Journal of Social Economic Development Vol. No. 1, Jan-June, ISEC, Bangalore, 1998, p. 120.

21. C. D. Naik, 2004 : Ambedkar's Perspectives on Buddhism and other Religions Kalpaz Publications, Delhi, p.154.

22. K. Raghavendra Rao, 1993 : Babasaheb Ambedkar; Makers in Indian Literature, Sahitya Akademi New Delhi, p.73.

23. ಅದೇ : ಅದೇ ;

24. ನಾಗರಾಜ್. ಡಿ.ಆರ್, 1998 : ಅಮೃತ ಮತ್ತು ಗರುಡ ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ. ಪುಟ ; 16-17.

| | | |
|---|---|---|
| 25. Sanjay Chahande, 2005 | : | 'Theorizing Dr. Ambedkar's Conversion' in Proceedings Volume of First International Buddhist Conference, Mumbai. |
| 26. ಎಂ.ಸಿ. ರಾಜ್, 2002 | : | 'ದಲಿತತ್ವ' ದಲಿತ ಧರ್ಮಗ್ರಂಥ, ಅಂಬೇಡ್ಕರ್ ಸಂಪನ್ಮೂಲ ಕೇಂದ್ರ, ತುಮಕೂರು, ಪುಟ ; 109. |
| 27. ಅದೇ | : | ಅದೇ. |
| 28. ನಾಗರಾಜ್. ಡಿ.ಆರ್., 1993 ಎಂ.ಎಸ್. ಆಶಾದೇವಿ (ಅನು) | : | ಉರಿ ಚಮ್ಮಾಳಿಗೆ (The Flaming Feet) ವಸಂತ ಪ್ರಕಾಶನ, ಬೆಂಗಳೂರು, ಪುಟ ; 67. |
| 29. ಅದೇ | : | ಅದೇ. |
| 30. ಅದೇ | : | ಪುಟ ; 68. |
| 31. ಚಕ್ರವರ್ತಿ ಜಿ.ಎನ್., 2002 ಮಾ. ವರದರಾಜು (ಅನು) | : | ಇತಿಹಾಸ ಪ್ರದೀಪ, ಅಕ್ಷರ ಪ್ರಕಾಶನ, ಹೆಗ್ಗೋಡು, 2003, ಪುಟ ; 44. |
| 32. ಅದೇ | : | ಪುಟ ; 44. |
| 33. Dhananjay Keer, 1971 | : | Dr. Ambedkar, Life and Mission Popular Prakashan, Bombay, 2003, p.498. |
| 34. Govt. of Maharashtra, 1992 | : | The Buddha and His Dhamma in Dr. Babasaheb Ambedkar writings and speeches, Vol. 11. Department of Education, Bombay, P. (Introduction) (Earlier published in 1957, Siddharth College Publication-I, Peoples Education Society, Bombay). |
| 35. ಕಾಂಚ ಐಲಯ್ಯ ಮತ್ತು ಇತರರು, 1997 | : | ಅಂಬೇಡ್ಕರ್ ಮೇಲೆ ಆಕ್ರಮಣ (ಡಾ. ಅಂಬೇಡ್ಕರ್‌ರವರ ಬಗ್ಗೆ ತಿರುಚಿ ಬರೆದ ಅರುಣಶೌರಿ ಕೃತಿ 'Worshiping False Gods' ಕುರಿತು ಪ್ರತಿಕ್ರಿಯೆಗಳು) ಸಂಬುದ್ಧ ಪ್ರಕಾಶನ, ಬೆಂಗಳೂರು, ಪುಟ ; 22. |
| 36. B.R. Ambedkar, 1935 | : | Conversion as Emancipation, Critical Quest, New Delhi, 2004, PP-3. |

37. Bhikku Lokanatha, 1998 : An Italian Bhikku wrote a passinate appeal to Dr. Ambedkar urging him to embrace Buddhism in 1936 (as told by P.G. Kamalanathan quoted in G. Aloysius ; "Religion as Emancipatory Identity". New Age International (P) Ltd., Bangalore, p.102.

38. Govt. of Maharashtra, 1992 : ಅದೇ ಸಂಪುಟ ; 11.

39. Govt. of Maharashtra, 1998 : Dr. Babasaheb Ambedkar Writings and Speeches, Vol. 16.
1. Dr. Ambedkar Pali grammer.
2. Dr. The Pali Dictirmeny.
   a. Pali into English.
   b. Pali into English, Marathi, Hindi and Gujarathi.
3. Bouddha Pooja Path,
   Education Department, Mumbai, p.725.

40. ಕರ್ನಾಟಕ ಸರ್ಕಾರ, 1990 : ಡಾ. ಬಾಬಾಸಾಹೇಬ ಅಂಬೇಡ್ಕರ್ ಅವರ ಬರಹಗಳು ಮತ್ತು ಭಾಷಣಗಳು, ಸಂಪುಟ : 1, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ : 304.

41. 'ಒಳ ಕಾರ್ಯಾಚರಣೆ' ಎಂದರೆ ದಲಿತರನ್ನು ರೊಚ್ಚಿಗೆಬ್ಬಿಸುವ ಕೃತ್ಯಗಳು, ದಲಿತ-ಮುಸ್ಲಿಂರಲ್ಲಿ ಸಂಘರ್ಷಗಳನ್ನು ಹುಟ್ಟಿಸುವುದು. ಅಂಬೇಡ್ಕರ್ ವಿಚಾರಗಳ ಬಗ್ಗೆ ತಲೆಬುಡವಿಲ್ಲದ ಟೀಕೆ ಟಿಪ್ಪಣಿ ಹುಟ್ಟುಹಾಕಿ ಕರಪತ್ರ, ಎಲೆಕ್ಟ್ರಾನಿಕ್ ಮಾಧ್ಯಮಗಳ ಮೂಲಕ ಬಿತ್ತರಿಸುವುದು. ಐತಿಹಾಸಿಕ ಘಟನೆಗಳನ್ನು ತಿರುಚಿ ಪ್ರಚಾರ ಮಾಡುವುದು. ದಲಿತ, ಬಹುಜನರ ಹಕ್ಕುಗಳ ಹೋರಾಟದ ಸಂಘಟನೆಗಳ ನಾಯಕರಿಗೆ ಆಮಿಷ ಒಡ್ಡಿ ಅಂತಹ ಸಂಘಟನೆಗಳನ್ನು ಒಡೆಯುವುದು ಇತ್ಯಾದಿ.

42. Walter Fernandes, 1996 : The Emerging Dalit Identity, The Re-Assertion of the Subalterns, Indian Social Institute, New Delhi ; p.190-192.

43. ಸುಭಾಷ ಭರಣಿ, 2004 : ಮೈಸೂರು ಜಿಲ್ಲೆಯ ಆದಿ ಕರ್ನಾಟಕರ ಅಭಿವೃದ್ಧಿ: ಒಂದು ಅಧ್ಯಯನ. (ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಮಾಜ ವಿಜ್ಞಾನ ನಿಕಾಯಕ್ಕೆ ಡಿ.ಲಿಟ್. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ) ಪುಟ : 1.

44. ಕಾಂಚ ಐಲಯ್ಯ, 2000 : Spititual Fascism and Civil Society, SC, ST, BC and Human Rights Organisations of Andhra Pradesh, Hyderabad, p-1.

45. ಅದೇ : ಪುಟ ; 2.

46. ಅದೇ : ಪುಟ ; 12.

47. Kancha Ilaiah, 1996 : Why I am Not a Hindu (A Shudra Critique of Hindutva Philosophy, Culture and Political Economy) Soumya Cultural, p-xii.

48. Govt. of Maharashtra, 2003 : Dr. Babasaheb Ambedkar writings and Speeches, Vol. 17, Part three, Dr. Babasaheb Ambedkar Source material publication committee, Higher Education Department, Mumbai 2003, p. 515.

49. ಅದೇ : ಪುಟ - 516.

50. Govt. of Maharashtra, 1991 : Slavery (In the Civilised British Government under the Clock of Brahmanism) Exposed by: Jotirao Govindrao Phule) Translated by Prof. P.G. Patil, Ex-Vice Chancellor of Shivaji University, Kolhapur), collected works of Mahatma Jotirao Phule, Vol. I, Department of Education, Mantralaya, Bombay, p.2.

51. Ibid : P. ix

52. Ram Gopal Singh & others (ed) : "Restoration of Human Rights and Dignity to Dalits", Dr. Babasaheb Ambedkar National Institute of Social Science, Mhow, MP. 2004, p.16.

53. ದೇಜಗೌ, 2003 : ವಿಚಾರವಾದಿ, ಕ್ರಾಂತಿಕಾರ ಡಾ. ಅಂಬೇಡ್ಕರ್ ಸಪ್ನ ಬುಕ್‌ಹೌಸ್, ಬೆಂಗಳೂರು, ಪುಟ : 194-195.

54. ಕರ್ನಾಟಕ ಸರ್ಕಾರ, 1996 : ಡಾ. ಬಾಬಾಸಾಹೇಬ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ - 5, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ : 529.

55. Omvedt Gail, 1994 : Dalits and Democratic Revolutions (Dr. B. R. Ambedkar and the Dalit Movement in Colonial India) Sage Publications New Delhi, p : 241.

56. ಧಾರವಾಡ ಜಿಲ್ಲಾ ಆಡಳಿತದಿಂದ 14-4-1998 ರಂದು ಹಮ್ಮಿಕೊಂಡಿದ್ದ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ಜಯಂತೋತ್ಸವದಲ್ಲಿ ಭಾಗವಹಿಸಿ ಪ್ರಮುಖ ಭಾಷಣ ಮಾಡಿದ ಸಂದರ್ಭದಲ್ಲಿ.

57. Ram Gopal Singh & Others, 2004 : ಅದೇ ಪುಟ ; 80.

58. ಅದೇ : ಪುಟ ; 105.

59. ನಾಗರಾಜ್ ಡಿ.ಆರ್., 1998 : ಪೂರ್ವೋಕ್ತ, ಪುಟ ; 16.

60. ಶಿವಾನಂದ ಎಸ್., 1976 : 'ವರ್ಣವ್ಯವಸ್ಥೆಯ ಕರಾಳ ಮುಖಗಳು' ಸಂಕ್ರಮಣ ಸಾಹಿತ್ಯ ಸಂಪುಟ ; 3, ಸಂಕ್ರಮಣ ಪ್ರಕಾಶನ, ಧಾರವಾಡ, ಪುಟ ; 68-69

★★★★★



## ಅಧ್ಯಾಯ-2

# ಅಂಬೇಡ್ಕರ್, ಬೌದ್ಧಧರ್ಮ ಮತ್ತು ದಲಿತರ ಸಾಂಸ್ಕೃತಿಕ ಸವಾಲುಗಳು

2.1. ಅಂಬೇಡ್ಕರ್‌ರವರು ಮತ್ತು ಬೌದ್ಧಧರ್ಮ

2.2. ಅಂಬೇಡ್ಕರ್‌ರವರ 'ಮತಾಂತರ' ದ ತಾತ್ವಿಕ ಹಿನ್ನೆಲೆಗಳು ಮತ್ತು ದಲಿತರ ಸಾಂಸ್ಕೃತಿಕ ಐಡೆಂಟಿಟಿಯ ಪ್ರಶ್ನೆಗಳು.

ಅಧ್ಯಾಯ-2

# ಅಂಬೇಡ್ಕರ್, ಬೌದ್ಧಧರ್ಮ ಮತ್ತು ದಲಿತರ ಸಾಂಸ್ಕೃತಿಕ ಸವಾಲುಗಳು

## 2.1. ಅಂಬೇಡ್ಕರ್ ಮತ್ತು ಬೌದ್ಧ ಧರ್ಮ :

ಡಾ. ಅಂಬೇಡ್ಕರ್‌ರವರು ಬೌದ್ಧ ಧರ್ಮದ ಕಡೆಗೆ ಒಮ್ಮೆಲೇ ಆಕರ್ಷಿತರಾದವರಾಗಿಲಿಲ್ಲ. ವಿದ್ಯಾರ್ಥಿ ದಿಸೆಯಿಂದಲೇ ಅವರ ಜೀವನ ಚಿಂತನೆಗಳ ಮೇಲೆ ಬುದ್ಧನ ತತ್ವಗಳ ಪ್ರಭಾವ ಆಗುತ್ತಲೇ ಇತ್ತು. ಈ ಕೆಳಗಿನ ಘಟನಾವಳಿಗಳನ್ನು ಅವಲೋಕಿಸಿದಾಗ ಅದು ಇನ್ನೂ ಸ್ಪಷ್ಟವಾಗುತ್ತದೆ.

1907 ರಲ್ಲಿ ಅಂಬೇಡ್ಕರ್‌ರವರು 16 ವರ್ಷದವರಿದ್ದಾಗ ಮೆಟ್ರಿಕ್ ಪರೀಕ್ಷೆ ಪಾಸಾದ ಅವರನ್ನು ಸನ್ಮಾನಿಸಿದ ಸಂದರ್ಭದಲ್ಲಿ ಅಂದಿನ ಸಭೆಯ ಅತಿಥಿಗಳಾಗಿದ್ದ ಹಿರಿಯರಾದ ಕೆ.ಎ. ಕೇಳುಸ್ಕರ್ ಅವರು ತಾವು ಬರೆದ 'ಬುದ್ಧನ ಜೀವನ ಚರಿತ್ರೆ' (ಮರಾಠಿ) ಕೃತಿಯನ್ನು ಅಭಿನಂದನೆಯ ರೂಪವಾಗಿ ನೀಡಿದರು'[1]. ಇದರಿಂದ ಸಹಜವಾಗಿ ಬಾಲಕ ಅಂಬೇಡ್ಕರ್‌ರವರ ಮೇಲೆ ಆ ಪುಸ್ತಕದಲ್ಲಿದ್ದ 'ಗೌತಮ ಬುದ್ಧನ ಜೀವನ ಹಾಗೂ ತತ್ವಗಳು' ಆಕರ್ಷಿಸಿ ಪ್ರಭಾವ ಬೀರಿರುವುದನ್ನು ಅಲ್ಲಗಳೆಯಲಾಗದು.

ಲಂಡನ್, ನ್ಯೂಯಾರ್ಕ್‌ಗಳಲ್ಲಿ ಉನ್ನತ ಶಿಕ್ಷಣ ಪಡೆದು ಪಾಶ್ಚಾತ್ಯ ಉದಾರವಾದಿ ಚಿಂತನೆಗಳಿಂದ ಪ್ರಭಾವಿತರಾಗಿ, ಸ್ವಾತಂತ್ರ್ಯದ ಹೊಸ ಉಸಿರಾಟ ಅನುಭವಿಸಿ 1923 ರಲ್ಲಿ ಮಾಡಿ ಮುಂಬೈಗೆ ಮರಳಿದ ಡಾ. ಅಂಬೇಡ್ಕರ್‌ರವರು ಅವಮಾನದ ಘಟನೆಗಳನ್ನು ಎದುರಿಸಬೇಕಾಯಿತು. ಮುಂಬೈ ಹೈಕೋರ್ಟ್ ಆವರಣದಲ್ಲಿ ಒಂದು ಕಪ್ ಚಹಾ ಸಹ ಸಿಗದ ವಾತಾವರಣ ಇತ್ತು. ಸಿಡೆನ್ ಹ್ಯಾಮ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸಹೋದ್ಯೋಗಿಗಳಿಂದಲೇ ಅವಮಾನಕ್ಕೊಳಗಾದರು.

ಕುಡಿಯಲು ಇಟ್ಟಿದ್ದ ಪಾತ್ರೆಯಿಂದ ನೀರು ತೆಗೆದುಕೊಳ್ಳದಂತೆ ಅವರ ಸಹೊದ್ಯೋಗಿಗಳೇ ನಿರ್ಬಂಧಿಸಿದಾಗ ವಿಹ್ವಲವಾದರು. ವಿದೇಶಗಳಲ್ಲಿನ ಪ್ರಖ್ಯಾತ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ಮಾಡಿ ಅಪಾರ ಪಾಂಡಿತ್ಯದೊಂದಿಗೆ ತಾಯ್ನಾಡಿಗೆ ಮರಳಿದ್ದ ಅಂಬೇಡ್ಕರವರಿಗೆ ಈ ರೀತಿಯ ವರ್ತನೆ ಕಂಡು ಹೇಸಿಕೆ ಎನಿಸಿತು. 32 ವರ್ಷಗಳ ತರುಣನ ಬಿಸಿ ರಕ್ತ ಕುದಿಯಿತು. ಮುಂಬೈ ಹೈಕೋರ್ಟಿನ ಪ್ರಮುಖ ಬ್ಯಾರಿಸ್ಟರ್, ಪ್ರತಿಷ್ಠಿತ ಸಿಡೆನ್‌ಹ್ಯಾಮ್ ಕಾಲೇಜಿನ ಜನಪ್ರಿಯ ಪ್ರಾಧ್ಯಾಪಕನಾದ ತಮಗೇನೆ ಇಂತಹ ಅವಮಾನವಾಗುತ್ತಿರಬೇಕಾದರೇ ಶಿಕ್ಷಣದ ಗಂಧ ಗಾಳಿಯೇ ಬಡಿಯದ ತನ್ನ ಕೋಟ್ಯಾನು ಕೋಟಿ ಕೆಳ ಜಾತಿಗಳ ಜನರ ಪರಿಸ್ಥಿತಿಯೇನು? ಎಂಬ ಪ್ರಶ್ನೆ ಕಾಡಿಸಿತು. ಇಂತಹ ಅಮಾನವೀಯ ಪದ್ಧತಿಯನ್ನು ಹೋಗಲಾಡಿಸಲು ಅಸ್ಪೃಶ್ಯರನ್ನು ಸಂಘಟಿಸುವ ಸಂಕಲ್ಪ ಅಂಬೇಡ್ಕರ್‌ರವರಲ್ಲಿ ಮೂಡಿ ಬಂತು. ಸಾವಿರಾರು ವರ್ಷಗಳಿಂದ ದಬ್ಬಾಳಿಕೆ ಸಹಿಸಿಕೊಂಡು ಬಂದ ದಲಿತರ ದಯನೀಯ ಸ್ಥಿತಿ ಕಂಡು 'ಹೇಗಾದರೂ ಮಾಡಿ ಅವರನ್ನು ಬಡಿದೆಬ್ಬಿಸುವ ಛಲ ಮೂಡಿತು.

ಶಿಕ್ಷಣದಿಂದ ಮಾತ್ರ ದಲಿತರಲ್ಲಿ ನಿರೀಕ್ಷಿತ ಪ್ರಜ್ಞೆ ಮೂಡಿಸಲು ಸಾಧ್ಯವೆಂದು ಹಲವಾರು ಶೈಕ್ಷಣಿಕ ಸಂಸ್ಥೆಗಳನ್ನು ತೆರೆದರು. ಶಿಕ್ಷಣವೇ ನಿಜವಾದ ಪರಿವರ್ತನೆಯ, ಪ್ರಗತಿಯ ಸಾಧನವೆಂದು ಪ್ರತಿಪಾದಿಸಿದರು. ಜೂನ್ 1928 ರಲ್ಲಿ ಎರಡು ವಸತಿ ನಿಲಯಗಳನ್ನು ಪ್ರಾರಂಭಿಸಿದರು. ಸರ್ಕಾರದಿಂದ ಅನುದಾನ ಪಡೆದು ಇನ್ನು ಅನೇಕ ಕಡೆ ವಸತಿ ಗ್ರಹಗಳನ್ನು ಪ್ರಾರಂಭಿಸಿದರು. ಈ ಎಲ್ಲ ವಸತಿ ನಿಲಯಗಳು 'ಮಾಧ್ಯಮಿಕ ಶಿಕ್ಷಣ ಮುಂದುವರೆಸುವ' ದುರ್ಬಲ ವರ್ಗದ ಮಕ್ಕಳಿಗೆ ಅನುಕೂಲವಾಯಿತು. ಇದೇ ಸಂದರ್ಭದಲ್ಲಿ ಕಾನೂನು ಪ್ರಾಧ್ಯಾಪಕರಾದ ಅಂಬೇಡ್ಕರವರು ತಮ್ಮ ವಿಚಾರ ಪ್ರಚೋದಕ ಉಪನ್ಯಾಸಗಳಿಂದ ಪ್ರಖ್ಯಾತರಾಗುತ್ತ ಹೋದರು. ಈ ವಿವರಗಳ ಮಹತ್ವವನ್ನು ನಾವು ಈ ಕುರಿತಾದ ಘಟನೆಗಳ ಪ್ರತ್ಯೇಕ ಅಧ್ಯಯನದಿಂದಲೇ ಗ್ರಹಿಸಲು ಸಾಧ್ಯವಾಗುತ್ತದೆ. ತದನಂತರ ಅಂಬೇಡ್ಕರವರು ಬಹಳಷ್ಟು ಜನರನ್ನು ಸೇರಿಸಿ ದೊಡ್ಡ ಸಮಾವೇಶಗಳನ್ನು ಸಂಘಟಿಸಿ ಶೋಷಿತ ವರ್ಗಗಳ ಸಂವಿಧಾನ ಬದ್ಧವಾದ ಹಕ್ಕುಗಳ ಬೇಡಿಕೆಗಳನ್ನು ಮಂಡಿಸಿದರು. ಪತ್ರಿಕೆಗಳನ್ನು ಪ್ರಾರಂಭಿಸಿ ಮಾನವ ಹಕ್ಕುಗಳನ್ನು ಪ್ರತಿಪಾದಿಸಿದರು. ಕೆಲವೊಂದು ಸಂದರ್ಭದಲ್ಲಿ ಅಸ್ಪೃಶ್ಯರು ಶತಮಾನಗಳಿಂದ ತಮಗಂಟಿದ ಬೌದ್ಧಿಕ ಕೊಳೆಯಿಂದ, ಗುಲಾಮಗಿರಿಯಿಂದ ಹೊರಬರಲು ಖಾರವದ ರೀತಿಯಲ್ಲಿ ಕರೆ ನೀಡಿದರು.

"Tell the slave, that he is slave, and he will revolt"[2], ಎಂದು ನುಡಿದರು. ಮಾನವ ಹಕ್ಕುಗಳ ಆಂದೋಲನ ಪ್ರಾರಂಭಿಸಿದರು. ಮಹಾಡ್‌ನಲ್ಲಿ ಚೌದಾರ್ ಕೆರೆ ನೀರನ್ನು ಮುಟ್ಟಿ ನೀರನ್ನು ಕುಡಿಯುವ ಹೋರಾಟ ಪ್ರಾರಂಭಿಸಿದರು. ನೈಸರ್ಗಿಕವಾಗಿ ಸಂಗ್ರಹವಾದ ಕೆರೆ ನೀರನ್ನು ಕುಡಿಯಲು ಹೋರಾಟಕ್ಕೆ ಕರೆ ನೀಡಿದರು. ಹೀಗೆ ನಿಸರ್ಗದತ್ತವಾಗಿ ಎಲ್ಲ ಪ್ರಾಣಿಗಳಿಗೆ ಲಭ್ಯವಿರುವ ಸಂಪನ್ಮೂಲಗಳನ್ನು, ಇಂತಹ ಆಧುನಿಕ ಕಾಲದಲ್ಲಿಯೂ ನಿರಾಕರಿಸುವ ಸವರ್ಣೀಯರ ಕುರಿತು ಅವರಿಗೆ ಹೇಸಿಕೆ ಎನಿಸಿತು. ಆ ವೇಳೆಗಾಗಲೇ ಅಂದರೆ 1923 ರಲ್ಲಿಯೇ ಮುಂಬೈ ಶಾಸನ ಸಭೆಯ ಪ್ರಗತಿಪರ ಪ್ರತಿನಿಧಿಗಳಾಗಿದ್ದ ಎಸ್. ಕೆ. ಬೋಲೆಯವರು ಮಂಡಿಸಿದ ಪ್ರಗತಿಪರ ಮಸೂದೆಯನ್ನು ಅಂಗೀಕರಿಸಿತು. ಈ ನಿರ್ಣಯದ ಪ್ರಕಾರ ಚೌದಾರ್ ಕೆರೆಯನ್ನು ಅಸ್ಪೃಶ್ಯರಿಗೆ ತೆರೆದಿಡಬೇಕು. ಈ ನಿರ್ಣಯವನ್ನು ಮುಂಬೈ ಶಾಸನಸಭೆ 1926 ರಲ್ಲಿ ಮತ್ತೆ ಸ್ಥಿರೀಕರಿಸಿತು. ಆದರೆ ಸರ್ಕಾರದ ಈ ಮಸೂದೆಯಿಂದ ಅಸ್ಪೃಶ್ಯರಿಗೆ ಒದಗಿದ ಈ ಹಕ್ಕನ್ನು ಚಲಾವಣೆಗೆ ಬರದಂತೆ ತಡೆಯುವಲ್ಲಿ ಸವರ್ಣೀಯರು ಯಶಸ್ವಿಯಾದರು. ಆದರೆ ಅಂಬೇಡ್ಕರವರು 1927 ರಲ್ಲಿ (ಮಾರ್ಚ್ 19 ಮತ್ತು 20) ಕೋಲಾಬಾ ಜಿಲ್ಲೆಯ ಶೋಷಿತ ವರ್ಗಗಳ ಎರಡು ದಿನಗಳ ಸಮಾವೇಶವನ್ನು ಮಹಾಡ್‌ನಲ್ಲಿಯೇ ಹಮ್ಮಿಕೊಂಡರು (ಇದೊಂದು ರೀತಿಯಲ್ಲಿ ಅಂಬೇಡ್ಕರವರ ಹೋರಾಟದ ಕಾರ್ಯತಂತ್ರವೆಂದೇ ಎನ್ನಬಹುದು.) ಅಲ್ಲಿ ಮಹಾರಾಷ್ಟ್ರ, ಗುಜರಾತ್‌ಗಳಿಂದ ಬಂದಿದ್ದ 10 ಸಾವಿರಕ್ಕೂ ಹೆಚ್ಚು ಜನ ದಲಿತರು ಹಾಗೂ ಸಮಾಜ ಸುಧಾರಕರು ಸೇರಿದ್ದರು. ಎರಡನೇಯ ದಿನ ಭಾಷಣ, ಚರ್ಚೆ, ನಿರ್ಣಯಗಳ ನಂತರ ಅಂಬೇಡ್ಕರ್‌ರವರು ನೀರಿನ ಹಕ್ಕು ಚಲಾಯಿಸಲು ಚೌದಾರ್ ಕೆರೆಯ ಕಡೆಗೆ ನುಗ್ಗಿದರು. ಅವರನ್ನು ಹಿಂಬಾಲಿಸಿದ ಜನಸ್ತೋಮ ಕೆರೆಯ ನೀರನ್ನು ಮುಟ್ಟಿ ಬೊಗಸೆಯಿಂದ ಕುಡಿದೇ ಬಿಟ್ಟರು. ಈ ಸುದ್ದಿ ಕಾಳ್ಗಿಚ್ಚಿನಂತೆ ಹರಡಿ, ಸವರ್ಣೀಯರು ದಲಿತರ ಮೇಲೆ ಹಲ್ಲೆ ಮಾಡಿದರು. ಅಂಬೇಡ್ಕರ್‌ರವರು ಶಾಂತ ರೀತಿಯಿಂದ ಇರುವಂತೆ ಕೇಳಿಕೊಂಡದ್ದರಿಂದ ದಲಿತರು ಕಾರ್ಯಕರ್ತರು ಘರ್ಷಣೆಗೆ ಇಳಿಯಲಿಲ್ಲ.

ಆದರೆ ಮುಂದೆ, ಮಹಾಡ್‌ನ ಸವರ್ಣೀಯರು ಈ ಕೆರೆ 'ಖಾಸಗಿ ಆಸ್ತಿ' ಎಂದು ನೀರು ಬಳಕೆಯ ವಿರುದ್ಧ ಕೋರ್ಟ್‌ನಿಂದ 'ತಡೆಯಾಜ್ಞೆ' ತಂದರು. ಮುಂದೆ ಅದೇ ವರ್ಷ ಡಿಸೆಂಬರ್ 26 ಮತ್ತು 27 ರಂದು ಎರಡು ದಿನಗಳ ಶೋಷಿತ ವರ್ಗಗಳ ಸಮಾವೇಶ ಅಲ್ಲಿಯೇ ನಡೆಸಲಾಯಿತು. 2 ನೇ ದಿನ ಅಂಬೇಡ್ಕರ್‌ರವರು ಈ ಎಲ್ಲ ಅಸಮಾನತೆ ಸೃಷ್ಟಿಸಿದ ಅಸಂಖ್ಯಾತ ದೀನ ದಲಿತರನ್ನು ಈ ರೀತಿ ನಾಗರಿಕ ಹಕ್ಕುಗಳಿಂದ ವಂಚಿಸಿದ 'ಮನುಸ್ಮೃತಿ' ಯನ್ನೇ ಸುಟ್ಟುಹಾಕಿದರು. ಈ ಘಟನೆ ದೇಶವ್ಯಾಪಿಯಾಗಿ ಚರ್ಚಿಸಲ್ಪಟ್ಟಿತು. ಮನುಸ್ಮೃತಿ ಸುಟ್ಟ ಈ ಐತಿಹಾಸಿಕ ಸ್ಥಳವನ್ನು ಅಂಬೇಡ್ಕರ್ ಜೀವನ ಚರಿತ್ರೆ ಬರೆದ ಧನ ಧನಂಜಯ ಕೀರ್ ಅವರು ಭಾರತದ ''ವಿಟ್ಟೆನ್ ಭರ್ಗ್''[3] ಎಂದು ದಾಖಲಿಸಿದ್ದಾರೆ. ತಡೆಯಾಜ್ಞೆ ತರುವ ಮೂಲಕ ಆಧುನಿಕ ಸಮಾಜದಲ್ಲಿ ಈ ರೀತಿಯ ಅಮಾವೀಯ ಕೃತ್ಯಗಳಿಗೇನೂ ಕೊರತೆ ಇಲ್ಲವೆಂದು ಮಹಾಡ್‌ನ ಚೌದಾರ್ ಕೆರೆಯ ಮಾಲೀಕತ್ವ ಪ್ರತಿಪಾದಿಸಿದ ಸವರ್ಣೀಯ ಹಿಂದುಗಳು ಅಪ್ರತ್ಯಕ್ಷವಾಗಿ ಪ್ರಕಟ ಪಡಿಸಿದ್ದರು. ಈ ಘಟನೆಯಿಂದ ಅಂಬೇಡ್ಕರ್‌ರವರ ಹೋರಾಟಕ್ಕೆ ತಾತ್ಕಾಲಿಕ ಹಿನ್ನಡೆಯಾದರೂ ಅವರು ವಹಿಸಿದ ಪಕ್ಷದ 'ಜನರ ಕಾಳಜಿಗಳು' ರಾಷ್ಟ್ರೀಯ ನಾಯಕರುಗಳಿಗೆ ಮನದಟ್ಟಾದವು. ಅದೇ ರೀತಿ ದೇಶದ ಉಳಿದ ಭಾಗದ ದಲಿತರು ಅಂಬೇಡ್ಕರ್‌ರವರನ್ನು ತಮ್ಮ ನಾಯಕನೆಂದು ತಿಳಿದು ಅವರ ಸಂಪರ್ಕಕ್ಕೆ ಮುಂದಾದರು. ಹಾಗೆಯೇ ಬ್ರಿಟಿಷ್ ಸರ್ಕಾರ ಅವರು ನಿಮ್ನ ವರ್ಗದ ಹಕ್ಕುಗಳಿಗಾಗಿ ಹೋರಾಟ ಮಾಡುವುದನ್ನು, ಮಂಡಿಸಿದ ಬೇಡಿಕೆಗಳನ್ನು ಪರಿಗಣಿಸಲು ಪ್ರಾರಂಭಿಸಿತು. ಅವರಲ್ಲಿಯ 'ಮುತ್ಸದ್ದಿಗುಣ' ಅವರನ್ನು ಕಡೆಗಣಿಸಲಾಗದ ವ್ಯಕ್ತಿಯನ್ನಾಗಿ ಮಾಡಿತು.

ಮುಂಬೈ ಪ್ರಾಂತ್ಯದಲ್ಲಿ ಶೋಷಿತ ವರ್ಗಗಳ (ಅಸ್ಪೃಶ್ಯರ) ಶೈಕ್ಷಣಿಕ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗಳ ಪರಿಶೀಲನೆಗಾಗಿ ಸರ್ಕಾರ ಒಂದು ಸಮಿತಿಯನ್ನು ನೇಮಿಸಿತು. ಆ ಸಮಿತಿಯ ಸದಸ್ಯರಾಗಿದ್ದ ಅಂಬೇಡ್ಕರ್‌ರವರು ಮಹಾರಾಷ್ಟ್ರದ ಖಾಂದೇಶ ನಾಸಿಕ ಪ್ರದೇಶಗಳಲ್ಲದೇ ಕರ್ನಾಟಕದಲ್ಲಿಯೂ ಪ್ರವಾಸ ಮಾಡಿದ್ದರು. ಈ ಸಂದರ್ಭ ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ತುಂಬಾ ಮಹತ್ವದ್ದಾಗಿದೆ. ಯಾಕೆಂದರೆ, ಭೇಟಿ ಕಾಲದಲ್ಲಿ ಸ್ವತಃ ಅವರೇ ಅವಮಾನಕರ ನಡವಳಿಕೆಗಳನ್ನು ಎದುರಿಸಿದರು. ಮೇ 11, 1929 ರಂದು ಬೆಳಗಾವಿಯಲ್ಲಿ ಅಸ್ಪೃಶ್ಯರ ಸಭೆಯನ್ನುದ್ದೇಶಿಸಿ ಮಾತನಾಡುತ್ತ 'ನಿಮ್ಮ ಹಕ್ಕುಗಳ ಸ್ಥಾಪನೆಗಾಗಿ ಹೋರಾಟ ಮಾಡಿರಿ ಎಂದು ಕರೆ ನೀಡಿದರು. ಈ ಸಭೆಯ ನಂತರ ''ಹಿಂದುಗಳು ದಲಿತರ ಮೇಲೆ ದಬ್ಬಾಳಿಕೆ ಮುಂದುವರೆಸಿದರೆ, ಅವರ ಬೇಡಿಕೆಗಳಿಗೆ ತಣ್ಣೀರೆರೆಚಿದರೆ ಅವರೆಲ್ಲರು ಬೇರೆ ಯಾವುದಾದರೂ ಧರ್ಮವನ್ನು ಸ್ವೀಕರಿಸಬೇಕಾಗುತ್ತದೆ''[4]. ಎಂಬ ನಿರ್ಣಯ ಸ್ವೀಕರಿಸಲಾಯಿತು. (ಡಾ. ಜಗದೀಶ ಕಿವುಡನವರ, 2003) ಈ ನಿರ್ಣಯ ತೆಗೆದುಕೊಂಡ ಹಿನ್ನೆಲೆಯನ್ನು ಪರಿಶೀಲಿಸಿದಾಗ 1929 ರಲ್ಲಿಯೇ ಕರ್ನಾಟಕದ ಬೆಳಗಾವಿಯಲ್ಲಿ ಅಂಬೇಡ್ಕರ್‌ರವರು ತಾವು ಹಾಗೂ ತಮ್ಮ ಶೋಷಿತ ವರ್ಗದ ಅನುಯಾಯಿಗಳು ಬೇರೆ ಯಾವುದಾದರೂ ಒಂದು ಧರ್ಮವನ್ನು ಸ್ವೀಕರಿಸುತ್ತೇವೆ ಎಂದು ಖಚಿತವಾಗಿ ಹೇಳಿರುವುದು ತಿಳಿಯುತ್ತದೆ.

ಮುಂದೆ 1930, ಮಾರ್ಚ್ 2 ರಂದು ನಾಸಿಕ್‌ನ ಕಾಳಾರಾಮ ದೇವಾಲಯ ಪ್ರವೇಶ ಚಳುವಳಿ ಪ್ರಾರಂಭವಾಯಿತು. 8000 ಕ್ಕಿಂತ ಹೆಚ್ಚು ದಲಿತರು ಅಲ್ಲಿ ಸೇರಿದ್ದರು. ಆದರೆ ಸವರ್ಣಿಯ ಹಿಂದುಗಳು ನಾಸಿಕ ಕಾಳಾರಾಮ ದೇವಾಲಯದಲ್ಲಿ ದಲಿತರನ್ನು ಒಳಗೆ ಬಿಡಲಿಲ್ಲ. ಒಂದು ವರ್ಷ ಪರ್ಯಂತರ

ದೇವಾಲಯದ ಬಾಗಿಲನ್ನೇ ಮುಚ್ಚಿದರು. ಈ ಚಳುವಳಿ ಅಂಬೇಡ್ಕರ್‌ರವರು ಐದು ವರ್ಷಗಳವರೆಗೆ ತಮ್ಮ ಶಕ್ತಿ ವೇಳೆ ವ್ಯಯಿಸುವಂತೆ ಮಾಡಿತು. ಇದರಿಂದ ಅಂಬೇಡ್ಕರ್‌ರವರಿಗೆ ಹಿಂದುಗಳ ಮನಪರಿವರ್ತನೆ ಮಾಡುವುದು ಸಾಧ್ಯವಿಲ್ಲ, ಅಸ್ಪೃಶ್ಯರ ವಿಮೋಚನೆಗೆ ಅವರು ಈ ಅಸಮಾನತೆಯ ಧರ್ಮವನ್ನು ಧಿಕ್ಕರಿಸುವುದರಿಂದಲೇ ಸಾಧ್ಯ ಎಂದು ಸ್ಪಷ್ಟತೆ ಮೂಡಿತು. ಹಿಂದೂ ಧರ್ಮ ಅಸ್ಪೃಶ್ಯತೆಯಂತಹ ಅಮಾನವೀಯ ವ್ಯವಸ್ಥೆಯ 'ಜನಕ' ಮಾತ್ರವಲ್ಲದೇ, ಮುಖ್ಯವಾಗಿ ಮನುಷ್ಯನಿಗೆ ಬೇಕಾದ ಸಮಾನತೆ, ಸ್ವಾತಂತ್ರ್ಯ ಮತ್ತು ಭ್ರಾತೃತ್ವಗಳಿಗೆ ಇದು ವಿರೋಧಿಯಾಗಿದೆ ಎಂದು ಮನವರಿಕೆಯಾಯಿತು. ಮುಂದೆ ಅವರು ಸೈಮನ್ ಕಮೀಷನಿಗೆ ಮನವಿ ಕೊಡುವಲ್ಲಿ ವಿಧಾನ ಸಭೆಗೆ ಹಾಜರಾಗಿ ತಮ್ಮ ವಿಚಾರಗಳನ್ನು ಅಸ್ಪೃಶ್ಯರ ಹಕ್ಕುಗಳನ್ನು ಮಂಡಿಸಲು ಪ್ರಯತ್ನಿಸಿದರು. ರೌಂಡ್ ಟೇಬಲ್ ಕಾನ್ಫರನ್ಸ್‌ಗಳಲ್ಲಿ ಭಾಗವಹಿಸಿ ಶೋಷಣೆಗೆ ಒಳಗಾದ ದಲಿತರ ವಿಮೋಚನೆ ಬಗ್ಗೆ ಯಾವ ಕಾನೂನುಗಳನ್ನು ತರಬೇಕೆಂಬುದನ್ನು ಚಿಂತನೆ ಮಾಡುತ್ತಲೇ ಹಲವಾರು ಸೂತ್ರಗಳನ್ನು ಪ್ರಸ್ತಾಪಿಸಿದರು.

ಮುಂದೆ 1930 ರ ದಶಕದಲ್ಲಿ ಡಾ. ಅಂಬೇಡ್ಕರ್‌ರವರ ಜೀವನದಲ್ಲಿ ನಡೆದ ಘಟನೆ ಅವರು ಯಾಕೆ ಬೌದ್ಧ ಧರ್ಮದ ಕಡೆಗೆ ಗಂಭೀರವಾಗಿ ಆಲೋಚನೆ ಮಾಡುವಂತೆ ಮಾಡಲು ಕಾರಣವಾಯಿತು, ಮತ್ತು ಅವರು ಬೌದ್ಧ ಸಾಹಿತ್ಯ, ಚರಿತ್ರೆ, ಬೌದ್ಧ ಕ್ಷೇತ್ರಗಳ ಬಗ್ಗೆ ಹೊಂದಿದ ಆಸಕ್ತಿಗಳು ಈ ಘಟನೆಯಲ್ಲಿ ವ್ಯಕ್ತವಾಗುವುದರಿಂದ ಅದನ್ನು ಉಲ್ಲೇಖಿಸುವ ಅಗತ್ಯವಿದೆ. ಮಹಾಡ್ ಕೆರೆಯ ನೀರಿನ ಸತ್ಯಾಗ್ರಹ, ಕಾಳಾರಾಮ ದೇವಾಲಯ ಪ್ರವೇಶ ಚಳವಳಿಗಳಿಂದ ಮಹಾರಾಷ್ಟ್ರದಲ್ಲಷ್ಟೇ ಅಲ್ಲ, ಅಖಿಲ ಭಾರತ ಮಟ್ಟದಲ್ಲಿ ಅವರು ಪರಿಚಿತರಾಗಿದ್ದ ಸಂದರ್ಭವದು. ಶೋಷಿತ ವರ್ಗಗಳ ಚಳವಳಿಯ ಸಹ ಕಾರ್ಯಕರ್ತರು ಪ್ರೇಕ್ಷಣಿಯ ಸ್ಥಳಗಳನ್ನು ನೋಡುವ ಅಭಿಲಾಷೆಯಿಂದ ಒಂದು ಪ್ರವಾಸ ಕಾರ್ಯಕ್ರಮ ಹಮ್ಮಿಕೊಂಡು ಅಂಬೇಡ್ಕರ್‌ರವರು ತಮ್ಮೊಂದಿಗೆ ಬರುವಂತೆ ಕೋರುತ್ತಾರೆ. ತಮ್ಮ ಆ ಒಡನಾಡಿಗಳಿಗೆ ಒಂದು ಷರತ್ತು ವಿಧಿಸಿ ಅಂಬೇಡ್ಕರ್‌ರವರು ಒಪ್ಪಿಗೆ ಸೂಚಿಸುತ್ತಾರೆ. ಅಂಬೇಡ್ಕರ್‌ರವರೇ ದಾಖಲಿಸಿದಂತೆ 'ಈ ಪ್ರವಾಸ ಕಾರ್ಯಕ್ರಮಕ್ಕೆ ಒಂದು ಷರತ್ತಿನೊಂದಿಗೆ ನಾನು ಒಪ್ಪಿಕೊಳ್ಳುತ್ತೇನೆ, ನೀವು ಸಂದರ್ಶನ ಮಾಡುವ ಸ್ಥಳಗಳ ಪಟ್ಟಿಯಲ್ಲಿ ಔರಂಗಾಬಾದ್ ಸಮೀಪವಿರುವ 'ವೇರುಲ ಬೌದ್ಧ ಗುಹೆಗಳಿಗೆ' ಭೇಟಿ ನೀಡುವುದನ್ನು ಸೇರಿಸಿದರೆ ನನ್ನ ಒಪ್ಪಿಗೆ ಇದೆ'[5] ಎಂದು ಹೇಳುತ್ತಾರೆ. ವೇರುಲ ಬೌದ್ಧ ಗುಹೆಗಳಿಗೆ ಹೋಗಬೇಕಾದರೆ ನಾಸಿಕದಿಂದ ಹೋಗುವವರು ಔರಂಗಾಬಾದ್ ಮೂಲಕವೇ ಹೋಗಬೇಕು. ನಡುವೆ ದೌಲತಾಬಾದ್ ಬರುತ್ತದೆ. ಆ ಸಮಯದಲ್ಲಿ ದೌಲತಾಬಾದ್ ಹೈದರಾಬಾದ್ ನಿಜಾಮರ ಆಡಳಿತದ ಅಧೀನದಲ್ಲಿ ಇರುತ್ತದೆ.

'ಈ ಪ್ರದೇಶದಲ್ಲಿ ಪ್ರವಾಸ ಮಾಡುವ ಯಾವ ಯಾತ್ರಿಕರು ದೌಲತಾಬಾದ್ ಕೋಟೆ ನೋಡುವುದನ್ನು ತಪ್ಪಿಸಿಕೊಳ್ಳಬಾರದು'[6] ಎಂದು ಹೇಳುವಲ್ಲಿ ಅಂಬೇಡ್ಕರ್‌ರವರಿಗೆ ಐತಿಹಾಸಿಕ ಸ್ಮಾರಕಗಳ ಬಗ್ಗೆ ಎಷ್ಟೊಂದು ಆಸಕ್ತಿ ಇತ್ತು ಎನ್ನುವುದು ಗೊತ್ತಾಗುತ್ತದೆ. ದೌಲತಾಬಾದ್‌ಗೆ ಅಂಬೇಡ್ಕರ್‌ರವರು ಭೇಟಿ ನೀಡುವ ಸುದ್ದಿ ಅಲ್ಲಿನ ದಲಿತರಿಗೆ ಹೇಗೋ ಗೊತ್ತಾಗಿಬಿಟ್ಟಿರುತ್ತದೆ. ಅವರು ಅಂಬೇಡ್ಕರ್‌ರವರನ್ನು ಸ್ವಾಗತಿಸಲು ಕೋಟೆಯ ಪ್ರವೇಶ ದ್ವಾರದ ಬಳಿ ಬಂದಿರುತ್ತಾರೆ. ಸಮೀಪದಲ್ಲಿದ್ದ ಒಂದು ನೀರಿನ ಟ್ಯಾಂಕಿನಲ್ಲಿ ಸಹ ಯಾತ್ರಿಕರು ಕೈಕಾಲು ಮುಖ ತೊಳೆದು ಬರುತ್ತಾರೆ. ಅಂಬೇಡ್ಕರ್‌ರವರೇ ದಾಖಲಿಸಿದ ಈ ಕಹಿ ಅನುಭವದ ಘಟನೆಯಲ್ಲಿ ರಮಜಾನ್

ಮಾಸವಾಗಿದ್ದರೂ ಕೂಡ 'ಅಲ್ಲಿದ್ದ ಮುಸ್ಲಿಮರಿಗೆ, ಅಸ್ಪೃಶ್ಯರಾದ ನಾವು ಕೊಳದ ನೀರನ್ನು ಮುಟ್ಟಿ ಮೈಲಿಗೆ ಮಾಡಿದ್ದು ಅಧರ್ಮದ ಕ್ರಿಯೆಯಾಗಿ ಕಾಣುತ್ತದೆ. ಘಟನೆ ವಿಪರೀತಕ್ಕೆ ಹೋಗಿ ಹಲವಾರು ಜನ ಅಂಬೇಡ್ಕರ್‌ರವರ ಜೊತೆ ವಾಗ್ವಾದಕ್ಕೆ ಇಳಿಯುತ್ತಾರೆ. 'ಇದೇನಾ ನಿಮ್ಮ ಧರ್ಮ ನಿಮಗೆ ಕಲಿಸುವುದು ? ಒಬ್ಬ ಅಸ್ಪೃಶ್ಯರ ಮಹಮ್ಮದೀಯನಾದರೆ ನೀವು ಅವನಿಗೂ ಈ ಟ್ಯಾಂಕಿನಿಂದ ನೀರು ತೆಗೆಯಲು ನಿರಾಕರಿಸುತ್ತೀರಾ?[7] ಎಂದು ಪ್ರಶ್ನಿಸುತ್ತಾರೆ. ಈ ಘಟನೆಯನ್ನು ವಿವರವಾಗಿ ಇಲ್ಲಿ ಚರ್ಚಿಸುವ ಅಗತ್ಯವಿಲ್ಲವಾದರೂ ಅವರೇ ಹೇಳುವಂತೆ 'ನಾನು ಈ ಘಟನೆಯನ್ನು ಯಾಕೆ ಉದಾಹರಿಸಬೇಕಾಗಿದೆ ಎಂದರೆ, ಒಬ್ಬ ಹಿಂದುವಿಗೆ ಒಬ್ಬ ಅಸ್ಪೃಶ್ಯ ಹೇಗೆ ಅಸ್ಪೃಶ್ಯನೋ, ಹಾಗೆ ಅಸ್ಪೃಶ್ಯ ಒಬ್ಬ ಪಾರ್ಸಿಗೂ, ಒಬ್ಬ ಮಹಮ್ಮದಿಯನಿಗೂ ...... ಒಬ್ಬ ಕ್ರೈಸ್ತನಿಗೂ, ಅಸ್ಪೃಶ್ಯನಾಗಿದ್ದಾನೆ’ ಎಂದು ಹೇಳುತ್ತಾರೆ. ಹೀಗೆ 'ವೀಸಾಕ್ಕೆ ನೀರಿಕ್ಷೆ' ಈ ಕೃತಿಯಲ್ಲಿ ಅವರು ತಮ್ಮನ್ನು ಮಧ್ಯರಾತ್ರಿಯಲ್ಲಿಯೇ ವಸತಿ ಗೃಹದಲ್ಲಿ ಹೊರ ಹಾಕಿದ ಪಾರ್ಸಿಗಳು, ಮಧ್ಯ ರಾತ್ರಿಯಲ್ಲಿ ಆಶ್ರಯ ಕೊಡದ ಕ್ರೈಸ್ತ ಧರ್ಮಕ್ಕೆ ಸೇರಿದ ತಮ್ಮ ಮಿತ್ರ, ರಮಜಾನ್ ಮಾಸವಾಗಿದ್ದರೂ ಅಸ್ಪೃಶ್ಯರ ಬಗ್ಗೆ ಕಳಕಳಿ ತೋರಿಸದ ದೌಲತಾಬಾದ್ ಮುಸ್ಲೀಮರು, ಯಂಗ್ ಇಂಡಿಯಾ ಪತ್ರಿಕೆಯಲ್ಲಿ ವರದಿಯಾದಂತೆ ದಲಿತನೋರ್ವನ ಮಡದಿಗೆ ಮಧ್ಯ ರಾತ್ರಿಯಲ್ಲೂ ಚಿಕಿತ್ಸೆ ನೀಡದ ಆ ಹಿಂದೂ ವೈದ್ಯರು ಹೀಗೆ ಅಂಬೇಡ್ಕರ್‌ವರಿಗೇನೆ ಕಹಿ ಅನುಭವದ ವರ್ತನೆಗಳ ಕ್ರೂರತೆ ಗೋಚರಿಸಿದ್ದರಿಂದ ತೋರಿಸಿದ್ದರಿಂದ ಕೋಟ್ಯಾನುಕೋಟಿ ಅಸ್ಪೃಶ್ಯರಿಗೆ ಇಂತಹ ಧರ್ಮೀಯರು ಯಾವ ಸ್ಥಾನಮಾನ ಕೊಡಬಲ್ಲರು, ಯಾವ ಮಾನವ ಹಕ್ಕುಗಳನ್ನು ನೀಡಲು ಸಾಧ್ಯ? ಎಂಬುದನ್ನು ಮನವರಿಕೆ ಮಾಡಿಕೊಂಡರೆಂದು ಕಂಡು ಬರುತ್ತದೆ. ಅಂಬೇಡ್ಕರ್‌ರವರು ಈ ಘಟನೆಗಳನ್ನು ತಾವು ಅನುಭವಿಸಿದ ಮಾನಸಿಕ ಯಾತ್ರೆಯನ್ನು 'ಅಶ್ರುಭರಿತರಾಗಿ' ವಿವರಿಸಿದ್ದಾರೆ. 'ನಾನು ಐದುವರ್ಷಗಳವರೆಗೆ ಯುರೋಪ ಮತ್ತು ಅಮೇರಿಕಾಗಳಲ್ಲಿದ್ದ ದಿನಗಳನ್ನೇ ಸಂಪೂರ್ಣ ಮರೆತಿದ್ದೇನೆ. ಅಸ್ಪೃಶ್ಯನಾದ ಭಾರತದಲ್ಲಿ ಎಲ್ಲಿಯೇ ಹೋದರೂ ನನಗೂ ಇತರರಿಗೂ ಒಂದು ತೊಂದರೆಯೇ ಆಗುತ್ತಿದೆ.’ ಎಂದು ಅವರು ಹೇಳಿಕೊಳ್ಳುತ್ತಾರೆ. “Waiting for a Visa” ಈ ಮಹತ್ವದ ಕೃತಿಯನ್ನು ಪ್ರಕಟಿಸುವಾಗ ಮುಂಬೈನ ಪೀಪಲ್ಸ್ ಎಜ್ಯುಕೇಷನ್ ಸೊಸೈಟಿಯ ಅಧ್ಯಕ್ಷರಾಗಿದ್ದ ಕೆ.ಬಿ. ಅಲಿಯಾಸ್, ಘನಶ್ಯಾಮ ತಲವಾಟ್ಕರ್ ಅವರು 'ಡಾ. ಅಂಬೇಡ್ಕರ್‌ರವರು ತಮ್ಮ ಚಳವಳಿಗಳ ಕೊನೆಯ ಘಟ್ಟದಲ್ಲಿ ಬೌದ್ಧ ಧರ್ಮಕ್ಕೆ ಮತಾಂತರ ಹೊಂದುವ ಮೂಲಕ ನ್ಯಾಯ, ಸ್ವಾತಂತ್ರ್ಯ, ಸಮಾನತೆ ಮತ್ತು ಭಾತೃತ್ವಗಳ 'ಸಾಮಾಜಿಕ ವ್ಯವಸ್ಥೆ ಉದಯ' ವಾಯಿತು. ಅಂಬೇಡ್ಕರ್‌ರವರ ವೀಸಾದ ನಿರೀಕ್ಷಣೆ ಇಂತಹ ವೀಸಾಕ್ಕೆ ಕಾಯುತ್ತಿದ್ದ ಮಿಲಿಯಗಟ್ಟಲೇ ಶೋಷಿತ ಸಮುದಾಯಗಳಿಗೆ 'ವಿಮೋಚನೆಯ ವೀಸಾ' ನೀಡಿತು'[10] ಎಂದು ಮಾರ್ಮಿಕವಾಗಿ ದಾಖಲಿಸಿದ್ದಾರೆ.

ಮುಂದೆ 1935 ಅಕ್ಟೋಬರ್ 13 ರಂದು ಅಂಬೇಡ್ಕರವರು ಹಿಂದೂ ಧರ್ಮದೊಂದಿಗಿನ ಸಂಘರ್ಷದಲ್ಲಿ ತಾವೆಲ್ಲಿಗೆ ಬಂದು ನಿಂತಿದ್ದಾರೆಂಬುದನ್ನು ಅನಾವರಣಗೊಳಿಸಿದರು. ಯವೋಲಾದ ಸಮ್ಮೇಳನದಲ್ಲಿ ಅವರ ತಮ್ಮ ನಿರ್ಣಾಯಕ ನಿಲುವನ್ನು ಪ್ರಕಟಿಸಿಯೇ ಬಿಟ್ಟರು. 'ನಾವು ಈ ಅಸಮಾನತೆಯ ಧರ್ಮವನ್ನು ತ್ಯಜಿಸದೇ ಅನ್ಯ ಮಾರ್ಗವಿಲ್ಲ ನಿಮ್ಮನ್ನು ಕಟ್ಟಿ ಹಾಕಿದ ಸರಪಳಿಗಳನ್ನು ಕಳೆದುಕೊಳ್ಳುವುದರ ಹೊರತಾಗಿ ನೀವು ಏನನ್ನು ಕಳೆದು ಕೊಳ್ಳುವುದಿಲ್ಲ. ಮತಾಂತರ ಮಾಡುವುದರಿಂದ ಉಳಿದೆಲ್ಲವೂ ಸಿಗುತ್ತದೆ.'[11] ಎಂದು ಮತಾಂತರ ಅಗತ್ಯವನ್ನು ಪ್ರತಿಪಾದಿಸಿದ್ದು ಸ್ಪಷ್ಟವಾಗಿದೆ.

ಹೀಗೆ 13 ಅಕ್ಟೋಬರ್, 1935 ರಲ್ಲಿ ಘೋಷಣೆ ಮಾಡಿದ ಅಂಬೇಡ್ಕರ್‌ರವರು 14, ಅಕ್ಟೋಬರ್ 1956 ರಂದು ಮತಾಂತರಗೊಳ್ಳಲು ಎರಡು ದಶಕಗಳನ್ನು ತೆಗೆದುಕೊಂಡರು. ಈ ಕಾಲವು ಭಾರತದ ದಲಿತರ ವಿಮೋಚನೆಯ ತುಂಬಾ ಮಹತ್ವದ ಕಾಲಘಟವಷ್ಟೇ ಅಲ್ಲ ಅಂಬೇಡ್ಕರವರು ಬೌದ್ಧ ಧರ್ಮ ಪುನರುಜ್ಜೀವನಕ್ಕೆ ಬೇಕಾದ ತಳಹದಿಯನ್ನು ನಿರ್ಮಾಣ ಮಾಡಿದ ಮಹತ್ವದ ಸಂದರ್ಭ ಕೂಡ. ಅಲ್ಲಿಂದ ಮುಂದೆ ಅವರ ಬರವಣಿಗೆ, ಸಾಮಾಜಿಕ ಚರ್ಚೆ ಇವೆಲ್ಲವೂ ಹಿಂದೂ ಜಾತಿ ವ್ಯವಸ್ಥೆಯ ನಾಶ ಮತ್ತು ಹೊಸ ಮಾರ್ಗದ ಶೋಧನೆಯೇ ಆಗಿತ್ತು.

ಲಂಡನ್ನಿನಲ್ಲಿ ನಡೆದ ಚಕ್ರಾಧಿವೇಶನಕ್ಕೆ ಭಾಗವಹಿಸಲು ದಲಿತರ ಹಕ್ಕುಗಳ, ಬೇಡಿಕೆಗಳ ವಕಾಲತ್ತು ವಹಿಸಲು ಅಂಬೇಡ್ಕರ್ ಬಿಟ್ಟರೆ ಸಮರ್ಥ ಧ್ವನಿ ಯಾರೂ ಇರಲಿಲ್ಲ. ಅಂಬೇಡ್ಕರವರನ್ನೇ ಅಸ್ಪೃಶ್ಯರ ನಿಜವಾದ ನಾಯಕನೆಂದು ಪರಿಗಣಿಸಿ ಆಹ್ವಾನಿಸಲು ಬೇರೆ ಬೇರೆ ಭಾಗಗಳಿಂದ ಅಂದಿನ (1930) ರೌಂಡ್ ಟೇಬಲ್ ಕಾನ್ಫರೆನ್ಸ್ ಅಧ್ಯಕ್ಷರಾದ ಹಾಗೂ ಇಂಗ್ಲೆಂಡಿನ ಪ್ರಧಾನಿಯಾದ ರಾಮ್ಸೆ ಮ್ಯಾಕ್‌ಡೋನಾಲ್ಡ್‌ರವರಿಗೆ ತಂತಿ ಸಂದೇಶಗಳನ್ನು ಕಳುಹಿಸಲಾಯಿತು.

ಕರ್ನಾಟಕದಲ್ಲಿ ಅಂಬೇಡ್ಕರ್ ಪೂರ್ವದಲ್ಲಿಯೇ ಬೌದ್ಧ ಧರ್ಮವನ್ನು ಪ್ರಚಾರ ಮಾಡಿದ. ಕೋಲಾರದ ಕೆ.ಜಿ.ಎಫ್. ನಲ್ಲಿ ದಕ್ಷಿಣ ಭಾರತೀಯ ಬೌದ್ಧ ಸಂಘವನ್ನು (1927) ಪ್ರಾರಂಭಿಸಿ ಕರ್ನಾಟಕದ ಕೋಲಾರ, ಮಡಿಕೇರಿ, ಹುಬ್ಬಳ್ಳಿ, ಬೆಂಗಳೂರಿನಲ್ಲಿ ಧರ್ಮ ಪ್ರಸಾರ ಮಾಡಿದ 'ಅಪ್ಪಾ ದುರೈಯಾರ್' ಅವರು 1930 ರಲ್ಲಿ ಚಕ್ರಾಧಿವೇಶನದ ಅಧ್ಯಕ್ಷರಾದ ರಾಮ್ಸೆ ಮ್ಯಾಕ್ ಡೊನಾಲ್ಡ್‌ರವರಿಗೆ ಹಲವಾರು ತಂತಿ ಸಂದೇಶ ಕಳುಹಿಸಿ ''ಮಾನ್ಯ ಅಧ್ಯಕ್ಷರೇ, ನಮ್ಮ ಪ್ರತಿನಿಧಿ ಅಂಬೇಡ್ಕರ್‌ರವರೆಂದು ತಕ್ಷಣ ಪರಿಗಣಿಸಿ, ಗಾಂಧಿ ನಮ್ಮ ಪ್ರತಿನಿಧಿಯಲ್ಲ''[12], ವೆಂದು ವಿನಂತಿಸಿಕೊಳ್ಳುತ್ತಾರೆ. ಇಂಡಿಯಾದಿಂದ ಬಂದ ಇಂತಹ ಬೇಡಿಕೆಯನ್ನು ರಾಮ್ಸೆ ಮ್ಯಾಕ್ ಡೊನಾಲ್ಡ್ ಪರಿಗಣಿಸಿದರೆಂದೇ ಹೇಳಬೇಕು. ಅಧಿವೇಶನದಲ್ಲಿ ಅಂಬೇಡ್ಕರ್‌ರವರು ಭಾಗವಹಿಸಿ ದಲಿತ ಮಾನವ ಹಕ್ಕುಗಳನ್ನು, ಬೇಡಿಕೆಗಳನ್ನು, ಸನ್ನಿವೇಶನಗಳನ್ನು, ತರಬೇಕಾದ ಸಾಂವಿಧಾನಿಕ ಸುಧಾರಣೆಗಳನ್ನು ಸಮರ್ಥವಾಗಿ, ಉದಾಹರಣೆಗಳಿಂದ ಪ್ರತಿಪಾದಿಸಿದರು.

1936 ರಲ್ಲಿ ಲಾಹೋರಿನ ಜಾತ್‌ಪಾತ್ ತೋಡಕ್ ಮಂಡಲದವರು ಸಂಘದ ವಾರ್ಷಿಕ ಸಮ್ಮೇಳನಕ್ಕಾಗಿ ಉಪನ್ಯಾಸ ನೀಡಲು ಆಹ್ವಾನಿಸಿದರು. 'ಜಾತಿಯ ನಿರ್ಮೂಲನೆ' (ಮಹಾತ್ಮ ಗಾಂಧಿಜಿಯವರಿಗೆ ಉತ್ತರ ಸಹಿತವಾಗಿ) ಎಂದು ಒಂದು ಉಪನ್ಯಾಸ ಮುಂಚೆಯೇ ಮುದ್ರಿಸಲ್ಪಟ್ಟಿತು. ಈ ಉಪನ್ಯಾಸದಲ್ಲಿ ಜಾತಿ ನಿರ್ಮೂಲನದ ಬಗ್ಗೆ ಅಂಬೇಡ್ಕರ್‌ರವರು ಸಮಕಾಲೀನ ಸ್ಥಿತಿಗತಿಯ ಹಿನ್ನಲೆಯಲ್ಲಿ ಚರ್ಚಿಸುತ್ತಾರೆ. ಹಿಂದೂ ಧರ್ಮದ 'ಜಾತಿ' ವಿಚಿತ್ರವಾಗಿದೆ ಎಂದು ಮಂಡಿಸುತ್ತಾರೆ. ಕ್ರೈಸ್ತ ಮುಸ್ಲಿಂ ಧರ್ಮಗಳಲ್ಲಿ ಜಾತಿಗಳಿವೆ ಎಂದು ಹೇಳುತ್ತಿವೆಯಾದರೂ ಅವುಗಳಿಗೆ 'ಅಸಮಾನತೆಯ ಧಾರ್ಮಿಕ ಸ್ವರೂಪ' ವಿಲ್ಲವೆಂದು ಹೇಳುತ್ತಾ ಅಂಬೇಡ್ಕರ್‌ರವರು,

''ಒಬ್ಬ ಮಹಮ್ಮದೀಯನನ್ನೋ, ಸಿಖ್ಖನನ್ನೊ, ನೀನು ಯಾರು ? ಎಂದು ಕೇಳಿ, ತಾನು ಮಹಮ್ಮದೀಯನೆಂತಲೂ, ಸಿಖ್ಖನೆಂದೂ ಹೇಳುತ್ತಾನೆ. ತನಗೆ ಒಳ ಜಾತಿಯೊಂದಿದ್ದರೂ ಅದನ್ನು ಅವನು

ತಿಳಿಸುವುದಿಲ್ಲ. ತಾನು ಮುಸ್ಲಿಂನೆಂದು ಅವನು ಹೇಳಿದರೆ, 'ನೀನು ಸಿಯಾ ಅಥವಾ ಸುನ್ನಿ ಶೇಖ್ ಅಥವಾ ಸೈಯದ್, ಖಟಕ್ ಅಥವಾ ಪಿಂಜಾರ ಇವುಗಳಲ್ಲಿ ಯಾವುದಕ್ಕೆ ಸೇರಿದವನು''?, ಎಂದು ಕೇಳುವುದಿಲ್ಲ. ತಾನು ಸಿಖ್‌ನೆಂದು ಹೇಳಿದರೆ 'ಜಾಟ್, ರೋಡ್, ಮಜಬಿ, ರಾಮದಾಸಿ, ಇವುಗಳಲ್ಲಿ ನೀನು ಯಾವ ಪಂಗಡಕ್ಕೆ ಸೇರಿದವನು ? ಎಂದು ನೀವು ಕೇಳುವುದಿಲ್ಲ. ಆದರೆ ಅದೇ ಒಬ್ಬನು ತಾನು 'ಹಿಂದೂ' ಎಂದಿಷ್ಟೆ ಹೇಳಿದರೆ, ನಿಮಗೆ ಸಾಲದು. 'ಯಾವ ಜಾತಿ' ಯೆಂದು ಕೇಳದೆ ಬಿಡುವುದಿಲ್ಲ ಎಂದು ಜಾತಿಯ ಸಮಕಾಲೀನ ಸ್ವರೂಪವನ್ನು ವಿವರಿಸುತ್ತಾರೆ. ಹಿಂದೂ ಧರ್ಮದ ಉಳಿವಿಗೆ ಎಲ್ಲಾ ಹಿಂದೂಗಳನ್ನು ಸೇರಿಸಿ ತರ್ಕದಿಂದ ಮನವೊಲಿಸಿದರೂ 'ಜಾತಿ ಪದ್ಧತಿಯ' ನಿರ್ಮೂಲನ ಸಾಧ್ಯವಿಲ್ಲವೆಂದು ಹೇಳುತ್ತಾರೆ. 'ಹಾಗೆ ಮಾಡಿದರೆ ಮನುಸ್ಮೃತಿಯ ಧಾರ್ಮಿಕ' ಕಾನೂನು ಮುರಿದಂತಾಗುತ್ತದೆ ಹಾಗೆ ಆಗುವುದಿಲ್ಲ, ತರ್ಕ ಮಾಡುವ ಬುದ್ಧಿಗೆ ಅಲ್ಲಿ ಆಸ್ಪದವೇ ಆದುದರಿಂದ ಇಂತಹ ಧರ್ಮವನ್ನು ನಾಶಪಡಿಸಬೇಕೆಂದು ಅನುಮಾನವಿಲ್ಲದೇ ಹೇಳುತ್ತೇನೆ, ಹಿಂದೂ ಶ್ರೋತೃಗಳೆದುರಿಗೆ ಬಹುಶಃ ಇದು ನನ್ನ ಕೊನೆಯ ಉಪನ್ಯಾಸವಾಗಿದೆ,[13] ಎಂದೂ ಹಾಗಾದರೆ ತಾವೊಂದು ಧರ್ಮಕ್ಕೆ ಹೋಗುವುದಾಗಿಯೂ ಈ ಮಾತಿನಲ್ಲಿ ಹೇಳುತ್ತಾರೆ. ಅದನ್ನೇ ಹರಿಜನ ಪತ್ರಿಕೆಯಲ್ಲಿ ಮಹಾತ್ಮ ಗಾಂಧೀಜಿ ಅಭಿಪ್ರಾಯ ಪಡುತ್ತಾ ಹಿಂದೂ ಧರ್ಮವನ್ನು ತೊರೆದು ಹೋಗುವ ತಮ್ಮ ನಿರ್ಧಾರವನ್ನು ಡಾ. ಅಂಬೇಡ್ಕರ್ ಸಂದಿಗ್ದ ಶಬ್ದಗಳಲ್ಲಿ ಹೇಳಿದ್ದಾರೆ ಎಂದು ಅಂಬೇಡ್ಕರ್‌ರವರ ಧರ್ಮಾಂತರದ ಸುಳಿವು ತಿಳಿದುಕೊಳ್ಳುತ್ತಾರೆ.

''ಜಾತಿ ಪದ್ಧತಿಯನ್ನು ನಿರ್ನಾಮಗೊಳಿಸುವ ನಿಜವಾದ ವಿಧಾನ ಯಾವುದು ? ಅಂತರ್ಜಾತೀಯ ಭೋಜನ ಹಾಗೂ ಅಂತರಜಾತೀಯ ವಿವಾಹ - ಇವುಗಳನ್ನು ನಡೆಸುವುದು ಅಲ್ಲ ; ಜಾತಿಗೆ ಆಧಾರ ಭೂತವಾದ ಧಾರ್ಮಿಕ ಕಲ್ಪನೆಯನ್ನು ನಾಶ ಮಾಡುವುದೇ ಸರಿಯಾದ ಮಾರ್ಗ''[14] ಎಂದು ಹೇಳುತ್ತಾರೆ.

'ಹಿಂದೂ ಸಮುದಾಯವನ್ನು ತೊರೆದು ಹೋಗುತ್ತೇನೆ. ಹಿಂದುವಾಗಿ ನಾನು ಮಾಡುತ್ತಿರುವ ಕೊನೆಯ ಭಾಷಣವಿದು'', ಎನ್ನುವ ಉಪನ್ಯಾಸದ ಭಾಗಗಳ ಬಗ್ಗೆ ಮೇಲ್ಜಾತಿಯ ಸದಸ್ಯರು ಆಕ್ಷೇಪ ವ್ಯಕ್ತಪಡಿಸುತ್ತಾರೆ. ಜಾತ್‌ಪಾತ್ ತೋಡಕ್ ಮಂಡಲದ ಸದಸ್ಯರಲ್ಲಿ ದಿಗ್ಭ್ರಮೆಯುಂಟಾಗಿ ಎರಡು ಗುಂಪುಗಳೇ ಸೃಷ್ಟಿಯಾಗುತ್ತವೆ. ಅದನ್ನು ಬದಲಾವಣೆ ಮಾಡಿ ಉಪನ್ಯಾಸದ ಹಸ್ತಪ್ರತಿ ಕೊಡಲು ಅಂಬೇಡ್ಕರವರಿಗೆ ಪತ್ರ ಬರೆಯಲಾಗುತ್ತದೆ. ಆದರೆ, ಅಂಬೇಡ್ಕರ್‌ರವರು ತಾವು ವ್ಯಕ್ತಪಡಿಸಿ ವಿಚಾರಗಳಿಗೆ ಬದ್ಧರಾಗಿರುತ್ತಾರೆ. ಉಪನ್ಯಾಸವನ್ನು ಸಂಸ್ಕರಿಸಿ ಕೊಡಲು ಒಪ್ಪುವುದಿಲ್ಲ. ಅದು ಇದ್ದಂತೆಯೇ ಮುದ್ರಿಸಲು ಅಂಬೇಡ್ಕರ್ ಪತ್ರಿಸುತ್ತಾರೆ. ಆಗ ಸಮ್ಮೇಳನವೇ ಅನಿರ್ದಿಷ್ಟ ಅವಧಿಗೆ ಮುಂದೆ ಹೋಗುತ್ತದೆ. ಇದರಿಂದ ಮಂಡಲದ ಸದಸ್ಯರಲ್ಲಿಯೇ ಭಿನ್ನಾಭಿಪ್ರಾಯಗಳು ತಲೆದೋರಿದ್ದು ಕಂಡು ಬರುತ್ತದೆ.

ಪುನಃ ಅಂಬೇಡ್ಕರ್‌ರವರು ಸಂಘಕ್ಕೆ ಪತ್ರಿಸಿ ''ಹಿಂದೂ ಧರ್ಮ ನಾಶವಾಗಬೇಕೆಂದು ನಾನು ಹೇಳಿದರೆ ನಿಮ್ಮ ಮಂಡಲ ಹೀಗೆ ಮೆಟ್ಟಿಬಿದ್ದೀತೆಂದು ನಾನು ನಿರೀಕ್ಷಿಸಿರಲಿಲ್ಲ''[15] ವೆಂದು ಜಾತ್‌ಪಾತ್ ತೋಡಕ್ ಮಂಡಲದ ಪದಾಧಿಕಾರಿಗಳ ಅಸಮರ್ಥತೆಯನ್ನು ಕುರಿತು ಬೇಸರಿಸಿ ಬರೆಯುತ್ತಾರೆ. ಅದೇ ರೀತಿ ಅಂಬೇಡ್ಕರ್‌ರವರು ಸುಧಾರಣಾ ವಾದೀ ಹಿಂದುಗಳು, ಜಾತಿ ವಿನಾಶದಲ್ಲಿ ಪೂರ್ಣ ಮನಸ್ಸಿನಿಂದ ಕಾರ್ಯ

ನಿರ್ವಹಿಸಲು ಸಾಧ್ಯವಿಲ್ಲವೆಂದು ಹೇಳುತ್ತಾರೆ. ಅವರೇ ಹೇಳುವಂತೆ 'ಒಂದು ಕಡೆ ಸುಧಾರಕರಾದ ಸವರ್ಣೀಯ ಹಿಂದೂಗಳಿದ್ದಾರೆ. ತಮ್ಮ ಕರ್ಮಠ ಹಿಂದೂ ಬಾಂಧವರ ಸಂಬಂಧವನ್ನು ಕಳೆದುಕೊಳ್ಳಲು ಅವರಿಗೆ ಮನಸ್ಸಿಲ್ಲ; ಇನ್ನೊಂದೆಡೆಗೆ ಸ್ವಾಭಿಮಾನದ ಅಸ್ಪೃಶ್ಯರಿದ್ದಾರೆ : ಸುಧಾರಣೆಯಾಗಲೇಬೇಕೆಂದು ಹಠ ಹಿಡಿಯುವುದಲ್ಲದೇ ಬೇರೆ ಮಾರ್ಗ ಅವರಿಗಿಲ್ಲ, ಈ ಎರಡು ಬಣಗಳ ನಡುವೆ ವಿರಸವಲ್ಲದೇ ಇನ್ನೇನನ್ನು ನಿರೀಕ್ಷಿಸಲಾದೀತು?[16] ಎಂದು ಅಸ್ಪೃಶ್ಯರ ವಿಮೋಚನಾ ಹೋರಾಟದ ಗಹನತೆಯನ್ನು ವ್ಯಕ್ತಪಡಿಸುತ್ತಾರೆ. 'ಪ್ರತಿಭಟನೆಯ ರೂಪವಾಗಿ ಅವರೇ ಆ ಉಪನ್ಯಾಸವನ್ನು ಯಥಾವತ್ತಾಗಿ ಪ್ರಕಟಿಸುತ್ತಾರೆ.[17] ಈ ಸಂದರ್ಭದಲ್ಲಿ ಮುಖ್ಯವಾಗಿ ಹೇಳಬೇಕಾದದ್ದು, 'ಜಾತಿ ನಿರ್ಮೂಲನೆ' ಕುರಿತು ಈ ಪ್ರಕಟಿತ ಉಪನ್ಯಾಸದ ಮೊದಲ ಪುಟದಲ್ಲಿ ಇಬ್ಬರು ಮಹನೀಯರ ಉದ್ಘೋಷ ವ್ಯಾಖ್ಯೆಗಳು ಇವೆ.

**ಮೊದಲನೆಯ ವ್ಯಾಖ್ಯೆ :**

> ''ಸತ್ಯವನ್ನು ಸತ್ಯವೆಂದೂ, ಅಸತ್ಯವನ್ನು
> ಅಸತ್ಯವೆಂದೂ ಅರಿತುಕೋ - ಬುದ್ಧ''[18]

**ಎರಡನೆಯ ವ್ಯಾಖ್ಯೆ :**

> ''ವಿಚಾರ ಮಾಡಲೊಲ್ಲದವನು ಮತಾಂಧ !
> ವಿಚಾರ ಮಾಡಲರಿಯದವನು ಮೂರ್ಖ !!
> ವಿಚಾರ ಮಾಡಲಂಜುವವನು ಗುಲಾಮ !!! '' - ಹೆಚ್. ಡ್ರಮಂಡ್.[19]

'ಜಾತಿ ನಿರ್ಮೂಲನೆ' ಕುರಿತ ಈ ಪ್ರಕಟಿತ ಉಪನ್ಯಾಸದ ಮೂಲಕ ಅಂಬೇಡ್ಕರ್‌ರವರು 'ಧರ್ಮಾಂತರ' ದ ತಮ್ಮ ಕಾರ್ಯಕ್ರಮಕ್ಕೆ ಅಂದೇ (ಮೇ, 1936) ಒಂದು ಪೂರ್ವ ಯೋಜನೆ ಹಾಕಿದ್ದರೆಂಬುದು ತಿಳಿಯುತ್ತದೆ. ಹಾಗೆಯೇ ಈ ಉಪನ್ಯಾಸದ ಮೂಲಕ ಅವರು ಮೇಲ್ಜಾತಿ ಹಿಂದುಗಳಿಗೆ ಹಾಗೂ ಜಾತಿ ವ್ಯವಸ್ಥೆಯಲ್ಲಿ ಶೋಷಿತರಾದ ಜನಸಮುದಾಯಕ್ಕೆ ಏಕಕಾಲದಲ್ಲಿ ಈ ಕೆಳಗಿನ ಸಂದೇಶಗಳನ್ನು ಕೊಟ್ಟರೆಂಬುದು ಸ್ಪಷ್ಟವಾಗುತ್ತದೆ.

1) ಕೇವಲ ಅಂತರ್ಜಾತೀಯ ವಿವಾಹ, ಅಂತರ್ಜಾತೀಯ ಭೋಜನಗಳನ್ನಷ್ಟೇ ಮಾಡಿದರೆ 'ಜಾತಿ ನಿರ್ಮೂಲನೆ' ಸಾಧ್ಯವಿಲ್ಲ, 'ಜಾತಿಗೆ' ಮಂಜೂರಿ ಕೊಟ್ಟ ಜಾತಿಗೆ ಆಧಾರವಾಗಿರುವ ಧರ್ಮವನ್ನೇ ನಾಶಗೊಳಿಸಬೇಕು.

2) ಹಿಂದೂ ಶ್ರೋತೃಗಳೆದುರಿಗೆ ಮಾಡುವ ಕೊನೆಯ ಭಾಷಣವಿದು. (ಅಂದರೆ ಬದಲಾವಣೆ ಯಾಗದವರೊಟ್ಟಿಗೆ ಚರ್ಚಿಸುವುದರಲ್ಲಿ, ಜಾತಿ ಕುರಿತ ಅವರ ಮನೋಭೂಮಿಕೆ ಬದಲಾವಣೆ ಮಾಡುವಲ್ಲಿ ತಮ್ಮ ಅಮೂಲ್ಯ ಸಮಯ ಹಾಳು ಮಾಡಲಾರೆ ಎಂಬ ಆಂತರಿಕ ನಿರ್ಣಯ ತೆಗೆದುಕೊಳ್ಳುವುದು).

3) ಹಿಂದೂ ಧರ್ಮದಲ್ಲಿ ಜಾತಿ ನಿರ್ಮೂಲನೆಯ ಬಗ್ಗೆ ವಿಚಾರ ಮಾಡಲು ಅವಕಾಶವೇ ಇಲ್ಲ (ಮನುವಿನ ಕಟ್ಟಳೆ) ಹಾಗಾಗಿ ಮೊದಲ ಪುಟದಲ್ಲಿಯೇ ವಿಚಾರ ಮಾಡಲೊಲ್ಲದವನು ಮತಾಂಧ ಎನ್ನುವ ವಿಶ್ಲೇಷಣೆ (ಡ್ರಮಂಡ್ ಹೇಳಿಕೆ ಉಲ್ಲೇಖಿಸಿರುವುದು)

4) ಸತ್ಯವನ್ನು ಸತ್ಯವೆಂದೂ, ಅಸತ್ಯವನ್ನು ಅಸತ್ಯವೆಂದೂ ತಿಳಿದುಕೋ ಎನ್ನುವ 'ಬುದ್ಧನ ಹೇಳಿಕೆ' ಇದನ್ನು ಉಲ್ಲೇಖಿಸುವ ಮೂಲಕ ಮನುವಿನ ಕಟ್ಟಳೆಗಳಿಗೆ ವಿರುದ್ಧವಾಗಿ 'ಬುದ್ಧ' ವೈಚಾರಿಕ ಸ್ವಾತಂತ್ರ್ಯಕ್ಕೆ ಇಂಬುಗೊಡುತ್ತಾನೆ ಎಂಬ ನಿರ್ಣಾಯಕ ತಿಳುವಳಿಕೆಯ ಪ್ರಕಟಣೆ.

5) ಸವರ್ಣೀಯ ಹಿಂದುಗಳು ಜಾತಿ ವಿನಾಶದ ಹೋರಾಟಕ್ಕೆ ನ್ಯಾಯ ಒದಗಿಸಲಾರರು. ಸಂದರ್ಭ ಬಂದರೆ ತಮ್ಮ ಕಟ್ಟಾ ಸಂಪ್ರದಾಯವಾದಿಗಳಾದ ಕರ್ಮಠ ಹಿಂದೂಗಳ ಸಂಬಂಧ ಕಳೆದುಕೊಳ್ಳಲು ಅವರಿಂದ ಸಾಧ್ಯವಿಲ್ಲವೆಂದು ಶೋಷಿತ ವರ್ಗದವರಿಗೆ ಎಚ್ಚರಿಕೆ ನೀಡುತ್ತ 'ನಿಮ್ಮ ವಿಮೋಚನೆ ನಿಮ್ಮಿಂದಲೇ ಸಾಧ್ಯ' ಎಂದು ಹೇಳುವುದು.

6) ಅಸ್ಪೃಶ್ಯರು ಜಾತಿ ವ್ಯವಸ್ಥೆಯಿಂದ ವಿಮೋಚನೆಕೊಳ್ಳಬೇಕಾದರೆ ಸುಧಾರಣೆಯಾಗಲೇಬೇಕೆಂಬ ಹಟ ಹಿಡಿದು ಹೋರಾಟ ಮಾಡಬೇಕೆನ್ನುವುದು.

5 ನೇ ಅಂಶಕ್ಕೆ ಸಂಬಂಧಿಸಿದಂತೆ ಸ್ವಲ್ಪ ವಿಶ್ಲೇಷಿಸಿ ಹೇಳುವುದಾದರೆ ಕರ್ನಾಟಕದಲ್ಲಿಯೂ ಅಸ್ಪೃಶ್ಯರು ಕೆರೆ ಬಾವಿಗಳಲ್ಲಿ ನೀರನ್ನು ತೆಗೆದುಕೊಳ್ಳುವ ಹಾಗಿರಲಿಲ್ಲ. 1932 ರಲ್ಲಿಯೇ ಈ ಪ್ರಾಂತ್ಯದಲ್ಲಿ ಶಾಸನ ಸಭೆಯ ನಿರ್ಣಯ 12 ವರ್ಷ ಕಳೆದರೂ ಜಾರಿಯಾಗಿರಲಿಲ್ಲವೆಂದು ಡಾ. ಚಂದ್ರಶೇಖರ ಹೇಳುತ್ತಾರೆ. ಈಗಾಗಲೇ ಅಂಬೇಡ್ಕರ್‌ರವರು ಹೇಳಿದಂತೆ ಅಸ್ಪೃಶ್ಯರ ಬುನಾದಿ ಹೋರಾಟಕ್ಕೆ ಸವರ್ಣೀಯ ಹಿಂದುಗಳು ಗಟ್ಟಿಯಾದ ನಾಯಕತ್ವ ಕೊಡಲಿಲ್ಲವೆಂಬುದು ಈ ಉಲ್ಲೇಖದಿಂದ ಗೊತ್ತಾಗುತ್ತದೆ. ''ಮೈಸೂರು ರಾಜ್ಯ ಅಸ್ಪೃಶ್ಯತಾ ವಿರೋಧಿ ಒಕ್ಕೂಟ ಕೆಲವು ಕಾಂಗ್ರೆಸ್ಸಿಗರಿಂದ 'ಸುಧಾರಣವಾದಿ ಅಭಿಮಾನಿಗಳಿಂದ' ರಚಿತವಾಯಿತು. 11 ಜನ ಸದಸ್ಯರಲ್ಲಿ ಒಬ್ಬರು ಮಾತ್ರ ಅಸ್ಪೃಶ್ಯರು, ಇಬ್ಬರು ಬ್ರಾಹ್ಮಣರು ಹಾಗೂ ಉಳಿದವರು ಬ್ರಾಹ್ಮಣೇತರರು.''[20]. ಹೀಗಾಗಿ ಅಲ್ಲಿ ತುಂಬಾ ಪ್ರಭಾವ ಶಾಲಿಯಾಗಿದ್ದ ಅಧಿಕಾರದ ಎಲ್ಲಾ ಕಡೆ ಇದ್ದ ಮೇಲ್ಜಾತಿಯ ನಾಯಕರು ''ತಮ್ಮ ನಿಯಂತ್ರಣದಲ್ಲಿ ಬರುವ ಬಾವಿಗಳ ಮತ್ತು ಕೆರೆಗಳಿಂದ ನೀರನ್ನು ಅಸ್ಪೃಶ್ಯರು ಪಡೆದುಕೊಳ್ಳಲು ಠರಾವು ಕೂಡ ಮಂಡಿಸಲಿಲ್ಲ''[21] ಎಂದು ಹೇಳುತ್ತ ಹೀಗೆ ಅಸ್ಪೃಶ್ಯರನ್ನು ಬ್ರಿಟಿಷ್ ಪ್ರೆಸಿಡೆನ್ಸಿಗಳಲ್ಲಿ ಜೀವನದ ಕನಿಷ್ಟ ಅವಶ್ಯಕತೆಯಾದ, ನಿಸರ್ಗದತ್ತವಾಗಿ ಕೊಡಲ್ಪಟ್ಟ 'ಕುಡಿಯುವ ನೀರು' ಪಡೆಯುವ ಹಕ್ಕಿನಿಂದ ವಂಚಿಸಿದ್ದನ್ನು ನೋಡುತ್ತೇವೆ. ಈ ಕಾಲಘಟ್ಟದಲ್ಲಿ ಇನ್ನೂ ಒಂದು ಪ್ರಮುಖ ಅಂಶ ಎದ್ದು ಕಾಣುತ್ತದೆ. ಅದೇನೆಂದರೆ, 'ಅಸ್ಪೃಶ್ಯತಾ ವಿರೋಧಿ ಒಕ್ಕೂಟವೆಂದೂ ಹೆಸರು ಹೊಂದಿ ಸಂಘ ಪ್ರಾರಂಭವಾದರೂ, ಈ ಮಾದರಿ ತನ್ನ ಅಂತರ್ಯದೊಳಗೆ ಅಸ್ಪೃಶ್ಯರ ವಿಮೋಚನಾ ಆಂದೋಲನದ ಶಕ್ತಿಶಾಲಿ ಮಾದರಿಯಾಗಿರಲಿಲ್ಲ. ಅಂಬೇಡ್ಕರವರು ಈ ಎಲ್ಲ ದ್ವಂದ್ವಗಳನ್ನು ಅರಿತೇ 'ನಿಮ್ಮ ವಿಮೋಚನೆ ನಿಮ್ಮಿಂದಲೇ ಸಾಧ್ಯ' ಎಂದು 5 ನೇ ಸಂದೇಶದ ಮೂಲಕ ಹೇಳುತ್ತಾರೆ. 'ಯಾವ ಮಹಾತ್ಮರೂ ನಿಮ್ಮನ್ನು ಉದ್ಧರಿಸಲಾರರು', ಎಂದು ಒಂದು ಸಂದರ್ಭದಲ್ಲಿ ಹೇಳಿದ

ಅವರ ಮಾತು ಗಾಂಧೀಜಿ ನಡೆಸುತ್ತಿದ್ದ 'ಅಸ್ಪೃಶ್ಯತಾ ನಿವಾರಣಾ ಆಂದೋಲನದ' ವಿಮರ್ಶೆಯೂ ಆಗಿತ್ತು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಈ ಸಂದೇಶಗಳನ್ನು ಅವರು ಕೊಡುತ್ತಲೇ ಅವರು ಮನುವಿನ ಧಾರ್ಮಿಕ ಕಾನೂನುಗಳಿಂದ ಸೃಷ್ಟಿಯಾದ ಅಸಮಾನ ವ್ಯವಸ್ಥೆಯನ್ನು ಕೊನೆಗಾಣಿಸಲು ವ್ಯವಸ್ಥಿತವಾದ ಹೋರಾಟ ರೂಪಿಸುತ್ತಾರೆ. ಕೆಳವರ್ಗಗಳ ಸಂಘಟನೆಗಳನ್ನು ದೇಶವ್ಯಾಪ್ತಿಯಾಗಿ ಸಂಪರ್ಕಿಸುತ್ತಾರೆ. ತಮ್ಮ ವಿಚಾರಗಳನ್ನು ಪ್ರಚಾರ ಮಾಡಲು ಪತ್ರಿಕೆಗಳನ್ನು ಪ್ರಾರಂಭಿಸುತ್ತಾರೆ. (ಮೂಕನಾಯಕ (1920), ಬಹಿಷ್ಕೃತ ಭಾರತ (1929), ಜನತಾ (1930)) ಬ್ರಿಟಿಷ್ ಸರ್ಕಾರದ ಸಂವಿಧಾನಾತ್ಮಕ ಸುಧಾರಣೆಗಳ ಸಮಿತಿಗಳ ಮುಂದೆ ಸಲಹೆ ರೂಪದ ಉಪಾಯಗಳನ್ನು, ಕಾನೂನು ಸುಧಾರಣೆಗಳನ್ನು ಮಂಡಿಸುತ್ತಾರೆ. ರಾಜಕೀಯ ಸ್ವಾತಂತ್ರ್ಯ ಕೇವಲ ಪರಕೀಯ ಆಡಳಿತದಿಂದ ನಮ್ಮನ್ನು ಮುಕ್ತಾಯಗೊಳಿಸಬಹುದು. ಆದರೆ, ದೇಶಕ್ಕೆ ಗುಲಾಮಗಿರಿ ಪದ್ಧತಿಗಿಂತ ಹೆಚ್ಚಿನ ಅಪಾಯ ತಂದೊಡ್ಡುವ ಧಾರ್ಮಿಕ, ಸಾಮಾಜಿಕ ಅಸಮಾನತೆ ನಿವಾರಿಸಲು ಮಾರ್ಗೋಪಾಯಗಳನ್ನು ಹುಡುಕುತ್ತಾರೆ. ಈ ನಡುವೆಯೇ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ಭಾಗವಹಿಸುವ ಎಲ್ಲ ಸಂದರ್ಭಗಳಲ್ಲೂ ಪ್ರಜ್ಞಾಪೂರ್ವಕವಾಗಿ ತಪ್ಪದೇ ಭಾಗವಹಿಸುತ್ತಾರೆ. ಹಾಗೆ ಚರ್ಚಿಸುವಾಗ ಮೌರ್ಯ ಸಾಮ್ರಾಜ್ಯದ ಆಡಳಿತ, ಅಶೋಕನ ಭೂ ಸುಧಾರಣೆ ಆರ್ಥಿಕ ಅಭಿವೃದ್ಧಿ ಹೀಗೆ ಚರಿತ್ರೆಯ ಎಲ್ಲ ಆಕರಣೆಗಳನ್ನು ಶೋಧಿಸಿ ಕಲ್ಯಾಣ ರಾಜ್ಯದ ರೀತಿ ನೀತಿಗಳು, ಸ್ತ್ರೀ - ಸಮಾನತೆ, ಆಸ್ತಿ ಒಡೆತನ ಹೀಗೆ ಎಲ್ಲ ವಿಷಯಗಳ ಬಗ್ಗೆ ಶೋಧಿಸಿ ಒಂದು ರೀತಿಯ 'ಪರ್ಯಾಯ ಸಂಸ್ಕೃತಿಯ' ಎಲ್ಲ ಮಗ್ಗಲುಗಳಿಗೆ ರೂಪು ಕೊಡುತ್ತಾ ಹೋಗುತ್ತಾರೆ. ತಮ್ಮ ಪ್ರಖರ ಚಿಂತನೆ, ಅಖಿಲ ಭಾರತ ಮಟ್ಟದಲ್ಲಿ ಗಾಂಧೀಜಿಯವರನ್ನೇ ಮುಖಾ ಮುಖಿಯಾಗಿ ಸಾಗಿದ ಎದೆಗಾರಿಕೆಯು ಅವರನ್ನು ರಾಷ್ಟ್ರೀಯ ಸಂದರ್ಭದಲ್ಲಿ ಧಮನಿತ ವರ್ಗಗಳ, ಅಸ್ಪೃಶ್ಯರ ಪ್ರಶ್ನಾತೀತ ನಾಯಕನ ಸ್ಥಾನಕ್ಕೆ ಅವರನ್ನು ಏರಿಸುವುದನ್ನು ಹಲವಾರು ಘಟನೆಗಳಿಂದ ನಾವು ಮನಗಂಡಿದ್ದೇವೆ.

ಅಂಬೇಡ್ಕರ್‌ರವರು ಎಂದಿಗೂ ತಮ್ಮ ಬರವಣಿಗೆಗಳಲ್ಲಿ ತಮ್ಮ ಹಾಗೂ ದಲಿತರ ಕ್ರೂರ ಅನುಭವಗಳನ್ನು ರಮ್ಯಾತಿಕವಾಗಿ (Romanticise) ಬಿಂಬಿಸಲು ಪ್ರಯತ್ನಿಸಲಿಲ್ಲ. ಅವರ ಅನುಭವ ಕಥನಗಳನ್ನು ಒಂದೇ ಒಂದು ಮಹತ್ವದ ಪ್ರೇರಣೆಗೆ ಹಚ್ಚುವ ಕೇಂದ್ರ ಆಶಯ ಅವರದಾಗಿತ್ತು. ಅವರ ಮುಖ್ಯ ಯೋಜನೆ ದಲಿತರು ಬಹಳ ಕಾಲದಿಂದ ಅನುಭವಿಸಿದ ಯಾತನೆ, ಅವರ ಪ್ರಜ್ಞೆಯನ್ನು ಜಾಗೃತಗೊಳಿಸುವುದಾಗಿತ್ತೇ ವಿನಃ ಅದನ್ನು ರಮ್ಯಗೊಳಿಸುವ ಬೇರೆ ರೀತಿ ಅರ್ಥೈಸುವ ಉದ್ದೇಶ ಹೊಂದಿರಲಿಲ್ಲ ಅವರು ಹೇಳುತ್ತಿದ್ದರು.''[22] ''ಜಾತಿಯ ಪೆಡಂಭೂತ (Caste Monster) ಎಲ್ಲರ ದಾರಿಯಲ್ಲಿ ಅಡ್ಡ ಬರುತ್ತದೆ. ಯಾವುದೇ ದಾರಿಯಲ್ಲಿ ನೀವು ತಿರುಗಿ ಅದು ಹಿಂಬಾಲಿಸುತ್ತದೆ. ನೀವು ರಾಜಕೀಯ ಸುಧಾರಣೆ ತರಲು ಅದು ಬಿಡುವುದಿಲ್ಲ, ಆರ್ಥಿಕ ಸುಧಾರಣೆ, ಮಾಡಲು ಬಿಡುವುದಿಲ್ಲ. ಎಲ್ಲಿಯವರೆಗೆ ಈ ಜಾತಿಯ ಪೆಡಂಭೂತವನ್ನು ನೀವು ಕೊಲ್ಲುವುದಿಲ್ಲವೋ ಅಲ್ಲಿಯವರೆಗೆ ಈ ಯಾವ ಬದಲಾವಣೆಗಳನ್ನು ತರಲು ಸಾಧ್ಯವಿಲ್ಲ''[23] (ಅಂಬೇಡ್ಕರ್ ; 1936) ವೆಂದು ಹೇಳುತ್ತಾರೆ.

ದಲಿತರು ಪಟ್ಟ ದಯನೀಯ ಶೋಷಣೆಯ ಬದುಕನ್ನು ಅವರು ತುಂಬಾ ವೈಜ್ಞಾನಿಕವಾಗಿ ವಿಶ್ಲೇಷಿಸುತ್ತಾರೆ. ''ಅವಮಾನ ಮತ್ತು ದೌರ್ಜನ್ಯವನ್ನು ಸಹಿಸಿ ....... ಪ್ರತಿಭಟಿಸುವ, ಪ್ರಶ್ನಿಸುವ ಶಕ್ತಿಯನ್ನೇ ಕೊಂದು ಬಿಟ್ಟಿದೆ. ನಿಮ್ಮಲ್ಲಿನ ಸಾಮಾನ್ಯ ಚೇತನ, ಹುಮ್ಮಸ್ಸು ಸಂಪೂರ್ಣ ನಶಿಸಿದೆ. ನೀವೆಲ್ಲ ಅಸಹಾಯಕರಾಗಿ,

ಶಕ್ತಿ ಹೀನವಾಗಿ, ಪೇಲವವಾಗಿ ನಿಮ್ಮನ್ನು ಸೋಲು ಮತ್ತು ನಿರಾಶೆ, ನೀರಸತನ ಸುತ್ತುವರೆದಿದೆ'' ಎಂದು ಹೇಳುವಲ್ಲಿ ಅಂಬೇಡ್ಕರ್‌ರವರು 'ಪ್ರಜ್ಞೆಯ ಜಾಗೃತಿ' ಯ ಕಡೆಗೆ ಸದಾ ನಡೆಯುತ್ತಿದ್ದರು ಎಂಬುದು ವಿಧಿತವಾಗುತ್ತದೆ.

1945 ರಲ್ಲಿ ಅಹಮದಾಬಾದ್‌ನಲ್ಲಿ ಜರುಗಿದ ಬೌದ್ಧ ಸಮ್ಮೇಳನದಲ್ಲಿ ಅಂಬೇಡ್ಕರವರು ಭಾಗವಹಿಸಿದರು. ಮುಂದೆ, 1946 ಜೂನ್ 20 ರಂದು ಮುಂಬೈನಲ್ಲಿ ಸಿದ್ಧಾರ್ಥ ಕಾಲೇಜನನ್ನು ಸ್ಥಾಪಿಸಿದರು. ಸಿದ್ಧಾರ್ಥ ಗೌತಮ ಇದು ಬುದ್ಧನ ಮೊದಲ ಹೆಸರು.

ಈ ನಡುವೆ 1946 ರಲ್ಲಿ ಡಾ. ಅಂಬೇಡ್ಕರ್‌ರವರು 'ಶೂದ್ರರು - ಅವರು ಯಾರು ಮತ್ತು ಹೇಗೆ ಇಂಡೋ- ಆರ್ಯನ್‌ಸಮಾಜದ ನಾಲ್ಕನೇ ವರ್ಣವಾದರು', ಎಂಬ ಗ್ರಂಥ ರಚಿಸಿ ಚಾತುರ್ವರ್ಣ್ಯ ವ್ಯವಸ್ಥೆಯ ತಳಬುಡ ಶೋಷಿಸುತ್ತಾರೆ. ಈ ಕೃತಿಯ ಮುಂದುವರಿಕೆಯಾಗಿಯೇ 1948 ರಲ್ಲಿ ರಚಿಸಿದ 'ಅಸ್ಪೃಶ್ಯರು : ಅವರು ಯಾರು ಮತ್ತು ಅವರು ಏಕೆ ಅಸ್ಪೃಶ್ಯರಾದರು?' ಎಂಬ ಚಾರಿತ್ರಿಕ ವಿಶ್ಲೇಷಣೆಯ ಮಹತ್ವದ ಗ್ರಂಥ ರಚಿಸುತ್ತಾರೆ. ಈ ಗ್ರಂಥದಲ್ಲಿ ಅವರು ಅಸ್ಪೃಶ್ಯತೆಯ ಮೂಲವನ್ನು ವಿಶ್ಲೇಷಿಸುತ್ತಾ 'ನುಚ್ಚುನೂರಾದ ಜನರು (Broken Men) ಬೌದ್ಧ ಮತಾವಲಂಬಿಗಳು. ಅವರು ಬ್ರಾಹ್ಮಣರನ್ನು ಪೂಜ್ಯರೆಂದು ಆರಾಧಿಸಲಿಲ್ಲ, ಅವರನ್ನು ಪೌರೋಹಿತ್ಯ ವಹಿಸಲು ತಮ್ಮಲ್ಲಿ ನೇಮಕ ಮಾಡಿಕೊಳ್ಳಲಿಲ್ಲ ಮತ್ತು ಅಶುದ್ಧರೆಂದು ಪರಿಗಣಿಸಿದರು. ಇನ್ನೊಂದೆಡೆ ಬ್ರಾಹ್ಮಣರು ಈ ನುಚ್ಚು ನೂರಾದವರನ್ನು ಅವರು ಬೌದ್ಧರೆಂಬ ಕಾರಣದಿಂದ ಇಷ್ಟಪಡಲಿಲ್ಲ ಮತ್ತು ಅವರ ವಿರುದ್ಧವಾಗಿ ತಿರಸ್ಕಾರ ಹಾಗೂ ದ್ವೇಷದ ಭಾವನೆಗಳನ್ನು ಬಿತ್ತಿದರು. ಹೀಗಾಗಿ ಈ ನುಚ್ಚು ನೂರಾದ ಜನರು ಅಸ್ಪೃಶ್ಯರೆಂದು ಬಗೆಯಲ್ಪಡುವಂತಾಯಿತು'[23(ಎ)] ಎಂದು ಅಸ್ಪೃಶ್ಯರ ಬೌದ್ಧ ಮೂಲ ಸಿದ್ಧಾಂತವನ್ನು ಮುಂದಿಡುತ್ತಾರೆ.

10, ಮಾರ್ಚ್ 1948 ರಂದು ತಮಿಳುನಾಡಿನ ರಚಿತವಾದ ಬೌದ್ಧ ಪಂಡಿತ ಪಿ. ಲಕ್ಷ್ಮೀ ನರಸು ಅವರು ಬರೆದು "ಎಸೆನ್ಸ್ ಆಫ್ ಬುದ್ದಿಸಮ್" (Essence of Buddhism: 1934) ರಲ್ಲಿಯೇ ರಚಿತವಾದ ಬೌದ್ಧ ಗ್ರಂಥ ಈ ಕೃತಿಯಿಂದ ಪ್ರಭಾವಿತರಾಗಿ 'ಬೌದ್ಧ ಧರ್ಮದ ಕುರಿತಾದ ಪುಸ್ತಕಗಳಲ್ಲಿಯೇ ಇದೊಂದು ಉತ್ತಮ ಗ್ರಂಥ ಯಾರು 'ಸದ್ಧರ್ಮ' ವನ್ನು ಕುರಿತು ಕಲಿಯಲು ಇಚ್ಛಿಸುತ್ತಾರೋ ಅವರು ಈ ಪುಸ್ತಕ ಓದಲು, ಯಾವ ಅತಿಶಯೋಕ್ತಿಯೂ ಇಲ್ಲದೇ ನಾನು ಶಿಫಾರಸ್ಸು ಮಾಡುತ್ತೇನೆ' ಎಂದು ಮುನ್ನುಡಿಯಲ್ಲಿ ಬರೆದು 3 ನೇ ಆವೃತ್ತಿಯನ್ನು ಪ್ರಕಟಿಸಿದರು. ಮುನ್ನುಡಿಯಲ್ಲಿ ಬರೆಯುತ್ತಾ ಬುದ್ಧನ ಧರ್ಮದ ಕುರಿತು ಪ್ರತ್ಯೇಕ ಒಂದು ಗ್ರಂಥ ರಚಿಸಿ ಬುದ್ಧನ ಕುರಿತು ಹಿಂದಿನ ಮತ್ತು ಇಂದಿನ ಟೀಕಾಕಾರರಿಗೆ ಉತ್ತರ ನೀಡುವುದಾಗಿ ಪ್ರಕಟಿಸಿದರು. ಈ ಮುನ್ನುಡಿಯನ್ನು ಪೂರ್ಣ ಅವಲೋಕಿಸಿದರೆ ಅವರು ಬಹಳ ಕಾಲದಿಂದ ಬೌದ್ಧ ಧರ್ಮದ ಕಡೆಗೆ ಹೆಚ್ಚಿನ ಒಲವು ಹೊಂದಿದ್ದರೆಂಬುದು ಗೋಚರಿಸುತ್ತದೆ. ಸದರೀ ಪುಸ್ತಕವನ್ನು ಅವರು ಮುಂಬೈನ ಥ್ಯಾಕರ್ ಆ್ಯಂಡ್ ಕಂಪನಿಯವರಿಂದ ಪುನರ್ ಮುದ್ರಿಸಿದರು. ಅವರು ತಾವು ಬರೆದ ಮುನ್ನುಡಿಯಲ್ಲಿ ಮುಂದಿನ ತಮ್ಮ ಯೋಜನೆಗಳನ್ನು ವಿವರಿಸಿದ್ದರು. 'ನಾನು ಬುದ್ಧನ ಜೀವನ ಕುರಿತು ಅಧ್ಯಯನದಲ್ಲಿದ್ದೇನೆ. ಬೇರೆಯವರ ಪುಸ್ತಕಕ್ಕೆ ಮುನ್ನುಡಿ ಬರೆದು ನನ್ನ ವಿಚಾರಗಳನ್ನು ದಾಖಲಿಸುವ ಬದಲು,

'ವಿಶ್ವ ಬೌದ್ಧ ಸಂಸ್ಕೃತಿ ಸಂಸ್ಥೆ' (World Institute of Buddhist Culture) ಸ್ಥಾಪಿಸಿಕೊಂಡು ಬೌದ್ಧಧರ್ಮ ಪುನರುಜ್ಜೀವನ ಕಾರ್ಯದಲ್ಲಿ ನಿರತರಾಗಿರುತ್ತಾರೆ. ಅವರೊಂದಿಗೆ ಚರ್ಚೆಯಲ್ಲಿ ಕಳೆಯುತ್ತಿದ್ದ ಸಮಯದಲ್ಲಿ ಡಾ. ಅಂಬೇಡ್ಕರ್‌ರವರು ಬೌದ್ಧ ಧರ್ಮವನ್ನು ಯಾವ ಸಕಾರಣಗಳಿಂದ ಸ್ವೀಕರಿಸಬೇಕೆಂಬ ಐತಿಹಾಸಿಕ ನಿರ್ಣಯ ಮಾಡುತ್ತಾರೆ'[28]. ಮುಂದೆ 1955 ಮೇ ನಲ್ಲಿ ಬೌದ್ಧ ಧಮ್ಮ ಪ್ರಸಾರದ ಉದ್ದೇಶದಿಂದಲೇ ಬೌದ್ಧಮಹಾ ಸಭಾವನ್ನು'[29] ಸ್ಥಾಪಿಸುತ್ತಾರೆ. ಆದರೆ ಇದಕ್ಕಿಂತ ಪೂರ್ವದಲ್ಲಿಯೇ 1945 ರಲ್ಲಿ ಬೌದ್ಧ ಜನ ಪಂಚಾಯತ್ ಸಮಿತಿ,[30] (B.J.P. S. ಮೂಲದಲ್ಲಿ 'ಮಹಾರ ಜನಪಂಚಾಯತ್ ಸಮಿತಿ) ಯನ್ನು ಪ್ರಾರಂಭಿಸಿರುವುದು ಅವರ ಬೌದ್ಧ ಪರ ನಿಲುವಿಗೆ ಹಿಡಿದ ಕನ್ನಡಿಯಾಗಿದೆ. 1945 ರಲ್ಲಿ ಮುಂಬೈನ ಪೀಪಲ್ಸ್ ಎಜ್ಯುಕೇಷನ್ ಸೊಸೈಟಿಯ ಜೊತೆಗೆ ಬೌದ್ಧ ಧರ್ಮದ ತತ್ವಗಳನ್ನು ದಲಿತ ಯುವಕರಲ್ಲಿ ಬೆಳೆಸಲು ಶಿಕ್ಷಣ ಸಂಸ್ಥೆಯ ಜೊತೆ ಜೊತೆಗೆ 'ಸಾಂಸ್ಕೃತಿಕ ತರಬೇತಿ' ಯನ್ನು ಧಾರ್ಮಿಕ ಬೋಧೆಯನ್ನು ನಡೆಸುವ ಉದ್ದೇಶದಿಂದ ಬೌದ್ಧ ಜನ ಪಂಚಾಯತ್‌ನ್ನು ಪ್ರಾರಂಭಿಸಿರುವುದು ಕಂಡು ಬರುತ್ತದೆ. ಈ ಸಂಘಟನೆಯನ್ನು 'ಪೂರ್ಣವಾಗಿ ಬೌದ್ಧ ಧಮ್ಮ ಪ್ರಚಾರ, ಅಧ್ಯಯನ, ವಿದೇಶಿ ಬೌದ್ಧ ಸಂಸ್ಥೆಗಳು, ಸಮುದಾಯಗಳ ಜೊತೆಗೆ ಸಂಪರ್ಕ ಸಾಧಿಸುವ'[31] ಉದ್ದೇಶದಿಂದ ಪ್ರಾರಂಭಿಸಿರುವಂತದ್ದಾಗಿದೆ. ಮೊದಲೇ ಹೇಳಿದಂತೆ 1956 ರ ವರೆಗೆ ಬೌದ್ಧ ಧರ್ಮದ ಅಧ್ಯಯನ, ತಾವು ಪರಿಕಲ್ಪಿಸಿದ ಬೌದ್ಧ ಧರ್ಮ ವಿವರಿಸುವ ಚಾರಿತ್ರಿಕ ಕೃತಿ 'ಬುದ್ಧ ಮತ್ತು ಅವನ ಧಮ್ಮ'[32] ರಚನೆ, 'ಬೌದ್ಧ ಪೂಜಾ ಪಾಠಗಳ'[33] ರಚನೆಯಲ್ಲಿ ತೊಡಗಿಸಿಕೊಳ್ಳುತ್ತಾರೆ. ತಾತ್ವಿಕ ನೆಲೆಗಟ್ಟುಗಳ ಬಗ್ಗೆ ಹೇಗೆ ಒತ್ತುಕೊಟ್ಟರೋ ದಲಿತರು ಹಿಂದೂ ಆಚರಣೆಗಳನ್ನು ಬಿಟ್ಟುಕೊಟ್ಟಾಗಲೇ ಹಿಂದೂ ಧರ್ಮ ಪೂರ್ತಿಯಾಗಿ ತ್ಯಜಿಸಿದಂತೆ ಎನ್ನುವ ಹಿನ್ನಲೆಯಲ್ಲಿ ಬೌದ್ಧ ಧರ್ಮದ ಸಂಕ್ಷಿಪ್ತ ಆಚರಣೆಗಳಿಗೆ ಒತ್ತು ಕೊಡುತ್ತಾರೆ. 1956 ರಲ್ಲಿ ಪ್ರಕಟಿಸಿದ ಕೃತಿಯಲ್ಲಿ ಈ ದೇಶದಲ್ಲಿ ಬೌದ್ಧ ತತ್ವಕ್ಕೆ ಹೋಲಿಸಿದಾಗ 'ಧಾರ್ಮಿಕ ಪೂಜಾ ಪಾಠಗಳು' ಮಾಯವಾಗಿ ಹೋಗಿವೆ. ಆದ್ದರಿಂದ ಬೌದ್ಧ ಪೂಜಾ ಪದ್ಧತಿಯನ್ನು ಬೌದ್ಧ ರಾಷ್ಟ್ರಗಳಿಂದ ತರಬೇಕಾಯಿತು'[34] ಎಂದು ಹೇಳುತ್ತಾರೆ. ಜಾಗತಿಕ ಬೌದ್ಧ ಸಮಾವೇಶಗಳಲ್ಲಿ ಭಾಗವಹಿಸಿರುವುದರಿಂದ, ಬರ್ಮಾದಲ್ಲಿ ಜಾಗತಿಕ ಬೌದ್ಧ ಸಂಸ್ಕೃತಿ ಸಂಸ್ಥೆಯ ಸ್ಥಾಪಕರಾದ ಡಾ. ಸೋನಿಯವರ ಒಡನಾಟದಿಂದ 'ಬೌದ್ಧ ಆಚರಣೆಗಳ' ಆಯಾಮಕ್ಕೆ ಕಾಳಜಿ ವಹಿಸಿರುವುದು ಕಂಡು ಬರುತ್ತದೆ. ದಲಿತರಿಗೆ ಒಂದು ಚಾರಿತ್ರಿಕ ಘಟ್ಟದಲ್ಲಿ ಅವರು ಸಾಂಸ್ಕೃತಿಕ ಸ್ವಾಯತ್ತತೆ ಸಾಧಿಸಲು ಮತ್ತು ತಮ್ಮದೆನ್ನುವ ಧಾರ್ಮಿಕ ಐಡೆಂಟಿಟಿ ಸಾಧಿಸಲು ಇಷ್ಟೆಲ್ಲ ಪೂರ್ವಸಿದ್ಧತೆಗಳೊಂದಿಗೆ ಮತಾಂತರಕ್ಕೆ ಕಾಯುತ್ತಾರೆ. ಅಂತಿಮವಾಗಿ ಅಂದು ಅಶೋಕ ಚಕ್ರವರ್ತಿಯು 'ಭೇರಿ ಘೋಷ' (War Drum) ದ ಹಿಂಸಾ ಪ್ರವೃತ್ತಿಗೆ ಶರಣು ಹೇಳಿ 'ಧಮ್ಮ ಘೋಷ' (Dhamma Ghosh) ವೇ ಲೇಸೆಂದು ಪ್ರೀತಿ, ಕರುಣೆ, ಭಾತೃತ್ವ ಸಮಾನತೆಯಿಂದ ಕೂಡಿದ ಎಲ್ಲಾ ಜೀವಿಗಳಿಗೂ ಅದರ ಹೊಂದಿರುವ ಬೌದ್ಧ ಧಮ್ಮ ದೀಕ್ಷೆ ಪಡೆದ ದಿನದಂದು (ವಿಜಯದಶಮಿ) ನಾಗಪೂರದ ಐತಿಹಾಸಿಕ ನೆಲದಲ್ಲಿ ಅಕ್ಟೋಬರ್ 14, 1956 ಮುಂಜಾನೆ 9.40 ಗಂಟೆಗೆ ಭಾರತದ ಹಿರಿಯ ಬಿಕ್ಕುಗಳಾಗಿದ್ದ ಬರ್ಮಾದ ಪೂಜ್ಯ ಬಿಕ್ಕು ಯು. ಚಂದ್ರಮಣಿ ಇವರಿಂದ ಬೌದ್ಧ ಧಮ್ಮ ದೀಕ್ಷೆ ಪಡೆಯುತ್ತಾರೆ. ಆ ಮೂಲಕ ಭಾರತದಲ್ಲಿ ಮತ್ತೊಮ್ಮೆ ಬೌದ್ಧ ಧರ್ಮದ ಪುನರುಜ್ಜೀವನಕ್ಕೆ ಭಾಷ್ಯ ಬರೆಯುತ್ತಾರೆ. ಆ ಮೂಲಕ 'ಭಾರತದ ಬೌದ್ಧ ಧಮ್ಮ ಚರಿತ್ರೆಯಲ್ಲಿ 'ಅಂಬೇಡ್ಕರ್ ಯುಗ' ಪ್ರಾರಂಭವಾಯಿತು'[35] ಎಂದು ಬೌದ್ಧ ವಿಧ್ವಾಂಸರು ಅಭಿಪ್ರಾಯ ಪಟ್ಟಿರುವುದನ್ನು ಕಾಣುತ್ತೇವೆ.

## 2.2. ಅಂಬೇಡ್ಕರ್‌ರವರ 'ಮತಾಂತರ' ದ ತಾತ್ವಿಕ ಹಿನ್ನಲೆಗಳು ಮತ್ತು ದಲಿತರ ಸಾಂಸ್ಕೃತಿಕ ಐಡೆಂಟಿಟಿಯ ಪ್ರಶ್ನೆಗಳು :

14 ನವೆಂಬರ್, 1935 ರಲ್ಲಿ ಯೋಲಾದಲ್ಲಿ (ನಾಸಿಕ್ ಜಿಲ್ಲೆ ಮಹಾರಾಷ್ಟ್ರ) ನಡೆದ ನಿಮ್ನ ವರ್ಗಗಳ ಸಮಾವೇಶದಲ್ಲಿ 'ದುರ್ದೈವದಿಂದ ನಾನು ಹಿಂದುವಾಗಿ ಹುಟ್ಟಿದ್ದೇನೆ, ಆದರೆ ನಿಮಗೆ ವಚನವೀಯುತ್ತೇನೆ. ನಾನು ಹಿಂದುವಾಗಿ ಸಾಯಲಾರೆ'[36] ಎಂದು ಘೋಷಣೆ ಮಾಡುವ ಮೂಲಕ ತಮ್ಮ ಬೌದ್ಧ ಮತಾಂತರದ ಅಧ್ಯಾಯಕ್ಕೆ ಮುನ್ನುಡಿ ಬರೆದರು. ಆ ಸಂದರ್ಭದಲ್ಲಿ ಅವರು 'ದೇವಾಲಯ ಪ್ರವೇಶ ಚಳವಳಿಯನ್ನು' ನಿಲ್ಲಿಸಲು ಅಲ್ಲಿ ಸೇರಿದ್ದ 10 ಸಾವಿರ ಅನುಯಾಯಿಗಳಿಗೆ ಕರೆ ನೀಡಿದರು. ಕಳೆದ ವರ್ಷದಿಂದ ಪಾರರಂಭಿಸಿದ, ಕೆರೆ ನೀರು ಮುಟ್ಟಿ ಕುಡಿಯುವ, ದೇವಾಲಯ ಪ್ರವೇಶಿಸುವ ಚಳವಳಿಗಳು ಕಾಲವ್ಯರ್ಥ ಅಂತಹ ಯಾವ ಪ್ರಯತ್ನಗಳೂ ಹಿಂದೂ ಸನಾತನಿ ಜಾತಿ ವಾದಿಗಳಲ್ಲಿ ಪರಿವರ್ತನೆ ತರಲಾರವೆಂದು ಮನಗಂಡರು. 'ಯವೋಲಾದ ಚಾರಿತ್ರಿಕ ಘೋಷಣೆ' ಭಾರತಾದ್ಯಂತ ವ್ಯಾಪಕ ಪ್ರಚಾರ ಪಡೆಯಿತು. ಮತ್ತು ಜಾಗತಿಕ ಮಟ್ಟದಲ್ಲಿಯೂ ವ್ಯಾಪಕವಾಗಿ ಧರ್ಮದ ಕುರಿತು ಪ್ರತಿಕ್ರಿಯೆಗಳು'[37] ಬರಲಾರಂಬಿಸಿದ್ದವೆಂದು ನೋಡುತ್ತೇವೆ. ಅಂಬೇಡ್ಕರ್‌ರವರ ಈ ಚಾರಿತ್ರಿಕ ನಿರ್ಣಯಕ್ಕೆ ಪ್ರಜ್ಞಾವಂತ ನೆಲೆಯಲ್ಲಿ ಪ್ರಶಂಸೆಗೆ ವ್ಯಕ್ತವಾಯಿತಾದರೂ 'ಸಿಂಧಿ ಹಿಂದೂ ಒಬ್ಬ ಡಾ. ಅಂಬೇಡ್ಕರ್‌ರವರು ಹಿಂದೂ ಧರ್ಮ ತ್ಯಜಿಸಿದರೆ ಕೊಲ್ಲುವುದಾಗಿ ರಕ್ತದಿಂದ ಪತ್ರ ಬರೆದು ಪ್ರಾಣ ಬೆದರಿಕೆಯೊಡ್ಡಿದ.'[38] ಈ ಘಟನೆಯೂ ಕೂಡ ಹಿಂದುಗಳು ಆ ಸಮಯದಲ್ಲಿ ಯಾವ ರೀತಿ ಪ್ರತಿಕ್ರಿಯಿಸಿದರೆಂಬುದನ್ನು ಸಾಂಕೇತಿಕವಾಗಿ ಸೂಚಿಸುತ್ತದೆ. ಇಂತಹ ಬೆದರಿಕೆಗಳಿಗೆ ಅಂಬೇಡ್ಕರ್‌ರವರು ಎಂದಿಗೂ ಜಗ್ಗಿದವರಲ್ಲವೆಂದು ಅವರ ಜೀವನ ವೃತ್ತಾಂತಗಳಲ್ಲಿ ಕಾಣುತ್ತೇವೆ.

### ಮತಾಂತರದ ತಾತ್ವಿಕ ಹಿನ್ನೆಲೆಗಳು :

ಬೌದ್ಧ ಧರ್ಮವನ್ನು ಅಂಬೇಡ್ಕರ್‌ರವರು ತಮ್ಮ ವೈಯಕ್ತಿಕ ಜೀವನದ ಕಹಿ ಅನುಭವಗಳ ಹಿನ್ನಲೆಯಲ್ಲಿ ಗ್ರಹಿಸಿದ್ದನ್ನು ಕಾಣುತ್ತೇವೆ. ಈ ಕುರಿತು ಈಗಾಗಲೇ ಚರ್ಚಿಸಲಾಗಿದೆ. ಅದೇ ಕಾಲಕ್ಕೆ ಐದಾರು ವರ್ಷಗಳವರೆಗೆ ಯುರೋಪ ಮತ್ತು ಅಮೇರಿಕಾ ದೇಶಗಳಲ್ಲಿ ಉನ್ನತ ಅಧ್ಯಯನ ಮಾಡಿದ ಭಾರತದ ಯಾವುದೇ ಸಮಕಾಲೀನ ಪಂಡಿತರಿಗೆ ಉತ್ತರ ಕೊಡಲು ಸಮರ್ಥರಾಗಿದ್ದ, ದಕ್ಷ ನಾಯಕತ್ವದ ಗುಣ ಹೊಂದಿದ ನನ್ನಂತವನೇ ಈ ರೀತಿಯ ಅವಮಾನ, ಮಾನಸಿಕ ಹಿಂಸೆ ಅನುಭವಿಸಬೇಕಾದರೆ ಇನ್ನೂ ನಿರಕ್ಷರ ಕುಕ್ಷಿಗಳಾದ ತನ್ನ ಕೋಟ್ಯಾನು ಕೋಟಿ ಶೋಷಿತ ಬಂಧುಗಳ ಪಾಡೇನು ? ಎಂಬ ಸಮಷ್ಟಿ ಪ್ರಜ್ಞೆಯ ನೆಲೆಯಲ್ಲಿ ಅವರು ಬೌದ್ಧ ಧಮ್ಮವನ್ನು ವಿಮೋಚನಾ ಸೂತ್ರವನ್ನಾಗಿರೆಂಬುದು ಪಥವನ್ನಾಗಿ ಗ್ರಹಿಸಿದರೆಂಬುದು ಸ್ಪಷ್ಟವಾಗಿದೆ.

ಖ್ಯಾತ ಚಿಂತಕರಾಗಿದ್ದ ಡಾ. ಡಿ.ಆರ್. ನಾಗರಾಜ ಅವರು ಅಂಬೇಡ್ಕರ್ ಮತ್ತು ಬೌದ್ಧ ಧರ್ಮದ ಬಗ್ಗೆ ತುಂಬಾ ವಿಮರ್ಶಾತ್ಮಕ, ಕಳಕಳಿಯ ಅಧ್ಯಯನ ಮಾಡಿದವರು ಅಂಬೇಡ್ಕರ್‌ರವರು ಬೌದ್ಧ ಧರ್ಮ ಯಾಕೆ, ಯಾವ ರೀತಿ ಒಪ್ಪಿಕೊಂಡರು. ಯಾವ ಕಾರಣಗಳಿಗಾಗಿ ಸ್ವೀಕರಿಸಿದರು ಎಂಬ ಕುರಿತು ತುಂಬ ಮಹತ್ವದ ವಿಚಾರಗಳನ್ನು ದಾಖಲಿಸುತ್ತಾರೆ.

''ಅಂಬೇಡ್ಕರ್‌ರವರಿಗೆ ಬೌದ್ಧ ಧರ್ಮ ಎನ್ನುವುದು ತಮ್ಮ ಹೋರಾಟಕ್ಕೆ ಸಿಕ್ಕಿದ್ದ ಚಾರಿತ್ರಿಕ ಸಮರ್ಥನೆ'', ಚಾರಿತ್ರಿಕವಾದ ಸ್ಥಿತಿಯೊಂದನ್ನು ವರ್ತಮಾನಕ್ಕೆ ತರುವ ಮೂಲಕ ತಮ್ಮ ಹೋರಾಟಕ್ಕೆ ಹೆಚ್ಚು ದೊಡ್ಡದಾದ ಪರಂಪರೆಯನ್ನು ನಿರ್ಮಿಸಿಕೊಳ್ಳುವ ಪ್ರಯತ್ನ ಅದು. ದಲಿತರಿಗೆ ಹಿರಿದಾದ ಸಾಂಸ್ಕೃತಿಕ ಪರಂಪರೆಯೊಂದನ್ನು ಕಟ್ಟಿಕೊಡುವ ಮಹಾನ್ ಪ್ರಯತ್ನದ ಭಾಗ ಅದು''[39].

ಇಂತಹ ಮಹತ್ವದ ಸಮಕಾಲೀನ ಸತ್ಯ, ತಿಳುವಳಿಕೆ ದಲಿತ ವರ್ಗದಿಂದಲೇ ಬಂದ ಅನೇಕ ಸುಶಿಕ್ಷಿತರಲ್ಲಿ ಕಾಣಬರದಿರುವುದನ್ನು ಪ್ರಸ್ತುತ ಸಂಶೋಧನೆಯ ಸಾಹಿತ್ಯ ಸಮೀಕ್ಷೆ, ಮತ್ತು ಕ್ಷೇತ್ರ ಸಂದರ್ಶನಗಳಲ್ಲಿ ಗಮನಿಸಲಾಗಿದೆ. ಅವರು ಮುಂದುವರೆದು ಹೇಳುತ್ತಾ, ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ಅಸ್ಪೃಶ್ಯರಿಗೆ ಶತಮಾನಗಳಿಂದ ಅಂಟಿದ ಕೀಳುಮೆ ತೊರೆಯಲು, ಅಸ್ಪೃಶ್ಯನನ್ನು ಒಂದು ಉದಾತ್ತ ಸಂಸ್ಕೃತಿಯ ಘಟಕವೆಂದು ತನ್ನನ್ನು ತಾನು ಹಿರಿದಾಗಿ ತಿಳಿದುಕೊಳ್ಳಲು ಚರಿತ್ರೆಯಿಂದ ಪ್ರೇರಿತನಾಗಲು ಆಕರಗಳನ್ನು, ಮೂಲಗಳನ್ನು ಶೋಧಿಸಿದರೆಂದು ಅವರು ಅವರ ಬೌದ್ಧ ಧರ್ಮ ಮತಾಂತರ ಪ್ರಕ್ರಿಯೆಯನ್ನು ವ್ಯಾಖ್ಯಾನಿಸುತ್ತಾರೆ. ಅವರು 'ಲಂಕೇಶ ಪತ್ರಿಕೆ' ಯಲ್ಲಿ ಪ್ರಕಟವಾದ ತಮ್ಮ ''ಅಂಬೇಡ್ಕರ್ ವಿಚಾರಧಾರೆ'' ಒಂದು ವಿಮರ್ಶಾತ್ಮಕ ಪೀಠಿಕೆ ಎಂಬ ಲೇಖನದಲ್ಲಿ ಅಂಬೇಡ್ಕರ್‌ರವರ Philosophy of Hindusim ಪುಸ್ತಕವನ್ನು ಉಲ್ಲೇಖಿಸುತ್ತಾ ''ಸಮಾನತೆ ಮತ್ತು ಸಹೋದರತೆ ಎಂಬೆರೆಡು ಮಾನವೀಯ ಮೌಲ್ಯಗಳನ್ನು ಹಿಂದೂ ಧರ್ಮ ಎಲ್ಲ ಹಂತಗಳಲ್ಲಿ ಹತ್ತಿಕ್ಕುತ್ತದೆ. ಮಾನವ - ಮಾನವನ್ನು ಕಿತ್ತು ತಿನ್ನುವುದೇ ಹಿಂದೂ ಧಾರ್ಮಿಕತೆಯ ನಿಜವಾದ ಅನುಭವ. ಅಸ್ಪೃಶ್ಯತೆ ಮತ್ತು ಜಾತಿ ಪದ್ಧತಿಯನ್ನು ತೆಗೆದು ಬಿಟ್ಟರೆ ಹಿಂದೂ ಧರ್ಮಕ್ಕೆ ಪ್ರತ್ಯೇಕವಾಗಿ ಅಸ್ತಿತ್ವವೇ ಇಲ್ಲ ಎಂಬುದು ಅಂಬೇಡ್ಕರ್‌ರವರ ವಾದ. ಈ ವಾದಕ್ಕೆ ಕೋಟ್ಯಾಂತರ ದಲಿತರ ನಿಜ ಜೀವನದ ನೋವಿನ ಅನುಭವದ ಹಿನ್ನಲೆಯಿತ್ತು. ಹಿಂದೂ ಧರ್ಮದ ಚೌಕಟ್ಟಿನೊಳಗೆ ಈ ಸಮಸ್ಯೆಗೆ ಪರಿಹಾರವನ್ನು ಕಾಣುವುದು ಅಂಬೇಡ್ಕರ್‌ರವರಿಗೆ ಶುದ್ಧ ಹುಚ್ಚುತನವಾಗಿ, ಪ್ರತಿಗಾಮಿ ಕ್ರಿಯೆಗಾಗಿ ಕಂಡಿರಬೇಕು''[40]. ಡಾ. ನಾಗರಾಜರವರು ಅಂಬೇಡ್ಕರ್‌ರವರ ಐತಿಹಾಸಿಕ ಆಯ್ಕೆಗೆ ಸ್ಪಷ್ಟ ಸಮರ್ಥನೀಯತೆಯನ್ನು ತೆರೆದಿಡುತ್ತಾರೆ. ಬೌದ್ಧ ಧರ್ಮವನ್ನೆ ಏಕೆ, ಆಯ್ಕೆ ಮಾಡಿಕೊಂಡರು ಎಂಬ ಸಮರ್ಥ ಹಿನ್ನಲೆಯನ್ನು ಡಾ. ಡಿ.ಆರ್. ನಾಗರಾಜ ಉದಾಹರಣೆಗಳಿಂದ ಪ್ರಚಾರ ಪಡಿಸುತ್ತಾರೆ.

''ಅಸ್ಪೃಶ್ಯರು, ಕ್ರೈಸ್ತರಾದರೆ ಅವರಿಗೆ ಎಷ್ಟು ಶತಮಾನಗಳ ಪರಂಪರೆ ಇರಲು ಸಾಧ್ಯ? ಮುಸ್ಲಿಮರಾದರೂ ಅಷ್ಟೇ, ಸಿಖ್ಖರಾದರೂ ಅಷ್ಟೇ. ಸಂಸ್ಕೃತಿಯ ಎರಡನೆಯ ಕಲ್ಪನೆ ಎಂದರೆ, ಅದು ಚರಿತ್ರೆ, ಪರಂಪರೆ, ಅಂಬೇಡ್ಕರ್‌ರವರ ಉರಿಯುವ ಛಲ ಹೆಚ್ಚು ಆಳವಾದ ನೆಲೆಗೆ ತಲುಪುವ ಹಠ ಉಳ್ಳದ್ದು ಭಾರತೀಯ ನಾಗರೀಕತೆಯ ಮೂಲಕ್ಕೆ ತಮ್ಮ ಹೋರಾಟವನ್ನು ಒಯ್ಯುವ ಹಠ ಅಂಬೇಡ್ಕರ್‌ರವರದ್ದು ಹೀಗಾಗಿ, ಅಸ್ಪೃಶ್ಯತೆಯ ಚರಿತ್ರೆ ಮತ್ತು ಬೌದ್ಧ ಧರ್ಮದ ನಡುವೆ ಹೊಸ ರೀತಿಯ ಸಂಬಂಧಗಳನ್ನು ಅಂಬೇಡ್ಕರ್ ಕಂಡರು. ಅಸ್ಪೃಶ್ಯ 'ಸಂಸ್ಕೃತಿ ಹೀನನಲ್ಲ'. ಬದಲಾಗಿ ದೀರ್ಘವಾದ, ಉದಾತ್ತವಾದ ಹಿನ್ನಲೆ ಉಳ್ಳವನು ಎಂದು ವ್ಯಾಖ್ಯಾನಿಸುವ ಮೂಲಕ ವರ್ತಮಾನದ ಹೋರಾಟಕ್ಕೆ ಹೊಸ ನೆಲೆ ಕೊಡಲು, ಪ್ರಯತ್ನಿಸಿದರು''[41] ಎಂದು ಅಭಿಪ್ರಾಯ ಪಡುತ್ತಾರೆ. ಈ ವಿಚಾರಗಳಲ್ಲಿ ಅಂಬೇಡ್ಕರ್‌ರವರು ಬೌದ್ಧ ಧರ್ಮಕ್ಕೆ ಮತಾಂತರವಾದದ್ದು ಕೇವಲ ಧಾರ್ಮಿಕ ಹಿನ್ನಲೆಯಾಗಿರದೆ ದಲಿತರಿಗೆ ಭವಿಷ್ಯತ್ತಿನ ಹೋರಾಟಕ್ಕೆ ಒಂದು ನೆಲೆಗಟ್ಟು ಭದ್ರ ಬುನಾದಿ

ನಿರ್ಮಿಸುವ ಕಳಕಳಿಯುಳ್ಳದ್ದು ಎಂದು ಸ್ಪಷ್ಟವಾಗುತ್ತದೆ. ಇದರ ಜೊತೆಗೆ ಇನ್ನೂ ಸೂಕ್ಷ್ಮವಾಗಿ ಗಮನಿಸಿದರೆ ಈ ಕೋಟ್ಯಾನು ಕೋಟಿ ಶೋಷಿತರ ವಿಮೋಚನೆಯ ಮುಂದಿನ ಹೋರಾಟಕ್ಕೆ 'ಸಮರ ಶೀಲತೆ' ಒದಗಿಸುವುದು ಅಂಬೇಡ್ಕರ್‌ರವರ ಚಿಂತನೆಯ ಕೇಂದ್ರವಾಗಿತ್ತು ಎಂಬರ್ಥದ ವಿಚಾರಗಳನ್ನು ಹೇಳುತ್ತಾರೆ.

ಪೆರಿಯಾರ್ ಚಳುವಳಿಯ ಬಗ್ಗೆ ವಿಶ್ಲೇಷಿಸುತ್ತ ಡಾ. ನಾಗರಾಜ್ ಅವರು 'ಸಾಂಸ್ಕೃತಿಕ ಅನುಸಂಧಾನದ' ಬಗ್ಗೆ ವಿಶ್ಲೇಷಿಸುತ್ತಾರೆ. ಅಂಬೇಡ್ಕರ್‌ರವರು 'ಸಾಂಸ್ಕೃತಿಕ ಅನುಸಂಧಾನ' ವನ್ನು ಮಾಡಿಕೊಳ್ಳದೇ ತುಂಬಾ ವಿಭಿನ್ನವಾದ ಸಮನ್ವಯ ಸೂತ್ರವನ್ನು ಸಮನ್ವಯವೂ ಅಲ್ಲದ, ಮನುಷ್ಯನ ನಿರಾಕರಣೆಯೂ ಅಲ್ಲದ ಒಂದು ವಿನೂತನ ಮಾದರಿಯನ್ನು ರಚಿಸಿಕೊಂಡರೆಂದು ಹೇಳುತ್ತಾರೆ. ಪೆರಿಯಾರ್ ಒಂದು ಮಾದರಿಯಾದರೆ (ಭಂಜಕತನದ ಸ್ವರೂಪದ್ದು), ಇನ್ನೊಂದು 'ಸಾಂಸ್ಕೃತಿಕ ಅನುಸಂಧಾನದ್ದು' ಈ ಮಾದರಿಯಲ್ಲಿ ಅವರು ಮಹಾತ್ಮಾಗಾಂಧಿ, ನಾರಾಯಣಗುರು, ವಿವೇಕಾನಂದ ಕುವೆಂಪು ಮುಂತಾದವರನ್ನು ಹೆಸರಿಸುತ್ತಾರೆ. ಪೆರಿಯಾರ್ ಮಾದರಿಯಿಂದ ಭಾರತೀಯ ಸಂಪ್ರದಾಯ ಶರಣತೆಗೆ ಗಾಳಿಗುದ್ದುಗಳನ್ನು ಮಾತ್ರ ಕೊಡಲು ಸಾಧ್ಯವೇ ಹೊರತು, ಎದುರಾಳಿಗಳ ನಾಶ ಸಾಧ್ಯವಿಲ್ಲವೆಂದು ಹೇಳುತ್ತಾರೆ. ಇನ್ನೂ ನಾರಾಯಣ ಗುರು, ಸ್ವಾಮಿ ವಿವೇಕಾನಂದ, ಮಹಾತ್ಮಾ ಗಾಂಧೀಜಿ, ಕುವೆಂಪುರವರು ಸಾಂಸ್ಕೃತಿಕ ಅನುಸಂಧಾನದ ಮಾದರಿ ಅನುಸರಿಸಿದರು. ತಂತ್ರ, ಭಕ್ತಿ ಪಂಥ ಕೆಳಜಾತಿಗಳ ಆದಿವಾಸಿಗಳನ್ನು ಬಳಸಿಕೊಂಡು ಸಂಪ್ರದಾಯದ ಕ್ರೌರ್ಯ ಮತ್ತು ಅಮಾನವೀಯತೆಗಳನ್ನು ಕುಗ್ಗಿಸಲು ಆಂತರಿಕ ಪ್ರತಿ ರೋಧಕ ಶಕ್ತಿಗಳನ್ನು ರೂಪಿಸಿದ್ದು ಈ ಮಾದರಿಯದು. ಡಾ. ನಾಗರಾಜರವರು ಹೇಳುವಂತೆ ಇಂತಹ ಎಲ್ಲ ಸುಧಾರಣಾ ನೆಲೆಗಳ ಎಲ್ಲ ಪ್ರಯತ್ನಗಳು 'ಭಾರತೀಯ ಸಂಸ್ಕೃತಿ' ಎಂಬ ವಾತಾಪಿ ಗರ್ಭದಲ್ಲಿ ಜೀರ್ಣವಾಗಿ ಹೋಗಿವೆ' ಎಂಬ ವಿಶ್ಲೇಷಣೆ ಕೊಡುತ್ತಾರೆ. ಹಾಗೆಯೇ ಡಾ. ಅಂಬೇಡ್ಕರ್‌ರವರು ಮೇಲಿನ ಎರಡೂ ರೀತಿಯ ಮಾದರಿಗಳಿಗಿಂತ ಹೊರತಾದ 'ಅನ್ಯ ಸಾಂಸ್ಕೃತಿಕ ಸ್ವೀಕಾರ' ದ ಮಾದರಿಯನ್ನು ರೂಪಿಸಿದರೆಂದು ಡಾ. ನಾಗರಾಜ್ ಅಭಿಪ್ರಾಯ ಪಡುತ್ತಾರೆ.

ಅಂತಹ ಅಂದರೆ ಅಂಬೇಡ್ಕರ್‌ರವರಿಗಿಂತ ಭಿನ್ನವಾದ 'ಸಾಂಸ್ಕೃತಿಕ ಅನುಸಂಧಾನದ' ಚಳುವಳಿಗಳ ಮಾದರಿಗಳು ಯಶಸ್ವಿಯಾಗಿವೆ ಎಂಬ ವ್ಯಾಖ್ಯಾನ ಮಾಡುವ ಮೇಲ್ವರ್ಗದ ಸುಧಾರಣವಾದಿ ವಿದ್ವಾಂಸರೂ ಇಲ್ಲದಿಲ್ಲ, ಇತ್ತೀಚೆಗೆ ಪ್ರಕಟವಾದ ಲೇಖನದಲ್ಲಿ ಡಾ. ಎಂ. ಎ. ನಾಡಕರ್ಣಿಯವರು ಆಳ್ವಾರ್, ಕನಕದಾಸರ ಉದಾಹರಣೆ ಕೊಡುತ್ತಾ, ಕೇರಳದ ಈಳವರ ಮತ್ತು ನಾಡಾರದ ಯಶಸ್ವಿ ದೃಷ್ಟಾಂತವು ಮತ್ತೊಂದು ಅಂಶವನ್ನು ಎತ್ತಿ ತೋರಿಸುತ್ತದೆ. ದಲಿತ ಸಮಸ್ಯೆ ಪರಿಹಾರಕ್ಕೆ ಮತಾಂತರ ಎಷ್ಟು ಮಾತ್ರವೂ ಅಗತ್ಯವಿಲ್ಲ ಎಂಬುದು ಸ್ಪಷ್ಟವಾಗುತ್ತದೆ''[42] ಎಂದು ಸಾಮಾಜಿಕ ಪರಿವರ್ತನೆಯ ಫರ್ಮಾನು ಹೊರಡಿಸಿದಂತೆ ಮತಾಂತರವನ್ನು ಅರ್ಥೈಸುತ್ತಾರೆ. ಇನ್ನೂ ಮುಂದೆ ಹೋಗಿ ಬಸವಣ್ಣನವರು ಅಂತರ್ಜಾತೀಯ ಮದುವೆ ಮಾಡಿಸಿದ ಘಟನೆಯನ್ನು ಉಲ್ಲೇಖಿಸಿ ''ಬಸವಣ್ಣನು ತನ್ನ ಬ್ರಾಹ್ಮಣ ಶಿಷ್ಯನೊಬ್ಬನ ಮಗಳನ್ನು ಅಸ್ಪೃಶ್ಯ ಶಿಷ್ಯನೊಬ್ಬನ ಮಗಳೊಂದಿಗೆ ಮದುವೆ ಮಾಡಿಸುವವರೆಗೂ ಹೋದ. ಇದು ಸಮಾಜದಲ್ಲಿ ಭಾರಿ ಕ್ಷೋಭೆಯನ್ನು ಉಂಟು ಮಾಡಿತು. ಬಸವಣ್ಣ ತನ್ನ ಕಾಲವನ್ನು ಮೀರಿ ತುಂಬ ಮುಂದುವರಿದಿದ್ದನು''[43] ಎಂದು ಹೇಳುತ್ತಲೇ ಅಂತಹ ಚಳುವಳಿಗಳ ಮೂಲ ಆಶಯಗಳಿಗೇನೆ ಕೊಡಲಿಪೆಟ್ಟು ಹಾಕುವ ಕೆಲಸ ಮಾಡುತ್ತಾರೆ. ಆ ಚಳುವಳಿಗಳ ಮೂಲ ಉದ್ದೇಶ ಜಾತಿ ವಿನಾಶವಾಗಿತ್ತು, ಮುಂದೊಂದು ದಿನ 'ಆರೋಗ್ಯಕರ ಸಮಾಜಕ್ಕೆ'

ಅಂತಹ ಮದುವೆಗಳು ಅವಶ್ಯಕ ಎಂಬ ಅರಿವಿದ್ದ ಸಮಾಜ ವಿಜ್ಞಾನಿಗಳಿಗೇನೆ, ಐದು ಸಾವಿರ ವರ್ಷಗಳಿಂದ ಹಿನ್ನಲೆಯಲ್ಲಿಯೇ ಶೋಷಿತರಾದ ಜನರಿಗೆ ಸಮಾನತೆ ಬರಬೇಕಾದರೆ ಪುರೋಹಿತಷಾಹಿ ವ್ಯವಸ್ಥೆಗೆ, ಅಂತಹ ರಚನಾತ್ಮಕವಾದ ಹಾಗೂ ಬಸವಣ್ಣನವರಿಗೆ ವೈಯಕ್ತಿಕವಾಗಿ ಅಪಾಯವನ್ನು ಒಡ್ಡುವ ಕಾರ್ಯಗಳನ್ನು ಪ್ರೋತ್ಸಾಹಿಸುವ ಅವಶ್ಯಕತೆ ಯಾಕೆ ಬಂತು ಎಂಬುದು ಅರ್ಥವಾಗುವುದಿಲ್ಲ. ಅಂತರ್‌ಜಾತೀಯ ವಿವಾಹದಂತ ಚಟುವಟಿಕೆಗಳೇ ಜಾತಿ ವಿನಾಶಕ್ಕೆ ಕಾರಣವಾಗಬಲ್ಲವು ಎಂಬುದನ್ನು ಅನೇಕ ಸಮಾಜ ತಜ್ಞರು, ಹಿಂದೂ ಧರ್ಮದ ಅಂತರಂಗವನ್ನು ಅಧ್ಯಯನ ಮಾಡಿದವರಿಗೆ ಸ್ಪಷ್ಟವಾಗಿದೆ. ಎಸ್. ಜಿ. ಸರ್ದೇಸಾಯಿ ಅವರು ಇದೇ ಮಾತನ್ನು ಇತ್ತೀಚಿನ ಲೇಖನವೊಂದರಲ್ಲಿ ಒಪ್ಪಿಕೊಳ್ಳುತ್ತಾರೆ. ''ಜಾತಿ ಪದ್ದತಿ - ರಹಿತ ಹಿಂದೂ ಧರ್ಮ ಕಲ್ಪನಾತೀತ, ಹಿಂದೂ ಧರ್ಮ ಇರುವವರೆಗೆ ಜಾತಿ ಪದ್ದತಿ ಇದ್ದೇ ಇರುತ್ತದೆ. ಇದೀಗ ಅಂತರ್‌ಜಾತೀಯ ವಿವಾಹ ಪರಿಪಾಠ ಬೆಳೆಯುತ್ತಿದೆಯಷ್ಟೇ, ಇದೇನಾದರೂ ಸಾರ್ವತ್ರಿಕ ಸಂಪ್ರದಾಯವಾಗಿ ಅಥವಾ ರೂಢಿಯಾಗಿ ಬೆಳೆದು ಬಿಟ್ಟದ್ದೇ ಆದಲ್ಲಿ, ಅನೇಕ ಶತಮಾನ - ಸಹಸ್ರಮಾನಗಳ ಮೂಲಕ ಬೆಳೆದು ಬಂದ 'ಹಿಂದುತ್ವವು' ಕೊನೆಗಾಣುತ್ತದೆಂದೇ ಹೇಳಬೇಕು. ಹಾಗಿಲ್ಲದಿದ್ದರೂ ಕೊನೆಯ ಪಕ್ಷ ಗುರುತಿಗೆ ಸಿಗದಂತೆ ಪರಿವರ್ತನೆಗೊಳ್ಳುತ್ತದೆಂಬುದಂತೂ ಖಚಿತ''[44] ವೆಂದು ಹೇಳುತ್ತಾರೆ. ಪ್ರತಿಯೊಬ್ಬರೂ ಹಿಂದುವಾಗಿಯೇ ಜನಿಸಬೇಕು, ಹಿಂದುವಾಗಿಯೇ ಸಾಯಬೇಕೆಂಬುದೇ (ಕರ್ಮ ಆಧಾರದಿಂದ ಮೋಕ್ಷ ಸಾಧಿಸಿ ಸ್ವರ್ಗ ಸೇರಬೇಕು) ಹಿಂದೂ ಧರ್ಮದ ಕಾನೂನು. ಸರ್ದೇಸಾಯಿ ಅವರು ಮುಂದುವರೆದು ಹೇಳುತ್ತಾ

''ಜಾತಿ ಅಂದರೆ ಅವಶ್ಯಕವಾಗಿಯೇ ''ಅಂತರ್‌ವಿವಾಹ'', (Inter- marriage) ಒಂದೇ ಬುಡಕಟ್ಟು ಅಥವಾ ಪಂಗಡಕ್ಕೆ ಸೇರಿದ ಗಂಡು ಹೆಣ್ಣುಗಳ ನಡುವಿನ ವಿವಾಹ ಎಂದರ್ಥ. ಏಕೆಂದರೆ, ಅಂತರ್ವಿವಾಹವಿಲ್ಲದೇ ಜಾತಿ ಇರಲು ಸಾಧ್ಯವೇ ಇಲ್ಲ. ಇದರ ಆನುಷಂಗಿಕ ಫಲವೇ 'ಪ್ರತಿಯೊಬ್ಬ ಹಿಂದುವಾಗಿಯೇ ಹುಟ್ಟಬೇಕು' ಎಂಬ ಸಿದ್ಧಾಂತ. ಏಕೆಂದರೆ, ಯಾವುದೇ ಜಾತಿಗೆ ಸೇರಿರದೆ ಯಾರೇ ಆಗಲಿ ಹಿಂದೂ ಆಗಲಾರ. ಅಂದರೆ ಯಾರೇ ಆಗಲಿ ಈ ಜಾತಿಗೆ ಸೇರಿದವರು ಎಂದರೆ ಆ ಜಾತಿಯಲ್ಲಿ ಹುಟ್ಟಿದವರು ಎಂದರ್ಥ''[45] ಜಾತಿಯಲ್ಲಿ ಹುಟ್ಟಿದವನೆಂದರೆ ಅವನು ಖಂಡಿತ ಹಿಂದೂ ಎಂದೇ ಇದರ ಮರ್ಮ, ಎಂದು ಹಿಂದೂ ಧರ್ಮದ ಕಳಚಲಾರದ ಕವಚಗಳನ್ನು ವಿಶ್ಲೇಷಿಸುತ್ತಾರೆ. ಆದ್ದರಿಂದಲೇ ಅಂಬೇಡ್ಕರ್‌ರವರು ಜಾತಿ ವಿನಾಶಕ್ಕೆ ಸಂಕಲ್ಪ ಪಡುತ್ತಾರೆ. ಅದನ್ನೇ ಕರ್ನಾಟಕದ ಸಮಕಾಲೀನ ಸಂದರ್ಭದ ಹಿರಿಯ ವೈಚಾರಿಕ ಲೇಖಕರಾದ ಬಂಡಾಯ ಸಾಹಿತಿ ಆರ್.ವಿ. ಭಂಡಾರಿಯವರೂ ಭಗವದ್ಗೀತೆಯೂ ಇದಕ್ಕೆ ಗಟ್ಟಿಯಾದ ನೆಲೆಯನ್ನೇ ಒದಗಿಸಿತು ಎಂದು ಹೇಳುತ್ತಾ

''ಜಾತಿ ವ್ಯವಸ್ಥೆಗೆ ಅತ್ಯಂತ ಕಾಂಕ್ರೀಟನ್ನು ಭಗವದ್ಗೀತೆ ವಹಿಸುತ್ತದೆ. ಗೀತೆಯಲ್ಲಿ ''ಸ್ವಧರ್ಮೆ ನಿಧನಂ ಶ್ರೇಯ'', ಎಂಬ ಮಾತು ಸ್ವ-ಜಾತಿಯ ಕುರಿತೇ ಹೇಳಿದೆ. 'ಈ ಸ್ವಧರ್ಮವೆಂದರೆ ಜಾತಿ ಅಲ್ಲ' ಎಂಬ ಬಹಳ ಬುದ್ಧಿವಂತಿಕೆಯ ವ್ಯಾಖ್ಯಾನ ನನಗೆ ಅಪರಿಚಿತವಲ್ಲ, ಅವರ ವಾದವೆಲ್ಲ ಒಬ್ಬನನ್ನು ಬಾವಿಯಲ್ಲಿ ಕೆಡವಿ ನಾವು ಮೇಲೆ ನಿಂತು 'ನಿನಗೂ ಹೋರಾಡಲು ಸ್ವಾತಂತ್ರ್ಯ ಉಂಟು'. ನಾನು ಧರ್ಮ ಯುದ್ಧ ಸಾರುತ್ತೇನೆ, ಎಂದ ಹಾಗೆ''[46] (ಆರ್.ವಿ.ಭಂಡಾರಿ: 1980) ಎಂದು ಆಳುವ ವರ್ಗದ ಮೇಲ್ವಿಚಾರಕ ತಂತ್ರವನ್ನು ಬಯಲಿಗೆಳೆಯುತ್ತಾರೆ. ಎಸ್.ಜಿ. ಸರದೇಸಾಯಿ ಅವರು ಗುರುತಿಸಿದಂತೆ ಹಿಂದೂ ಧರ್ಮದಲ್ಲಿ ಹುಟ್ಟಿ ಹಿಂದೂ ಧರ್ಮದಲ್ಲೇ ನೀನು

'ಬಂಗಾಳದಲ್ಲಿ ಬ್ರಹ್ಮ ಸಮಾಜಿಗಳು ಆಂಗ್ಲೀಕರಣ ಮಾತ್ರವಲ್ಲ ಕ್ರೈಸ್ತೀಕರಣವನ್ನು ಪಡೆದರು. ಮಧ್ಯ ಕರ್ನಾಟಕದ 'ಶೂದ್ರ' ಸಮುದಾಯಗಳು, ಹಳೆಬೀಡನ್ನು ಆಳುತ್ತಿದ್ದ ಬಿಟ್ಟ ದೇವನು ಶ್ರೀ ವೈಷ್ಣವ ಧರ್ಮವನ್ನು ಸ್ವೀಕರಿಸಿದ ಪರಿಣಾಮವಾಗಿ, ತಾವೂ ವೈಷ್ಣವೀಕರಣಗೊಂಡವು. ಹೀಗಾಗಿ ಮಂಡ್ಯ ಸೀಮೆಯ ಒಕ್ಕಲಿಗರಲ್ಲಿ ಜೋಗಪ್ಪ (ನಾಥ ಸಂಪ್ರದಾಯದ ಪಳೆಯುಳಿಕೆ) ಸಂಪ್ರದಾಯದ ಜೊತೆಗೆ ದಾಸಪ್ಪ ಸಂಪ್ರದಾಯವೂ ಜತೆ ಜತೆಯಲ್ಲಿ ಉಳಿದುಕೊಂಡವು. ಮಲೆನಾಡಿನಲ್ಲಿ ಒಕ್ಕಲಿಗರಲ್ಲಿ ಹಿಂದಿನ ಜೈನ'[49] ಪ್ರಭಾವಗಳೂ, ಭೂತಾರಾಧನೆಯೂ, ಶ್ರೀ ವೈಷ್ಣನ ಸಂಪ್ರದಾಯಗಳೂ ಉಳಿದು ಬಂದವೆಂದು ಹೇಳುತ್ತಾರೆ''[1].

ಆದರೆ, ಅಂಬೇಡ್ಕರ್‌ರವರಿಗೆ ಬೌದ್ಧರಾಗದೇ ಉಳಿದ ದಲಿತರ ಬಗ್ಗೆ ಜಿಗುಪ್ಸೆಯಿರಲಿಲ್ಲವೆಂದು ಹೇಳುತ್ತಾರೆ. ಅವರ ಅಭಿಪ್ರಾಯಗಳಲ್ಲಿ ಸ್ಪಷ್ಟವಾಗಿ ಮತಾಂತರವೆನ್ನುವುದು 'ಸಂಸ್ಕೃತೀಕರಣವಲ್ಲ' ವೆಂಬುದು ಸ್ಪಷ್ಟವಾಗುತ್ತದೆ. ಡಾ. ಅಂಬೇಡ್ಕರ್‌ರವರು ಭಾರತೀಯ ಸಮಾಜದ ಹುಟ್ಟು ಬೆಳವಣಿಗೆಯನ್ನು ಅದು ಕಾಲ ಗತಿಯಲ್ಲಿ ಕಂಡುಕೊಂಡ ಮೌಲ್ಯಗಳನ್ನು ತುಂಬಾ ಎಚ್ಚರಿಕೆಯಿಂದ ಅಧ್ಯಯನ ಮಾಡಿದ್ದರು. ಭಾರತೀಯ ಸಮಾಜ ಹಿಂದೂ ಧರ್ಮದ ಅನಾರೋಗ್ಯಕರ ಗರ್ಭದಲ್ಲಿ ಜನಿಸಿದ ಅನಾರೋಗ್ಯಕರ ಕೂಸು, ಇದರ ಆರೋಗ್ಯ ಸುಧಾರಣೆಗೆ ಪ್ರಯತ್ನಿಸಿದರೆ ಅದು ವ್ಯರ್ಥಕಾಲ ಹರಣ ಮತ್ತು ಹುಚ್ಚುತನವೆಂಬುದು ಸ್ಪಷ್ಟವಾಗಿಯೇ ಅವರು ಪ್ರಜ್ಞಾಪೂರ್ವಕವಾಗಿ ದಲಿತರಿಗೆ ಶೋಷಿತರಿಗೆ ಅನ್ಯ ಸಂಸ್ಕೃತಿಯನ್ನು ನಿರ್ಮಿಸಲು ಯೋಜಿಸಿ ಬೌದ್ಧ ಧರ್ಮಕ್ಕೆ ಮತಾಂತರಗೊಂಡರು. ಮತಾಂತರಗೊಂಡ ಅಂಬೇಡ್ಕರ್‌ರವರು ಸಂಭ್ರಮಿಸಿದ ರೀತಿಯಲ್ಲಿನ ಅವರು ವ್ಯಕ್ತಿಯಾಗಿರಲಿಲ್ಲ. ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿಯ ಸಂಕೋಲೆಯಿಂದ ಸಾಂಸ್ಕೃತಿಕ ಗುಲಾಮಗಿರಿಯಲ್ಲಿ ನರಳುತ್ತಿದ್ದ ಕೋಟ್ಯಾನುಕೋಟಿ ಜನರನ್ನು ಅಂತಹ ಅಸಮಾನತೆಯ ವ್ಯವಸ್ಥೆಯಿಂದ ವಿಮೋಚನೆ ಮಾಡಿದ್ದೇನೆ ಎನ್ನುವ ಸಮಷ್ಟಿ ಬಾವ ತುಂಬಿ ತುಳುಕುತ್ತಿತ್ತು. ವಿಚಾರವಾದಿಗಳು ಶ್ರೇಷ್ಠ ಚಿಂತಕರಾದ ಪ್ರೊ. ಚಂದ್ರಶೇಖರ ಪಾಟೀಲರವರು ಕನ್ನಡ ಪುಸ್ತಕ ಪ್ರಾಧಿಕಾರ ಮತ್ತು ಪ್ರೊ. ಬಿ. ಕೃಷ್ಣಪ್ಪ ಟ್ರಸ್ಟ್-ಶಿವಮೊಗ್ಗದಲ್ಲಿ ಹಮ್ಮಿಕೊಂಡ 'ಮತಾಂತರ' ಕುರಿತು ವಿಚಾರ ಸಂಕಿರಣದಲ್ಲಿ ಭಾಗವಹಿಸಿ ಟಿಪ್ಪಣಿ ಮಾಡುತ್ತ

'ಮತಾಂತರ ಎಂಬುದಕ್ಕೆ ಸಾಮಾಜಿಕ ಆರ್ಥಿಕ, ಸಾಂಸ್ಕೃತಿಕ ಸಂದರ್ಭಗಳ ಹಿನ್ನಲೆ ಇರುತ್ತದೆ. ಮೇಲು ವರ್ಗದವರು ಕೂಡ (ಉದಾರಹಣೆಗೆ ಬ್ರಾಹ್ಮಣರು, ವೀರಶೈವರು) ಹೊಸ ಆರ್ಥಿಕ ಅವಕಾಶಗಳಿಗಾಗಿ, ರಾಜಕೀಯ ಅಧಿಕಾರಕ್ಕಾಗಿ ಮತ್ತು 'ಶಿಫ್ಟ್' ಸಂಸ್ಕೃತಿಯ ಪ್ರತಿಷ್ಠೆಗಾಗಿ ಬ್ರಿಟಿಷ್ ಆಳರಸರ ಸಾನಿಧ್ಯಕ್ಕಾಗಿ ಕ್ರಿಸ್ಚಿಯನ್ ಧರ್ಮ ಸ್ವೀಕರಿಸಿದ ಪ್ರಸಂಗಗಳಿವೆ. ಆದರೆ ಇಂಡಿಯಾ ದೇಶದ ಕೆಳ ವರ್ಗದ ದಲಿತರು ಮತ್ತು ಹಿಂದುಳಿದವರು ಬೇರೆ ಬೇರೆ ಕಾಲ ಘಟ್ಟಗಳಲ್ಲಿ ಮತಾಂತರ ಹೊಂದಿದ್ದು ಬೆಳಗು ಹರಿಯುದರೊಳಗಾಗಿ ತಮ್ಮ ಬಡತನ ಹೋದಿತು, ತಮಗೂ ಅಧಿಕಾರದಲ್ಲಿ ಪಾಲು ಸಿಕ್ಕೀತು ಎಂಬ ಭ್ರಮೆಯಿಂದಲ್ಲ, ತಮ್ಮನ್ನು 'ಮನುಷ್ಯರನ್ನಾಗಿ ಪರಿಗಣಿಸದ ವೈಧಿಕ ಧರ್ಮದ ಸೆರೆ ಮನೆಗಳಿಂದ ಪರಾರಿಯಾಗಿ ಹೊರಗೆ ಪ್ರೀತಿ, ವಿಶ್ವಾಸ, ಸಹೋದರತ್ವ, ಸಮಾನತೆಗಳ ಚೂರು ಗಾಳಿಯನ್ನಾದರೂ ಕುಡಿದೇವು ಎಂಬ ಪ್ರಮಾಣಿಕ ನಂಬಿಕೆಯಿಂದ'[50], ಎಂದು ದಲಿತರ ಮತಾಂತರದ ಹಿನ್ನಲೆ ದಾಖಲಿಸುತ್ತಾರೆ. 'ಮೇಲ್ವರ್ಗಗಳ ಮತಾಂತರಕ್ಕೆ' ಹಾಗೂ ದಲಿತರು ಮತಾಂತರಗೊಳ್ಳುವ ಹಿನ್ನಲೆಗಳೇ ಬೇರೆಯಾದವು ಎಂಬ ವಿಚಾರಗಳ ಮಂಡಿಸುವ ಬೆನ್ನಲೇ ಅವರು ದಲಿತರ ಮತಾಂತರದ ಹಿನ್ನಲೆಯ ಪ್ರತಿಭಟನೆಯ ಶಕ್ತಿಯನ್ನು ವಿಶ್ಲೇಷಿಸುತ್ತಾರೆ. ಆಮಿಷಗಳಿಂದ ಅಧಿಕಾರದ ಬಲದಿಂದ ಮಾಡಿದ ಮತಾಂತರ ಸಾಧ್ಯವಾದರೆ ಮುಸ್ಲಿಂ, ಬ್ರಿಟಿಷರೇ ಈ ದೇಶವನ್ನು ಮುಸ್ಲಿಂ ರಾಷ್ಟ್ರವನ್ನಾಗಿ, ಕ್ರಿಶ್ಚಿಯನ್

ರಾಷ್ಟ್ರವನ್ನಾಗಿ ಪರಿವರ್ತಿಸಬಹುದಾಗಿತ್ತು ಎಂದು ಹೇಳುತ್ತಾರೆ. ''ಇಂಡಿಯಾ ದೇಶವನ್ನು ಮುಸ್ಲಿಂ ದೊರೆಗಳು ಐದುನೂರು ವರ್ಷ ಆಳಿದರು. ಆನಂತರ ಬಂದ ಬ್ರಿಟಿಷರು ಆಳಿದ್ದು ಮೂರುನೂರು ವರ್ಷ. ಇವರಿಬ್ಬರೂ ಮನಸ್ಸು ಮಾಡಿದ್ದರೆ ಎಂಟು ಶತಮಾನಗಳ ಬೀಸಿನಲ್ಲಿ ಇಡೀ ದೇಶವನ್ನು ಹಿಂದೂ ಅಲ್ಲದ ಬೇರೊಂದು ದೇಶವನ್ನಾಗಿ ಮಾಡಬಹುದಿತ್ತಲ್ಲವೇ'' ಹಾಗೆ ಆಗಲಿಲ್ಲ. ಆದುದರಿಂದ ಮತಾಂತರದ ಮೂಲ ಪ್ರೇರಣೆ ಹಿಂದೂ ಧರ್ಮದ ಶೋಷಣೆ ಮತ್ತು ನಿರಾಕರಣೆಗಳಲ್ಲಿಯೇ ಇದೆಯೇ ಹೊರತು, ಪರ ಧರ್ಮಗಳ ಆಮಿಷ ಅಥವಾ ಬಲಾತ್ಕಾರಗಳಲ್ಲಿ ಇಲ್ಲ''[51] ಎಂದು ಅಭಿಪ್ರಾಯ ಪಡುತ್ತಾರೆ.

ಡಾ. ಅಂಬೇಡ್ಕರ್‌ರವರು ಹಿಂದೂ ಧರ್ಮವನ್ನು ತ್ಯಜಿಸುವುದಾಗಿ ಸೂಚನೆಗಳು ಸಿಕ್ಕಾಗ, ಅವರನ್ನು ಕ್ರಿಶ್ಚಿಯನ್, ಮುಸ್ಲಿಂ, ಸಿಖ್ ಧರ್ಮಗಳ ಮುಖಂಡರು ತಮ್ಮ ತಮ್ಮ ಧರ್ಮಗಳಿಗೆ ಬರಲು ಆಹ್ವಾನಿಸಿದರು. ಅಂಬೇಡ್ಕರ್‌ರವರ ನಿಲುವು ಇಲ್ಲಿ ಸ್ಪಷ್ಟವಾಗಿತ್ತು. ಅವರಿಗೆ ಅಧಿಕಾರ, ಹಣ, ಸ್ಥಾನಮಾನ ಯಾವುದೇ ಆಮಿಷಗಳು ಇರಲಿಲ್ಲ. ಇವೆಲ್ಲ ಆಮಿಷಗಳನ್ನು ಅವರು ವ್ಯಕ್ತಿಶಃ ಅವರು ದಾಟುತ್ತಲೇ ಬಂದಿದ್ದರು. ವ್ಯಷ್ಟಿ ಪ್ರಜ್ಞೆಯ ಚಿಂತನೆ ಅವರಿಂದ ಎಂದೋ ನಶಿಸಿ ಹೋಗಿ ಸಮಷ್ಠಿ ಪ್ರಜ್ಞೆ, ಸಮಷ್ಠಿ ಕಳಕಳಿ ತುಂಬಿಕೊಂಡಿತ್ತು. ಆದ್ದರಿಂದ ಅವರ ಬೌದ್ಧ ಧರ್ಮ ಮತಾಂತರಕ್ಕೆ ಅವರ ಆಯ್ಕೆಗೆ ಬೇರೆ ಸಮರ್ಥನೆ ಅವಶ್ಯಕವಿರಲಾರದು. 'ನಾನು ಭಾರತವನ್ನು ಬೌದ್ಧಮಯ ಮಾಡುತ್ತೇನೆ' ಎಂಬ ಅವರ ಮಾತು ದಲಿತಾದಿಯಾಗಿ ಎಲ್ಲ ಭಾರತೀಯರನ್ನು ನಿಜವಾದ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಗಳ ತತ್ವಗಳ ಆಧಾರದ ಮೇಲೆ ಕೈ ಹಿಡಿದು ನಡೆಸುವುದಾಗಿತ್ತು ಎಂಬುದು ಅವರ ಮಿಷನ್ನಿನ ಪ್ರಧಾನ ಕಾಳಜಿಯಾಗಿತ್ತು ಎಂಬುದನ್ನು ಮರೆಯಬಾರದು.

ಹಿಂದೂ ಧರ್ಮದ ಚಾತುರ್ವರ್ಣ್ಯ ವ್ಯವಸ್ಥೆಯನ್ನು ನೋಡಿ ರಾಷ್ಟ್ರಕವಿ ಕುವೆಂಪು ಅವರು ಕೂಡ ಅಂಬೇಡ್ಕರ್‌ರವರ ನಿಲುವನ್ನೇ ತಳೆದರು. ಅವರು ''ಮನುಸ್ಮೃತಿಯನ್ನು ಓದಿದ ನಂತರ ನಾನು ಹಿಂದೂ ಅಲ್ಲ ಎಂದರು''. ಈ ಸಂದರ್ಭದಲ್ಲಿ ತಕ್ಷಣ ಪ್ರತಿಕ್ರಿಯಿಸಿದ ಸನಾತನ ವೈಧಿಕರು, ಹಿಂದುತ್ವ ವಾದಿಗಳು, ಹಾಗಿದ್ದಲ್ಲಿ ನೀವು ಈ ದೇಶಬಿಟ್ಟು ಹೋಗಿ'' ಎಂದು ಕೆಲವು ದಿನ ಕೂಗಾಡಿ ಸುಮ್ಮನಾದರು ಎಂದು ನ್ಯಾಯವಾದಿ ಶ್ರೀಧರ ಮೂರ್ತಿಯವರು[52], ಕುವೆಂಪು ಅವರು ಹಿಂದೂ ಧರ್ಮದ ಬಗ್ಗೆ ತಾಳಿದ ನಿಲುವನ್ನು ಚಿತ್ರಿಸುತ್ತಾರೆ.

ಹನ್ನೆರಡನೇ ಶತಮಾನದ ಸಮಾಜೋ - ಧಾರ್ಮಿಕ ಕ್ರಾಂತಿ, ಮುಂದೆ ಭಕ್ತಿ ಪಂಥದ ಸುಧಾರಣಾ ಕಾರ್ಯತಂತ್ರಗಳು, ಗಾಂಧೀಜಿಯವರಂತಹ ಹರಿಜನೋದ್ಧಾರದ ಕಾರ್ಯಗಳು ಕಾಲಘಟ್ಟಗಳಲ್ಲಿ ದಲಿತ ವಿಮೋಚನೆ ಮೇಲೆ ಪ್ರಭಾವ ಬೀರಿದವಾದರೂ, ಅವು, ಹಿಂದೂ ಧಾರ್ಮಿಕ ವ್ಯವಸ್ಥೆಯ ಕಾಂಕ್ರೀಟ ಬುನಾದಿಯ ಮೇಲೆ ನಿರ್ಮಾಣವಾದ ಜಾತಿ ವ್ಯವಸ್ಥೆಯನ್ನು ಮಾತ್ರ ವಿನಾಶಗೊಳಿಸಲು ಸಾಧ್ಯವಾಗಲಿಲ್ಲ. ದಲಿತರ ಸ್ಥಿತಿ ಹಾಗೆಯೇ ಮುಂದುವರೆಯಿತೆಂದು ಕರ್ನಾಟಕ ಹಲವಾರು ಜನ ಲೇಖಕರು ಅಭಿಪ್ರಾಯ ಪಟ್ಟಿದ್ದಾರೆ. ಆರ್.ವಿ. ಭಂಡಾರಿಯವರು, ಭಕ್ತಿ ಪಂಥದ ಕಾಲದಲ್ಲಿ ಈ ವೈಧಿಕ ಕ್ರೌರ್ಯದ ಮುಷ್ಟಿಯಿಂದ ಸಡಿಲಿಸಿಕೊಳ್ಳುವ ಕೆಲಸ ಸ್ವಲ್ಪ ಮಟ್ಟಿಗೆ ನಡೆಯಿತು. ಕನಕದಾಸನಂಥ ಕುರುಬ ವ್ಯಾಸರಾಯನ ಶಿಷ್ಯನಾಗಿ ಮುಂದೆ ಬಂದ ಎಂದು ಹೇಳುತ್ತಾ ಹಿಂದೂ ವೈಧಿಕ ವ್ಯವಸ್ಥೆ ಕನಕದಾಸರನ್ನು ಹೇಗೆ ಹೊರಗೆಯೇ ಇಟ್ಟಿತು ಎಂದು ವಿಶ್ಲೇಷಿಸುತ್ತಾರೆ. ''ಅವನು ಸಮಾಜದಲ್ಲಿ ಉನ್ನತ ಸ್ಥಾನ ಹೊಂದಿದ್ದು ಅವನ ಕಾವ್ಯದಲ್ಲಿ ಕಂಡು

ಬರುವುದಿಲ್ಲ. ಕೊನೆತನಕ ಜಾತಿಯಲ್ಲಿ ಡಾಂಬಿಕರನ್ನು ವಿಡಂಬಿಸಿದ. ಆದರೆ, ಅವನಿಗೆ ದೇವಸ್ಥಾನದ ಒಳಗೆ ಸ್ಥಾನ ಸಿಕ್ಕಲಿಲ್ಲ. ಕನಕದಾಸ ಉಡುಪಿಯ ಕೃಷ್ಣದರ್ಶನಕ್ಕೆ ಬಂದಾಗ ಕೃಷ್ಣ ಕಲ್ಲಿನ ಗೋಡೆ ಕನ್ನ ಮಾಡಿ ಖಿಡಲ್ ಎಂದು ಮುಖ ತಿರುಗಿಸಿ ಕನಕನಿಗೆ ಹೊರಗೆ ದರ್ಶನ ಕೊಟ್ಟನಂತೆ! ಈ ಕತೆಯ ಹಿಂದೆ ಇರುವ ಮರ್ಮ ತಿಳಿಯದ್ದಲ್ಲ. ಅಸ್ಪೃಶ್ಯರಲ್ಲಿಯೇ ಮುಂದೆ ಬಂದ 'ಕನಕನಿಗೆ ಕಿಟಕಿಯಿಂದ ಹೊರಗೆ ದರ್ಶನ ಮಾಡಿಸಿ' ತಾವು ಒಳಗೆ ಇದ್ದವರು ಇಲ್ಲಿಯೇ ಇರುತ್ತೇವೆ. ನೀವು ಹೊರಗೆ ನಿತ್ಕೊಂಡು ಅಲ್ಲಿಯೇ ಇರಿ, ಎಂಬ ತಾತ್ವಿಕ ನಿಲುವಿನ ಮುಖಾಂತರ ಅಸ್ಪೃಶ್ಯರನ್ನು ಹೊರಗೆ ಇಟ್ಟು ಅವರು ಕ್ರಾಂತಿ ಏಳದಂತೆ ಮಾಡಿದ ಉಪಾಯ. ಸೋತ ಜನ ಅದನ್ನೇ ನಂಬಿದರು. ಕನಕನಿಗಿಂತ ಹೆಚ್ಚಿನ ಧೈರ್ಯ ಅವರಿಗೆ ಬಂದೀತೆ? ಆತನೆ ಒಪ್ಪಿದ ಮೇಲೆ ಉಳಿದವರ ಪಾಡೇನು''[53] ಎಂದು ಯಜಮಾನ ಸಂಸ್ಕೃತಿಯು ಕೋಟ್ಯಾನು ಕೋಟಿ ದಲಿತ ಬಹುಜನರನ್ನು ಆಳಲು ಮಾಡಿದ ಹುನ್ನಾರಗಳನ್ನು ವಿಶ್ಲೇಷಿಸುತ್ತಾರೆ. ಆದರೆ, ದಲಿತರು ಇನ್ನೂ ಹಿಂದೂ ಸಮಾಜದ ದೌರ್ಜನ್ಯಗಳನ್ನು ಸಹಿಸಿಕೊಳ್ಳುತ್ತಿದ್ದಾರೆಂದು ವಿಶ್ಲೇಷಿಸುತ್ತಾರೆ.

ಯುಗ ಯುಗಗಳಿಂದ ಯಾವ ಬದಲಾವಣೆ ಬಂದರೂ ದಲಿತನ ಬದುಕಿನಲ್ಲಿ ಬದಲಾವಣೆ ಕಾಣದು. ಬಹುಶಃ ಈ ಮಧ್ಯೆ ಕೆಲವರು ಮುಸ್ಲಿಂರ ಉಚ್ಛ್ರಾಯ ಕಾಲದಲ್ಲಿ ಮತ್ತು ಬ್ರಿಟಿಷರ ಕಾಲದಲ್ಲಿ ಧರ್ಮಾಂತರ ಹೊಂದಿ (ಈ ಧರ್ಮಾಂತರಗಳನ್ನು ಹಿಂದುಗಳು ಧರ್ಮ ಭ್ರಷ್ಟತೆ ಎಂದು ವರ್ಣಿಸುತ್ತಾರೆ) ಈ ನರಕದಿಂದ ಮುಕ್ತವಾಗಿರಬಹುದು''[54] ಎಂದು ವಿಡಂಬಿಸುತ್ತ ಅವರೇ ಭಾಗ್ಯ ಶಾಲಿಗಳು ಎಂದು ಮುಸ್ಲಿಂ, ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದ ದಲಿತರ ಸ್ಥಿತಿಯ ಬಗ್ಗೆ ಹೇಳುತ್ತಾರೆ. ಅದೇ ಕಾಲಕ್ಕೆ 'ಸತ್ತ ಸಂಪ್ರದಾಯವನ್ನು ಸುಟ್ಟು ಹಾಕಿ ವೈಜ್ಞಾನಿಕವಾದ ಮತ್ತು ಮಾನವೀಯತೆಯ ಪ್ರೀತಿ ಪುರಸ್ಕಾರವಾದ ಹೊಸ ಸಂಪ್ರದಾಯವನ್ನು ಹುಟ್ಟು ಹಾಕುವ ಹೊಸ ಮನೋಭಾವವನ್ನು ತೋರಬೇಕು. ಈಗ ಈ ಮಠದವರನ್ನು ಮನ್ನಿಸುವ, ಗುರುವಿಗೆ ಗುಲಾಮನಾಗುವ ಆತ್ಮಹೀನ ನಡತೆಯನ್ನು ಧಿಕ್ಕರಿಸಿ .... ಬೆಂಕಿ ಕೆಂಡವನ್ನು ತೋರುವ ಸಂಘಟನೆಯನ್ನು ದಲಿತರು ಆರಿಸಿಕೊಳ್ಳಬೇಕು ಎಂದು ಅಭಿಪ್ರಾಯ ಪಡುತ್ತಾರೆ. ಮುಸ್ಲಿಂ, ಕ್ರೈಸ್ತ ಧರ್ಮಗಳ ಮುಂದೆ ಮಠ ಮಾನ್ಯರು ಎಲ್ಲ ಸಂಘಟನೆಗಳು ದಲಿತರ ನಿಜವಾದ ಸ್ವಾತಂತ್ರ್ಯವನ್ನು ಪುರಸ್ಕರಿಸಲಾರವು ಎಂದೇ ಅವರ ಮಾತಿನ ಮರ್ಮವಾಗಿರಬಹುದೇ? ಹೊಸ ಮನೋಭಾವದಿಂದ ಮಾನವೀಯತೆ, ಪ್ರೀತಿ ಪುರಸ್ಸರವಾದ ಹೊಸ ಸಾಂಪ್ರದಾಯ ಹುಟ್ಟು ಹಾಕಬೇಕೆಂದು ಹೇಳುವ ಅನೇಕರು ದಲಿತರೇ ನಿಮಗೆ ಅಂಬೇಡ್ಕರ್ ಈ ಎಲ್ಲ ಹಾದಿಯನ್ನು ಅನಾವರಣ ಮಾಡಿದ್ದಾರೆ. ಮಾನವೀಯ ಪ್ರೀತಿ ತುಂಬಿದ ಬುದ್ಧನ ಹಾದಿಗೆ ಅವರೇ ಅಂತಿಮವಾಗಿ ನಡೆದಿದ್ದಾರೆ. ಅವರನ್ನು ಅರಿಯಿರಿ, ಅದನ್ನು ಅರಿತು ನಡೆಯಿರಿ ಎಂದು ಹೇಳುವುದಿಲ್ಲ. ಅಂಬೇಡ್ಕರ್ ಸಾಂಸ್ಕೃತಿಕ ಪರ್ಯಾಯವೊಂದನ್ನು ರಚಿಸಿದ್ದಾರೆ. ಅಲ್ಲಿ ನಡೆದು ನೋಡಿದರೆಂದು ಆರ್.ವಿ. ಭಂಡಾರಿಯವರಾದಿಯಾಗಿ ಅನೇಕ ಕನ್ನಡ ಸಾಹಿತಿಗಳು ಹೇಳುವುದಿಲ್ಲ. ಇದಕ್ಕೆ ಹಲವಾರು ದಲಿತ ಸಾಹಿತಿಗಳೂ ಹೊರತಲ್ಲ. ಮುಂದೆ ಹೋಗಿ ಸಾಂಸ್ಕೃತಿಕ ಅನುಸಂದಾನದ ಬಗ್ಗೆ ಇವರು ಒತ್ತು ಕೊಡುವುದು. ಈ ಪ್ರಶ್ನೆಯೂ ಈ ಅಧ್ಯಯನ ಸಮೀಕ್ಷೆಯ ಒಂದು ಪ್ರಮುಖ ಅಂಶವಾಗಿದೆ. ಅಂತಿಮವಾಗಿ ಅವರು ಮತ್ತೇ ಅಂಬೇಡ್ಕರ್‌ರವರನ್ನು ಮಾರ್ಕ್ಸ ಜೊತೆ, ಗಾಂಧೀ ಜೊತೆ ವಿಮರ್ಶಿಸಿ ಬೇರೆ ಕಡೆ ದಾರಿ ತೋರಿಸುವುದೇ ಹೆಚ್ಚಾಗಿ ಕಂಡು ಬರುತ್ತದೆ. ಹೀಗೆ ದಲಿತರ ಸಾಂಸ್ಕೃತಿಕ ಬದುಕು ಬೌದ್ಧಿಕ ವಲಯದ ಚರ್ಚೆಯ ಸರಕಾಗಿ,

ಕೆಲವೊಮ್ಮೆ ಮಾರಾಟವಾಗಿ, ಕೆಲವೊಮ್ಮೆ ಚರ್ಚೆಯೇ ಬೇರೆ ಕಡೆ ಸಾಗಿದ ಉದಾಹರಣೆಗಳನ್ನು ನಾವು ನೋಡಿದ್ದೇವೆ. ಪ್ರಸ್ತುತ ಅಧ್ಯಯನ ಇಂತಹ ಪ್ರಕ್ರಿಯೆಗಳನ್ನು ಅಲ್ಲಲ್ಲಿ ನಿಕಶಕ್ಕೆ ಒಡ್ಡಲು ಪ್ರಯತ್ನಿಸಿದೆ.

ನಮ್ಮ ಸಮಕಾಲೀನ ಸಂದರ್ಭದ ಮಹತ್ವದ ಸಾಹಿತಿಗಳು, ಬಂಡಾಯ ಚಳುವಳಿಯ ನೇತಾರರಾದ ಹಿರಿಯ ಚಿಂತಕ ಬರಗೂರು ರಾಮಚಂದ್ರಪ್ಪನವರೂ ಕೂಡ ಇದಕ್ಕೆ ಹೊರತಾಗಿಲ್ಲದಿರುವುದನ್ನು ಹಿಂದೂ ಸಾಮಾಜಿಕ ವ್ಯವಸ್ಥೆ ಯಾವರೀತಿ ದಲಿತರ ಆರ್ಥಿಕ ಅಭಿವೃದ್ಧಿಯನ್ನು ಕಟ್ಟಿಹಾಕಿದೆ ಎಂಬ ಪರಿವೆ ಇಲ್ಲದವರಂತೆ ಅವರು ಗಾಂಧೀ ಮಾದರಿಯನ್ನು ಪುಷ್ಟೀಕರಿಸುತ್ತಾರೆ. ಸೂಟು ಬಿಚ್ಚಿಟ್ಟು ಅರ್ಧ ಬಟ್ಟೆ ಧರಿಸಿದ ಗಾಂಧೀಜಿಯ ಸಂತತನವನ್ನು ಕೆಣಕುತ್ತಲೇ ಇವರು ಸಂತನಂತೆ ವ್ಯಾಖ್ಯಾನಿಸುತ್ತಾರೆ. ಅಂಬೇಡ್ಕರ್‌ರವರ ಮತಾಂತರದ ಬಗ್ಗೆ ಸರಳೀಕರಿಸಿದ ಅಭಿಪ್ರಾಯ ಮಂಡಿಸುತ್ತಾರೆ.

'ಹಾಗೆ ನೋಡಿದರೆ ಅಂಬೇಡ್ಕರ್ ಅವರು ಬೌದ್ಧ ಧರ್ಮವನ್ನು ಸ್ವೀಕರಿಸಿದ್ದು ವಿರೋಧ ಹಾಗೂ ವಿಷಾದಗಳ ಕ್ರಮವೆಂದೇ ನನ್ನ ಗ್ರಹಿಕೆ', ಹಿಂದೂ ಧರ್ಮದ ಬಗ್ಗೆ ಇದ್ದ ವಿರೋಧದ ನೆಲೆಯಲ್ಲಿ ಹುಟ್ಟಿದ ಒಂದು ವಿಷಾದದ ಕ್ರಮವಾಗಿ ಅಂಬೇಡ್ಕರ್ ಬೌದ್ಧ ಮತಾವಲಂಬಿಯಾದರು ಹಿಂದೂ ಧರ್ಮದಲ್ಲಿ ಸಾಯಲಾರೆ ಎಂಬ ಮಾತನ್ನು ಉಳಿಸಿಕೊಂಡರು''[55] ಎಂದು ಹೇಳುತ್ತಾರೆ. ಆದರೆ ಅಂಬೇಡ್ಕರ್ ಬೌದ್ಧ ಧರ್ಮಕ್ಕೆ ಮತಾಂತರಗೊಳ್ಳಲು ಮಾಡಿದ ಪೂರ್ವಸಿದ್ಧತೆ, ಅವರ ದಲಿತ ವಿಮೋಚನಾ ಸೂತ್ರದ ಲೆಕ್ಕಾಚಾರ ಬರಗೂರು ಅವರ ಚಿಂತನೆಗೆ ಗ್ರಾಸವಾಗುವುದಿಲ್ಲ. ಕೇವಲ 'ಹಿಂದೂ ಧರ್ಮದಲ್ಲಿ ಸಾಯಲಾರೆ' ಎಂಬ ಮಾತನ್ನು ಉಳಿಸಿಕೊಳ್ಳಲಿಕ್ಕೆ ಅವರು ಇಂತಹ ಚಾರಿತ್ರಿಕ ಕ್ರಮ ಕೈಗೊಳ್ಳಲಿಲ್ಲ. ಅದು ಅಂಬೇಡ್ಕರ್‌ರವರು ಪ್ರಜ್ಞಾಪೂರ್ವಕವಾಗಿ ಸತತ ಅಧ್ಯಯನ ಮತ್ತು ಸಮಕಾಲೀನ ಸಂದರ್ಭದ ಅವಲೋಕನಗಳ ಆಧಾರದ ಹಿನ್ನಲೆಯಲ್ಲಿ ರೂಪುಗೊಂಡು, ಅನುಷ್ಠಾನಗೊಂಡ ಅವರ ಸಾಮಾಜಿಕ ಪರಿವರ್ತನಾ ಚಳುವಳಿಯ ಅಂತಿಮ ಹಂತದ ಕಾರ್ಯಾಚರಣೆಯಾಗಿದೆ ಎಂಬುದನ್ನು ಬರಗೂರು ಪರಿಗಣಿಸುವುದಿಲ್ಲ.

ಅವರೇ ಹೇಳುವಂತೆ, ಇದು ಅಂಬೇಡ್ಕರ್‌ರವರ ಹೋರಾಟದ ಮಾದರಿಯೇ ಅಂತಿಮ ,ಬುದ್ಧನೇ ಅಂತಿಮವೆಂಬ ಸಮರ್ಥನೆಯ ಪ್ರಶ್ನೆ ಅಲ್ಲವಿದು. ಐದುಸಾವಿರ ವರ್ಷಗಳವರೆಗಿನ ಹಿಂದೂ ಚಾತುರ್ವರ್ಣ್ಯ ವ್ಯವಸ್ಥೆ ಹಿಂಡಿ ಹಿಪ್ಪೆ ಮಾಡಿದ ಹಿಂದೂ ಧಾರ್ಮಿಕ ಅರ್ಥಶಾಸ್ತ್ರದ ಮಾದರಿಯಿಂದ ಬಿಡುಗಡೆಗೊಳಿಸಿ (Hindu Religious Economy) ಸಮಾಜವಾದಿ, ಜನತಾಂತ್ರಿಕ ಆರ್ಥಿಕ ಸುಧಾರಣೆ (Democratic and Socialistic Economic Reforms) ಯ ಯುಗದಲ್ಲಿ ಶೋಷಿತ ಜನಸಮುದಾಯಕ್ಕೆ ಮಾರ್ಗದರ್ಶನ ಮಾಡುವ ಇಂತಹ ಪ್ರಜ್ಞಾವಂತರೆನ್ನಿಸಿಕೊಂಡವರೇ, ಸಾಮಾಜಿಕ ಪರಿವರ್ತನೆಯ, ದಲಿತ ವಿಮೋಚನೆಯ ಸೂತ್ರದಲ್ಲಿ ಕನಿಷ್ಟ ನಂಬುಗೆಯನ್ನು ವ್ಯಕ್ತಪಡಿಸುವ ಬದಲು ವಿಮರ್ಶೆಗಾಗಿ ವಿಮರ್ಶೆ ಮಾಡುವ ರೀತಿಗಳನ್ನು ಕೂಡ ದಲಿತ ವಿಮೋಚನೆಯ ಹಿನ್ನಲೆಯಲ್ಲಿ ಪರಾಮರ್ಶನೆ ಮಾಡಬೇಕಾಗುತ್ತದೆ.

ಬುದ್ಧತ್ವ ಎಂದರೇನು, ನಿರ್ವಾಣದ ನಿಜವಾದ ಅರ್ಥವೇನು ? ನಮಗೆಷ್ಟು ಪ್ರಮಾಣದ 'ನಿರ್ವಾಣ' (ಅರ್ಹಂತ ಸ್ಥಿತಿ) ಬೇಕು ಎನ್ನುವ ಸಾಮೂಹಿಕ ಕಾಳಜಿಗಳು, ಇಂದಿನ ತುರ್ತು ಅವಶ್ಯಕತೆಯಾಗಿದೆ. ಆದರೆ

ಸಾಮಾನ್ಯ ಸಂಸಾರಿಕರೂ ಕೂಡ 'ಬುದ್ಧತ್ವ' ಪ್ರಾಪ್ತಿ ಮಾಡಿಕೊಳ್ಳಬಹುದು ಎಂದು ಸಾವಿರಾರು ವರ್ಷಗಳ ಹಿಂದೆಯೇ ಪ್ರಾಯೋಗಿಕವಾಗಿ ತೋರಿಸಿದ ಬೌದ್ಧೀಯತೆಯ ಮಹತ್ವವನ್ನು ನಮ್ಮ ನೇರಕ್ಕೆ ಪರಿಗಣಿಸಬಾರದಲ್ಲವೇ?

ಇಂಡಿಯಾದ ಶೂದ್ರಾತಿಶೂದ್ರ ವಿದ್ವಾಂಸರ ವಿಚಾರಧಾರೆಯೇ ಸ್ವಾತಂತ್ರ್ಯ ಬಂದು ಐದು ದಶಕಗಳು ಗತಿಸಿದರೂ ದಲಿತರು ಹಿಂದೂ ಸಾಮಾಜಿಕ ವ್ಯವಸ್ಥೆಯ ಕ್ರೌರ್ಯದಲ್ಲಿ ನಲುಗಲು, ಧಮನಿತರಾಗಲು, ಅವಮಾನಿತರಾಗಲು ಹೀಗೆ ಕಾರಣವಾಗುತ್ತದೆ. ಕಾನೂನುಗಳ ಕಟ್ಟಳೆಗಳಿದ್ದರೂ ದಲಿತರು ಇನ್ನೂ ತನಕ ಕನಿಷ್ಟ ಸ್ವಾಭಿಮಾನದ ಬದುಕ ಸಾಗಿಸಲು ಹಿನ್ನಡೆಗೆ ಕಾರಣವಾಗುತ್ತದೆ. ದೌರ್ಜನ್ಯ ಪ್ರಕರಣಗಳು ಇನ್ನೂ ಪೋಲಿಸು ಸ್ಟೇಷನ್ನಿನ ಫಲಕದಲ್ಲಿ ಹೆಚ್ಚುತ್ತಲೇ ಹೋಗಲು ಕಾರಣವಾಗುತ್ತದೆ. ಸಾಮಾಜಿಕ ಬದಲಾವಣೆಯ ಒಂದು ಮಹತ್ವದ ಸೂತ್ರವೊಂದನ್ನು ಅದರ ಸಮಕಾಲೀನ ಫಲಾನುಭವಿಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದು ಒಬ್ಬ ಸಮಾಜವಿಜ್ಞಾನಿಯ ಸಾಮಾಜಿಕ ಹೊಣೆಗಾರಿಕೆ ಆಗುತ್ತದೆ. ಆದ್ದರಿಂದ 'ಬುದ್ಧ ನಮಗೆಷ್ಟು ಬೇಕು' ಎನ್ನುವ ಸ್ತರಕ್ಕಿಂತ ಹೆಚ್ಚಾಗಿ ಪ್ರಗತಿಪರರೆನ್ನಬಹುದಾದ ಚಿಂತಕರಿಗೆ ಎಷ್ಟು ಬೇಕು ಎಂದು ಗುರುತಿಸಿಕೊಳ್ಳುವುದು ಮುಖ್ಯವಾಗುತ್ತದೆ. ಇದು ಒಂದು ರೀತಿ ಪ್ರಯಾಣಿಸಲು ಹಡಗಿನಲ್ಲಿ ಮೀಸಲಾತಿ ಟಿಕೆಟ್ಟು ಪಡೆದು, ಸಹ ಪ್ರಯಾಣಿಕರೆಲ್ಲ ಚೆನ್ನಾಗಿಲ್ಲವೆಂದು ಹಡಗಿನಲ್ಲಿಯೇ ಬಿಲಕೊರೆದು, ಸಮುದ್ರಕ್ಕೆ ಹಾರಿ, ಇಡೀ ಹಡಗು ಮುಳುಗುವುದನ್ನು ನೋಡಿ, ಮುಳುಗಿದ ಮೇಲೆ ಹಡಗಿನ ತುಂಡಾದ ಕಟ್ಟಿಗೆಯ ಪಳಿ ಮೇಲೆ ಕುಳಿತು ಮತ್ತೊಂದು ಹಡಗು ಬರುವುದನ್ನು ಕಾದುಕುಳಿತ ಬುದ್ಧಿವಂತ ಇಲಿಯ ಹಾಗೆಯೇ ಸರಿ. ಆದರೆ ಇಲ್ಲಿ ಪ್ರಶ್ನೆ ಇರುವುದು ಬುದ್ಧ, ಅಂಬೇಡ್ಕರ್ ಕಟ್ಟಿದ ಚಿಕ್ಕ ದೋಣಿಯಲ್ಲಿ, ನನಗೂ ಜಾಗೆ ಸಿಗುತ್ತದೆಯೇ ಎಂಬುದು, ದಡ ಸೇರಿದ ಯಶೋಗಾಥೆ ಹೇಳುವುದು. ಆಗ ಇವರ ವಿಮರ್ಶಾತ್ಮಕ ಮಾತುಗಳಿಗೆ ಅರ್ಥ ಸಿಕ್ಕುತ್ತದೆ. ಆವಾಗ ಇವರು ನಿಜವಾಗಿ ಸಿದ್ಧಾರ್ಥರಾಗುತ್ತಾರೆ, ಆಮೇಲೆ 'ಬುದ್ಧತ್ವ' ಕಡೆಗೆ ಪ್ರಯಾಣಿಸಬಹುದೇನೋ.

ಹಲವಾರು ಬಾರಿ, ಬುದ್ಧ ಇಂಡಿಯಾಕ್ಕೆ ತೋರಿದ ಕಲ್ಯಾಣ ರಾಜ್ಯದ (Welfare State) ಹಾದಿ, ಅಂಬೇಡ್ಕರ್‌ರವರ ರಕ್ತಪಾತರಹಿತ ಆಂದೋಲನಗಳ ಮಾದರಿಗಳು, ದಲಿತ ಸಂಸ್ಕೃತಿಯ ವಿವಿಧ ಮಜಲುಗಳು ಅಂತರ್‌ರಾಷ್ಟ್ರೀಯ ಮಾರುಕಟ್ಟೆಯಿಂದ ಹಿಡಿದು ಹಳ್ಳಿಯ ಕಾಲೇಜಿನ ಉಪನ್ಯಾಸದ ಕೊಠಡಿಯವರೆಗೂ ಶುಷ್ಕ ಪಾಂಡಿತ್ಯದ ಹಿನ್ನಲೆಯಲ್ಲಿ ವಿಶ್ಲೇಷಿಸಲಾಗುತ್ತಿದೆಯೇ ಹೊರತಾಗಿ ಅನುಭವದ ನೆಲೆಯಲ್ಲಿ ಅಲ್ಲವೆಂಬುದು ಎದ್ದು ಕಾಣುತ್ತದೆ. ಹೀಗಾಗಿಯೇ ಬರವಣಿಗೆ, ವಿಚಾರ ಮಂಥನಗಳ ಕೇಂದ್ರ ಬಿಂದುವಾಗಿರುವ ದಲಿತರು ಹೊಲಗೇರಿ, ಕೊಳೆಗೇರಿಗಳಲ್ಲಿಯೇ ಇದ್ದಾರೆ. ಅದನ್ನೇ ದಲಿತ ಅಧ್ಯಯನ ಪೀಠದ ಮುಖ್ಯಸ್ಥರಾದ ಶ್ರೀ ಮೊಗಳ್ಳಿ ಗಣೇಶರವರು ಈ ರೀತಿ ಹೇಳುತ್ತಾರೆ. ''ದಲಿತ ಸಂಸ್ಕೃತಿಯನ್ನು ಅವರ ಚಿಂತನೆಯನ್ನು ಅಂತರ್‌ರಾಷ್ಟ್ರೀಯ ಬೌದ್ಧಿಕ ಮಾರುಕಟ್ಟೆಯಿಂದ ಹಿಡಿದು ಇವತ್ತಿನ ಬಲ ಪಂಥೀಯ ವೇದಿಕೆಗಳು ಮಾರ್ಕ್ಸ್‌ವಾದಿಗಳು ಬೂರ್ಶ್ವಾಗಳು 'ವಸ್ತು ನಿಷ್ಟವಾಗಿ' ಬಂಡವಾಳವಾಗಿಸಿಕೊಳ್ಳುತ್ತವೆ''[56] ಎಂದು ಹೇಳುತ್ತಾರೆ. ಸೀಮಿತ ಪರಿಕಲ್ಪನೆಗಳ ಆಧಾರದಿಂದ ಮೂಡುವ ಇಂತಹ ಚಿಂತನೆಗಳಿಂದ ದಲಿತ ಸಮುದಾಯಗಳ ಸಮಸ್ಯೆಗಳಿಗೆ ಖಚಿತ ಪರಿಹಾರ ರೂಪಿಸುವಲ್ಲಿ ವಿಫಲತೆ ಎದುರಾಗುವುದನ್ನು ಹಾಗೂ ಸರ್ಕಾರ ದಲಿತ ಹಿಂದುಳಿದವರ ಅಭಿವೃದ್ಧಿಗೆ ರೂಪಿಸುವ ಕಾರ್ಯಕ್ರಮಗಳು ವಿಫಲತೆಯಲ್ಲಿ ಪರ್ಯಾವಸಾನವಾಗುವುದನ್ನು ಹಲವಾರು ಅಧ್ಯಯನಗಳು ತೋರಿಸಿಕೊಟ್ಟಿವೆ.

ಜಗತ್ತಿನ ಬೇರೆ ಬೇರೆ ಪ್ರದೇಶಗಳಲ್ಲಿ ಇಂದು ನಡೆದ, ನಡೆಯುತ್ತಿರುವ ಎಲ್ಲ ಹಿಂಸಾತ್ಮಕ ಚಳುವಳಿಗಳು ಒಂದಿಲ್ಲೊಂದು ರೀತಿಯಲ್ಲಿ ಆಳುವ ವರ್ಗದ (ಮೇಲ್ಜಾತಿಯ) ಕೃಪಾಪೋಷಿತ, ಸಶಸ್ತ್ರ ದಂಗೆಗಳೇ ಎಂದು ಹಲವಾರು ಸಂದರ್ಭಗಳಲ್ಲಿ ವೇದ್ಯವಾಗಿದೆ. ಹೊಟ್ಟೆಬಟ್ಟೆಗೆ ಹೋರಾಡುವ ಶೋಷಿತರು ಬಂದೂಕು ಬಾಂಬುಗಳಿಗೆ ಕೋಟ್ಯಾನುಗಟ್ಟಲೇ ಖರ್ಚು ಮಾಡಲು ಸಾಧ್ಯವೇ ? ಎಂಬ ಪ್ರಶ್ನೆಗೆ ಉತ್ತರ ಬಲ್ಲವರು ಅಂತಹ ಅಭಿಪ್ರಾಯ ತಾಳಲಾರರು. ಪ್ರಸ್ತುತ ಅಧ್ಯಯನ ಈ ಹಿನ್ನಲೆಯಲ್ಲಿಯೂ ಒಂದು ಅವಲೋಕನ ಮಾಡಿದೆ. ಅಂಬೇಡ್ಕರ್‌ರವರಿಂದ ಪ್ರಭಾವಿತರಾಗಿ ಬೌದ್ಧ ಧರ್ಮ ಸ್ವೀಕರಿಸಿ ಜೀವನ ನಡೆಸುತ್ತಿರುವವರ ವಿಚಾರಗಳು, ಸಾಂವಿಧಾನಿಕ ಪರಿಕರಗಳ ಸಾಧನಗಳಿಂದಲೇ ಇವತ್ತು ಅಂಬೇಡ್ಕರ್ ಅನುಯಾಯಿಗಳು ದಲಿತ ಬೌದ್ಧರು ತಮ್ಮ ಹಕ್ಕುಗಳನ್ನು ಸಂರಕ್ಷಿಸಿಕೊಳ್ಳಲು, ಧಕ್ಕಿಸಿಕೊಳ್ಳಲು ಸಮಾನತೆಯ ಬದುಕು ಸಾಧಿಸಲು ತೊಡಗಿರುವುದರ ಕುರಿತು ಮಾನವ ಹಕ್ಕುಗಳ ಹೋರಾಟದ ಹಿನ್ನೆಲೆಯಲ್ಲಿ ಈ ಅಧ್ಯಯನದಲ್ಲಿ ವಿಶ್ಲೇಷಿತವಾಗಿದೆ.

ದಲಿತರು ತಮ್ಮ ಹಕ್ಕುಗಳ ರಕ್ಷಣೆಗೆ, ಸಮಾನತೆಯ ಬದುಕಿಗೆ ''ಜೀವ ವಿರೋಧಿ ಮತ್ತು ಹಿಂಸಾತ್ಮಕ ನೆಲೆಯ ಹೋರಾಟ'' ಕ್ಕೆ ಹೆಜ್ಜೆ ಇಡಬೇಕಾಗಿಲ್ಲ. ಪ್ರಜಾ ಪ್ರಭುತ್ವದ ತತ್ವಗಳ ನೆಲೆಯಲ್ಲೇ ರಕ್ತಪಾತರಹಿತವಾಗಿ ಸಾಮಾಜಿಕ ಆರ್ಥಿಕ ಕ್ರಾಂತಿ ಸಾಧ್ಯ ಎಂಬುದನ್ನು ಅವರು ಬೌದ್ಧ ಧರ್ಮವನ್ನು ಅಂಬೇಡ್ಕರ್‌ರವರು ಶೋಷಿತದ ವಿಮೋಚನಾ ಪಥವನ್ನಾಗಿ ಆರಿಸಿಕೊಂಡದ್ದರ ಮಹತ್ವ ನಮ್ಮ ಅರಿವಿಗೆ ಬರುತ್ತದೆ. ಇಂದು ಭಾರತದಾದ್ಯಂತ ಇರುವ ಶೋಷಿತರಲ್ಲಿ ಹೆಚ್ಚು ಹೀನಾಯವಾಗಿ ಅಮಾನವೀಯವಾಗಿ, ನಾಯಿ ನರಿಗಳಿಗಿಂತ ಕಡೆಯಾಗಿ, ಅಗೌರವಿಸಲ್ಪಟ್ಟ ಜಾತಿ ಆಧಾರದ ಅಸಮಾನತೆಯಲ್ಲಿ ನಲುಗಿದ ಕೋಟ್ಯಾನುಕೋಟಿ ಅಸ್ಪೃಶ್ಯರು, ದಲಿತರು, ಇನ್ನೂ ಚಾತುರ್ವಣ್ಯದ ಕ್ರೌರ್ಯಕ್ಕೆ ತುತ್ತಾಗುತ್ತಿದ್ದರೂ, ಯಾರೂ ಕೋವಿ ಹಿಡಿದು ಹಿಂಸೆಗೆ ಇಳಿದು ಸಂಘರ್ಷಕ್ಕೆ ಕಾರಣವಾಗದಿರುವುದೇ ಅಂಬೇಡ್ಕರ್‌ರವರು ಈ ದೇಶಕ್ಕೆ ಮಾಡಿದ ಈ ಮಹಾತ್ಕಾರ್ಯ ಮತ್ತು ಆಧುನಿಕ ಭಾರತಕ್ಕೆ ಒಬ್ಬ ನಿಜವಾದ ರಾಷ್ಟ್ರೀಯ ನಾಯಕ ನೀಡಿದ ಮಹತ್ವದ ಕೊಡುಗೆ ಎಂದರೆ ಅತಿಶಯೋಕ್ತಿಯಾಗಲಾರದು. ಇದೇ ಹಿನ್ನಲೆಯ ಎಚ್ಚರಿಕೆಯನ್ನು ನಮ್ಮ ನಡುವಿನ ಸೂಕ್ಷ್ಮಮತಿ ರಾಜಕಾರಣಿಗಳಾದ ಶ್ರೀ ಎಂ. ವೀರಪ್ಪ ಮೊಯ್ಲಿಯವರು (1993) ನೀಡಿದ್ದಾರೆ. ಅವರು ಮುಖ್ಯ ಮಂತ್ರಿಗಳಾಗಿದ್ದಾಗ ಕರ್ನಾಟಕ ಸರ್ಕಾರ ಪ್ರಕಟಿಸಿದ ಡಾ. ಬಾಬಾಸಾಹೇಬ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು ಎರಡನೇ ಸಂಪುಟಕ್ಕೆ (ಕನ್ನಡ ಅನುವಾದ) ಮುನ್ನುಡಿ ಬರೆಯುತ್ತಾ 'ಬದುಕಿದ್ದಾಗಲೇ ಅವರಿಗೆ ಅಸ್ಪೃಶ್ಯತೆಯ ನಿರ್ಮೂಲನೆಯ ಬಗ್ಗೆ ಸಂಶಯ ತಲೆದೋರಿತು ''ಜನ ಬೌದ್ಧ ಸಂಸ್ಕೃತಿಗೆ ಶರಣಾಗದಿದ್ದರೆ, ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಾಣುತ್ತಿರುವ ಸಂಘರ್ಷಗಳು ಪೂರ್ವದಲ್ಲಿಯೂ ಪುನರಾವರ್ತನೆಯಾಗುತ್ತವೆ'' ಎಂದು ಅವರು ನಂಬಿದ್ದರು. ಅದರಂತೆ ಅವರು ತಮ್ಮ ಜೀವನದ ಕೊನೆಯ ದಿನಗಳಲ್ಲಿ ಬೌದ್ಧ ಧರ್ಮಕ್ಕೂ ಸೇರಿದರು'[57] ಎಂದು ವಿವರಿಸುತ್ತಾರೆ. ಇವತ್ತಿಗೂ ಶೋಷಿತರು ಇರುವ ಸ್ಥಿತಿ, ಸಂಘರ್ಷ, ಬೌದ್ಧ ಸಂಸ್ಕೃತಿಯ ಅಹಿಂಸಾತ್ಮಕ ಜೀವನ ಶೈಲಿ, ಕೋಮುವಾದದ ಪದರಗಳು ಇಲ್ಲದಿರುವುದು ಅಂಬೇಡ್ಕರ್‌ರವರು ಬೌದ್ಧ ಧರ್ಮಕ್ಕೆ ಸೇರಿದ ಮಹತ್ವದ ಹಿನ್ನಲೆಯಾಗಿರುವುದನ್ನು ಗುರುತಿಸಿದ್ದಾರೆ.

ಈ ಅಧ್ಯಾಯದ ಪ್ರಸ್ತಾವನೆಯಲ್ಲಿ ಹೇಳಿದಂತೆ ಭಾರತಕ್ಕೆ ಒಂದು ರಾಷ್ಟ್ರೀಯತೆ ಸ್ವರೂಪ ಹಾಗೂ ಶಕ್ತಿಯನ್ನು ತುಂಬಿ ಇನ್ನೂ ಈ ರಾಷ್ಟ್ರದ ಜನರ ಬದುಕಿನಲ್ಲಿ ಒಂದಿಲ್ಲೊಂದು ರೀತಿಯಲ್ಲಿ ಪ್ರವಹಿಸುತ್ತಿರುವ ಬೌದ್ಧ ಧರ್ಮ ಮತ್ತ ಕೋಟ್ಯಾನು ಕೋಟಿ ಶೋಷಿತರನ್ನು ಅವರ ಮಾನವ ಹಕ್ಕುಗಳ ಸಾಕ್ಷಾತ್ಕಾರಕ್ಕೆ ಒಯ್ದು ಜಾಗತಿಕ ವೇದಿಕೆಗಳಲ್ಲಿ ಭಾರತ ಎಂದೂ ಹಿನ್ನೆಡೆ ಅನುಭವಿಸದಿರಲೆಂಬುದೇ ಈ ಅಧ್ಯಯನದ ಮುಖ್ಯ ಕಾಳಜಿ ಎಂಬುದು ಪ್ರಾಮುಖ್ಯವಾಗಿದೆ.

**ದಲಿತರ ಸಾಂಸ್ಕೃತಿಕ ಸವಾಲುಗಳು :**

ಡಾ. ಅಂಬೇಡ್ಕರ್‌ರವರು ಪ್ರತಿಪಾದಿಸಿದ ಬೌದ್ಧ ಧರ್ಮದ ಸಾಂಸ್ಕೃತಿಕ ಐಡೆಂಟಿಟಿಯೇ ಇಂದು ಅಖಿಲ ಭಾರತ ಮಟ್ಟದಲ್ಲಿ ಪ್ರಧಾನವಾಗಿರುವುದನ್ನು ಹಲವಾರು ಅಧ್ಯಯನಗಳು ದಾಖಲಿಸಿರುವುದನ್ನು ಗಮನಿಸಬಹುದಾಗಿದೆ. ಕಳೆದ ಐವತ್ತು ವರ್ಷಗಳಿಂದ ದಲಿತರು ತಮಗೆ ದೊರೆತ ಶಿಕ್ಷಣ ಮತ್ತು ಪ್ರಜ್ಞೆಯಿಂದ ತಮ್ಮ ಸ್ಥಾನಮಾನದ ಬಗ್ಗೆ ಸಂವೇದನಾಶೀಲರಾಗಿರುವುದನ್ನು ಕಾಣುತ್ತೇವೆ. ದಲಿತರು ಬೌದ್ಧರಾಗುವುದರಿಂದ ಅವರಿಗೆ ದೊರೆಯುವ ಸ್ಥಾನಮಾನಗಳ ಹಿನ್ನಲೆಯಲ್ಲಿಯೇ ದಲಿತರ ಸಾಂಸ್ಕೃತಿಕ ಸವಾಲುಗಳನ್ನು ವಿಶ್ಲೇಷಿಸುವುದು ಸೂಕ್ತವೆನಿಸುತ್ತದೆ. ಮುಖ್ಯವಾಗಿ ದಲಿತರು

1. ಹಿಂದೂ ಧಾರ್ಮಿಕ ಚೌಕಟ್ಟಿನಲ್ಲಿ ಅಮಾನವೀಯವಾಗಿ ಶೋಷಿತರಾಗಿರುವುದರಿಂದ ಅವರು ಹಿಂದೂ ಧರ್ಮ ತ್ಯಜಿಸಿದೇ ಅನ್ಯ ಮಾರ್ಗವಿಲ್ಲವೆಂಬ ತಾತ್ವಿಕತೆಯು ಅಖಿಲ ಭಾರತ ಮಟ್ಟದಲ್ಲಿಂದ ಹಿಡಿದು ದಲಿತ ಚಳವಳಿಯ ಹಳ್ಳಿಯ ಯುವಕರವರೆಗೂ ಸಂದೇಶ ಮುಟ್ಟಿರುವುದರಿಂದ ದಲಿತರು ಹಿಂದೂ ಧಾರ್ಮಿಕ ವಿಧಿ ವಿಧಾನಗಳಿಂದ ದೂರು ಸರಿಯುತ್ತಿರುವುದು ಸ್ಪಷ್ಟವಾಗಿದೆ.

2. ಹೀಗೆ ಹಿಂದೂ ವ್ಯವಸ್ಥೆಯಿಂದ ದೂರ ಸರಿದ ದಲಿತರು ತಮ್ಮನ್ನು ಅಥವಾ ತಮ್ಮನ್ನು ಆದರಿಸುವ ಧಾರ್ಮಿಕ ವ್ಯವಸ್ಥೆಗೆ ಒಳಪಡಿಸಿಕೊಳ್ಳುವುದು ಅನಿವಾರ್ಯವಾಗಿರುವ ಕಾಲ ಘಟ್ಟವನ್ನು ತಲುಪಿರುವಂತದ್ದು ಕಂಡು ಬರುತ್ತಿದೆ.

3. ಡಾ. ಅಂಬೇಡ್ಕರ್‌ರವರು ಪ್ರತಿಪಾದಿಸಿದಂತೆ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿ ಬೌದ್ಧರಾಗಿ ಜೀವನ ಶೈಲಿ ರೂಪಿಸಿಕೊಳ್ಳುವಲ್ಲಿನ ಅಡಚಣೆಗಳು. ಉದಾ : ವ್ಯಾಪಕವಾಗಿ ಬೌದ್ಧ ವಿಹಾರಗಳಿಲ್ಲದಿರುವುದು, ಮಾರ್ಗದರ್ಶನಕ್ಕೆ ಸಾಕಷ್ಟು ಸಂಖ್ಯೆಯಲ್ಲಿ ಬಿಕ್ಕುಗಳು ಇಲ್ಲದಿರುವುದು, ಮತಾಂತರ ಹೊಂದಿದರೆ ಮೀಸಲಾತಿ ಸೌಲಭ್ಯ ಪಡೆಯಲು ಅಡಚಣೆ ಉಂಟಾಗುತ್ತದೆ ಎಂಬ ತಪ್ಪು ಗ್ರಹಿಕೆಗಳು ಇತ್ಯಾದಿ.

4. ಕೋಮುವಾದಿ ಶಕ್ತಿಗಳು ರಾಜಕೀಯ ಅಧಿಕಾರ ಹಿಡಿದು ಅದನ್ನು ಬಳಸಿ ದಲಿತರು ತಮ್ಮ ಮಾನವ ಹಕ್ಕುಗಳಿಂದ ವಂಚಿತರಾಗುವಂತೆ ಮಾಡುವ ಹುನ್ನಾರಗಳು ಕೂಡ ದಲಿತರಿಗೆ ಸವಾಲಾಗಿರುವುದು.

5. ಬೌದ್ಧ ಧಮ್ಮವನ್ನು ಹೊರತುಪಡಿಸಿ ಬೇರೆ ಧರ್ಮಗಳಿಗೆ ಮತಾಂತರ ಹೊಂದಿದರೆ ಅಲ್ಲಿ ಸಿಗುವ ಸ್ಥಾನಮಾನದ ವಿಮರ್ಶೆ, ಅಭಿವೃದ್ಧಿ ಹೊಂದಲು ಇರುವ ಆತಂಕಗಳು ಅಂತಹ ಯಶಸ್ವಿ ಮಾದರಿ ಸಿಗದೇ ಇರುವ ಸಂದಿಗ್ಧತೆಗಳು.

6. ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದರೆ ಮೀಸಲಾತಿ ಸೌಲಭ್ಯಗಳು ಸಿಗುವುದಿಲ್ಲವೆಂಬ ತಪ್ಪು ಗ್ರಹಿಕೆಯ ಹಿನ್ನೆಲೆಯಲ್ಲಿ ಅಂಬೇಡ್ಕರ್ ಮಾದರಿಯ ಧಾರ್ಮಿಕ, ಸಾಂಸ್ಕೃತಿಕ ವಿಮೋಚನಾ ಮಾದರಿಗೆ ಹಿನ್ನಡೆಯಾದ ಅಂಶಗಳು.

7. ಅಂಬೇಡ್ಕರ್‌ರವರು ಪ್ರತಿಪಾದಿಸಿದ ಧಾರ್ಮಿಕ - ಸಾಂಸ್ಕೃತಿಕ ಸ್ವಾವಲಂಬನೆ ಸಾಧಿಸಲು ಇರುವ ಅಡತಡೆಗಳು.

8. 'ಮತಾಂತರ ನಿಷೇಧಿಸುವ ಪ್ರಯತ್ನಗಳು ಮತ್ತು ಧಾರ್ಮಿಕ ನಂಬಿಕೆಯ (Right to Consciene) ಸ್ವಾತಂತ್ರ್ಯಕ್ಕೆ ಕೋಮುವಾದಿಗಳಿಂದ ಬೆದರಿಕೆಗಳು.

ಹೀಗೆ ಹತ್ತು ಹಲವಾರು ಸಾಂಸ್ಕೃತಿಕ ಸವಾಲುಗಳ ಹಿನ್ನೆಲೆಯಲ್ಲಿ ಅಂಬೇಡ್ಕರ್‌ರವರ ಮತಾಂತರ ಚಳುವಳಿಯಲ್ಲಿ ದಲಿತರ ಸಾಂಸ್ಕೃತಿಕ ಐಡೆಂಟಿಟಿಯ ಪ್ರಶ್ನೆಗಳನ್ನು ವಿಶ್ಲೇಷಣೆ ಮಾಡುವ ಅಗತ್ಯವಿದೆ.

ದಲಿತರು, ತಮ್ಮ ಸಾಂಸ್ಕೃತಿಕ ಐಡೆಂಟಿಟಿಯನ್ನು ಸಾಧಿಸದಿದ್ದರೆ, ರಾಷ್ಟ್ರೀಯ ಮುಖ್ಯ ವಾಹಿನಿಯಲ್ಲಿ ಸೇರಿಕೊಳ್ಳದೇ ಹೋದರೆ, ಈ ದೇಶಕ್ಕೇನೆ ದೊಡ್ಡ ಗಂಡಾಂತರವಿದೆ ಎನ್ನುವುದನ್ನು ದಲಿತ ಬುದ್ಧಿ ಜೀವಿಗಳು ಪ್ರತಿಪಾದಿಸುತ್ತ ಬಂದಿದ್ದಾರೆ. 'ಧರ್ಮವನ್ನು ತಮ್ಮ ಖಾಸಗಿ ಆಸ್ತಿ' ಎಂಬಂತೆ ಶೋಷಣೆಯ ಸಾಧನವಾಗಿ ಬಳಸಿದ್ದನ್ನು ಸ್ವತಃ ಅಂಬೇಡ್ಕರ್‌ರವರೇ ಪ್ರಶ್ನಿಸುತ್ತಾ ಬಂದು 'ಸ್ವಾತಂತ್ರ್ಯ ಸಮಾನತೆ ಮತ್ತು ಭ್ರಾತೃತ್ವಗಳ ತಳಹದಿಯ ಮೇಲೆ' ಉತ್ತಮ ಜೀವನ ಮಾರ್ಗಕ್ಕೆ ಕಾರಣವಾಗುವ ಒಂದು ವಿಶಿಷ್ಟ ಸ್ಥಾನದ ಗುರುತಿನ (Identity)[58] ಹುಡುಕಾಟದಲ್ಲಿದ್ದುದನ್ನು ಕಾಣುತ್ತೇವೆ. ಪುರೋಹಿತಶಾಹಿ ಪ್ರಣೀತ ಹಿಂದೂ ವ್ಯವಸ್ಥೆಯನ್ನು ಮೂಢನಂಬಿಕೆಗಳ ಆಗರವಾದ ಹಿಂದೂ ಧರ್ಮವನ್ನು ತ್ಯಜಿಸುವ ಅನಿವಾರ್ಯತೆ ಅವರ ಪಾಶ್ಚಾತ್ಯ ಶಿಕ್ಷಣದ ಪ್ರಭಾವ ಮತ್ತು ಪ್ರಖರ ವೈಚಾರಿಕತೆಯ ಪಾತಳಿಯಲ್ಲಿ ರೂಪುಗೊಂಡಿರುವುದನ್ನು ನೋಡುತ್ತೇವೆ. ಅಂಬೇಡ್ಕರ್‌ರವರಿಗೆ ಧರ್ಮವೆಂಬುದು ಪರಿವರ್ತನೆಯ ಸಾಧನ, ಮನುಷ್ಯ ತನ್ನ ಸಾಮರ್ಥ್ಯಗಳನ್ನು ಎತ್ತರಿಸಿಕೊಂಡು ತನ್ನ ಮತ್ತು ತನ್ನ ಪರಿಸರದಲ್ಲಿ ಔನತ್ಯ ಸಾಧಿಸಲು ನೆರವಾಗುವ, ಸಾಮಾಜಿಕ ಪರಿವರ್ತನೆ ತರುವ ಕಾರ್ಯತಂತ್ರ. ಅವರಿಗೆ 'ಧರ್ಮವೆಂಬುದು ಒಂದು ವ್ಯಕ್ತಿಯ ಖಾಸಗಿ ವಿಷಯವಾಗಿರಲಿಲ್ಲ'[59]

ಆದ್ದರಿಂದಲೇ ಅವರು ಚಲನಶೀಲವಾದ ಪರಿವರ್ತನ ಶೀಲವಾದ 'ವ್ಯಕ್ತಿ ಔನತ್ಯದ ಮೂಲಕ ಸಮುದಾಯ ಔನತ್ಯ ಸಾಧ್ಯ' ಎಂಬ ದೃಷ್ಟಿಕೋನ ಹೊಂದಿ ಆ ರೀತಿಯ ಸಾಧ್ಯತೆ ಬೌದ್ಧ ಧರ್ಮದಿಂದ ಮಾತ್ರ ಸಾಧ್ಯವೆಂಬ ಅಚಲ ನಂಬಿಕೆಯಿಂದ ಬೌದ್ಧ ಧಮ್ಮವನ್ನು ಒಪ್ಪಿಕೊಂಡಿರುವುದು ಸ್ಪಷ್ಟವಾಗಿದೆ. ಇಲ್ಲಿ ಹಿಂದೂ, ಕ್ರೈಸ್ತ ಇಸ್ಲಾಂ ಧರ್ಮಗಳಂತೆ ಮಧ್ಯಸ್ಥರುಗಳ (Agents) ಹಾವಳಿ ಇಲ್ಲದಿರುವುದನ್ನು ಪ್ರತಿಯೊಬ್ಬರು

'ಬುದ್ಧತ್ವ' ಪ್ರಾಪ್ತಿ ಮಾಡಿಕೊಳ್ಳುವ ಮುಕ್ತತೆಯನ್ನು ಪ್ರಜ್ಞೆಗೆ ಯಾವಾಗಲೂ ಜಯವಾಗುತ್ತದೆಂಬ ವಿಶ್ವಾಸವನ್ನು ಹೊಂದಿ ದಲಿತರ ಸಾಂಸ್ಕೃತಿಕ ವಿಮೋಚನೆಯನ್ನು ಬೌದ್ಧ ಧರ್ಮದ ಮೂಲಕ ಸಾಧಿಸಲು ತೀರ್ಮಾನಿಸಿದರು. ಇದನ್ನೇ ಬಿ. ಬಸವಲಿಂಗಪ್ಪನವರು ಪ್ರತಿಪಾದಿಸುತ್ತಾ 'ಬುದ್ಧ ಧಮ್ಮ ಹೇಗೆ ಸದ್ಧಮ್ಮವಾಗಿದೆ ಅದರ ಆಚರಣೆ ಮತ್ತು ತಿಳುವಳಿಕೆಯಲ್ಲಿ ಮೂಲಭೂತವಾದವಿಲ್ಲ ಮತ್ತು ಪ್ರಶ್ನಾತೀತ ಸಿದ್ಧಾಂತವಿಲ್ಲ, ವ್ಯಕ್ತಿಯ ಹುಟ್ಟಿನೊಡನೆ ಬರುವ ಅಸಮಾನತೆಯನ್ನು ಗುರುತಿಸುವುದಿಲ್ಲ, ಸಮಾನತೆಯನ್ನು ಎತ್ತಿ ಹಿಡಿಯುವ ಧಮ್ಮ'[60] ಎಂದು ಅಭಿಪ್ರಾಯ ಪಡುತ್ತಾರೆ. ಈ ಪ್ರಕ್ರಿಯೆಗೆ ಒಂದು ಸ್ಪಷ್ಟ ರೂಪ ಕೊಡುವಂತೆ ಪ್ರಸ್ತುತ ಕಾಲಘಟ್ಟದಲ್ಲಿ ಕರ್ನಾಟಕದ ಮಟ್ಟಿಗೆ ದಲಿತ ಚಳವಳಿಯ ಎಲ್ಲ ಶಕ್ತಿಗಳು ದಲಿತರ, ಸಾಂಸ್ಕೃತಿಕ ಪೂರ್ಣ ಪ್ರಮಾಣದ ವಿಮೋಚನೆಯ ಸಾಧನವಾಗಿ ಬೌದ್ಧ ಧರ್ಮದ ಅನಿವಾರ್ಯತೆಯನ್ನು ಒಪ್ಪಿಕೊಂಡು ಡಾ. ಅಂಬೇಡ್ಕರ್‌ರವರ ದಲಿತ ವಿಮೋಚನಾ ಕಾರ್ಯತಂತ್ರದ ಮುಂದುವರಿಕೆಯಾಗಿ ಬೃಹತ್ ಪ್ರಮಾಣದಲ್ಲಿ ಬೌದ್ಧ ದೀಕ್ಷಾ ಕಾರ್ಯಕ್ರಮಗಳನ್ನು, ಬೌದ್ಧ ಧಮ್ಮ ಪ್ರಚಾರ ಕಾರ್ಯವನ್ನು ವ್ಯಾಪಕವಾಗಿ ಹಮ್ಮಿಕೊಳ್ಳುತ್ತಿರುವುದು ಚಾರಿತ್ರಿಕ ಪ್ರಯತ್ನಗಳಾಗಿವೆ. ಅಧ್ಯಯನದ ತಾತ್ವಿಕ ನೆಲೆಗಟ್ಟುಗಳಲ್ಲಿ ವಿಶ್ಲೇಷಿಸಿದಂತೆ ದಲಿತ ಬೌದ್ಧರ ಸಾಂಸ್ಕೃತಿಕ ಪ್ರಶ್ನೆಗಳಿಗೆ, ಒಟ್ಟು ದಲಿತರ ಮಾನವ ಹಕ್ಕುಗಳ ಸಾಧನೆಗೆ ಬೌದ್ಧ ಧಮ್ಮ ಒಂದು ಸಮರ್ಥ ಐಡೆಂಟಿಟಿಯಾಗಿ ಹೊರಹೊಮ್ಮಿದೆ. ಈ ಹಿಂದೆ ಪ್ರಸ್ತುತ ಅಧ್ಯಾಯದ ಮೊದಲ ಭಾಗದಲ್ಲಿ ಹೇಳಿದಂತೆ ಬೌದ್ಧ ಧಮ್ಮ ಅಂಬೇಡ್ಕರ್‌ರವರು ಅಸಂಖ್ಯಾತ ಶೋಷಿತ ಸಮುದಾಯಗಳಿಗೆ ದಕ್ಕಿಸಿದ ಅವರ ವಿಮೋಚನೆಯ 'ವೀಸಾ' ಆಗಿ ಮಾರ್ಪಟ್ಟಿರುವುದನ್ನು ಅಲ್ಲಗಳೆಯಲಾಗದು.



## ಸಂದರ್ಭಸೂಚಿ ಹಾಗೂ ಟಿಪ್ಪಣಿಗಳು


1. Ahir. D.C., 1968 : Buddhism and Ambedkar, Ajay Prahagan, New Delhi, P-185.
2. Ibid : p-110.
3. Dhananjay Keer, 1954 : Dr. Ambedkar Life and Mission, Popular Prakashan, Bombay, 1977, p.
4. ಶಿವರುದ್ರ ಕಲ್ಲೋಳಿಕರ, ವೈ.ಬಿ. ಹಿಮ್ಮಡಿ (ಸಂ), 2002 : "ಸ್ವಾಭಿಮಾನ ಶಿಲ್ಪಿ" (ಬಿ. ಬಸವಲಿಂಗಪ್ಪ ಸ್ಮರಣ ಸಂಚಿಕೆಯಲ್ಲಿ ಡಾ. ಜಗದೀಶ ಕಿವುಡನವರ ಇವರ ಲೇಖನ, "ಅಂಬೇಡ್ಕರ ಮತ್ತು ದಲಿತ ಚಳುವಳಿ" ಬಿ. ಬಸವಲಿಂಗಪ್ಪನವರ ಮೂರ್ತಿ ಪ್ರತಿಷ್ಠಾಪನಾ ಸಮಿತಿ, ಹುಬ್ಬಳ್ಳಿ-ಧಾರವಾಡ, ಮಹಾನಗರ ಪಾಲಿಕೆ, ಹುಬ್ಬಳ್ಳಿ, ಪುಟ - 73.
5. Ambedkar B.R., 1990 : Waiting for AVisa, Siddharth Publications, Bombay, P.21.
6. ಅದೇ : ಅದೇ ಪುಟ ;
7. ಅದೇ : ಪುಟ ; 23.
8. ಅದೇ : ಪುಟ ; 24.
9. ಅದೇ : ಪುಟ ; 1.
10. K.B. Alias Ghanashyam Talwatkar : Chairman, Peoples Education Society, Bombay, March 19, 1990, 63rd Anniversery of Mahad Choudar Tank Satyagrah, reads, "In the last phase of his movement Dr. Ambedkar's great conversion to Buddhism ushered in an era of new social order based on justice, liberty, equality end fraternity. This turned out to be the "Visa" as intended by Dr. Ambedkar for which millions of suffering masses were writing for !" in "Waiting for A Visa", Reminiscences, Siddharth Publicaitons, Bombay, p-2.
11. Ahir D.C., 1998 : Buddhism, 50 years of Independence : 1947-97, Status Growth and Development, B.R. Publishing Corporation Delhi, p-111.

12. Wilkinson T.S. & Thomas M.M. (ed), 1972 : Ambedkar and the Neo-Buddhist Movement: The Christian Institute for the study of Religion and Society, Bangalore, The Christian literature Society, Madras. p-22-23.

13. Aloysius G., 1998 : Religion as Emancipatory Identity, A Buddhist movement among the Tamils under colonialism New Age International Pvt., Ltd., Bangalore, P-230-232.

14. ಅದೇ : ಪುಟ ; 232.

15. ಕರ್ನಾಟಕ ಸರ್ಕಾರ, 1990 : ಡಾ. ಬಾಬಾಸಾಹೇಬ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಸಂಪುಟ-1, ಪುಟ 105.

16. ಅದೇ : ಪುಟ ; 108

17. ಅದೇ : ಪುಟ ; 45

18. ಅದೇ : ಪುಟ ; 46

19. ಅದೇ : ಪುಟ ; 49

20. ಚಂದ್ರಶೇಖರ. ಎಸ್., 2002 : ಆಧುನಿಕ ಕರ್ನಾಟಕದ ಆಂದೋಲನಗಳು, ನಮ್ಮ ಪ್ರಕಾಶನ ಬಳಿಗೆರೆ, ಪುಟ ; 86.

21. ಅದೇ : ಪುಟ ; 86

22. Meera Nanda, 2004 : Prophets Facing Backward Permanent Black, Delhi, P-192.

23. ಅದೇ : ಪುಟ ; 192

23.(ಎ) ರಾಜಶೇಖರಯ್ಯ ಎ.ಎಂ., (ಸಂ), 1998 : ಡಾ. ಬಾಬಾಸಾಹೇಬ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ : 7, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಕರ್ನಾಟಕ ಸರ್ಕಾರ, ಬೆಂಗಳೂರು, ಪುಟ : 438.

24. Aloysius G. 1998 : ಅದೇ ಪುಟ ; 232.

25. Wilkinson T.S. & Thomas M. M. (ed), 1972 : ಅದೇ ಪುಟ ; 65.

| | | | |
|---|---|---|---|
| 26. | Ahir D.C., 1998 | : | ಅದೇ ಪುಟ; 112 |
| 27. | ಅದೇ | : | ಅದೇ ಪುಟ. |
| 28. | ಅದೇ | : | |
| 29. | Rodrigues Valerian, 2002 | : | Essential Writings of B.R. Ambedkar, Oxford University Press, New Delhi, p-559. |
| 30. | Jayashree B. Gokhale, 1986 | : | "The Sociological Effects of Ideological Change : The Buddhist Conversion of Maharashtrian Untouchables" in "Journal of Asian Studies" VOL. XLV. No. 2, University of Pensylvania, p.280. |
| 31. | ಅದೇ | : | ಪುಟ : 281. |
| 32. | Ambedkar B.R., 1957 | : | Buddha and his Dhamma. Siddharth College, Publication : I, 1957, Bombay, (Reprinted by the Education Department, Govt. of Maharashtra, Dr. Babasaheb Ambedkar writings and speeches, 1992) |
| 33. | Vasant Moon (ed) | : | Dr. Babasaheb Ambedkar writings and speeches, Grammer and Dictionary of Pali language, and iii) Bouddha Pooja Path, Vol.16, Education Department Govt. of Maharashtra 1998, Mumbai, p.726-743. |

24-02-1956 ರಂದು ಅಂದರೆ ಡಾ. ಅಂಬೇಡ್ಕರ್‌ರವರು ಬೌದ್ಧ ಧರ್ಮಕ್ಕೆ ಮತಾಂತರ ಹೊಂದುವುದಕ್ಕಿಂತ ಪೂರ್ವದಲ್ಲಿಯೇ ಪುಣೆಯ 'ಭಾರತೀಯ ಬೌದ್ಧ ಜನ ಸಮಿತಿ' ಯ ವತಿಯಿಂದ 'ಬೌದ್ಧ ಪೂಜಾ ಪಾಠ' ಈ ಕಿರು ಕೈಪಿಡಿಯನ್ನು ಪ್ರಕಟಿಸಲಾಗಿದೆ.

| | | | |
|---|---|---|---|
| 34. | ನಂದನ ವೈ. ಬಿ., 2002 | : | ನಾವೇಕೆ ಬೌದ್ಧರಾಗಬೇಕು !!!, ಬುದ್ಧ ಜ್ಯೋತಿ ಪ್ರಕಾಶನ, ನೆರಗಾಯತನಹಳ್ಳಿ, ಮೈಸೂರು ಜಿಲ್ಲೆ ಪುಟ : 114 |
| 35. | Ahir D.C., 1998 | : | ಅದೇ, ಪುಟ; 115 |

| | | | |
|---|---|---|---|
| 36. | Hari Narake and Others(ed) | : | Dr. Babasaheb Ambedkar writings and speeches, Vol. 17, Part three, Govt. of Maharashtra, Mumbai, 2003, p-95. |
| 37. | ಅದೇ | : | ಪುಟ ; 96. |
| 38. | ಅದೇ | : | ಪುಟ ; 97, (News item appeared in the Vividha Vritta ; 3.11.1935) |
| 39. | ಅಗ್ರಹಾರ ಕೃಷ್ಣಮೂರ್ತಿ (ಸಂ) | : | ಡಾ. ಡಿ.ಆರ್. ನಾಗರಾಜ್, ಸಂಸ್ಕೃತಿ ಕಥನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2002, ಪುಟ ; 186. |
| 40. | ಅದೇ | : | ಪುಟ ; 194. |
| 41. | ಅದೇ | : | ಪುಟ ; 187. |
| 42. | ನಾಡಕರ್ಣಿ ಎಂ.ಬಿ., 2004 | : | 'ಜಾತಿ ಪದ್ಧತಿಯು ಹಿಂದೂ ಧರ್ಮದ ಸ್ವಭಾವ ಜನ್ಯ ಭಾಗವೇ?' ಹೊಸತು ಜನೇವರಿ, 2004, ಪುಟ ; 60. |
| 43. | ಅದೇ | : | ಪುಟ ; 61. |
| 44. | ಸರ್ದೇಸಾಯಿ ಎಸ್.ಜಿ., 2004 | : | 'ಹಿಂದೂತ್ವದ ಕೆಲವು ವಿ (ಶಿಷ್ಟ) ಚಿತ್ರ ಲಕ್ಷಣಗಳು', ಹೊಸತು ಜನೇವರಿ, 2004, ಪುಟ-74. |
| 45. | ಅದೇ | : | ಪುಟ ; 74. |
| 46. | ಆರ್. ವಿ. ಭಂಡಾರಿ, 2003 | : | 'ಹಿಂದೂ ಸಂಪ್ರದಾಯದಲ್ಲಿ ದಲಿತರು' ವರ್ಣದಿಂದ ವರ್ಗದ ಕಡೆಗೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ ; 62. |
| 47. | ಅದೇ | : | ಪುಟ ; 62. |
| 48. | ರಹಮತ್ ತರೀಕೆರೆ, 1993 | : | ಪ್ರತಿ ಸಂಸ್ಕೃತಿ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ಪುಟ ; 7. |
| 49. | ರಹಮತ್ ತರೀಕೆರೆ (ಸಂ) | : | 'ಧರ್ಮ', ಕನ್ನಡ ವಿಶ್ವವಿದ್ಯಾಲಯ, ವಿಶ್ವ ಕೋಶ, 3 ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ, 2000, ಪುಟ ; 352. |
| 50. | ಚಂದ್ರಶೇಖರ ಪಾಟೀಲ, 1999 | : | 'ಮತಾಂತರ ಮತ್ತು ಮೇರಾ ಭಾರತ ಮಹಾನ್' ಸಂಕ್ರಮಣ, ಸಂಪುಟ 34, ಸಂಚಿಕೆ 6, ಪುಟ ;6. |

| | | | |
|---|---|---|---|
| 51. | ಅದೇ | : | ಪುಟ ; 8. |
| 52. | ಶ್ರೀಧರಮೂರ್ತಿ ಪಿ.ಎಸ್., 2003 | : | 'ಹಿಂದೂ ಎಂಬುವನು ಯಾರು?', ಸಂಕ್ರಮಣ ಸಂಪುಟ 38, ಸಂಚಿಕೆ 01, ಸಂಕ್ರಮಣ ಪ್ರಕಾಶನ, ಬೆಂಗಳೂರು, ಪುಟ ; 88. |
| 53. | ಭಂಡಾರಿ ಆರ್. ವ್ಹಿ., 2003 | : | ಅದೇ, ಪುಟ 63-64. |
| 54. | ಅದೇ | : | ಪುಟ 65. |
| 55. | ಬರಗೂರು ರಾಮಚಂದ್ರಪ್ಪ, 2001 | : | 'ಬುದ್ಧ ನಮಗೆಷ್ಟು ಬೇಕು', ಸಂಸ್ಕೃತಿ: ಶ್ರಮ ಮತ್ತು ಸೃಜನ ಶೀಲತೆ, ಅಂಕಿನ ಪ್ರಕಾಶನ, ಬೆಂಗಳೂರು, ಪುಟ; 557. |
| 56. | ಮೊಗಳ್ಳಿ ಗಣೇಶ್ (ಸಂ), 2002 | : | ದಲಿತ ಚಿಂತನೆ, ದಲಿತ ಅಧ್ಯಯನ ಪೀಠ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ : xvi. |
| 57. | ಕರ್ನಾಟಕ ಸರ್ಕಾರ, 1993 | : | ಡಾ. ಬಾಬಾಸಾಹೇಬ ಅಂಬೇಡ್ಕರ್ ಬರಹಗಳು ಮತ್ತು ಭಾಷಣಗಳು, ಸಂಪುಟ-2, ಭಾಗ-2, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ಪುಟ ; 3. |
| 58. | Rodrigues Valerian, 2002 | : | ಅದೇ, ಪುಟ ; 39. |
| 59. | ಅದೇ | : | ಅದೇ ಪುಟ. |
| 60. | ಬಸವಲಿಂಗಪ್ಪ ಬಿ., 1990 | : | ಬುದ್ಧಮಾರ್ಗ, ಡಾ. ಅಂಬೇಡ್ಕರ್‌ರವರ ಹೆಜ್ಜೆ ಗುರುತಿನಲ್ಲಿ ಕರ್ನಾಟಕ ಬುದ್ಧ ಧಮ್ಮ ಸಮಿತಿ, ಬೆಂಗಳೂರು, ಪುಟ ; 4. |





## ಅಧ್ಯಾಯ-3

# ಕರ್ನಾಟಕದಲ್ಲಿ ಬೌದ್ಧ ಧರ್ಮದ ಪ್ರಸಾರ

3.1. ಅಂಬೇಡ್ಕರ್‌ರವರ ಪೂರ್ವದಲ್ಲಿ ಕರ್ನಾಟಕದಲ್ಲಿ ಬೌದ್ಧ ಧರ್ಮ ಮತ್ತು ದಲಿತರು.

3.2. ಅನ್ಯ ರಾಷ್ಟ್ರಗಳಿಂದ ಕರ್ನಾಟಕಕ್ಕೆ ಆಗಮಿಸಿ ಬೌದ್ಧ ಧರ್ಮ ಪ್ರಸಾರ ಮಾಡಿದ ಬಿಕ್ಕುಗಳು.

## ಅಧ್ಯಾಯ - 3

# ಕರ್ನಾಟಕದಲ್ಲಿ ಬೌದ್ಧ ಧರ್ಮದ ಪ್ರಸಾರ

### 3.1. ಅಂಬೇಡ್ಕರ್‌ರವರ ಪೂರ್ವದಲ್ಲಿ ಕರ್ನಾಟಕದಲ್ಲಿ ಬೌದ್ಧ ಧರ್ಮ ಮತ್ತು ದಲಿತರು :

ಕರ್ನಾಟಕದಲ್ಲಿ ಅಂಬೇಡ್ಕರ್‌ರವರು ಬೌದ್ಧ ಧರ್ಮಕ್ಕೆ ಮತಾಂತರಗೊಳ್ಳುವ ಪೂರ್ವದಲ್ಲಿಯೇ ಬೌದ್ಧ ಧರ್ಮದ ಚಟುವಟಿಕೆಗಳು ಪ್ರಾರಂಭವಾಗಿದ್ದವು. ದಲಿತ ಸಮುದಾಯದಲ್ಲಿ ಅದರಲ್ಲೂ ಮುಖ್ಯವಾಗಿ ಕೆ.ಜಿ.ಎಫ್. ಪ್ರದೇಶಗಳಲ್ಲಿ ವಾಸವಾಗಿದ್ದ ತಮಿಳು ಭಾಷಿಕ ದಲಿತರು, ಗಣಿ ಕಾರ್ಖಾನೆಗಳಲ್ಲಿ ಕಾರ್ಮಿಕರಾಗಿದ್ದ ಹಲವಾರು ದಲಿತ ಹಿಂದುಳಿದ ವರ್ಗದ ಜನರು ಬೌದ್ಧ ಧರ್ಮದ ತತ್ವಗಳಿಗೆ ಆಕರ್ಷಿತರಾಗಿರುವುದು ಕಂಡು ಬಂದಿದೆ. ಈ ಜನರು ಮೊದಲು ಬೇರೆ ಬೇರೆಯಾಗಿ ಧರ್ಮೀಯ ಆಚರಣೆಗಳನ್ನು ಪಾಲಿಸುತ್ತಿದ್ದರೂ ತಮಿಳುನಾಡಿನ ವಿಚಾರವಾದಿ, ಪ್ರಾಚೀನ ತಮಿಳು ಸಾಹಿತ್ಯ, ಬೌದ್ಧ ಸಾಹಿತ್ಯದ ಚಾರಿತ್ರಿಕ ಇಂತಹ ಚಾರಿತ್ರಿಕ ಪ್ರೇರಣೆಗಳಿಂದ ವಿಶೇಷವಾಗಿ ಪಂಡಿತ ಅಯೋಥಿದಾಸರಂತಹ ಬೌದ್ಧ ಚಿಂತಕರ ವಿಚಾರಗಳಿಂದ ಪ್ರಭಾವಿತರಾಗಿ ಬೌದ್ಧ ಮತೀಯರಾದರು. ಮದ್ರಾಸಿನ ರೀತಿಯಲ್ಲಿಯೇ ಎಂ. ವೈ. ಮುರುಗೇಸಂ (ಅನುಬಂಧ-1, ಚಿತ್ರ : 8 ನೋಡಿ) 1907 ರಲ್ಲಿ ದಕ್ಷಿಣ ಭಾರತ ಬೌದ್ಧ ಸಂಘಟನೆ (The South Indian Buddhist Association) ಪ್ರಾರಂಭಿಸಿದರು.[1] ಸಂಘದ ಸಂವಿಧಾನ ಮತ್ತು ರಚನೆಯನ್ನು ವಿಶ್ಲೇಷಿಸಿದರೆ ಈ ಸಂಘದ ಪ್ರಾರಂಭದ ಉದ್ದೇಶ ತಿಳಿದು ಬರುತ್ತದೆ. ಬೌದ್ಧ ಧರ್ಮ ಪ್ರಸಾರವೇ ಈ ಸಂಘವನ್ನು ಪ್ರಾರಂಭಿಸಿದ ಮುಖ್ಯ ಉದ್ದೇಶವೆಂಬುದು ಗೊತ್ತಾಗುತ್ತದೆ. ಬೌದ್ಧ ವಿಹಾರಗಳನ್ನು ಪ್ರಾರಂಭಿಸುವುದು, ಬೌದ್ಧ ಪೂಜಾ ವಿಧಿಗಳನ್ನು ಸಂಸ್ಕರಿಸುವುದು, ಕೆಳವರ್ಗಗಳಲ್ಲಿ ಶಿಕ್ಷಣ ಪ್ರಸಾರ ಇಂತಹ ಮಹತ್ವದ ಉದ್ದೇಶಗಳನ್ನು ಹೊಂದಿದೆ.[2]' ಆದರೆ ಇದಕ್ಕೂ ಪೂರ್ವದಲ್ಲಿ ಇನ್ನುಳಿದ ಸಾಮಾಜಿಕ, ಧಾರ್ಮಿಕ ಸ್ಥಿತಿಗಳು ಏನಾಗಿದ್ದವು ಎಂಬುದರ ಮಾಹಿತಿ ಇಲ್ಲಿ ಅವಶ್ಯಕವೆನಿಸುತ್ತದೆ. ಪ್ರಸ್ತುತ ಅಧ್ಯಾಯದಲ್ಲಿ ಮೊದಲ ಭಾಗದಲ್ಲಿ ಪ್ರಾಚೀನ ಮತ್ತು ಮಧ್ಯ ಕಾಲಿನ ಕಾಲ ಘಟ್ಟದಲ್ಲಿ ಬೌದ್ಧ ಧರ್ಮದ ವಿವರಗಳನ್ನು ಉಲ್ಲೇಖಿಸದೇ ನೇರವಾಗಿ ಆಧುನಿಕ ಕಾಲಘಟ್ಟದಲ್ಲಿ ಅಂದರೆ 19 ನೇ ಶತಮಾನದಿಂದ ಹಿಡಿದು ಅಂಬೇಡ್ಕರ್‌ರವರ ಆಗಮನದವರೆಗೆ ಬೌದ್ಧಧರ್ಮದ ಕುರಿತು ಅದರ ಪುನರುಜ್ಜೀವನದ ಕುರಿತು ಅವಲೋಕನ ಮಾಡಲಾಗಿದೆ. ಈ ಅಧ್ಯಾಯನದ ಮಾಹಿತಿಯನ್ನು ಈ ಶತಮಾನಗಳ ಸಮಾಜೋ-ಆರ್ಥಿಕ, ರಾಜಕೀಯ ಪ್ರಕ್ರಿಯೆಗಳ ಬಗ್ಗೆ ರಚಿಸಿದ ತಜ್ಞರ ಅವಲೋಕನಗಳ ಹಿನ್ನಲೆಯಲ್ಲಿ ವಿಶ್ಲೇಷಿಸಿದೆ. ಮುಖ್ಯವಾಗಿ ಅಧ್ಯಯನಕಾರನು ಕರ್ನಾಟಕದಲ್ಲಿ ಅಂಬೇಡ್ಕರವರ ಪೂರ್ವದಲ್ಲಿ ಬೌದ್ಧಧರ್ಮ ಪ್ರಚಲಿತವಿದ್ದ ಪ್ರದೇಶಗಳಲ್ಲಿ ಕ್ಷೇತ್ರ ಕಾರ್ಯ ಮಾಡಿದ ಪ್ರಾಥಮಿಕ ಮಾಹಿತಿಯನ್ನು ಆಧರಿಸಿ ಅಧ್ಯಯನ ನಡೆಸಲಾಗಿದೆ.

ದಕ್ಷಿಣ ಭಾರತದಲ್ಲಿ ಯಾವತ್ತಿನಿಂದಲೂ ಹಿಂದೂ ಧರ್ಮಕ್ಕೆ ವಿಭಿನ್ನವಾದ ಸಂಸ್ಕೃತಿಯೊಂದು ಮುಖಾಮುಖಿಯಾಗಿದ್ದನ್ನು ನಾವು ಹಲವಾರು ದಾಖಲೆಗಳಿಂದ, ಸಾಂಸ್ಕೃತಿಕ ಚರಿತ್ರೆಯಲ್ಲಿ ತಿಳಿದಿದ್ದೇವೆ. 'ಹಿಂದೂ ಸಂಸ್ಕೃತಿ' ಗೆ ವಿಭಿನ್ನವಾದ ಇಡೀ ದಕ್ಷಿಣ ಭಾರತದಾದ್ಯಂತ ಏಕರೂಪವಾದ ''ದ್ರಾವಿಡ ಸಂಸ್ಕೃತಿ' ಸ್ತರವೊಂದು ದಕ್ಷಿಣ ಭಾರತದ ಪ್ರಮುಖ ರಾಜ್ಯಗಳಾದ ಕರ್ನಾಟಕ, ಆಂಧ್ರ, ತಮಿಳುನಾಡು ಮತ್ತು ಮಹಾರಾಷ್ಟ್ರದಲ್ಲಿ

ಕಂಡು ಬರುತ್ತದೆ. ಭಾಷೆ ಬೇರೆ ಬೇರೆಯಾದರೂ ಮಾನವ ಶಾಸ್ತ್ರದ ದೃಷ್ಟಿಯಿಂದ ಈ ದಕ್ಷಿಣ ರಾಜ್ಯಗಳ ಚರಿತ್ರೆಯ ಪುಟಗಳಲ್ಲಿ ವಿಶಿಷ್ಟವಾದ ಸಾಮಾಜಿಕ ಆರ್ಥಿಕ ವ್ಯವಸ್ಥೆ ಇರುವುದು ಕಂಡುಬರುತ್ತದೆ. ಈ ರಾಜ್ಯಗಳ ಭಾಷೆಗಳ ಮೂಲ ಭಾಷಿಕವಾಗಿ 'ಪಾಲಿ' ಯಾಗಿರುತ್ತಾರೆ. ಅದಕ್ಕೆ ಪಾಲಿ ಭಾಷೆಯ ಬ್ರಾಹ್ಮಿ ಲಿಪಿಯನ್ನು ಭಾಷಾ ತಜ್ಞರು ದ್ರಾವಿಡ ಭಾಷೆಗಳ 'ತಾಯಿ' ಎಂದು ಪರಿಗಣಿಸಿದ್ದು. ದಕ್ಷಿಣದ ರಾಜ್ಯಗಳಲ್ಲಿ ಹುಟ್ಟಿದ ಸಮಾಜೋ - ಧಾರ್ಮಿಕ ಸುಧಾರಣಾ ಚಳುವಳಿಗಳೂ ಭಾರತದ ಉಳಿದ ಪ್ರದೇಶಗಳಿಗಿಂತ ವಿಭಿನ್ನವಾದ ಅಂದರೆ, ಮುಖ್ಯವಾಗಿ ಹಿಂದೂ ಧಾರ್ಮಿಕ ವ್ಯವಸ್ಥೆಯ ಪುರೋಹಿತಷಾಹಿ ಪ್ರಣೀತ ಅಕ್ರಮಗಳನ್ನು ಹೋಗಲಾಡಿಸುವ ಉದ್ದೇಶಗಳನ್ನೇ ಹೊಂದಿದ್ದವು. ಇಲ್ಲಿ ರೂಪು ತಾಳಿದ ವಿಭಿನ್ನ ಸಂಸ್ಕೃತಿಗಳು ಪ್ರಧಾನ ಸಂಸ್ಕೃತಿಯ ಯಜಮಾನೀ ಮೌಲ್ಯಗಳಿಗೆ, ಕೊಡಲಿ ಪೆಟ್ಟು ಹಾಕುವ ಗುರಿಯನ್ನೇ ಹೊಂದಿದ್ದವು. ವಿಧವಾ ವಿವಾಹ, ಭೂ ಒಡೆತನದ ಪ್ರಶ್ನೆ, ಮಹಿಳಾ ಶಿಕ್ಷಣ, ಬಾಲ್ಯ ವಿವಾಹ ತಡೆ, ಮೂಢ ನಂಬಿಕೆಗಳ ಖಂಡನೆ, ಮುಂತಾದ ಕಾರ್ಯಕ್ರಮಗಳು ದಕ್ಷಿಣ ಭಾರತದ ರಾಜ್ಯಗಳ ಬಹುಸಂಖ್ಯಾತರು ಸಾಮಾಜಿಕ ಬದಲಾವಣೆಯ ಪರವಾಗಿ ಬಲವಾದ ಆಕಾಂಕ್ಷೆಯುಳ್ಳವರಾಗಿದ್ದರು ಎಂಬ ಸತ್ಯ ಮೇಲ್ನೋಟಕ್ಕೆ ಗೊತ್ತಾಗುತ್ತದೆ. ಡಾ. ಎಸ್. ಚಂದ್ರಶೇಖರವರು ಗುರುತಿಸುವಂತೆ "1870 ರ ದಶಕದಷ್ಟು ಹಿಂದೆಯೇ ಸಾರ್ವಜನಿಕ ಸೇವೆ, ಸಾರ್ವಜನಿಕ ಸಂಘಗಳು, ಶಾಸನ ಸಭೆ, ಪತ್ರಿಕೋದ್ಯಮ, ಶಿಕ್ಷಣ ಸಂಸ್ಥೆಗಳಲ್ಲಿ - ಬ್ರಾಹ್ಮಣರು ಹೆಚ್ಚಾಗಿ ಮೇಲುಗೈ ಸಾಧಿಸಿದ್ದರಿಂದ ಉಳಿದವರಿಗೆ ಸಹಜವಾಗಿ ಅಸೂಯೆ ಉಂಟಾಗಿತ್ತು"[3] ಇಂತಹ ಚಳುವಳಿಗಳು ಮೇಲ್ನೋಟಕ್ಕೆ ಬ್ರಾಹ್ಮಣೇತರ ಚಳುವಳಿಗಳು ಎನಿಸಿದರೂ ಅವು ಜಾತಿ ವ್ಯವಸ್ಥೆ ಆಧಾರಿತವಾಗಿ ಉದ್ಭವಿಸಿದ 'ಅಸಮಾನತೆಯ' ನಿವಾರಣೆಯ ಬಗ್ಗೆ 'ಅನ್ಯ ಸಾಂಸ್ಕೃತಿಕ ವ್ಯವಸ್ಥೆಯ ನಿರ್ಮಾಣ' ಪ್ರಯತ್ನಗಳೇ ಆಗಿದ್ದವು. ಕೆಳ ಜಾತಿಗಳ ಜನರು ಶಿಕ್ಷಣ, ಪ್ರಜ್ಞೆಗೆ ಎಡೆಗೊಂಡು ತಮಗೆ ಏನಾಗುತ್ತಿದೆ ಎಂಬುದರ ಸ್ವಯಂ ವಿಶ್ಲೇಷಣೆ ಮಾಡಲು ಪ್ರಾರಂಭಿಸಿದ್ದರಿಂದ ಶಕ್ತಿಶಾಲಿ ಪ್ರಭಾವಿ ನಾಯಕರು ತಮ್ಮ ನಡುವೆಯೇ ಹುಟ್ಟಿ ತಿಳುವಳಿಕೆ ನೀಡಿದ್ದರಿಂದ ಅದರ ಪ್ರಬಲತೆ, ಮೇಲ್ವರ್ಗಗಳ ಸುಧಾರಣಾ ವಾದಿಗಳಿಗಿಂತ ಸ್ವಲ್ಪ ಭಿನ್ನವಾಗಿಯೇ ಇತ್ತು. ಮೇಲ್ಜಾತಿಯಿಂದ ಬಂದ ಸುಶಿಕ್ಷಿತರು ಸಾಮಾಜಿಕ ಚಳುವಳಿಗೆ ನೇತಾರಿಕೆ 'ಕೊಟ್ಟದ್ದಕ್ಕೂ' ದಲಿತ ವರ್ಗದಿಂದ ಬಂದು ಶಿಕ್ಷಣ ಪಡೆದು ಸಾಮಾಜಿಕ, ಆರ್ಥಿಕ ಸುಧಾರಣಾ ಚಳುವಳಿಗೆ ನೇತಾರಿಕೆ ಕೊಟ್ಟವರಿಗೂ ಭಿನ್ನತೆ ಇದ್ದೇ ಇತ್ತು. ದಲಿತರ ಕರುಣಾಜನಕ ಸ್ಥಿತಿಗೆ ಜಮೀನುದಾರರು ಮತ್ತು ಭೂ ಮಾಲಿಕರೇ ಕಾರಣ, ಸರ್ಕಾರವೇ ಜಮೀನನ್ನು ಅಸ್ಪೃಶ್ಯರಿಗೆ ದೇಣಿಗೆ ನೀಡಿ ಅವರನ್ನು ಸುಶಿಕ್ಷಿತರನ್ನಾಗಿಸಿದರೆ ಜಮೀನ್ದಾರರು ಅವರನ್ನು ಶೋಷಣೆ ಮಾಡದಂತೆ ತಡೆಯಬಹುದೆಂದು ರತ್ತಮಲೈ ಶ್ರೀನಿವಾಸರಂತಹ ಅಸ್ಪೃಶ್ಯರ ನಾಯಕರು ವಾದಿಸಿದರು. (ಅನುಬಂಧ-1, ಚಿತ್ರ : 11 ನೋಡಿ) ಡಾ.ಎಸ್.ಚಂದ್ರಶೇಖರವರು ಗುರುತಿಸುವಂತೆ.

"ಕೆಲವು ರಾಷ್ಟ್ರೀಯ ವಾದಿಗಳೂ ಕೂಡ ಅಸ್ಪೃಶ್ಯರಿಗೆ ದೇಣಿಗೆ ಜಮೀನು ನೀಡುವುದನ್ನು ವಿರೋಧಿಸುವುದು ಆಶ್ಚರ್ಯವಾಗಿದೆಯಲ್ಲದೇ ರಾಷ್ಟ್ರೀಯವಾದಿಗಳೂ 'ಮೇಲ್ಜಾತಿಯವರ ಸ್ಥಾನಮಾನಗಳು ಇದರಿಂದ ಕಡಿಮೆಯಾಗುವ ಕಾರಣ ಅವರು ಬಹಳ ಜಾಗರೂಕವಾಗಿರಬೇಕೆಂದು ಕೂಡ ಎಚ್ಚರಿಸಿದರು.'[4] ಹೀಗಾಗಿ ಆ ಕಾಲದ ಕೆಳಜಾತಿಯ ಜನರು ಮೇಲ್ಜಾತಿ ರಾಷ್ಟ್ರೀಯವಾದಿ ನಾಯಕರಿಂದಲೇ ತುಂಬಿ ತುಳುಕುತ್ತಿದ್ದ 'ಕಾಂಗ್ರೆಸ್ಸನ್ನು' ಕೂಡ ವಿರೋಧಿಸಿದರು. ಆದಿ ದ್ರಾವಿಡ ಸಭಾದ 'ಪರೈಯನ್' ಪತ್ರಿಕೆ ಉಲ್ಲೇಖಿಸಿ ಡಾ. ಎಸ್. ಚಂದ್ರಶೇಖರ ಅವರು ದಕ್ಷಿಣ ಭಾರತದ ಅಸ್ಪೃಶ್ಯ ನಾಯಕರು ಕಾಂಗ್ರೆಸ್ಸಿನ ಬಗ್ಗೆ ಇಟ್ಟುಕೊಂಡಿದ್ದ ತಿರಸ್ಕಾರದ

ತೀವ್ರ ಸ್ವರೂಪವನ್ನು ವಿವರಿಸುತ್ತಾ ಅಂದಿನ ನಾಯಕರು, ''ಅಸ್ಪೃಶ್ಯರು ಕಾಂಗ್ರೆಸ್ಸಿಗೆ ಒಂದು ಕಾಸನ್ನು ದೇಣಿಗೆ ನೀಡಬಾರದೆಂದೂ, ಕಾಂಗ್ರೆಸ್ಸಿಗೆ ನೀಡುವ ಯಾವುದೇ ಸಹಾಯ ಹಾವಿಗೆ ಹಾಲೆರದಂತೆ ಆಗುವುದೆಂದೂ ಅರ್ಥೈಸಿದರಲ್ಲದೇ, ಕಾಂಗ್ರೆಸ್ ಯಾವತ್ತೂ ಅಸ್ಪೃಶ್ಯರ ವಿರೋಧಿಯಾಗಿಯೇ ಇದೆಯೆಂದು ತಿಳಿಸಿದರು'' ಎಂದು ದಾಖಲಿಸುತ್ತಾ, ಮುಂದೆ ಈ ರೀತಿಯ ನಿಲುವುಗಳನ್ನು ಗಮನಿಸಿದ ರಾಷ್ಟ್ರೀಯ ವಾದಿಗಳು ತಮ್ಮ ತಪ್ಪನ್ನು ಅರಿತುಕೊಂಡರೆಂದು ಹೇಳುತ್ತಾರೆ. ತಮಿಳುನಾಡಿನಲ್ಲಿ ಸಿಡಿದ ಈ ಅಸ್ಪೃಶ್ಯರ ಧ್ವನಿ ಮುಂದೆ ಹಲವಾರು ರಾಜಕೀಯ ತೀರ್ಮಾನಗಳಿಗೆ ಬುನಾದಿಯೊದಗಿಸಿತೆಂದೇ ಹೇಳಬೇಕು. ಇಂದಿಗೂ ಕೂಡ ತಮಿಳುನಾಡಿನಲ್ಲಿ ಕಾಂಗ್ರೆಸ್‌ಯೇತರ ರಾಜಕೀಯ ಪಕ್ಷಗಳು ಅಧಿಕಾರ ಚುಕ್ಕಾಣಿ ಹಿಡಿಯುವಲ್ಲಿ ಯಶಸ್ವಿಯಾಗುತ್ತಿರುವುದನ್ನು ಗಮನಿಸಿದರೆ ದಲಿತರು ಅಂದು ಹೊಂದಿದ್ದ ಅಂತಹ ನಿಲುವಿಗೆ ಅಲ್ಲಿನ ರಾಜಕೀಯ ನಾಯಕರು ಪರೋಕ್ಷವಾಗಿ ಕಾರಣವಾಗಿರುವುದನ್ನು ನೋಡುತ್ತೇವೆ. ಈ ಅಭಿಪ್ರಾಯ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರಿಂದ ಮುಂದೆ ಜೀವಂತಿಕೆ ಪಡೆದುಕೊಂಡದ್ದನ್ನು ನಾವು ನೋಡುತ್ತೇವೆ.

''ರಾಷ್ಟ್ರೀಯ ಚಳವಳಿಯ ಹಿನ್ನೆಲೆಯಲ್ಲಿ ಹೇಳುವುದಾದರೆ, ಇಡೀ ಭಾರತೀಯ ಕೆಳಜಾತಿಗಳಲ್ಲಿಯೇ ಮೊಟ್ಟ ಮೊದಲ ಬಾರಿಗೆ ದಕ್ಷಿಣದ ಅಸ್ಪೃಶ್ಯರು ಪ್ರಜಾ ತಾಂತ್ರಿಕ ಅರಿವನ್ನು ಪ್ರಕಟಿಸಿದರು''[5], ಇದು ದಕ್ಷಿಣ ಭಾರತದ ದಲಿತರು, ಅಂಬೇಡ್ಕರ್‌ರವರ ಪೂರ್ವದಲ್ಲಿಯೇ ಪ್ರಧಾನ ಸಂಸ್ಕೃತಿಗೆ ಸಾಂಸ್ಕೃತಿಕ ಸವಾಲುಗಳನ್ನು ಒಡ್ಡಿದ್ದಾರೆಂಬುದಕ್ಕೆ ಸ್ಪಷ್ಟ ಉದಾಹರಣೆಯಾಗಿದೆ. ಇದೇ ಪ್ರಯತ್ನಗಳಿಗೆ ಮುಂದೆ ಡಾ. ಅಂಬೇಡ್ಕರ್‌ರವರು ಒಂದು ವ್ಯಾಪಕವಾದ, ಸ್ಪಷ್ಟವಾದ ವಿಮೋಚನಾ ಸೂತ್ರವನ್ನು ಹೆಣೆಯಲು ತಮ್ಮ ಹಿಂದಿನ ಹೋರಾಟದ ಪರಂಪರೆಯಿಂದ ಪ್ರೇರಣೆ ಪಡೆದರು. ಅವರು ಆಧುನಿಕ ಭಾರತದ ಸಂದರ್ಭದಲ್ಲಿ ಜನತೆಯಿಂದ ಪ್ರಥಮ ಬಾರಿಗೆ 'ಮಹಾತ್ಮಾ' ಎಂದು ಅನ್ನಿಸಿಕೊಂಡ, ಭಾರತೀಯ ಸಾಮಾಜಿಕ ಕ್ರಾಂತಿಯ ಪಿತಾಮಹರೆಂದು ಖ್ಯಾತರಾದ 'ಮಹಾತ್ಮ' ಜ್ಯೋತಿಬಾ ಫುಲೆಯವರನ್ನು ತಮ್ಮ ಗುರುಗಳೆಂದು ಪರಿಗಣಿಸಿದ್ದರು. ಬುದ್ಧ ಕಬೀರ ಮತ್ತು ಫುಲೆಯವರ ಹಾದಿಯೇ ತಮ್ಮ ಹಾದಿ ಅವರೇ ನನ್ನ ಚೈತನ್ಯ ಸ್ವರೂಪರೆಂದು ಪದೇ ಪದೇ ಹೇಳುತ್ತಿದ್ದರು.

1920 ರ ದಶಕದಲ್ಲಿಯೇ ಕರ್ನಾಟಕದಲ್ಲಿ ದೇವಾಲಯ ಪ್ರವೇಶ ಮತ್ತು ಶುದ್ಧಿ ಕಾರ್ಯಗಳು ಪ್ರಾರಂಭವಾಗಿ ತಿರುವಾಂಕೂರು ಮತ್ತು ಸಂಡೂರ ಸಂಸ್ಥಾನಗಳಲ್ಲಿ ದೇವಾಲಯ ಪ್ರವೇಶ ಶಾಸನಗಳು ಜಾರಿಯಾದವು. ಗಾಂಧೀಜಿಯವರು ಆಂಧ್ರ ಪ್ರದೇಶಕ್ಕೆ ಭೇಟಿಕೊಟ್ಟಾಗ ರಸ್ತೆಯ ಮೇಲೆ ''ಮೊದಲು ಪಂಚಮರನ್ನು ಕರೆಯಿರಿ'' ಎಂದು ಆಂಧ್ರದ ಪಟ್ಟಣಗಳಲ್ಲಿ, ಮೊದಲು ಅಸ್ಪೃಶ್ಯರು ಪ್ರವೇಶಿಸಿದ ನಂತರ ಅವರು ಮೇಲ್ಜಾತಿ ಕೇರಿಗಳಿಗೆ ಕಾಲಿಟ್ಟರು.

ಉತ್ತರ ಕರ್ನಾಟಕದಲ್ಲಿ ಬ್ರಾಹ್ಮಣೇತರ ಚಳುವಳಿಯು ದಲಿತರ ವಿಮೋಚನೆಗೆ ಪ್ರಯತ್ನ ಮಾಡಿದ ಘಟನೆಗಳು, ವಿಚಾರ ಪ್ರವಾಹವೂ ಕಂಡು ಬರುತ್ತದೆ. ಇದರ ಸ್ವರೂಪ ದಕ್ಷಿಣ ಕರ್ನಾಟಕದ (ಮದ್ರಾಸ ಪ್ರಾಂತ್ಯದಲ್ಲಿದ್ದ ಬ್ರಾಹ್ಮಣೇತರ ಚಳುವಳಿಗಿಂತ) ಬ್ರಾಹ್ಮಣೇತರ ಚಳುವಳಿಗಿಂತ ಭಿನ್ನವಾಗಿತ್ತೆಂದು ತೋರುತ್ತದೆ. ಇದಕ್ಕೆ ಪ್ರಮುಖ ಕಾರಣ ಉದಾರವಾದಿಗಳು, ಪ್ರಗತಿಪರರೂ ಆಗಿದ್ದ ಕೊಲ್ಲಾಪೂರದ ಶ್ರೀ ಶಾಹೂ ಮಹಾರಾಜರೆಂದು ದಾಖಲೆಗಳಿಂದ ತಿಳಿದು ಬರುತ್ತದೆ. ಈ ಭಾಗದ ಬೆಳಗಾವಿ ಹಾಗೂ ಧಾರವಾಡ, ಹುಬ್ಬಳ್ಳಿಗಳಲ್ಲಿ ಲಿಂಗಾಯತ್‌ರು, ಇತರ ಬ್ರಾಹ್ಮಣೇತರರು ಬ್ರಾಹ್ಮಣದ ವಿರುದ್ಧ ಧ್ವನಿ ಎತ್ತಿದ ಉದಾರಹಣೆಗಳನ್ನು

ಕಾಣುತ್ತೇವೆ. ಈ ಭಾಗದ ಲಿಂಗಾಯತ್ ನಾಯಕರುಗಳಾದ "ರಾವ್ ಬಹಾದ್ದೂರ್ ಕಂಬಳಿ, ಗವಾಯಿ, ಮೆಣಸಿನಕಾಯಿ ಇವರು ಹುಬ್ಬಳ್ಳಿಯಲ್ಲಿ ಸಂಘಟಿಸಿದ ಬ್ರಾಹ್ಮಣೇತರ ಸಮ್ಮೇಳನದ ಅಧ್ಯಕ್ಷತೆ ವಹಿಸುವಂತೆ ಶ್ರೀ ಶಾಹೂ ಮಹಾರಾಜರ ನ್ನು ಆಹ್ವಾನಿಸುತ್ತಾರೆ. ಈ ಸಮ್ಮೇಳನಕ್ಕೆ ಆಗಮಿಸಿದ ಕೊಲ್ಲಾಪೂರ ಶ್ರೀ ಶಾಹೂ ಮಹಾರಾಜರ ಸ್ವಾಗತಕ್ಕೆ ಹುಬ್ಬಳ್ಳಿಯಲ್ಲಿ ಬೃಹತ್ ಮೆರವಣಿಗೆಯೇ ನಡೆಯುತ್ತದೆ.[6]" ತಾವು ಜ್ಯೋತಿಬಾ ಫುಲೆಯವರ ಸತ್ಯ ಶೋಧಕ ಸಮಾಜದ ಮಾದರಿಯನ್ನು ಅನುಸರಿಸುತ್ತಿದ್ದುದಾಗಿ ಶಾಹೂ ಮಹಾರಾಜರು ಹೇಳುತ್ತಾರೆ. ಮದ್ರಾಸ ಪ್ರಾಂತ್ಯದಲ್ಲಿ (ದಕ್ಷಿಣ ಕರ್ನಾಟಕದಲ್ಲಿ) ನ ಬ್ರಾಹ್ಮಣೇತರ ಚಳುವಳಿಯನ್ನು ಪ್ರಶಂಸಿಸಿ ಮಾಡನಾಡುತ್ತಾರೆ. ತಮ್ಮ ಮುಖ್ಯ ಕಾಳಜಿ ಅಸ್ಪೃಶ್ಯರ ಬದುಕಿನ ಸುಧಾರಣೆ ಎಂದು ಅವರ ಮಾತುಗಳ ಮೂಲಕ ಪ್ರಕಟಿಸುತ್ತಾರೆ. ಜಾತಿಯೇ ಎಲ್ಲ ಅಸಮಾನತೆಗಳ ಮೂಲವೆಂದು ವಿವರಿಸುತ್ತಾರೆ.

"ಪಾಶ್ಚಾತ್ಯ ಶಿಕ್ಷಣವಿಲ್ಲದೇ ಇದ್ದರೆ, ಬ್ರಾಹ್ಮಣರು ಜಾತಿ ಪದ್ಧತಿಯ ಮೇಲೆ ಬಲವಾದ ಹಿಡಿತ ಉಳ್ಳವರಾಗಿಯೇ ಇರುತ್ತಾರೆ. ಜಾತಿಗಳನ್ನು ಅವರು ನಾಯಿ, ಬೆಕ್ಕುಗಳಂತೆ ಪಳಗಿಸಿದ್ದಾರೆ"[7], ಎಂದು ಹೇಳುತ್ತಾರೆ. ಈ ಮಾತಿನಲ್ಲಿ ಬ್ರಾಹ್ಮಣರು ತಮ್ಮ ಸ್ವಾರ್ಥಕ್ಕೆ ಜಾತಿಗಳನ್ನು ಕಚ್ಚಾಡಲು ಹಚ್ಚುವ, ಒಡೆದು ಆಳುವ ನೀತಿ ಯನ್ನು ಅನುಸರಿಸುವ ಹುನ್ನಾರವುಳ್ಳವರಾಗಿದ್ದಾರೆ ಎಂಬ ಎಚ್ಚರಿಕೆ ನೀಡುತ್ತಾರೆ.

ಕೊಲ್ಲಾಪೂರದ ಶ್ರೀ ಶಾಹು ಮಹಾರಾಜರ ಪ್ರಗತಿಪರ ಧೋರಣೆಯಿಂದ ಪ್ರಭಾವಿತರಾದ, ಶಿಕ್ಷಣ ಪ್ರಸಾರದ ಬಗ್ಗೆ ಶೋಷಿತ ವರ್ಗಗಳ ಉದ್ಧಾರಕ್ಕೆ ಹಮ್ಮಿಕೊಂಡ ಕಾರ್ಯಕ್ರಮಗಳನ್ನು ಮೆಚ್ಚಿಕೊಂಡ ಅಂದಿನ ಮೈಸೂರು ದೊರೆಗಳಾದ ಯುವರಾಜರು ಶಿಕ್ಷಣದ ಉಸ್ತುವಾರಿ ಹೊತ್ತಿದ್ದ ಅಂದಿನ "ಇನ್ಸಪೆಕ್ಟರ್ ಜನರಲ್ ಆಫ್ ಎಜ್ಯುಕೇಶನ್" ಆದಂತಹ ಶ್ರೀ ಸಿ.ಆರ್. ರೆಡ್ಡಿಯವರನ್ನು ಕೊಲ್ಲಾಪೂರ ಪ್ರಾಂತದ ಪ್ರಗತಿಪರ ಮಹಾರಾಜರು ಶಿಕ್ಷಣದ ಪ್ರಗತಿಗಾಗಿ ಹಾಕಿಕೊಂಡ ಪ್ರಗತಿಪರ ಕಾರ್ಯಗಳನ್ನು ಅಧ್ಯಯನ ಮಾಡಲು ಕಳುಹಿಸುತ್ತಾರೆ."[8] ಮುಂದೆ ಮೈಸೂರು ರಾಜರು, ಶೋಷಿತ ವರ್ಗದ ಹಾಗೂ ಮಹಿಳೆಯರ ಶಿಕ್ಷಣಕ್ಕೆ ಅದರಲ್ಲೂ ಮುಖ್ಯವಾಗಿ, ಉನ್ನತ ಶಿಕ್ಷಣಕ್ಕೆ, ಹೆಚ್ಚಿನ ಸೌಕರ್ಯ ಒದಗಿಸಿದ್ದನ್ನು ಹಲವಾರು ದಾಖಲೆಗಳಿಂದ ತಿಳಿಯಬಹುದಾಗಿದೆ. 'ರಾಜರ್ಷಿ' ಎಂದೇ ಖ್ಯಾತರಾದ ನಾಲ್ವಡಿ ಕೃಷ್ಣರಾಜ ಒಡೆಯರವರಂತಹ ಪ್ರಗತಿಪರ ಅರಸರ ನಿಲುವಿನಿಂದಲೇ ಅಲ್ಲಿನ (ದಕ್ಷಿಣ ಕರ್ನಾಟಕದ) ದಲಿತರು ಶೈಕ್ಷಣಿಕವಾಗಿ ಎರಡು ತಲೆಮಾರು ಮುಂದೆ ಇರುವುದನ್ನು ನೋಡುತ್ತೇವೆ. ಅವರು ತಮ್ಮ ನಾಲ್ಕು ದಶಕಗಳ ಆಡಳಿತಾವಧಿಯಲ್ಲಿ ಮೈಸೂರು ಪ್ರಾಂತ್ಯದ ಸಾಮಾಜಿಕ ಪರಿವರ್ತನೆಗೆ ಚಾಲನೆ ನೀಡಿದರು ಹಾಗೂ ಸಾಮಾಜಿಕ ಅನಿಷ್ಟಗಳನ್ನು ಜಾತೀಯತೆಯನ್ನು ಪೋಷಿಸಿಕೊಂಡು ಹೋಗುವ ಸಾಮಾಜಿಕ ಸಂಸ್ಥೆಗಳನ್ನು ನಿರ್ಮೂಲನೆ ಮಾಡಲು ಪ್ರಯತ್ನಿಸಿದರು. ದಲಿತ ಚಳುವಳಿಯ ಚಿಂತಕರಾದ ಎನ್. ಮಹೇಶ ರವರು ಗುರುತಿಸಿದಂತೆ,[9] 'ಮನುವಾದಿ ಸಾಮಾಜಿಕ ವ್ಯವಸ್ಥೆಗೆ ಬಲಿಯಾದ ಭಾರತೀಯ ಸಮಾಜವು ಅನೇಕ ಜೀವ ವಿರೋಧಿ ಸಾಮಾಜಿಕ ಪದ್ಧತಿಗಳನ್ನು ಅಳವಡಿಸಿಕೊಂಡಿವೆ, ಶೋಷಣೆಗೆ ಕಾರಣವಾಗಿವೆ. ಇಂತಹ ಅನಿಷ್ಟ ಪದ್ಧತಿಗಳನ್ನು ತೊಲಗಿಸಲು ಮಹಾರಾಜರು ಅನೇಕ ಕಟ್ಟು ನಿಟ್ಟಾದ ಕ್ರಮಗಳನ್ನು ಜಾರಿಗೊಳಿಸಿದರು.

1) 1909 ರಲ್ಲಿ 'ದೇವಾಲಯಗಳಲ್ಲಿ ದೇವದಾಸಿಯರನ್ನು ನೇಮಿಸಿಕೊಳ್ಳುವ ಮತ್ತು ನೃತ್ಯ ಕನ್ಯೆಯರು ಅಲ್ಲಿ ನರ್ತನ ಮಾಡುವುದನ್ನು ನಿಷೇಧಿಸಿದರು.

2) 1910 ರಲ್ಲಿ ಮುಜರಾಯಿ ಇಲಾಖೆಯಡಿಯ ಎಲ್ಲ ದೇವಾಲಯಗಳಲ್ಲಿ 'ಗೆಜ್ಜೆ ಪೂಜೆ' (ದೇವದಾಸಿ ಪದ್ಧತಿಗೆ ಪ್ರವೇಶ ಪಡೆಯುವ ಆಚರಣೆ) ಯನ್ನು ನಿಷೇಧಿಸಿದರು.

3) 1911 ರಲ್ಲಿ ಅಕ್ಟೋಬರ್ 11 ರಂದು ಅಪ್ರಾಪ್ತ ವಯಸ್ಕರ ಧೂಮಪಾನ ನಿಷೇಧ ಕಾಯ್ದೆ ಜಾರಿಗೊಳಿಸಿದರು.

4) 1913 ರಲ್ಲಿ 'ಕಡ್ಡಾಯ ಪ್ರಾಥಮಿಕ ಶಿಕ್ಷಣ ಕಾಯ್ದೆ' ಜಾರಿಗೊಳಿಸಿದರು.

5) 1919 ರಲ್ಲಿ ದೇವಾಲಯಗಳಲ್ಲಿ ಸೇವೆ ಸಲ್ಲಿಸುವ ದೇವದಾಸಿಯರಿಗೆ ಇನಾಮ ಭೂಮಿಯನ್ನು ನೀಡುವುದನ್ನು ನಿಷೇಧಿಸಿದರು.

6) 1933 ರಲ್ಲಿ ಹಿಂದೂ ಸ್ತ್ರೀಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಹಕ್ಕು ನೀಡುವ ಕಾಯ್ದೆ ಜಾರಿಗೊಳಿಸಿದರು.

7) 1936 ರಲ್ಲಿ ವೇಶ್ಯಾ ವೃತ್ತಿ ನಿಷೇಧ ಕಾಯ್ದೆ ಜಾರಿಗೆ ತಂದರು.

8) 1936 ರಲ್ಲಿ ಪ್ರ-ಪ್ರಥಮ ಬಾರಿಗೆ ಮೈಸೂರು ಅರಮನೆಯಲ್ಲಿ ಅಸ್ಪೃಶ್ಯರಿಗೆ ಪ್ರವೇಶ ನೀಡಲಾಯಿತು.

9) 1937 ರಲ್ಲಿ ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಗರ್ಭಿಣಿ ಸ್ತ್ರೀಯರಿಗೆ 'ದಿ ಮೈಸೂರ ಮೆಟರ್ನಿಟಿ ಬೆನೆಫಿಟ್ ಆ್ಯಕ್ಟ್' ಜಾರಿಗೆ ತಂದರು.

10) 1938 ರಲ್ಲಿ ವಿಧವಾ ಮರುವಿವಾಹ ಕಾಯ್ದೆ ಇದರೊಟ್ಟಿಗೆ ಬಾಲವಿಧವೆಯರ ಶಿಕ್ಷಣಕ್ಕೆ ಸಹಾಯಕವಾಗುವಂತೆ ದೇವರಾಜ ಬಹದ್ದೂರ್ ಫಂಡ್ ಸ್ಥಾಪಿಸಿ ವಿಧವಾ ಗೃಹಗಳನ್ನು ಪ್ರಾರಂಭಿಸಿದರು.

ಹೀಗೆ ಹತ್ತು ಹಲವಾರು ಬುನಾದಿ ರೂಪದ ಸಾಮಾಜಿಕ ಬದಲಾವಣೆಗೆ ಕಾರಣವಾಗುವ ಕಾನೂನು ಕ್ರಮಗಳನ್ನು ಕೈಗೊಂಡರು. ನಾಲ್ವಡಿ ಕೃಷ್ಣರಾಜರ ಬಗ್ಗೆ ಸಾಮಾಜಿಕ, ಶೈಕ್ಷಣಿಕ ಅಭಿವೃದ್ಧಿ ನೆಲೆಯಲ್ಲಿ ಚರಿತ್ರೆಯ ಕಣ್ಣೋಟದಿಂದ ಅಧ್ಯಯನ ಮಾಡಿದ ಡಾ. ಎನ್. ಚಿನ್ನಸ್ವಾಮಿ ಸೋಸಲೆ ಅವರು ಮೈಸೂರು ರಾಜರು ಇಂತಹ ಪ್ರಗತಿಪರ ಕಾನೂನುಗಳನ್ನು ಜಾರಿಗೆಗೊಳಿಸಿದರೂ 'ದಲಿತರು ಶಾಲೆಗಳಲ್ಲಿ ಶಿಕ್ಷಣ ಸಂಸ್ಥೆಗಳಲ್ಲಿ ಸುಲಭವಾಗಿ ಪ್ರವೇಶ ಪಡೆಯುವ ಹಾಗಿರಲಿಲ್ಲವೆಂದು' ಹೇಳುತ್ತಾರೆ.

ಈ ಬಗ್ಗೆ ಶೃಂಗೇರಿ ಆಡಳಿತ ಭಾಗದಲ್ಲಿ ಪ್ರಬಲ ವಿರೋಧವಿದ್ದ ಬಗ್ಗೆ ದಾಖಲಿಸುತ್ತ 'ದಲಿತರು ಅಂದರೆ ಅಸ್ಪೃಶ್ಯರು ಸರ್ಕಾರಿ ಅಥವಾ ಖಾಸಗಿ ಶಾಲೆಗಳಲ್ಲಿ ಇತರೇ ಸವರ್ಣೀಯರೊಂದಿಗೆ ವಿದ್ಯೆ ಕಲಿಯಲು ಸಾಕಷ್ಟು

ಸಾಮಾಜಿಕ ಪ್ರತಿರೋಧವಿತ್ತು. ಹೀಗೆ ವಿರೋಧಿಸುತ್ತಿದ್ದವರಲ್ಲಿ ಎಲ್ಲ ಸವರ್ಣೀಯ ಜಾತಿಗಳವರೂ ಸೇರಿರುತ್ತಿದ್ದರು. ಬ್ರಾಹ್ಮಣರು ವಿಶೇಷವಾಗಿ ಅಸ್ಪೃಶ್ಯರೊಂದಿಗೆ ತಮ್ಮ ಮಕ್ಕಳು ವ್ಯಾಸಂಗ ಮಾಡುವುದುನ್ನು ಸಹಿಸುತ್ತಿರಲಿಲ್ಲ. ಅವರ ಈ ಮನೋಭಾವನೆಗೆ ಶತಮಾನಗಳಿಂದಲೂ ಅವರು ಬೆಳೆಸಿಕೊಂಡು ಬಂದಿದ್ದ ಪ್ರತ್ಯೇಕ, ಸಾಂಸ್ಕೃತಿಕ ಆವರಣ ಮತ್ತು ಪಂಚಮರ ಬಗ್ಗೆ ಸಮಾಜ ಹೊಂದಿದ್ದ ಕೀಳು ಭಾವನೆಗಳು ಕಾರಣವಾಗಿದ್ದವು. 1915 ರಲ್ಲಿ ಸರ್ಕಾರ ಹೊರಡಿಸಿದ ಆದೇಶದಲ್ಲಿ ಶಾಲೆಗಳಲ್ಲಿ ಎಲ್ಲ ವರ್ಗಗಳವರಿಗೂ ಪ್ರವೇಶ ಇದೇ ಎಂಬ ಸುತ್ತೋಲೆಗೆ ಶೃಂಗೇರಿಯಲ್ಲಿ ಪ್ರಬಲ ವಿರೋಧ ಕಂಡು ಬಂದಿದೆ. ಏಕೆಂದರೆ, ಅಲ್ಲಿನ ಆಂಗ್ಲೋ ವೆರ್ನಾಕ್ಯೂಲರ್ ಶಾಲೆಗೆ ಒಬ್ಬ ದಲಿತ ವಿದ್ಯಾರ್ಥಿಯನ್ನು ಸೇರಿಸಲಾಗಿತ್ತು. ಅದನ್ನು ಪ್ರತಿಭಟಿಸಿ ನಾಲ್ಕನೂರು ವೈದಿಕ ಬ್ರಾಹ್ಮಣರು ಒಂದು ಸಮಿತಿಯನ್ನು ರಚಿಸಿಕೊಂಡು ಈ ಬಗ್ಗೆ ಶೃಂಗೇರಿ ಜಹಗೀರಿನ ಏಜೆಂಟರಿಗೂ ಹಾಗೂ ಸರ್ಕಾರದ ಇನ್ಸ್‌ಪೆಕ್ಟರ್ ಜನರಲ್‌ರವರಿಗೂ ಅನೇಕ ಪತ್ರ ವ್ಯವಹಾರಗಳು ನಡೆದವು[10], ಎಂದು ದಾಖಲಿಸಿದ್ದಾರೆ. ಈ ಎಲ್ಲ ವಿವರಗಳನ್ನು ನೋಡಿದಾಗ 20 ನೇಯ ಶತಮಾನದ ಪೂರ್ವಾರ್ಧದಲ್ಲಿ ಕರ್ನಾಟಕದಲ್ಲಿ ಮದ್ರಾಸ್ ಪ್ರಾಂತ ಮತ್ತು ಮುಂಬೈ ಪ್ರಾಂತಗಳೆರಡರಲ್ಲೂ ಹಲವು ಪ್ರತಿರೋಧಗಳ ನಡುವೆಯೂ ಕೂಡ ಸಾಮಾಜಿಕ ಪರಿವರ್ತನೆಯ ಗಾಳಿ ತುಂಬಾ ಪ್ರಬಲವಾಗಿ ಬೀಸಿರುವುದು ಕಂಡು ಬರುತ್ತದೆ. ಬರೋಡಾ, ಕೊಲ್ಹಾಪೂರ ಮಹಾರಾಜರ ಮಾದರಿಗಳನ್ನು ಮೈಸೂರು ಒಡೆಯರು ಅನುಸರಿಸಿ ದಲಿತರಲ್ಲಿ ತಮ್ಮ ಸಾಂಸ್ಕೃತಿಕ ಬದುಕಿನ ಬಗ್ಗೆ ತಮ್ಮನ್ನು ಶೋಷಣೆಗೆ ದಬ್ಬಿದ ವ್ಯವಸ್ಥೆಯ ಕುರಿತಾಗಿ ಯೋಚಿಸುವ ಮಟ್ಟಿಗೆ ಮುಕ್ತ ವಾತಾವರಣ ಸೃಷ್ಟಿಯಾದದ್ದನ್ನು ಕಾಣಬಹುದಾಗಿದೆ. ಇವೆಲ್ಲಕ್ಕಿಂತ ಮೇಲಾಗಿ ಪ್ರಗತಿಪರ ಆಡಳಿತಾತ್ಮಕ ಕ್ರಮಗಳು ಹಿಂದೂ ಕೃಪಾ ಪೋಷಿತ ಹೀನ ಚಟುವಟಿಕೆಗಳಿಗೆ ಕಡಿವಾಣ ಹಾಕಿದವೆಂಬುವುದನ್ನು ಸಹಿತ ಸ್ಪಷ್ಟವಾಗಿ ಹೇಳಬಹುದಾಗಿದೆ.

ಈ ಹಿನ್ನೆಲೆಯಲ್ಲಿ ನಾವು ಅಂಬೇಡ್ಕರ್‌ವರ ಪೂರ್ವದಲ್ಲಿ ಕರ್ನಾಟಕದಲ್ಲಿ ಬೌದ್ಧ ಧರ್ಮ ಮತ್ತು ದಲಿತರ ಚಟುವಟಿಕೆಗಳನ್ನು ವಿಶ್ಲೇಷಿಸಿದರೆ ಅರ್ಥಪೂರ್ಣವಾಗುತ್ತದೆ. ಮದ್ರಾಸ್ ಪ್ರಾಂತ್ಯದ ತುಂಬಾ ಅಸ್ಪೃಶ್ಯರು ಜಾಗೃತಿಯ ಪಥದಲ್ಲಿ ದೃಢ ಹೆಜ್ಜೆಗಳನ್ನು ಇಡುತ್ತಿದ್ದ ಬಗ್ಗೆ, ಹಲವಾರು ಅಧ್ಯಯನಗಳು ಸ್ಪಷ್ಟಪಡಿಸಿವೆ. ತಮ್ಮನ್ನು ಶತಮಾನಗಳಿಂದ ಹೀನಾಯವಾಗಿ, ಕ್ರೂರವಾಗಿ ಶೋಷಿಸಿದ ಹಿಂದೂ ಸಾಂಸ್ಕೃತಿಕ ಪರಿವಾರದಿಂದ ಬೇರ್ಪಟ್ಟು ಪ್ರೀತಿ, ಆದರಗಳಿಂದ ಕಾಣುವ ತಮ್ಮ ಬದುಕಿಗೆ ಚಾರಿತ್ರಿಕ ನೆಲೆ ಒದಗಿಸುವ ಹೊಸ ಉಸಿರು ಶಕ್ತಿ ನೀಡುವ ಪರ್ಯಾಯಗಳ ಹುಡುಕಾಟದಲ್ಲಿರುವುದು, ಅಂತಹ ಅನ್ಯ ಸಾಂಸ್ಕೃತಿಕ ಆವರಣಗಳನ್ನು ನಿರ್ಮಿಸಿಕೊಳ್ಳಲು ಪ್ರಯತ್ನಿಸಿರುವುದು ಕಂಡು ಬರುತ್ತದೆ.

ಇದೇ ವೇಳೆಗೆ ಮದ್ರಾಸ್ ಪ್ರಾಂತ್ಯದಲ್ಲಿ ಮದ್ರಾಸ್ ಪಟ್ಟಣವನ್ನು ಕೇಂದ್ರವಾಗಿರಿಸಿಕೊಂಡು ಥಿಯೋಸೋಫಿಕಲ್ ಸೊಸೈಟಿಯ ಕಾರ್ಯಕರ್ತರು ಅಸ್ಪೃಶ್ಯರ ಉದ್ಧಾರಕ್ಕೆ ಮನಸ್ಸು ಮಾಡಿ ಕಾರ್ಯಕ್ರಮಗಳನ್ನು ಯೋಜಿಸಿದರು. ಈ ಕಾರ್ಯಕರ್ತರಲ್ಲಿ ಹಲವಾರು ಜನರಿಗೆ ಬೌದ್ಧ ತತ್ವಗಳ ಬಗ್ಗೆ ಹೆಚ್ಚಿನ ಒಲವು ಇತ್ತು. (ಡಿ.ಸಿ. ಅಹಿರ್ : 1972, ಪಿ.ಸಿ. ಅಲಮುಂಡ : 1988, ಪಿ.ವಿ. ಬಾಪಟ್ : 1971, ಎಲ್.ಟ್ರೆವೋರ್ : 1980, ಡಿ.ಎಲ್. ರಾಮ್ಟೆಕೆ : 1983, ಟಿ.ಎಸ್. ವಿಲ್ಕಿನ್‌ಸನ್ ಮತ್ತು ಎಂ.ಎಂ. ಥಾಮಸ್ : 1974, ಈಲಿನಿಯೋರ್ ಝೆಲಿಯಟ್ : 1979, ಜಿ. ಅಲೋಸಿಯಸ್ : 1998) ಮದ್ರಾಸ್ ಪ್ರಾಂತ್ಯದಲ್ಲಿ ಥಿಯೋಸೋಪಿಸ್ಟ್ ಕರ್ನಲ್ ಎಚ್.ಎಸ್. ಅಲ್ಕಾಟ್‌ರವರೊಂದಿಗೆ ಪಂಡಿತ ಅಯೋಥಿದಾಸ್ [@], (ಅನುಬಂಧ-1, ಚಿತ್ರ : 7 ಗಮನಿಸಿ)

ಅವರ ಸಂಪರ್ಕ ಬಂದಿತು. ಪಂಡಿತ ಅಯೋಥಿದಾಸ್ 'ಪರೈಯ' ಜಾತಿಯ ಒಬ್ಬ ವೈದ್ಯ ಪಂಡಿತರು.[11], ಇವರು ಕರ್ನಲ್ ಅರ್ಕಾಟ್‌ರವರೊಂದಿಗೆ ಬೌದ್ಧಧರ್ಮದ ಬಗ್ಗೆ ವಿವರವಾಗಿ ಚರ್ಚಿಸಿ ಮನೋಗತಗೊಳಿಸಿಕೊಂಡರು. ಕರ್ನಲ್ ಅರ್ಕಾಟ್‌ರವರ ದಿನಚರಿಯಿಂದ ಸಿಗುವ ವಿವರಗಳನ್ನು ಗಮನಿಸಿದರೆ ಪಂಡಿತ ಅಯೋಥಿದಾಸ್ ಮತ್ತು ಅವರೊಂದಿಗಿದ್ದ ಪರೈಯ ಜಾತಿಯ ದಲಿತರು 'ತಾವು ಈ ನಾಡಿನ ಮೂಲನಿವಾಸಿಗಳಾಗಿದ್ದು ಅಶೋಕನ ಕಾಲದಿಂದಲೂ ಬೌದ್ಧರಾಗಿದ್ದೇವೆ. ಈ ಕುರಿತು ನಮ್ಮಲ್ಲಿ ಹಲವಾರು ಪ್ರಾಚೀನ ಗ್ರಂಥಗಳ ಆಧಾರಗಳಿವೆ. ಆದ್ದರಿಂದ ನಾವು ನಮ್ಮ ಬೌದ್ಧ ಪರಂಪರೆಯನ್ನು ಮರಳಿ ಪಡೆಯಲು ನಮಗೆ ಒಂದು ಬೌದ್ಧ ಸಂಘವನ್ನು ಪ್ರಾರಂಭಿಸುವುದು ಅವಶ್ಯಕವಾಗಿದೆ[12]' ಎಂದು ದಾಖಲಿಸುತ್ತಾರೆ. ಕರ್ನಲ್ ಅರ್ಕಾಟ್ 1898 ರಲ್ಲಿ ಜೂನ್ 4 ರಂದು ಮದ್ರಾಸಿನ ಅಡ್ಯಾರ್‌ನಲ್ಲಿ ದ್ರಾವಿಡ ಬೌದ್ಧ ಸಂಘ (Dravidian Buddhist Society) ವನ್ನು ಪ್ರಾರಂಭಿಸಲು ನೆರವು ನೀಡಿರುತ್ತಾರೆ. ತಮಿಳು ದಲಿತ ಬೌದ್ಧರು ಸಿಂಹಳದ ಬಿಕ್ಕು ಪೂಜ್ಯ ಅನಗಾರಿಕ ಧರ್ಮ ಪಾಲ (ಅನುಬಂಧ - 1: ಚಿತ್ರ 21 ನ್ನು ಗಮನಿಸಿ) ಮತ್ತು ಗುಣಾರತ್ನೆ ಅವರ ಸಮ್ಮುಖದಲ್ಲಿ ಕಾರ್ಯಕ್ರಮ ನಡೆಸಿ, ತಮ್ಮನ್ನು ಬೌದ್ಧರೆಂದು ಪರಿಗಣಿಸಲು ಸಿಂಹಳದ ಹಿರಿಯ ಬೌದ್ಧ ಬಿಕ್ಕುಗಳಿಗೆ ಮನವಿ ನೀಡುತ್ತಾರೆ. ಮುಂದೆ 1898 ಜುಲೈನಲ್ಲಿ ಪಂಡಿತ ಅಯೋಥಿದಾಸ್ ಮತ್ತು ಪಿ. ಕೃಷ್ಣಸ್ವಾಮಿ ಇವರುಗಳು ಕರ್ನಲ್ ಅರ್ಕಾಟ್‌ರವರೊಂದಿಗೆ ಕೋಲಂಬೋಕ್ಕೆ ತೆರಳಿ ಪಂಚಶೀಲ ಬೌದ್ಧ ಧೀಕ್ಷೆ ಪಡೆಯುತ್ತಾರೆ. ಅಲ್ಲಿನ ಹಿರಿಯ ಬೌದ್ಧ ಧಮ್ಮ ಬಿಕ್ಕುಗಳಿಗೆ 'ಇವರು ಭಾರತದ ಕೆಳಜಾತಿಯ ಜನರೆಂದು' ಅರ್ಕಾಟ್‌ರವರು ತಿಳಿಸಿದಾಗ ಅಲ್ಲಿನ ಬಿಕ್ಕುಗಳು ಬೌದ್ಧ ಧಮ್ಮ ಸ್ವೀಕರಿಸಿದ ಇವರಿಗೆ 'ಇಂದಿನಿಂದ ಯಾವ ಬೇಧವಿಲ್ಲ' ಅವರು ಎಲ್ಲರಂತೆ ಮುಕ್ತರು, ಅವರದೇ ಆದ ಘನತೆ ಅವರಿಗೆ ಲಭಿಸಿದೆ[13]' ಎಂದು ಅಭಿಪ್ರಾಯ ಪಟ್ಟಿದ್ದನ್ನು ಕರ್ನಲ್ ಅರ್ಕಾಟ್ ದಾಖಲಿಸುತ್ತಾರೆ. ಅದೇ ವೇಳೆಗೆ ಭಾರತದಲ್ಲಿ ಬೌದ್ಧ ಧರ್ಮವನ್ನು ಬೆಳೆಸಲು ಮನವಿ ನೀಡಿ ಪಂಡಿತ ಅಯೋಥಿದಾಸ್‌ರು ಈ ಬಗ್ಗೆ ಸಹಕರಿಸಲು ಚರ್ಚೆಗಳು ನಡೆಯುತ್ತವೆ. ಪಂಡಿತ ಅಯೋಥಿದಾಸ್ ಭಾರತಕ್ಕೆ ಮರಳಿ ಬಂದವರೇ ಮದ್ರಾಸಿನ ರಾಯಲ್‌ಪೇಟದ ಬರ್ಝೂರ್ ಸ್ಟ್ರೀಟ್‌ನಲ್ಲಿ ಸಾಖ್ಯ ಬೌದ್ಧ ಸಂಘ (Sakya Buddhist Society) ವನ್ನು ಪ್ರಾರಂಭಿಸುತ್ತಾರೆ. ಅವರೇ ಪ್ರಧಾನ ಕಾರ್ಯದರ್ಶಿಯವರಾಗುತ್ತಾರೆ.[14], ಬೌದ್ಧ ಚರಿತ್ರೆ ವಿವರಿಸುವುದು, ಜಾತಿ ಇಲ್ಲದೇ ದ್ರಾವಿಡರಲ್ಲಿ ಬೌದ್ಧ ಧರ್ಮದ ಮೂಲಕ ಪ್ರಗತಿ ಸಾಧಿಸುವುದು ಈ ಸಂಘದ ಪ್ರಧಾನ ಉದ್ದೇಶವೆಂದು ಹೇಳುತ್ತಾರೆ. ಹೀಗೆ ಚರಿತ್ರೆ ಕಟ್ಟುವಾಗ 'ತಾವು ಪರೈಯರು, ಸಾಕ್ಯವಂಶದವರು'[15] ಎಂದು ಚಾರಿತ್ರಿಕ ಮೂಲವನ್ನು ದಾಖಲಿಸುತ್ತಾರೆ. ಈ ಪ್ರಕ್ರಿಯೆ ಆಧುನಿಕ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಬೌದ್ಧ ಧರ್ಮ ಬೆಳೆದು ಬರಲು ಕಾರಣವಾಯಿತು. ಆರಂಭದಲ್ಲಿ ಅಂತಹ ವ್ಯಾಪಕವಾದ ಚಟುವಟಿಕೆಗಳನ್ನು ಈ ಸಂಘ ಹಮ್ಮಿಕೊಳ್ಳದೇ ಇದ್ದರೂ ಒಂದು ಐಡೆಂಟಿಟಿಯ ಹುಡುಕಾಟದಲ್ಲಿ ಅವರು ಇರುವುದನ್ನು ಅಲ್ಲಗಳೆಯಲಾರದು. ಆ ಸಂದರ್ಭದಲ್ಲಿ ಪಂಡಿತ ಅಯೋಥಿದಾಸ್ ಅವರೂ ಸಹ ಬೌದ್ಧ ಧರ್ಮವನ್ನು ಸ್ವತಃ ಅಧ್ಯಯನ ಮಾಡುವ, ಆಕರಗಳನ್ನು ಬೇರೆ ಬೇರೆ ಮೂಲಗಳಿಂದ ಹುಡುಕಿ ಬೌದ್ಧ ಸಾಂಸ್ಕೃತಿಕ ತಿಳುವಳಿಕೆಗಾಗಿ ಹುಡುಕಾಟದಲ್ಲಿದ್ದುದು ಕಂಡು ಬರುತ್ತದೆ. ಸಾಕ್ಯ ಬೌದ್ಧ ಸಂಘದ ಆಶ್ರಯದಲ್ಲಿ ಪ್ರತಿ ರವಿವಾರ ಸಾರ್ವಜನಿಕ ಉಪನ್ಯಾಸಗಳನ್ನು, ಸಮಾಜೋ - ಧಾರ್ಮಿಕ ವಿಷಯಗಳ ಬಗ್ಗೆ ತಜ್ಞರಿಂದ ಗೋಷ್ಠಿಗಳನ್ನು ಬೌದ್ಧ ಧರ್ಮಕ್ಕೆ ಆಸಕ್ತಿ ಹೊಂದಿದವರಿಗೆ ಬೌದ್ಧ ಧರ್ಮ ದೀಕ್ಷೆ ಕೊಡುವ ಕಾರ್ಯಕ್ರಮಗಳನ್ನು ಸಂಘಟಿಸುತ್ತಿದ್ದರು. ಇದೇ ವೇಳೆಗೆ ಮದ್ರಾಸಿನಲ್ಲಿ 1900 ರಲ್ಲಿ ಪ್ರಾರಂಭವಾದ 'ಮಹಾಬೋಧಿ ಸೊಸೈಟಿ' ತನ್ನ ಶಾಖೆಯೊಂದನ್ನು ಮದ್ರಾಸ್ ಪಟ್ಟಣದಲ್ಲಿ ಪ್ರಾರಂಭಿಸಿತು. ಈ ಎರಡೂ ಸಂಸ್ಥೆಗಳು ಮದ್ರಾಸಿನಲ್ಲಿ

ಏಕಕಾಲಕ್ಕೆ ಬೇರೆ ಬೇರೆಯಾಗಿ ಆದರೆ ಪೂರಕವಾಗಿ ಕಾರ್ಯನಿರ್ವಹಿಸುತ್ತಿದ್ದುದು ಕಂಡು ಬರುತ್ತದೆ. 1903 ರಲ್ಲಿ 'ಸಾಕ್ಯ ಬೌದ್ಧ ಯುವ ಸಂಘ' ಸ್ಥಾಪನೆಯಾಯಿತು. ಪಂಡಿತ ಅಯೋಥಿದಾಸ್ ಮತ್ತು ಮಹಾಬೋಧಿ ಸೊಸೈಟಿಯ ಸ್ಥಾಪಕರಾದ ಬಿಕ್ಕು ಅನಗಾರಿಕ ಧರ್ಮಪಾಲ ಇವರು ಇವರ ನಾಯಕತ್ವದಲ್ಲಿ ಮತ್ತು 'ಕಲ್ಕತ್ತದ ಬೌದ್ಧ ಯುವ ಸಂಘದ' ಮಾರ್ಗದರ್ಶನದಲ್ಲಿ ಬೌದ್ಧ ಧರ್ಮದ ಪ್ರಸಾರಕ್ಕೆ ಹೆಚ್ಚಿನ ಒತ್ತು ನೀಡಿತು. ಆದರೆ ಹೆಚ್ಚಿನ ಪ್ರಮಾಣದಲ್ಲಿ ಈ ಕಾರ್ಯ ಚಟುವಟಿಕೆಗಳು ಇರಲಿಲ್ಲ. ಈ ಸಂದರ್ಭದಲ್ಲಿ ಬೌದ್ಧ ಮತ ಪ್ರಸಾರ ಮಾಡಿದ ಪ್ರಮುಖರಲ್ಲಿ ಪ್ರೊ.. ಲಕ್ಷ್ಮೀ ನರಸು[@@] ಒಬ್ಬರಾಗಿದ್ದಾರೆ. ಬೌದ್ಧ ವಿಧ್ವಾಂಸರಾದ ಇವರು ರಚಿಸಿದ ಬೌದ್ಧ ಧರ್ಮದ ತಿರುಳು (The Essence of Buddhism) ಪುಸ್ತಕವನ್ನು ಡಾ. ಅಂಬೇಡ್ಕರವರು ಮೆಚ್ಚಿಕೊಂಡು ಮುಂಬೈ ಥ್ಯಾಕರ್ ಕಂಪನಿಯಿಂದ ಪುನಃ 1948 ರಲ್ಲಿ ಈ ಪುಸ್ತಕವನ್ನು ಮರು ಮುದ್ರಿಸಿದ್ದನ್ನು ಕಾಣುತ್ತೇವೆ. ಪ್ರೊ. ಲಕ್ಷ್ಮೀ ನರಸು ಅವರೊಂದಿಗೆ ಶ್ರೀರಂಗವೇಲು ಚೆಟ್ಟಿಯಾರ್, ಎ.ಎಸ್. ಮುದಲಿಯಾರ್ ಸಹ ಬೌದ್ಧ ಧರ್ಮ ಪ್ರಸಾರಕ್ಕೆ ಮಹತ್ವದ ಕೊಡುಗೆ ಸಲ್ಲಿಸಿದ್ದನ್ನು ಕಾಣುತ್ತೇವೆ.

ಈ ಹೊತ್ತಿಗಾಗಲೇ ಮದ್ರಾಸ್ ಪ್ರಾಂತ್ಯದಲ್ಲಿ ಈ ಎರಡೂ ಸಂಸ್ಥೆಗಳು, ಸಂಸ್ಥೆಗಳ ಸದಸ್ಯರು, ಬೌದ್ಧ ಧರ್ಮದ ಬಗ್ಗೆ ಸಮರ್ಥವಾಗಿ ವಿಚಾರ ಮಂಡಿಸುವ, ದೇವರ ಅಸ್ತಿತ್ವದ ಬಗ್ಗೆ ಟೀಕಿಸುವ, ಸಂಪ್ರದಾಯ, ಹಾಗೂ ಹಿಂದೂ ಧರ್ಮದ ವಿರುದ್ಧ ಮಾತನಾಡುವ, ವೇದ ಮತ್ತು ವೇದ ಪ್ರಾಮಣ್ಯವನ್ನು ನಿಕಶಕ್ಕೆ ಒಡ್ಡುವ, ಸಾಮಾಜಿಕ ಪಿಡುಗು ಮತ್ತು ಸಾಮಾಜಿಕ ವಿಘಟನೆಗಳ ಬಗ್ಗೆ ಮಾತನಾಡುವ ಶಕ್ತಿ ಪಡೆದವರಾಗಿದ್ದರು. ಆದರೆ ಸಾಕ್ಯ ಬೌದ್ಧ ಸಂಘದ ಸಂಸ್ಥಾಪಕರಾದ ಪಂಡಿತ ಅಯೋಥಿದಾಸ್ ಅವರು, ಉದ್ರೇಕಕಾರಿ ಸ್ವರೂಪದ ವಿಚಾರಗಳನ್ನು, ಭಾವುಕ ಹಂದರಗಳನ್ನು ದಾಟಿ ಬೌದ್ಧ ಧರ್ಮವನ್ನು ಸಮಾಜದ ಎಲ್ಲಾ ಜನರೂ ಒಪ್ಪಿಕೊಳ್ಳುವ, ಆಕರ್ಷಿತಗೊಳ್ಳುವ ಪರಿಯನ್ನು ಸಾಧಿಸಿದ್ದರು. ಅವರಲ್ಲಿ ಒಬ್ಬ ಸಮರ್ಥ ಬೌದ್ಧ ಮಿಷನರಿ ರೂಪುಗೊಂಡಿದ್ದ. ಪಂಡಿತ ಅಯೋಥಿದಾಸ್ ಅವರ ವಿಚಾರಪೂರ್ಣ ಉಪನ್ಯಾಸಗಳನ್ನು ಸಮಾಜದ ಎಲ್ಲ ವರ್ಗದ ಜನ ಮೆಚ್ಚುತ್ತಿದ್ದರು. ಅವರ ಉಪನ್ಯಾಸ, ಬರವಣಿಗೆಗಳು ತಮಿಳು ಸಾಹಿತ್ಯದ, ತಮಿಳು ಚರಿತ್ರೆಯ ಮತ್ತು ದ್ರಾವಿಡ ಪರಂಪರೆಯನ್ನು ಆಧರಿಸಿ ಬಿಂಬಿತವಾಗಿರುತ್ತಿದ್ದವು. ಕ್ರೈಸ್ತರು, ಹಿಂದುಗಳು, ಮುಸ್ಲೀಮರು, ಬ್ರಾಹ್ಮಣರು, ಬ್ರಾಹ್ಮಣೇತರರು ಹೀಗೆ ಎಲ್ಲಾ ಕಡೆಯ ಜನ ಪಂಡಿತ ಅಯೋಥಿದಾಸ್ ಅವರ ಬೌದ್ಧಚಿಂತನೆಗೆ ಪ್ರಭಾವಿತರಾದರು. ಹೀಗಾಗಿ ಪಂಡಿತ ಅಯೋಥಿದಾಸ್ ಅವರು ಸಾಕ್ಯ ಬೌದ್ಧ ಸಂಘದ ಅಧ್ಯಕ್ಷರಾಗಿ ಪುನಃ ಪುನಃ ಆಯ್ಕೆಗೊಂಡರು. ಹೀಗೆ ಪಂಡಿತ ಅಯೋಥಿದಾಸ್ ಅವರು ಆ ಸಂದರ್ಭದಲ್ಲಿ ಒಬ್ಬ ಪ್ರಖ್ಯಾತೀತ ಬೌದ್ಧ ವಿದ್ವಾಂಸರಾಗಿ ಹೊರಹೊಮ್ಮಿದರು.

ಈಗಾಗಲೇ ಹೇಳಿದಂತೆ ಪಂಡಿತ ಅಯೋಥಿದಾಸ್ ಅವರಲ್ಲಿ ರೂಪು ತಳೆದಿದ್ದ ಬೌದ್ಧ ಮಿಷನರಿ ಹಾಗೆಯೇ ಕೂತುಕೊಳ್ಳಲಿಲ್ಲ. ಅವರು ತಮ್ಮ ಸಹವರ್ತಿಗಳಿಗೆ ಸಾಕಷ್ಟು ಮಾಹಿತಿ ನೀಡಲು ಮತ್ತು ಬೇರೆ ಬೇರೆ ದೇಶಗಳ ಬೌದ್ಧ ಸಾಂಸ್ಕೃತಿಕ ಪರಂಪರೆಯನ್ನು ಪರಿಚಯಿಸಲು ಬಿಕ್ಕುಗಳನ್ನು ಕರೆಸಿ ಅವರಿಂದ ಪ್ರೇರಣೆ ಕೊಡಿಸಿದರು. ಅವರ ಮಾತಿನಲ್ಲೇ ಹೇಳುವುದಾದರೆ,

"ಪ್ರತಿವಾರ ಸೊಸೈಟಿಯ ಸಭಾ ಮಂದಿರದಲ್ಲಿ ಉಪನ್ಯಾಸಗಳನ್ನು ಏರ್ಪಡಿಸುವುದರ ಜೊತೆಗೆ ಮದ್ರಾಸ್ ನಗರದಲ್ಲಿ ಅಲ್ಲಲ್ಲಿಯೂ ಆಗಿಂದಾಗ್ಗೆ ವಿಶೇಷ ಉಪನ್ಯಾಸಗಳನ್ನು ಏರ್ಪಡಿಸಲಾಯಿತು. ಜನರಲ್ಲಿ

ಭಗವಾನ್ ಬುದ್ಧರ ಜೀವನ ಮತ್ತು ತತ್ವಗಳ ಬಗ್ಗೆ ಆಸಕ್ತಿಮೂಡಿತು. 260 ಕ್ಕಿಂತ ಹೆಚ್ಚು ಜನರು ಈ ಸೊಸೈಟಿಗೆ ಬರಹೋಗುತ್ತಿದ್ದರು. ಬೌದ್ಧ ಬಿಕ್ಕುಗಳು, ಉಪಾಸಕರು ಮಹಿಳೆಯರು, ಹೀಗೆ ಹಾಲಂಡ್, ಚೀನಾ, ಜಪಾನ್, ಸಿಲೋನ್, ಸಯಾಮ್, ಸಿಂಗಾಪೂರ, ಚಿತ್ತಗಾಂಗ್, ಬನಾರಸ್, ಕಲ್ಕತ್ತ ಬುದ್ಧಗಯಾ ಮತ್ತು ಇತರ ಸ್ಥಳಗಳಿಂದ ಆಗಮಿಸಿದ್ದಾರೆ. ಈ ಸಂಘದಲ್ಲಿ ಹಲವಾರು ಬಾರಿ ವಾಸ್ತವ್ಯ ಮಾಡಿದ್ದಾರೆ.[16]'

ಆದರೆ ಈ ಸಂಘದ ಚಟುವಟಿಕೆಗಳ ಬಗ್ಗೆ ಸದಸ್ಯರ ಬಗ್ಗೆ ಬ್ರಾಹ್ಮಣೇತರ ಕೆಳವರ್ಗದ ಜನರಿಂದಲೇ ವಿರೋಧವೂ ಸೃಷ್ಟಿಯಾಯಿತು. ಬೌದ್ಧ ಅನುಯಾಯಿಗಳ ಬಗ್ಗೆ ಇಲ್ಲ ಸಲ್ಲದ ಟೀಕೆಗಳನ್ನು ಮಾಡಲಾಯಿತು. ಕರ ಪತ್ರ, ಚಳವಳಿ, ಇನ್ನು ಮುಂದೆ ಹೋಗಿ ಬೌದ್ಧರ ಮೇಲೆ ದೈಹಿಕ ಹಲ್ಲೆಗಳನ್ನು ಮಾಡುವ ಮಟ್ಟಕ್ಕೆ ಪರಿಸ್ಥಿತಿ ಮುಟ್ಟಿತು. ಟ್ರೇಡ್ ಯೂನಿಯನ್ ಮುಖಂಡರಾದ ಕಾಥಿರ್‌ವೇಲ್ ಪಿಳ್ಳೈ ಮತ್ತು ಟಿ.ವಿ. ಕಲ್ಯಾಣಸುಂದರಮ್[17], ಇವರು ಇಂತಹ ಪ್ರತಿಭಟನೆಯ ಮುಖಂಡತ್ವ ವಹಿಸಿದ್ದರು. ಏನೇ ಆದರೂ ಪಂಡಿತ ಸಿ. ಅಯೋಥಿದಾಸ್ ಅವರ ಸಮರ್ಥ ನಾಯಕತ್ವ ದೊರಕಿದ್ದ ಬೌದ್ಧ ಅನುಯಾಯಿಗಳು, ಬುದ್ಧನ ಪ್ರೀತಿ, ಕರುಣೆ, ಮುಂತಾದ ಮಹೋನ್ನತ ತತ್ವಗಳಿಂದ ಪ್ರೇರಿತಗೊಂಡಿದ್ದರಿಂದ ವಿರೋಧಿಗಳ ವಿಚಿದ್ರಕಾರಿ ಪ್ರಯತ್ನಗಳಿಗೆ ಹಿನ್ನಡೆಯಾಯಿತು. ಕ್ರಮೇಣ ಬೌದ್ಧ ಅನುಯಾಯಿಗಳ ಸಂಖ್ಯೆ ಹೆಚ್ಚುತ್ತ ಹೋಯಿತು. ಹೀಗೆ ಹಲವಾರು ವಿರೋಧ, ಹಣಕಾಸಿನ ನೆರವಿನ ಕೊರತೆಯ ನಡುವೆಯೇ ಬೌದ್ಧ ಧರ್ಮ, ಬೌದ್ಧ ಸಂಸ್ಕೃತಿ ಕಟ್ಟಿಕೊಟ್ಟ ಪಂಡಿತ ಸಿ. ಅಯೋಥಿದಾಸ್ ಅವರನ್ನು ಕೋಲಾರದ ಹಿರಿಯ ಬೌದ್ಧ ಉಪಾಸಕ, ಬೌದ್ಧ ಸಾಹಿತಿ, ಐ. ಲೋಗನಾಥನ್ (ಅನುಬಂಧ-1, ಚಿತ್ರ : 20 ನ್ನು ಗಮನಿಸಿ) ರವರು 'ಪಂಡಿತ ಸಿ. ಅಯೋಥಿದಾಸ್ ರವರು ಈ ಅರ್ಥದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನ ಮಾಡಿದ ದಕ್ಷಿಣ ಭಾರತದ ಪ್ರಥಮ ಬೌದ್ಧ ಪಂಡಿತರೆಂದು[18], ದಾಖಲಿಸುತ್ತಾರೆ.

ಪಂಡಿತ ಸಿ. ಅಯೋಥಿದಾಸ್ ಅವರ ಪ್ರಭಾವದಿಂದ, ಅವರ ಗರಡಿಯಲ್ಲಿ ಪಳಗಿದ ಹಲವಾರು ಬೌದ್ಧ ಮಿಷನರಿಗಳು ಬೇರೆ ಬೇರೆ ಕಡೆ ವಲಸೆ ಹೋದರು. ಇವರು ವಲಸೆ ಹೋಗುವ ಉದ್ದೇಶವು ಧರ್ಮದ ಅಧ್ಯಯನ ಮತ್ತು ಪ್ರಸಾರವಾಗಿತ್ತು.

ಪಿ. ಕೃಷ್ಣಸ್ವಾಮಿಯಾರ್ ಬರ್ಮಾ ದೇಶಕ್ಕೆ ಐ. ರಾಜರಾಮು (ಪಂಡಿತ ಸಿ. ಅಯೋಥಿದಾಸ್ ಅವರ ಪುತ್ರ) ದಕ್ಷಿಣ ಆಫ್ರಿಕಕ್ಕೆ ಮತ್ತು ಎಂ. ರಾಘುವರ್ ಅವರು ಕರ್ನಾಟಕದ ಕೆ.ಜಿ.ಎಫ್. ಗೆ ವಲಸೆ ಬಂದರು. ಐ. ಲೋಗನಾಥ್‌ರವರು ಹೇಳುವಂತೆ ಕೋಲಾರದಲ್ಲಿಯೂ ಬೌದ್ಧ ಧರ್ಮ ಪ್ರಸಾರ ಸರಳವಾಗಿರಲಿಲ್ಲ.

''ಎಂ. ರಾಘುವರ್ ಅವರು 1903 ರಲ್ಲಿ ಇಲ್ಲಿಗೆ ಬಂದಾಗ ಕೋಲಾರದ ಕೆ.ಜಿ.ಎಫ್. ಭಾಗದ ಎಲ್ಲಾ ಕಡೆ ಬುದ್ಧನ ಜೀವನ ಮತ್ತು ತತ್ವಗಳ ಕುರಿತು, ಬೌದ್ಧ ಧರ್ಮದ ಕುರಿತು ಉಪನ್ಯಾಸ ನೀಡಿದ್ದಾರೆ. ಪ್ರಾರಂಭದಲ್ಲಿ ಅವರು ಅನೇಕ ತೊಂದರೆಗಳನ್ನು ಎದುರಿಸಬೇಕಾಯಿತು. ಸನಾತನವಾದಿಗಳು ದೈಹಿಕ ಹಲ್ಲೆ ಮಾಡಲು, ರಹಸ್ಯದಿಂದ ರಾಘುವರ್ ಅವರ ಕಾರ್ಯಕ್ರಮಗಳನ್ನು ಹಾಳು ಮಾಡಲು ಪ್ರಯತ್ನಿಸಿದರು. ಹಿಂದೂ ಮತ್ತು ಕ್ರೈಸ್ತ ಧರ್ಮಕ್ಕೆ ಹಿನ್ನಡೆಯಾಗುತ್ತದೆಯೆಂಬ ಪೂರ್ವಾಗ್ರಹದೊಂದಿಗೆ ಹಲವಾರು ಹಲ್ಲೆಗಳನ್ನು ಮಾಡಲಾಯಿತು. ಹಾಗೆಯೇ ರಾಘುವರ್ ಅವರ ಮನೆಗೆ ಬೆಂಕಿ ಕೂಡ ಹಚ್ಚಲಾಯಿತು'[19] ಎಂದು

ದಾಖಲಿಸುತ್ತಾರೆ. ಈ ಎಲ್ಲ ಚಟುವಟಿಕೆಗಳ ಗಮನವಿಟ್ಟು ನೋಡುತ್ತಿದ್ದ ಪಂಡಿತ ಸಿ. ಅಯೋಥಿದಾಸ್ ಅವರು 1911 ರ ಮೇ 12 ರಂದು ಮದ್ರಾಸಿನ ರಾಯಲಪೇಟದಲ್ಲಿ ನಡೆಸಿದ ವೈಶಾಖ ಪೂರ್ಣಿಮೆ, ಭಗವಾನ್ ಗೌತಮ ಬುದ್ದರ ಜಯಂತಿಯನ್ನು ಆಚರಿಸಿದ ಬಗ್ಗೆ ವಿವರಗಳನ್ನು ತಿಳಿಸುತ್ತಾ ಸಾಕ್ಯ ಬೌದ್ದ ಸಂಘಕ್ಕೆ ಧನ ಸಹಾಯ ಮಾಡಲು ಯುರೋಪ ಮತ್ತು ಅಮೇರಿಕಾದ ಬೌದ್ದ ಸಂಘ ಸಂಸ್ಥೆಗಳಿಗೆ ಮನವಿ ಮಾಡಿಕೊಳ್ಳುತ್ತಾರೆ. ಈ ಪತ್ರದಲ್ಲಿ ಪಂಡಿತ ಸಿ. ಅಯೋಥಿದಾಸ್ ಅವರು ಬುದ್ದ ಜನಿಸಿದ ನಾಡಲ್ಲಿ ಇಂತಹ ಆಚರಣೆಗಳು 10-15 ವರ್ಷಗಳ ಹಿಂದೆ ಆಚರಿಸುವುದರಲಿ, ಕಲ್ಪಿಸಲೂ ಸಹ ಸಾಧ್ಯವಿರಲಿಲ್ಲವೆಂದು ಅಭಿಪ್ರಾಯ ಪಡುತ್ತಾರೆ. ಆದರೆ 20 ನೇ ಶತಮಾನ, ವೈಜ್ಞಾನಿಕ ತತ್ವಗಳಿಗೆ ಇಂಬುಕೊಡುವುದರಿಂದ ಒಂದು ವೈಜ್ಞಾನಿಕ ಧರ್ಮವನ್ನು ಅರಸಿ ಬಂದೇ ಬರುತ್ತಾರೆ ಎಂಬ ವಿಶ್ವಾಸ ವ್ಯಕ್ತಪಡಿಸುತ್ತಾರೆ. ವಿಜ್ಞಾನ ಹೇಗೆ ಬೆಳೆಯುತ್ತದೆಯೋ ಹಾಗೆ, ಬೌದ್ದ ಧರ್ಮವೂ ಬೆಳೆಯುತ್ತಾ ಹೋಗುತ್ತದೆ ಎಂದು ಅಭಿಪ್ರಾಯ ಪಡುತ್ತಾರೆ. ''ದಕ್ಷಿಣ ಭಾರತದಲ್ಲಿ ಸಾಖ್ಯ ಬೌದ್ದ ಸಂಘವು, ಬೌದ್ದ ಧರ್ಮ ಪ್ರಸಾರ ಮಾಡಿದ್ದನ್ನು ಯಾರೂ ಅಲ್ಲಗಳೆಯಲಾರರು''[20] ಎಂದು ಹೆಮ್ಮೆ ಪಟ್ಟುಕೊಳ್ಳುತ್ತಾರೆ. ಕರ್ನಾಟಕದ ಕೋಲಾರ ಮತ್ತು ಬೆಂಗಳೂರು ಶಾಖೆಗಳ ಚಟುವಟಿಕೆಗಳ ಬಗ್ಗೆ ಈ ಪತ್ರದಲ್ಲಿ ಈ ಕೆಳಗಿನಂತೆ ಉಲ್ಲೇಖಿಸುತ್ತಾರೆ.

ಕೋಲಾರ ಶಾಖೆಯ ಸದಸ್ಯರಾದ ಶ್ರೀ ಸಿ. ಲಿಂಗಯ್ಯ ಅವರನ್ನು ಸಾಖ್ಯ ಬೌದ್ದ ಸಂಘದ ವತಿಯಿಂದ ಸಿಲೋಲಿನ ಮಾಲಿಕಗಂಧ ವಿದ್ಯೋದಯ ಕಾಲೇಜಿಗೆ ಪಾಲಿ ಭಾಷೆಯ ಅಧ್ಯಯನ ಮಾಡಲು ಮತ್ತು 'ಚೀವರ'[@@@] ಧರಿಸಲು ಕಳುಹಿಸಲಾಗಿದೆ. ಹಲವಾರು ಶತಮಾನಗಳ ನಂತರ ಭಾರತೀಯರೊಬ್ಬರು ಬಿಕ್ಕುವಾಗಲಿಕ್ಕೆ ಸಿಲೋನಿಗೆ ತೆರಳಿದ್ದಾರೆ. ಹಾಲಂಡ್, ಚೀನಾ, ಜಪಾನ್, ಬರ್ಮಾ, ಸಿಯೋಲ್, ಸಿಲೋನ್, ಸಿಂಗಾಪೂರ, ಬನಾರಸ್, ಕಲ್ಕತ್ತಾ ಬುದ್ಧಗಯಾ ಮತ್ತಿತರ ಕಡೆಗಳಿಂದ ಈ ಶಾಖೆಗೆ ಬಿಕ್ಕುಗಳು, ಉಪಾಸಕರು ಭೇಟಿ ನೀಡಿದ್ದಾರೆ.

ಕೋಲಾರ ಶಾಖೆಯವರು 'ಅಂಗವಿಕಲ ಕಾರ್ಮಿಕರಿಗಾಗಿ' ಮಾರಿಕುಪ್ಪಂನಲ್ಲಿ (ಮೈಸೂರು ಮೈನ್ಸ್ ಲಿ.,) ಒಂದು ಧಮ್ಮ ನಿಧಿಯನ್ನು ಸ್ಥಾಪಿಸಿರುವುದು ಕಂಡು ಬರುತ್ತದೆ. ಭಾರತದಲ್ಲಿಯೇ ಮೊದಲ ಬಾರಿಗೆ ಅಂಗವಿಕಲರ ಬಗ್ಗೆ ಕಾಳಜಿ ವಹಿಸಿದ ಸಂಸ್ಥೆ ಇದಾಗಿರಬಹುದು. ಮೈನಿಂಗ್‌ನಲ್ಲಿ ಕೈಕಾಲು ಕಳೆದುಕೊಂಡವರ ನೆರವಿಗೆ ಈ ದಾನದ ನಿಧಿ, ಸಹಾಯ ಕೋರಿ ಬಂದಿತ್ತು ಎನ್ನುವುದು ಮುಖ್ಯವಾದ ಅಂಶ. ಅದರೊಟ್ಟಿಗೆ ಬೌದ್ದ ಧರ್ಮದ ಅನುಯಾಯಿಗಳು ಬುದ್ದನ ಪ್ರೀತಿ, ಕರುಣೆ, ತತ್ವಗಳಲ್ಲಿ ತಮ್ಮ ದೈನಂದಿನ ಜೀವನದಲ್ಲೂ ಅಳವಡಿಸಿಕೊಂಡಿದ್ದ ಬಗ್ಗೆ ಈ ಚಟುವಟಿಕೆ ಪ್ರಧಾನ ಸಾಕ್ಷಿಯಾಗಿದೆ. ಈ ಕುರಿತು ಪಂಡಿತ ಸಿ. ಅಯೋಥಿದಾಸ್ ದಾಖಲಿಸುತ್ತ ''ಧಮ್ಮ ನಿಧಿಯನ್ನು ಪ್ರಾರಂಭಿಸಿ ಪೂರ್ಣ ಪ್ರಮಾಣದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ''[21] ಎಂದು ಹೇಳುತ್ತಾರೆ.

ಪಂಡಿತ ಸಿ. ಅಯೋಥಿದಾಸ್ ಅವರು ಮುಂದುವರೆದು '. . . ಎಂ. ರಾಘವರ್ ಮದ್ರಾಸಿನ ಸಾಕ್ಯ ಬೌದ್ದ ಸಂಘದ ಸದಸ್ಯರು, ಕೋಲಾರಕ್ಕೆ ಹೋಗಿ ಕೆಲವು ಮಿತ್ರರ ಸಹಾಯದಿಂದ ಸಾಕ್ಯ ಬೌದ್ದ ಸಂಘ ಶಾಖೆಯನ್ನು ಪ್ರಾರಂಭಿಸಿದ್ದಾರೆ. ಅದೇ ವೇಳೆಗೆ ನಾನೂ ಸಹ ಕೋಲಾರಕ್ಕೆ ಉಪನ್ಯಾಸ ನೀಡಲು ಹೋಗಿದ್ದೇನೆ, ನಂತರ ಬೆಂಗಳೂರಿಗೆ ತೆರಳಿ ಅಲ್ಲಿ ಮತ್ತೊಂದು ಸಾಕ್ಯ ಬೌದ್ದ ಸಂಘವನ್ನು ಸ್ಥಾಪಿಸಿದ್ದೇನೆ.

ಇದರೊಂದಿಗೆ ಒಂದು ಶಾಲೆ ಮತ್ತು ಗ್ರಂಥಾಲಯವನ್ನು ಸಹ ಕೋಲಾರ ಶಾಖೆಯಲ್ಲಿ ತೆರೆಯಲಾಗಿದೆ[22], ಎಂದು ವರದಿಯಲ್ಲಿ ತಿಳಿಸುತ್ತಾರೆ.

ಮುಂದೆ ಪಂಡಿತ ಸಿ. ಐಯೋಥಿದಾಸ್ ಅವರು ಸಾಕ್ಯ ಬೌದ್ಧ ಸಂಘಕ್ಕೆ ಮದ್ರಾಸಿನಲ್ಲಿ ಥಿಯೋಸೋಫಿಕಲ್ ಸೊಸೈಟಿಯ ಅಧ್ಯಕ್ಷರಾದ ಶ್ರೀಮತಿ ಅನಿಬೆಸೆಂಟ್‌ರವರ ದಯಾಳು ಹೃದಯವನ್ನು ನೆನೆಯುತ್ತಾರೆ. ಅದರ ಜೊತೆಗೆ ಬೌದ್ಧ ಧರ್ಮದ ಪ್ರಸಾರ ಕಾರ್ಯದಲ್ಲಿ ತಮಗೆ ಹೆಚ್ಚಿನ ಶಕ್ತಿ ನೀಡಿದ ಮತ್ತೊಂದು ಘಟನೆಯ ಬಗ್ಗೆ ದಾಖಲಿಸುತ್ತಾರೆ.

'ಕೋಲಾರದ ಉತ್ತಮೋತ್ತ ಬೌದ್ಧ ಅನುಯಾಯಿಗಳು ನನಗೆ ಕೊಡುಗೆಯಾಗಿ ನೀಡಿದ ಪ್ರಿಂಟಿಂಗ್ ಪ್ರೆಸ್‌ನಿಂದ, ಪ್ರೀತಿ, ವಿಶ್ವ ಭ್ರಾತೃತ್ವ ತುಂಬಿದ ಬೌದ್ಧ ಧರ್ಮವನ್ನು ಪುನಃ ಕಟ್ಟಲಿಕ್ಕೆ ಅನುಕೂಲವಾಯಿತು[23], ಎಂದು ಹರ್ಷ ವ್ಯಕ್ತಪಡಿಸುತ್ತಾರೆ. ದೇಶ ವಿದೇಶಗಳಲ್ಲಿ ಸ್ಥಾಪಿತವಾದ ಸಾಕ್ಯ ಬೌದ್ಧ ಸಂಘದ ಶಾಖೆಗಳು ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಬುದ್ಧನ ಪ್ರೀತಿ ಕರುಣೆಯ ಧರ್ಮವನ್ನು ಸ್ಥಾಪಿಸುವಲ್ಲಿ ಮಹತ್ವದ ಕಾರ್ಯ ನಿರ್ವಹಿಸುತ್ತಿರುವುದಾಗಿ ಮನವಿ ಪತ್ರದಲ್ಲಿ ಉಲ್ಲೇಖಿಸುತ್ತಾರೆ. ಧರ್ಮದ ಬೀಜಗಳು ಬಿತ್ತಲ್ಪಟ್ಟಿದ್ದು ಮುಂದೊಂದು ದಿನ ವಿಫುಲವಾದ ಸುಗ್ಗಿ ಕಾದಿದೆ ಎಂದು ಹೇಳುತ್ತಾರೆ.

## ಸಾಕ್ಯ ಬೌದ್ಧ ಸಂಘದ ಶಾಖೆಗಳು[24]

| ಪ್ರಾಂತ / ಪ್ರದೇಶ | ಸ್ಥಳ | ಕಾರ್ಯದರ್ಶಿಗಳು (ಅಂದಿನ) |
|---|---|---|
| 1. ಮೈಸೂರು | 1) ಮಾರಿಕುಪ್ಪಂ (ಕೆ.ಜಿ.ಎಫ್) | ಸಿ. ಗುರುಸ್ವಾಮಿ, ಉಪಾಸಕ |
| | 2) ಚಾಂಪಿಯನ್ ರೀಪ್ (ಕೆ.ಜಿ.ಎಫ್) (ಮತ್ತೊಂದು ಶಾಖೆ) | ಜಿ. ಅಪ್ಪಾದೊರೈಯಾರ್ |
| 2. ಮೈಸೂರು | ಬೆಂಗಳೂರು (ಕಾಕ್ಸ್‌ಟೌನ್) | ವಿ. ಜೀವರತ್ನಂ |
| 3. ಉತ್ತರ ಆರ್ಕಾಟ್ | ತಿರುಪತ್ತೂರು | ಸಿ. ಕೆ. ನಾಗುಲು ಪಿಳ್ಳೈ |
| 4. ಹೈದರಾಬಾದ್ | ಸಿಕಂದರಾಬಾದ್ | ಆರ್.ವಿ. ಸಭಾಪತಿ |
| 5. ಬರ್ಮಾ | ರಂಗೂನ್ | ಎಸ್. ಅಣ್ಣಮಲೈ |
| 6. ದಕ್ಷಿಣ ಆಫ್ರಿಕಾ | ನಾತಲ್, ದರ್ಬಾನ್ (ಓವರ್ ಪೋರ್ಟ್) | ವಿ. ವೀರನ್ |
| 7. ಮುಂಬೈ, ಕರ್ನಾಟಕ | ಹುಬ್ಬಳ್ಳಿ[25] | ಪಿ.ಜಿ. ಕಮಲನಾಥನ್ |
| 8. ಕೊಡಗು | ಮಡಿಕೇರಿ | ವಿ. ಮಹಾಸಾಮಿಯಾರ್ |
| 9. ಕ್ಯಾಲಿಕಟ್ } 10. ಪುಣೆ | (ಕೆ.ಜಿ.ಎಫ್. ನ ಐ. ಲೋಗನಾಥನ್‌ರವರು ಹೊಂದಿದ ವೈಯಕ್ತಿಕ ಕಡತಗಳನ್ನು ಆಧರಿಸಿ.) | |
| 11. ಮದ್ರಾಸ್ | ಮದ್ರಾಸ್ (ರಾಯಲಪೇಟ್) | ಪಂಡಿತ ಸಿ. ಅಯೋಥಿದಾಸ್ |

ಈ ಎಲ್ಲಾ ಶಾಖೆಗಳಿಗೆ ಸಂಪರ್ಕ ಕಲ್ಪಿಸುವ ಪ್ರಯತ್ನವಾಗಿ ಪಂಡಿತ ಸಿ. ಅಯೋಥಿದಾಸ್ 1907 ಜೂನ್ 19 ರಂದು ಮದ್ರಾಸಿನ ಸಾಕ್ಯ ಬೌದ್ಧ ಸಂಘದ ಕಚೇರಿಯಲ್ಲಿ 'ಒಂದು ಪೈಸಾ ತಮಿಳನ್' (Oru Paisa Tamilan) ಎಂಬ ಬೌದ್ಧ ಪತ್ರಿಕೆಯನ್ನು ಪ್ರಕಟಿಸಿದರು. ಇದನ್ನು ಮದ್ರಾಸಿನ ರಾಯಲಪೇಟ್‌ದ ಬುದ್ದಿಸ್ಟ್ ಪ್ರೆಸ್‌ನಲ್ಲಿಯೇ ಮುದ್ರಿಸುತ್ತಿದ್ದರು. ಈ ಪತ್ರಿಕೆಯ ಮುಖ್ಯ ಉದ್ದೇಶ ಬೌದ್ಧ ಧರ್ಮದ ವಿವರಣೆ ಮತ್ತು ಪ್ರಸಾರವಾಗಿದ್ದಿತು. ಇದೇ ವರ್ಷಾಂತ್ಯದಲ್ಲಿ ಕೋಲಾರದ ಎಂ. ವೈ. ಮುರುಗೇಸಮ್, ಸಿ. ಗುರುಸ್ವಾಮಿ ಮತ್ತು ಎ.ಪಿ. ಪೆರಿಯಸ್ವಾಮಿ, ಪುಲವರ್ ಅವರು[26], ಎಂ. ರಾಘವರ್ ಅವರ ಬೌದ್ಧ ಧರ್ಮದ ವಿವರಣೆಯಿಂದ ಪ್ರಭಾವಿತರಾಗಿ ಬೌದ್ಧ ಧರ್ಮ ಸ್ವೀಕರಿಸಿದರು. 20 ಅಕ್ಟೋಬರ್ 1907 ರಂದು ಮದ್ರಾಸಿನ ಮುಖ್ಯ ಕಚೇರಿಯಲ್ಲಿ ಬರ್ಮಾದ ಬಿಕ್ಕು ಪೂಜ್ಯ ವಿ. ವಿಲಾಸ ಅವರಿಂದ ಪಂಚಶೀಲ ಪ್ರಜ್ಞೆ ಬೋಧಿಸಲಾಯಿತು. ಅಲ್ಲಿಂದ ಮರಳಿದ ತಕ್ಷಣವೇ ಅವರು ಶಿವಕೇಶ ಅದ್ವೈದ ಶಿಪ್ಪಾ ಸಭೆಯನ್ನು 'ಸಾಕ್ಯ ಬೌದ್ಧ ಸಂಘ' ಎಂದು ಪರಿವರ್ತಿಸಿ, 18, ನವ್ಹೆಂಬರ್ 1907 ರಂದು ಒಂದು 'ದಕ್ಷಿಣ ಭಾರತ ಗೌತಮ ಬುದ್ಧ ಪ್ರಾಥಮಿಕ ಶಾಲೆಯನ್ನು' ತೆರೆದರು. ವಿದ್ಯಾಭಿವೃದ್ಧಿ ಎಂಬ ವಾಚನಾಲಯವನ್ನು ಪ್ರಾರಂಭಿಸಲಾಯಿತು. ಕೋಲಾರ ಚಿನ್ನದ ಗಣಿಯಲ್ಲಿ ಗುತ್ತಿಗೆದಾರರಾಗಿದ್ದ ಎಂ. ವೈ. ಮುರುಗೇಸಮ್ ಸಹಜವಾಗಿಯೇ ಶ್ರೀಮಂತರಾಗಿದ್ದರು. 1907 ರಲ್ಲಿ ಇನ್ನೂ ಇವರು ಬೌದ್ಧ ಧರ್ಮ ಸ್ವೀಕರಿಸುವುದಕ್ಕಿಂತ ಪೂರ್ವದಲ್ಲಿಯೇ ಬೌದ್ಧ ಪೂರ್ಣಿಮೆಯಂದು 700 ಜನರಿಗೆ ಅನ್ನ ಸಂತರ್ಪಣೆ ಏರ್ಪಡಿಸಿದ್ದರು. ಇಂತಹ ವ್ಯಕ್ತಿ ಬೌದ್ಧರಾಗಿದ್ದರಿಂದ ಸಹಜವಾಗಿಯೇ ಬೌದ್ಧ ಸಂಘದ ಚಟುವಟಿಕೆಗಳಿಗೆ ಇಂಬು ದೊರೆಯಿತು. ಕೋಲಾರದ ಚಟುವಟಿಕೆಗಳು ಬೆಂಗಳೂರಿನ ಕ್ಯಾಂಟೋನಮೆಂಟ್ ಪ್ರದೇಶದಲ್ಲಿದ್ದ ಸಾಕ್ಯ ಬೌದ್ಧ ಸಂಘಕ್ಕೂ ತನ್ನ ಪ್ರಭಾವ ಬೀರಿದವು. ಅದೇ ಸಂದರ್ಭದಲ್ಲಿ ನವ್ಹೆಂಬರ್ 1 ರಂದು ಬೌದ್ಧ ವಾಚನಾಲಯವನ್ನು ಉದ್ಘಾಟಿಸಲಾಯಿತು. ಪಂಡಿತ ಸಿ. ಐಯೋಥಿದಾಸ್ ಅವರು ಈ ಸಮಾರಂಭಕ್ಕಾಗಿಯೇ ವಿಶೇಷವಾಗಿ ಆಗಮಿಸಿದ್ದರು. ಇದೇ ವರ್ಷವೇ ಪ್ರೊ. ಲಕ್ಷ್ಮೀ ನರಸು ಅವರ 'ಬೌದ್ಧ ಧರ್ಮದ ತಿರುಳು' (Essence of Buddhism) ಪುಸ್ತಕವನ್ನು ಪ್ರಕಟಿಸಲಾಯಿತು. ಪ್ರೊ. ನರಸು ಒಬ್ಬ ಕಟ್ಟಾ ಬೌದ್ಧ ಅನುಯಾಯಿಯಾಗಿದ್ದರು. ಈ ಪುಸ್ತಕಕ್ಕೆ ಮಹಾಬೋಧಿ ಸೊಸೈಟಿಯ ಪ್ರಧಾನ ಕಾರ್ಯದರ್ಶಿಗಳು, ಸಾಕ್ಯ ಬೌದ್ಧ ಸಂಘದ ಮಾರ್ಗದರ್ಶಕರೂ ಆಗಿದ್ದ ಪೂಜ್ಯ ಬಿಕ್ಕು ಅನಗಾರಿಕ ಧರ್ಮಪಾಲರು ಮುನ್ನುಡಿ ಬರೆದಿದ್ದಾರೆ. ಈ ಮೊದಲೇ ಹೇಳಿದಂತೆ ಡಾ. ಅಂಬೇಡ್ಕರ್‌ರವರು ಈ ಪುಸ್ತಕವನ್ನು ಮೆಚ್ಚಿಕೊಂಡು 1948 ರಲ್ಲಿ ಪುನಃ ಪ್ರಕಟಿಸಿದರು. ಈ ಪುಸ್ತಕದ ಮರು ಆವೃತ್ತಿಗೆ ತಮ್ಮದೇ ಆದ ಪೂರ್ವ ಪೀಠಿಕೆ ಬರೆದು ಮುಂಬೈನ ಥ್ಯಾಕರ್ ಮತ್ತು ಕಂಪನಿಯಿಂದ ಪ್ರಕಟಿಸಿದರು. ಡಾ. ಅಂಬೇಡ್ಕರ್‌ರವರು ಈ ಪುಸ್ತಕದ ಮುನ್ನುಡಿಯಲ್ಲಿ ದಾಖಲಿಸಿದ ವಿವರಗಳು ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ಮಹತ್ವದ್ದಾಗಿರುವುದನ್ನು ನೋಡುತ್ತೇವೆ. ಅವರು ಮುನ್ನುಡಿಯಲ್ಲಿ ಬರೆಯುತ್ತಾ

''ನಾನು ಈ ಪುಸ್ತಕವನ್ನು ಅತ್ಯಂತ ಪ್ರೀತಿಯಿಂದ ಪರಿಚಯಿಸುತ್ತಿದ್ದೇನೆ. ಈ ಪುಸ್ತಕವನ್ನು ಬರೆದ ಪ್ರೊ. ಪಿ. ಲಕ್ಷ್ಮೀ ನರಸು ಅವರನ್ನು ನಾನು ಭೇಟಿ ಮಾಡಿಲ್ಲ, ಆದರೆ ಅವರ ಬಗ್ಗೆ ಡಾ. ಪಟ್ಟಾಬಿ ಸೀತಾ ರಾಮಯ್ಯನವರಿಂದ ಮಾಹಿತಿ ಪಡೆದಿರುತ್ತೇನೆ. ಭೌತಶಾಸ್ತ್ರ ರಸಾಯನಶಾಸ್ತ್ರದಲ್ಲಿ ಅಧ್ಯಯನ ಮಾಡಿದ್ದ ಪ್ರೊ. ನರಸು ಬೌದ್ಧ ಧರ್ಮದ ಬಗ್ಗೆ ಇಷ್ಟು ಆಳವಾದ ವಿಚಾರಗಳನ್ನು ಮಂಡಿಸಿದ್ದು ಅವರು ಹಿಂದೂ ಧರ್ಮದ ಕ್ರೂರತೆಯನ್ನು ಎಷ್ಟಾಗಿ ಅರಿತುಕೊಂಡಿದ್ದಾರೆಂಬುದಕ್ಕೆ ಸಾಕ್ಷಿಯಾಗಿದೆ.. . . . ಅವರೊಬ್ಬ ಶಿಕ್ಷಣ ತಜ್ಞ,

ರಾಷ್ಟ್ರೀಯವಾದಿ ಕಳಕಳಿಯೊಂದಿಗೆ ಬೌದ್ಧ ಧರ್ಮವನ್ನು ಬೋಧಿಸಿದವರು. ಇಂತಹ ಉತ್ತಮ ಪುಸ್ತಕವನ್ನು ಯಾವ ಕ್ಲೇಷವೂ ಇಲ್ಲದೇ ಆಸಕ್ತ ಜನರು ಓದಲು ಶಿಫಾರಸ್ಸು ಮಾಡುತ್ತೇನೆ.[27]'' ಎಂದು ಹೇಳುತ್ತ ಬೌದ್ಧ ಧರ್ಮದ ಬಗ್ಗೆ ಟೀಕೆ ಟಿಪ್ಪಣಿಗಳ ಬಗ್ಗೆ ಸಾಕಷ್ಟು ಹೇಳುವುದಿದೆ. ಆದರೆ ಈ ಸಂದರ್ಭವನ್ನು ನಾನು ಬಳಸಿಕೊಳ್ಳದೇ ಪ್ರತ್ಯೇಕವಾಗಿ ನನ್ನದೇ ಬೌದ್ಧ ಕೃತಿಯಲ್ಲಿ ಉತ್ತರಗಳನ್ನು ಕೊಡುತ್ತೇನೆ[28]' ಎಂದು ಹೇಳಿಕೊಳ್ಳುತ್ತಾರೆ.

ಅಂಬೇಡ್ಕರ್‌ರವರು ಮೆಚ್ಚಿಕೊಂಡ ಪ್ರೊ. ಲಕ್ಷ್ಮೀ ನರಸು ಅವರಂತಹ ಪ್ರಬುದ್ಧ ಬೌದ್ಧ ವಿಧ್ವಾಂಸರು ಸಾಕ್ಯ ಬೌದ್ಧ ಸಂಘದಲ್ಲಿದ್ದರು. ಮುಂದೆ ಈ ಕೃತಿಯ ಹಲವಾರು ಆವೃತ್ತಿಗಳು ಹೊರ ಬಂದವು. ಜಪಾನ್ ಮತ್ತು ಝೆಕೋಸ್ಲೋವಾಕಿಯನ್ ಭಾಷೆಯಲ್ಲಿ ಈ ಕೃತಿಯನ್ನು ಪ್ರಕಟಿಸಲಾಯಿತು. ಇದೇ ಪುಸ್ತಕ ಮುಂದೆ ಜಿ. ಅಪ್ಪಾದೊರೈಯಾರ್ ಅವರ ಜನಪ್ರಿಯ 'ಬುದ್ಧನ ಕರುಣಾ ಧರ್ಮ' ('Puthrathu Arularam' – Buddha's Compassionate Religion) ದ ರಚನೆಗೆ ಆಕರ ಗ್ರಂಥವಾಯಿತು. ಇದೇ ಜಿ. ಅಪ್ಪಾದೊರೈಯಾರ್ ಮತ್ತು ಎ.ಪಿ. ಪೆರಿಯಸ್ವಾಮಿ ಪುಲವರ್ ಅವರು ಪಂಡಿತ ಸಿ. ಅಯೋಥಿಥಾಸ್ ಅವರ ಪ್ರಮುಖ ಶಿಷ್ಯರಾಗಿ (ಲೆಫ್ಟಿನೆಂಟ್ಸ್) ಹೊರಹೊಮ್ಮಿರುವುದನ್ನು ಕಾಣುತ್ತೇವೆ.

## 3.2. ಅನ್ಯ ರಾಷ್ಟ್ರಗಳಿಂದ ಕರ್ನಾಟಕಕ್ಕೆ ಆಗಮಿಸಿ ಬೌದ್ಧಧರ್ಮ ಪ್ರಸಾರ ಮಾಡಿದ ಬಿಕ್ಕುಗಳು ಮತ್ತು ಇತರ ಬೌದ್ಧರು :

1903 ರಲ್ಲಿ 'ಎಂ. ರಾಘವರ್'[29] ಅವರು ಮದ್ರಾಸಿನಿಂದ ಕರ್ನಾಟಕದ ಕೆ.ಜಿ.ಎಫ್. ಗೆ ಆಗಮಿಸಿದಂದಿನಿಂದ ಈ ರಾಜ್ಯದಲ್ಲಿ ಬೌದ್ಧಧರ್ಮ ಆಧುನಿಕ ಕಾಲದಲ್ಲಿ ತನ್ನ ಅಧ್ಯಾಯ ಪ್ರಾರಂಭಿಸಿದ್ದು ಕಂಡು ಬರುತ್ತದೆ. ತಮಿಳುನಾಡಿನ ಬೌದ್ಧ ಪಂಡಿತ ಅಯೋಥಿದಾಸ್ ಅವರ ಅನುಯಾಯಿಯಾದ ರಾಘವರ್ ಸಿಲೋನಿನ ಪೂಜ್ಯ ಬಿಕ್ಕು ನಂದಾರಾಮ್ ಅವರಿಂದ ಬೌದ್ಧದೀಕ್ಷೆ ಪಡೆದುಕೊಂಡು ಬಂದವರಾಗಿದ್ದರು. '1903 ರಿಂದ 1907 ರವರೆಗೆ ಸತತವಾಗಿ ಕೆ.ಜಿ.ಎಫ್. ಭಾಗದಲ್ಲಿ ಎಂ. ರಾಘವರ್ ಬುದ್ಧ ಜೀವನ ಮತ್ತು ಆತನ ಬೋಧನೆಗಳ ಪ್ರಚಾರ ಕಾರ್ಯ ಮಾಡಿದರು. ಸನಾತನ ಹಿಂದುಗಳು, ಇವರ ಮೇಲೆ ದೈಹಿಕ ಹಲ್ಲೆ ಕೂಡ ಮಾಡಲು ಪ್ರಯತ್ನಿಸಿದರು. ಆದರೆ ಎಂ.ವೈ. ಮುರುಗೇಸಂ ಮತ್ತು ಸಿ. ಗುರುಸ್ವಾಮಿ ಎಂಬುವವರ ನೆರವಿನಿಂದ ಮಾರಿಕುಪ್ಪಂನಲ್ಲಿ ಇವರು ನೆಲೆ ನಿಲ್ಲಲು ಸಾಧ್ಯವಾಯಿತು. ಪ್ರಥಮದಲ್ಲಿ ಸಹಾಯ ಮಾಡುತ್ತಿದ್ದ ಈ ಇಬ್ಬರು ಪ್ರಭಾವಿ ವ್ಯಕ್ತಿಗಳನ್ನೇ ಬೌದ್ಧಧರ್ಮ ಸ್ವೀಕರಿಸುವಂತೆ ಮಾಡುವಲ್ಲಿ ರಾಘವರ್ ಯಶಸ್ವಿಯಾದರೆಂದು ಐ. ಲೋಗನಾಥನ್ ದಾಖಲಿಸುತ್ತಾರೆ. 1907 ರ ವೇಳೆಗೆ ಎಂ.ವೈ. ಮುರುಗೇಸಂ, ಡಿ.ಗುರುಸ್ವಾಮಿ, ಎ.ಪಿ. ಪೆರಿಯಸ್ವಾಮಿ ಪುಲವರ್, ಐ.ಎನ್. ಐಯಾಕನ್ನು ಇವರು ಬೌದ್ಧಧರ್ಮ ಸ್ವೀಕರಿಸುತ್ತಾರೆ. (ಅನುಬಂಧ-1, ಚಿತ್ರ : 8, 9 ಮತ್ತು 10 ಗಮನಿಸಿ) ''1908 ರಲ್ಲಿ ದಕ್ಷಿಣ ಭಾರತ ಗೌತಮ ಬುದ್ಧ ಪ್ರಾಥಮಿಕ ಶಾಲೆಯ ಮುಖ್ಯಸ್ಥರಾಗಿದ್ದ ಐಯಾಕನ್ನು ಮತ್ತು ಅವರ ಪತ್ನಿ ಅಮ್ಮಾಯಮ್ಮಾಳ್ ಅವರು ಐರೀಶ್ ಬಿಕ್ಕು ಪೂಜ್ಯಯು ವಿಸುತ್ತ ಅವರಿಂದ ಅವರಿಂದ ದೀಕ್ಷೆ ಪಡೆದರು. ಆ ತಕ್ಷಣದ ಸಂದರ್ಭದಲ್ಲಿಯೇ, ಒಂದು ಸಾವಿರಕ್ಕೂ ಹೆಚ್ಚು ಕಾರ್ಮಿಕರು, ಅವರ ಕುಟುಂಬದ ಸದಸ್ಯರು ಬೌದ್ಧಧರ್ಮ ಸ್ವೀಕರಿಸಿ ಪಂಚಶೀಲ ಪ್ರತಿಜ್ಞೆಗೈದರೆಂದು[30] ತಿಳಿದುಬರುತ್ತದೆ. ಬೌದ್ಧರ ಸಂಖ್ಯೆ ಹೆಚ್ಚಾದಂತೆ ಇಲ್ಲಿ ಬೌದ್ಧ ವಿಹಾರವು ಪ್ರಾರಂಭವಾಗುತ್ತದೆ. ಪ್ರಾರಂಭದಲ್ಲಿ ಒಂದು ಸಾದಾ ಶೆಡ್‌ನಲ್ಲಿ (Tin Shed) ಪ್ರಾರಂಭವಾದ ಈ ವಿಹಾರಕ್ಕೆ 'ಸಿಲೋನ್, ಬರ್ಮಾ, ಥೈಲ್ಯಾಂಡ್, ಸಯಾಮ್ ಮತ್ತು

ಐರ್ಲ್ಯಾಂಡ್ ದೇಶದ ಬೌದ್ಧಬಿಕ್ಕುಗಳು'[31] ಆಗಮಿಸಿ ಕೆ.ಜಿ.ಎಫ್. ಪಟ್ಟಣದ ಜನತೆಗೆ, ಬೌದ್ಧರಿಗೆ ಪ್ರವಚನ ನೀಡಿದ್ದಾರೆ.

ಹೀಗೆ ಅನ್ಯರಾಷ್ಟ್ರಗಳಿಂದ ಆಗಮಿಸುತ್ತಿದ್ದ ಬೌದ್ಧ ಬಿಕ್ಕುಗಳು ತಾತ್ಕಾಲಿಕವಾಗಿ ವಾಸ್ತವ್ಯ ಮಾಡುತ್ತಿದ್ದುದು, ಒಂದೇ ಕಡೆ ನೆಲೆ ನಿಲ್ಲದೇ ಇರುವುದು ಕಂಡು ಬರುತ್ತದೆ. ಆದರೆ 1924 ರಲ್ಲಿ ಕೋಲಾದ ಪ್ರೇರಣೆಯಿಂದ ತಮಿಳು ಭಾಷಿಕ ದಲಿತ ಸಮುದಾಯದ ಸಂಪರ್ಕದಿಂದ ಹುಬ್ಬಳ್ಳಿಯಲ್ಲಿನ ತಮಿಳು ಭಾಷಿಕ ದಲಿತರು ಬೌದ್ಧಧರ್ಮ ಸ್ವೀಕರಿಸಿದ್ದು ಕಂಡು ಬಂದಿದೆ. ಶ್ರೀಲಂಕಾದ ಬೌದ್ಧಬಿಕ್ಕುಗಳು, ಬೌದ್ಧ ಸಂಸ್ಥೆಗಳೊಂದಿಗೆ ಸಂಪರ್ಕ ಸಾಧಿಸುವಲ್ಲಿ ಹುಬ್ಬಳ್ಳಿ ವಿಹಾರ 1920 ರ ದಶಕದಲ್ಲೇ ಯಶಸ್ವಿಯಾಗಿರುವುದು ದಾಖಲೆಗಳಿಂದ ತಿಳಿದು ಬರುತ್ತದೆ. ಶ್ರೀಲಂಕಾದ ಬೌದ್ಧ ಬಿಕ್ಕುಗಳು ವಿಹಾರಗಳಿಗೆ ಭೇಟಿ ನೀಡಿರುವುದು ಕಂಡು ಬರುತ್ತದೆ. 1924 ರಲ್ಲಿ ಪ್ರಾರಂಭವಾದ ಹುಬ್ಬಳ್ಳಿಯ ಬೌದ್ಧ ವಿಹಾರವನ್ನು ಶ್ರೀಲಂಕಾದ ಬೌದ್ಧ ಬಿಕ್ಕು ಸುಮತಪಾಲಥೇರೋ ಅವರು ಉದ್ಘಾಟಿಸಿದ್ದಾರೆ[32]. ಬೌದ್ಧ ಸಂಸ್ಕೃತಿ, ಯುವಕರಲ್ಲಿ ಬೌದ್ಧತತ್ವಗಳ ಪ್ರಸಾರ ಕಾರ್ಯ ಪ್ರಾರಂಭಿಸಿದ ಈ ವಿಹಾರದಲ್ಲಿ ಬೌದ್ಧ ಗ್ರಂಥಾಲಯವನ್ನು 1938 ರಲ್ಲಿ ಇಟಾಲಿಯನ್ ಬೌದ್ಧಬಿಕ್ಕು ಪೂಜ್ಯ ಲೋಕನಾಥರು ಉದ್ಘಾಟಿಸಿದ್ದಾರೆ.

ಪ್ರಸ್ತುತದಲ್ಲಿರುವ ನೂತನ ಕಟ್ಟಡವನ್ನು (ಅನುಬಂಧ-1 ರ ಚಿತ್ರ : 16 ನ್ನು ನೋಡಿ). 1967 ರಲ್ಲಿ ನಿರ್ಮಿಸಲಾಗಿದೆ. ಆದರೆ ಒಂದು ದಶಕದ ಕಾಲ ಇಲ್ಲಿ ನೆಲೆಸಿದ ಸಿಲೋನಿನ ಬೌದ್ಧ ಬಿಕ್ಕು ಪೂಜ್ಯ ಎಸ್. ಪರಮಶಾಂತಿ ಮಹಾಥೇರೋ ಅವರು ಪರಿಶ್ರಮವಹಿಸಿ ವಿಹಾರದ ಕಟ್ಟಡ ಪೂರ್ಣಗೊಳ್ಳಲು ಸಾಧ್ಯವಾಗಿದೆ ಎಂದು ತಿಳಿದು ಬರುತ್ತದೆ. 1967 ರಲ್ಲಿ ಡಿಸೆಂಬರ್ 10 ರಂದು ಈ ವಿಹಾರದ ನೂತನ ಕಟ್ಟಡವನ್ನು ಪೂಜ್ಯ ದಲಾಯಿ ಲಾಮಾ ಅವರು ಉದ್ಘಾಟಿಸಿದ್ದಾರೆ. ಆಗಲೇ ಮುಂಡಗೋಡಿನ ಟಿಬೇಟನ್ ಬೌದ್ಧ ಕಾಲನಿಯಲ್ಲಿ ಸಾಕಷ್ಟು ಬೌದ್ಧ ಸಂಸ್ಕೃತಿ ಬೆಳೆದ ಸಂದರ್ಭವದು. ಹೀಗಾಗಿ ಹುಬ್ಬಳ್ಳಿ-ಧಾರವಾಡದ ದಲಿತ ಸಮುದಾಯದಲ್ಲಿಯೂ ಹುಬ್ಬಳ್ಳಿಯ ಬೌದ್ಧ ವಿಹಾರ, ಪೂಜ್ಯ ದಲಾಯಿ ಲಾಮಾ ಅವರ ಬೌದ್ಧ ಸಂಸ್ಕೃತಿಯ ಕೇಂದ್ರಗಳ ಪ್ರಭಾವದಿಂದಾಗಿ ಬೌದ್ಧ ಧರ್ಮದ ಧರ್ಮದ ಬಗ್ಗೆ ಹೆಚ್ಚಿನ ಒಲವಿರುವುದು ಕಂಡು ಬರುತ್ತದೆ. ಹುಬ್ಬಳ್ಳಿ ಬೌದ್ಧ ವಿಹಾರದ ಬುದ್ಧನ ಮೂರ್ತಿಯನ್ನು ಸ್ಥಾಪಿಸುವಲ್ಲಿ ಸಿಲೋನಿನ 'ಮಹಾ ಮಹೀಂದ್ರ ಅಂತರಾಷ್ಟ್ರೀಯ ಧರ್ಮಧೂತ ಸೊಸೈಟಿಯ' ಬೌದ್ಧ ಪಂಡಿತ ಪೂಜ್ಯ ವಿಮಲವಂಶ ಮಹಾಥೇರೋ ಅವರು ಸಹಾಯ ಮಾಡಿರುವುದು[33] ತಿಳಿದು ಬರುತ್ತದೆ. ಅಶೋಕನ ಕಾಲದಿಂದಲೂ ಶ್ರೀಲಂಕಾ ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಬೌದ್ಧಧರ್ಮ ಪ್ರಸಾರಕ್ಕೆ ಅಶೋಕನಿಂದಲೇ ಪ್ರೇರಣೆ ಪಡೆದಿರುವುದನ್ನು ಗಮನಿಸಬಹುದಾಗಿದೆ. ಒಂದು ಅಖಂಡ ಭಾರತ ಸಾಮ್ರಾಜ್ಯದ ಅಧಿಪತಿ ಚಕ್ರವರ್ತಿಯಾದವನೇ ತನ್ನ ಇಬ್ಬರು ಮಕ್ಕಳನ್ನು ಸಂಘಕ್ಕೆ ಬಿಟ್ಟುಕೊಟ್ಟು ಅವರನ್ನು 'ಧರ್ಮಧೂತ' ರನ್ನಾಗಿ ಶ್ರೀಲಂಕಾಕ್ಕೆ ಕಳುಹಿಸಿರುವುದು ಶ್ರೀಲಂಕಾದ ಬೌದ್ಧ ಬಿಕ್ಕುಗಳಿಗೆ, ಬೌದ್ಧರಿಗೆ ಪ್ರಧಾನ ಪ್ರೇರಣೆಯೇ ಆಗಿರುವಂತದ್ದಾಗಿದೆ. ಆದ್ದರಿಂದಲೇ ಮಹೀಂದ್ರನ ಹೆಸರಿನಲ್ಲಿ 'ಅಂತರ್ ರಾಷ್ಟ್ರೀಯ ಧರ್ಮಧೂತ' ಸೊಸೈಟಿಯನ್ನು ಸ್ಥಾಪಿಸಿರುವುದು, ಆ ಮೂಲಕ ಕರ್ನಾಟಕದ ಹುಬ್ಬಳ್ಳಿಯಲ್ಲೂ ವಿಹಾರದಲ್ಲಿ ಬೌದ್ಧ ಸಂಸ್ಕೃತಿ ಬೆಳೆಯಲು ಕಾರಣವಾಗಿರುವುದು ಮಹತ್ವದ ಅಂಶಗಳಾಗಿವೆ. ಶ್ರೀಲಂಕಾ ಸರ್ಕಾರವು ಮೊದಲು ಬೌದ್ಧಧರ್ಮ ಪ್ರಸಾರಕ್ಕೆ ನೆರವು ನೀಡಿರುವುದು ಕಂಡು ಬರುತ್ತದೆ. ಹುಬ್ಬಳ್ಳಿ

ಬೌದ್ಧವಿಹಾರದಲ್ಲಿ ಬುದ್ಧನ ಮೂರ್ತಿಯನ್ನು 18.05.1969[34] ರಲ್ಲಿ ಅನಾವರಣ ಮಾಡಿದವರು ಶ್ರೀಲಂಕಾದ, ಭಾರತಕ್ಕೆ ಆಗ ರಾಯಭಾರಿಯಾಗಿದ್ದ ಶ್ರೀ ಪರೇರಾ ಎಂಬುದು ಮುಖ್ಯವಾಗಿದೆ.

ಮುಂದೆ 1956 ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತಗೊಂಡ ಮಹಾಬೋಧಿ ಸೊಸೈಟಿಯು ದಕ್ಷಿಣ ಭಾರತದಲ್ಲಿ ಪ್ರಾಮುಖ್ಯತೆಯನ್ನು ಪಡೆಯಿತು. ದೇಶ ವಿದೇಶಗಳ ಬೌದ್ಧ ಬಿಕ್ಕುಗಳು ಬೆಂಗಳೂರಿಗೆ ಬರಲು ಪ್ರಾರಂಭಿಸಿದರು. ಆಚಾರ್ಯ ಬುದ್ಧರಕ್ಖಿತರು ಹಿರಿಯ ಬಿಕ್ಕುಗಳೂ, 1891 ರಲ್ಲಿ ಕಲ್ಕತ್ತದಲ್ಲಿ ಪ್ರಾರಂಭಿಸಿದ ಮಹಾಬೋಧಿ ಸೊಸೈಟಿಯ ಪ್ರಧಾನ ಸಂಸ್ಥಾಪಕರಾದ ಅನಗಾರಿಕ ಧರ್ಮಪಾಲರ ಅಭಿಲಾಷೆಯಂತೆಯೇ ಬೆಂಗಳೂರಿನಲ್ಲಿ 'ಮಹಾಬೋಧಿ ಸೊಸೈಟಿ' ಸ್ಥಾಪಿಸಿ ಕರ್ನಾಟಕದಲ್ಲಿ ಬೌದ್ಧ ಧರ್ಮದ ಪ್ರಸಾರ ಕಾರ್ಯ ಕೈಗೊಂಡರು. ಹೀಗೆ ಹಿರಿಯ ಬಿಕ್ಕುಗಳ ಸಂಪರ್ಕದಿಂದಾಗಿ ಅನ್ಯದೇಶಗಳ ಬಿಕ್ಕುಗಳ ಸಾಕಷ್ಟು ಸಂಖ್ಯೆಯಲ್ಲಿ ಬಂದಿರುವುದು ಕಂಡು ಬರುತ್ತದೆ. 1991 ರಲ್ಲಿ ಮಹಾಬೋಧಿ ಸೊಸೈಟಿಯು ತನ್ನ ಶತಮಾನೋತ್ಸವ ಸಂಘಟಿಸಿದ ಸಂದರ್ಭದಲ್ಲಿ 'ಪ್ರಥಮ ಅಂತರ್‌ರಾಷ್ಟ್ರೀಯ ಬೌದ್ಧ ಸಮಾವೇಶ' ವನ್ನು ಏರ್ಪಡಿಸಿತ್ತು. ಆಧುನಿಕ ಕರ್ನಾಟಕದ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಪ್ರಪ್ರಥಮ ಬಾರಿಗೆ ಬೌದ್ಧಧರ್ಮ ವಿಧಾನಸೌಧ ಪ್ರವೇಶಿಸಿತು. ದಲಿತ ನಾಯಕರಾದ ಶ್ರೀ ಬಿ. ಬಸವಲಿಂಗಪ್ಪ ಶ್ರೀ ಮಲ್ಲಿಕಾರ್ಜುನ ಖರ್ಗೆಯವರಂತಹ ನಾಯಕರು, ಬುದ್ಧಿ ಜೀವಿಗಳು ಅದಕ್ಕೆ ಕಾರಣೀಭೂತವಾದ ವ್ಯಕ್ತಿಗಳಲ್ಲಿ ಪ್ರಮುಖರು. ಈ ಕಾರ್ಯಕ್ರಮಗಳಿಗೆ ಅವರ ಬೆಂಬಲ ಮತ್ತು ಸಹಕಾರದ ಕಾರಣದಿಂದ ಇಂತಹ ಬೆಳವಣಿಗೆ ಸಾಧ್ಯವಾಗಿದೆ ಎಂಬುದನ್ನು ಅಲ್ಲಗಳೆಯಲಾಗದು. ಈ ಸಂದರ್ಭದಲ್ಲಿ ದೇಶ ವಿದೇಶಗಳ ಬೌದ್ಧ ಬಿಕ್ಕುಗಳು ಆಗಮಿಸಿ ಕರ್ನಾಟಕದ ಮಹತ್ವದ ಕೇಂದ್ರವಾದ ಬೆಂಗಳೂರಿನಲ್ಲಿ ಬೌದ್ಧ ವಾತಾವರಣ ಮೂಡಿಸಿದರು. ಆಗ ಆಗಮಿಸಿದ ಪ್ರಮುಖ ಬೌದ್ಧ ಬಿಕ್ಕುಗಳು, ಬೌದ್ಧ ಪಂಡಿತರುಗಳಲ್ಲಿ ಮುಖ್ಯವಾಗಿ :

1. ಪೂಜ್ಯ ಬಿಕ್ಕು ಓಲಂದ್ ಆನಂದ ಥೇರಾ : ಹಾಲಂಡ್
2. ಪೂಜ್ಯ ಬಿಕ್ಕು ಸೂಪಾರ್ಕ್, ದಕ್ಷಿಣ ಕೋರಿಯ
3. ಪೂಜ್ಯ ಬಿಕ್ಕು ಲೋಬಸಾಂಗ್ ತುಲ್‌ಟಿಮ್, ಆಸ್ಟ್ರೇಲಿಯಾ.
4. ಪೂಜ್ಯ ಬಿಕ್ಕು ರತನಪಾಲ ಥೇರಾ, ಶ್ರೀಲಂಕಾ
5. ಪೂಜ್ಯ ಬಿಕ್ಕು ವಜ್ರಯಾನ ಥೇರೋ, ಥೈಲ್ಯಾಂಡ್
6. ಪೂಜ್ಯ ಬಿಕ್ಕು ಜಂಪಾ ಕಮಾಂಗ್, ನೇಪಾಳ
7. ಪೂಜ್ಯ ಬಿಕ್ಕು ಪೇಮ ಶೆರ್ಪ, ಅಬ್ಬಾಟ್
8. ಪೂಜ್ಯ ಬಿಕ್ಕು ಲಾಮಾ ಐಯನ್, ಆಸ್ಟ್ರೇಲಿಯಾ
9. ಪೂಜ್ಯ ಬಿಕ್ಕು ಗೆಸ್ಸೆ ಲೋಬ್‌ಸಾಂಗ ತ್ಸೆರಿಂಗ್, ಟಿಬೆಟ್ ವಿಶ್ವವಿದ್ಯಾಲಯ
10. ಪೂಜ್ಯ ಬಿಕ್ಕು ನ್ಯಾನ್ ಜಗತ್ ಥೇರೋ, ಬುದ್ಧಗಯಾ
11. ಪೂಜ್ಯ ಬಿಕ್ಕು ಅರಿಯವಂಶ ನಾಯಕ ಥೇರೊ, ದೆಹಲಿ.
12. ಪೂಜ್ಯ ಬಿಕ್ಕು ಆನಂದ ಮಿತ್ರ ಮಹಾಥೇರೊ, ನವದೆಹಲಿ.
13. ಪೂಜ್ಯ ಬಿಕ್ಕು ಡಾ. ಬದಂತ ಮೇದಾಂಕರ್, ನಾಗಪೂರ.
14. ಪೂಜ್ಯ ಬಿಕ್ಕು ಅಂಬ್ರನ್ ಅನುರಾಗಸಿರಿ, ಥೈಲ್ಯಾಂಡ್.

ಈ ಬಿಕ್ಕುಗಣವಲ್ಲದೇ, ಪ್ರಸಿದ್ಧ ಬೌದ್ಧ ವಿದ್ವಾಂಸರು, ಬೌದ್ಧ ಸಾಹಿತಿಗಳು ಈ ಸಂದರ್ಭದಲ್ಲಿ ಭಾಗವಹಿಸಿದ್ದರು. ಡಾ. ಪೋಲಿಂಕಿ ರಾಮಮೂರ್ತಿ, ನಾಗಪೂರದ ದಮ್ಮಾಚಾರಿಗಳು ಹಾಜರಿದ್ದರು. ಪ್ರಸ್ತುತ ಅಧ್ಯಯನ ಕೈಗೊಂಡಿರುವ ಸಂಶೋಧನಾರ್ಥಿಯೂ ''ಜಾಗತಿಕ ಶಾಂತಿ ಮತ್ತು ಬೌದ್ಧ ಧರ್ಮ'' ಕುರಿತ ಈ ಬೌದ್ಧ ಸಮಾವೇಶದಲ್ಲಿ ಪಾಲ್ಗೊಂಡು 'ಪ್ರಬಂಧ ಮಂಡಿಸಿದ' ಬಿಕ್ಕುವೊಬ್ಬರಿಗೆ 'ಅಂದು ಸಾರನಾಥದ ಜಿಂಕೆ ಉದ್ಯಾನವನದಿಂದ ಉರುಳಿಸಿದ ಬುದ್ಧನ ಧಮ್ಮ ಚಕ್ರ - ಇಡೀ ವಿಶ್ವದಲ್ಲಿ ಶಾಂತಿ, ಸಹಬಾಳ್ವೆ ಪ್ರೀತಿ, ಕರುಣೆಗಳ ಸಂದೇಶ ಸಾಗುತ್ತಿದೆ. ಅದು ಜನಿಸಿದ ನಾಡಿನಲ್ಲೇ ಹಿಂಸೆ ಮಿತಿಮೀರಿದೆಯಲ್ಲ?[35] ಎಂಬ ಪ್ರಶ್ನೆಗೆ, ಸಭಾಂಗಣದ ವೇದಿಕೆಯ ಮುಂಭಾಗದಲ್ಲಿ ಕುಳಿತಿದ್ದ ಬಿ. ಬಸವಲಿಂಗಪ್ಪನವರು ''ಯಂಗ್ ಮ್ಯಾನ್, ಲಿಸನ್ ಹೀಯರ್'', ಎನ್ನುತ್ತಾ ''ಬುದ್ಧನು ಪ್ರೀತಿ ಕರುಣೆ, ಶಾಂತಿಯ ಸಂದೇಶ ಸಾರುವ ಧಮ್ಮ ಚಕ್ರ ಉರುಳಿಸಿದ ಮೇಲೆ ಈ ದೇಶದಲ್ಲಿ ಕೃಷ್ಣನಿಂದ ಮನುಷ್ಯರ ರುಂಡ ಕತ್ತರಿಸುವ ಚಕ್ರ ಉರುಳಿಸಲಾಯಿತು. ಆ ಚಕ್ರ ಈಗ ಎಲ್ಲಾ ಕಡೆ ತಿರುಗುತ್ತಾ ಗುಲ್ಲೆಬ್ಬಿಸಿದೆ'' ಎಂದಾಗ ಸಭೆಯಲ್ಲಿ ನಗೆಯ ಅಲೆ ಮೂಡಿಬಂತು.[36]

ಬೆಂಗಳೂರಿನಲ್ಲಿ ಮಹಾಬೋಧಿ ಸೊಸೈಟಿಯ ಶತಮಾನೋತ್ಸವ ಸಂದರ್ಭದಲ್ಲಿ ಆಗಮಿಸಿದ ಅಂತರ್‌ರಾಷ್ಟ್ರೀಯ ಬೌದ್ಧ ಬಿಕ್ಕುಗಳ ಸಂಪರ್ಕದಿಂದ ಇಂದು ಬೆಂಗಳೂರಿನ ಮಹಾಬೋಧಿ ಸೊಸೈಟಿ ಜಾಗತಿಕವಾಗಿ ಮನ್ನಣೆ ಗಳಿಸಿದ್ದನ್ನು ಕಾಣುತ್ತೇವೆ. ಅನೇಕ ದೇಶಗಳ ಬೌದ್ಧ ಅನುಯಾಯಿಗಳ, ಬೌದ್ಧ ಶಿಕ್ಷಣ ಸಂಸ್ಥೆಗಳ ಸಹಾಯ ಸಹಕಾರದಿಂದ ಬೆಂಗಳೂರು, ಮೈಸೂರು, ಲಢಾಕ್ ಮತ್ತು ಅರುಣಾಚಲ ಪ್ರದೇಶ, ಪ್ರದೇಶಗಳಲ್ಲಿ ದೀನದಲಿತ ಮಕ್ಕಳ, ಅನಾಥ ಮಕ್ಕಳ ಶಿಕ್ಷಣ, ಆರೋಗ್ಯ ಹೀಗೆ ಮುಂತಾದ ಸಮಾಜ ಕಲ್ಯಾಣದ ಚಟುವಟಿಕೆಗಳಿಗೆ ಮುಂದಾಗಿ 'ಧಮ್ಮ' ದ ದಾಪುಗಾಲು ಹಾಕುತ್ತಿದೆ.

ಕಳೆದ ಮೂರು ದಶಕಗಳಿಂದ ಬೀದರ ಜಿಲ್ಲೆಯ ಹುಮನಾಬಾದ್ ತಾಲೂಕಿನ ಮನ್ನಾಳಖೇಳಿ ಹತ್ತಿರದ ಮೌಂಟ್ ರೇಕುಳಗಿಯ 'ಅನಾಥ ಪಿಂಡಕ ಬೌದ್ಧ ವಿಹಾರವೂ ಸಹಿತ ಅಂತರ್‌ರಾಷ್ಟ್ರೀಯ ಮಟ್ಟದ ಸಂಪರ್ಕ ಸಾಧಿಸಿ ಹಲವಾರು ರೀತಿಯಲ್ಲಿ ಬೌದ್ಧ ಧರ್ಮ ಪ್ರಸಾರದ, ಅಧ್ಯಯನದ ಕಾರ್ಯ ಮಾಡುತ್ತಿದೆ. ಇಲ್ಲಿ ಪ್ರಧಾನ ಬಿಕ್ಕುಗಳಾದ ಮಹಾಕಶ್ಯಪ್ ಮಹಾಥೇರೋ ಅವರು 2001 ರಲ್ಲಿ ''ಧಮ್ಮ ಚಕ್ರ ಪ್ರವರ್ತನ ದಿನಾಚರಣೆ'' ಹಾಗೂ 10 ನೇ ಧಮ್ಮ ಪರಿಷದ್ ಸಂಘಟಿಸಿದ ಕಾಲಕ್ಕೆ 'ಬೌದ್ಧ ಸನ್ಯಾಸಿಗಳ ದಂಡು' ಅಲ್ಲಿ ಆಗಮಿಸಿದ್ದು ವರದಿಯಾಗಿದೆ.

''ಬರ್ಮಾದ ಬಿಕ್ಕು ಇಂಡೂಬ್ಸ್ ಮಹಾನಾಮಾ, ಥೈಲ್ಯಾಂಡಿನ ಬದಂತ ಬೋದಪಾಲೋ, ಶ್ರೀಲಂಕಾದ ಧಮ್ಮಾನಂದ ಮಹಾಸ್ಥವಿರ, ಇವರನ್ನು ಒಳಗೊಂಡು ಮಹಾರಾಷ್ಟ್ರದ ಬದಂತ ಧಮ್ಮ ಸೇವಕ, ಮಹಾಸ್ಥವಿರ ಮುಂಬೈನ ರಾಹುಲಬೋಧಿ ಮಹಾಸ್ಥಾವಿರ, ಪುಣೆಯ ಉಪಗುಪ್ತ ಮಹಾಥೆರೋ, ಅಗರ್ತಲಾದ ಬಿಕ್ಕು ಅಕ್ಕಾನಂದ, ಬುದ್ಧಗಯಾದ ಬಿಕ್ಕು ಯುಗಿನಿಂಡಾ, ನಾಂದೇಡದ ಬಿಕ್ಕುಣಿ ಆರ್ಯ ಗೌತಮಿ, ಬಿಕ್ಕು ಆರ್ಯ ಧಮ್ಮ ದೀಪ, ನಾಗಪೂರದ ವೈಶಾಖ ಬಂತೇಜಿ, ಸಾರನಾಥದ ಅಖಿಲ ಭಾರತ ಬಿಕ್ಕುಗಳ ಸಂಘದ ಸದಸ್ಯರು'[37] ಆಗಮಿಸಿದ್ದು, ವರದಿಯಾಗಿದೆ. ಅದರೊಂದಿಗೆ ಬೀದರ, ಗುಲ್ಬರ್ಗಾ ಭಾಗದಲ್ಲಿ ಬೌದ್ಧ ಅನುಯಾಯಿಗಳು, ಧಮ್ಮ ಸಹಕಾರ ನೀಡುತ್ತಿರುವ ಈ ಭಾಗದ ದಲಿತ ರಾಜಕೀಯ ಧುರೀಣರು ಭಾಗವಹಿಸಿರುವುದು, ಅಧಿಕಾರಿಗಳು ಭಾಗವಹಿಸಿರುವುದು ಕಂಡು ಬರುತ್ತದೆ.

ಬಿಜಾಪೂರದ ಬಿಜ್ಜರಗಿಯಲ್ಲಿನ 'ರಮಾಯಿ ಸ್ಮೃತಿ ಬೌದ್ಧ ವಿಹಾರವೂ' ಅನ್ಯ ರಾಷ್ಟ್ರಗಳ ಬೌದ್ಧ ಬಿಕ್ಕುಗಳ ಸಂಪರ್ಕದಲ್ಲಿದೆ. ಇಲ್ಲಿ ನಡೆಸುವ 'ಬೌದ್ಧ ದೀಕ್ಷಾ ಸಮಾರಂಭವನ್ನು ಜಪಾನ್ ದೇಶದ ಶೋದೋ ಹರದಾ ಬಿಕ್ಕುರವರು ನಡೆಸಿರುವುದು ಕಂಡು ಬಂದಿದೆ. ಬಿಜಾಪೂರದ ದಲಿತ ಬೌದ್ಧರು, ದಲಿತ, ಚಳುವಳಿಯ ಕಾರ್ಯಕರ್ತರು, 'ಮಹಾಬೋಧಿ ಮಹಾವಿಹಾರ ಬುದ್ಧಗಯಾ' ದ ವಿಮೋಚನಾ ಚಳವಳಿಯಲ್ಲಿಯೂ ಬಿಕ್ಕು ಆಚಾರ್ಯ ನಾಗಾರ್ಜುನ ಸುರಾಯಿ ಸಸಾಯಿ ಅವರ ನೇತೃತ್ವದಲ್ಲಿಯೂ ಸಕ್ರೀಯವಾಗಿ ಭಾಗವಹಿಸಿರುವುದು ಕಂಡು ಬರುತ್ತದೆ. ಈ ಬಗ್ಗೆ ಅಧ್ಯಾಯ-4 ರಲ್ಲಿ ವಿವರವಾಗಿ ಚರ್ಚಿಸಿದೆ. ಬೆಂಗಳೂರು, ಹುಬ್ಬಳ್ಳಿ, ಕೋಲಾರಗಳಲ್ಲಿ ತಮಿಳು ಭಾಷಿಕ ದಲಿತ ಬೌದ್ಧರು ಸ್ಥಾಪಿಸಿದ ವಿಹಾರಗಳಲ್ಲಿ ವಿದೇಶಗಳ, ಬೇರೆ ರಾಜ್ಯಗಳ ಬೌದ್ಧ ಬಿಕ್ಕುಗಳು ಸಾಕಷ್ಟು ಸಂಖ್ಯೆಯಲ್ಲಿ ಆಗಮಿಸಿದ್ದರೂ ಬಹಳ ದಿನಗಳವರೆಗೆ ನೆಲೆಯಾಗಿ ನಿಂತಿಲ್ಲ. ಹುಬ್ಬಳ್ಳಿ ವಿಹಾರದಲ್ಲಿ ಮಾತ್ರ ಒಂದು ದಶಕ ಕಾಲ ಬಿಕ್ಕು ಎಸ್. ಪರಮಶಾಂತಿ ಮಹಾಥೆರೋ, (ಅನುಬಂಧ-1, ಚಿತ್ರ : 17 ನ್ನು ಗಮನಿಸಿ) ಅವರು ಮಾತ್ರ ಇದ್ದದ್ದು ತಿಳಿಯುತ್ತದೆ. ಕೆ.ಜಿ.ಎಫ್. ಮಾರಿಕುಪ್ಪಂ ಬೌದ್ಧ ವಿಹಾರದಲ್ಲಿ ಅನ್ಯ ದೇಶಗಳ ಸಾಕಷ್ಟು ಬಿಕ್ಕುಗಳು ಬಂದಿರುವುದು ಕಂಡು ಬರುತ್ತದೆ. ಆದಾಗ್ಯೂ ಆಗಾಗ ಕಡಿಮೆ ಅವಧಿ ಇಲ್ಲಿದ್ದು ಪ್ರವಚನ ನಡೆಸಿಕೊಟ್ಟು ದೀಕ್ಷಾ ಕಾರ್ಯಕ್ರಮಗಳ ನೇತೃತ್ವ ವಹಿಸಿ ಮರಳಿ ಹೋಗಿರುವುದು ಕಂಡು ಬರುತ್ತದೆ. ಕೆಲವು ಬಿಕ್ಕುಗಳು ಸೂಚಿಸುವ ತೀರಾ ಸಾಂಪ್ರದಾಯಿಕ ಆಚರಣೆಗಳನ್ನು ಕೋಲಾರ ಕೆ.ಎಜಿ.ಎಫ್.ನ ಬೌದ್ಧರು ಅಥವಾ 'ದಕ್ಷಿಣ ಭಾರತ ಬೌದ್ಧ ಸಂಘದ' ಪ್ರಭಾವಕ್ಕೆ ಒಳಗಾದ ಬೌದ್ಧರು' ವಿಮರ್ಶಾತ್ಮಕ ನೋಟದಿಂದಲೇ ನೋಡಿರುವುದು ಕಂಡು ಬರುತ್ತದೆ. ಮೌಢ್ಯಕ್ಕೆ ಕಾರಣವಾಗುವ ಆಚರಣೆಗಳನ್ನು ತೀಕ್ಷ್ಣವಾಗಿ ಪರಿಗಣಿಸಿದ್ದು ಉಂಟು. ಆದಾಗ್ಯೂ ಬೌದ್ಧ ಬಿಕ್ಕುಗಳಿಗೆ ಅಪಾರ ಗೌರವ ಹೊಂದಿದ ಬಗ್ಗೆ ದಾಖಲೆಗಳಿಂದ ತಿಳಿದು ಬರುತ್ತದೆ. ಪಂಡಿತ ಅಯೋಥಿದಾಸ್, ಬೌದ್ಧ ಪಂಡಿತ ಪಿ. ಲಕ್ಷ್ಮೀ ನರಸು, ಅವರಂತಹ ಪ್ರಸಿದ್ಧ ತಜ್ಞರು ಪ್ರತಿಪಾದಿಸಿದ ಬೌದ್ಧ ನೆಲೆಗಳ ಹಿನ್ನಲೆಯಲ್ಲಿ ವೈಚಾರಿಕತೆಯ ಆಧಾರದ ಬೌದ್ಧ ಧರ್ಮದ ಸ್ವರೂಪವನ್ನು ಇವರು ಯಾವಾಗಲೂ ಮನವರಿಕೆ ಮಾಡಿಕೊಂಡಿರುವುದು ಕಾಣುತ್ತದೆ. ಈ ಮೊದಲು 1901 ರಲ್ಲಿ ಮದ್ರಾಸಿನಲ್ಲಿ ಸ್ಥಾಪಿತಗೊಂಡ 'ಸಾಕ್ಯಬೌದ್ಧ ಸಂಘವನ್ನು ಅದು ದಕ್ಷಿಣ ಭಾರತದ ಎಲ್ಲಾ ರಾಜ್ಯಗಳ ಮೇಲೆ ಹೊಂದಿದ ಪ್ರಭಾವವನ್ನು ಆಧರಿಸಿ ಅಥವಾ ದಕ್ಷಿಣ ಭಾರತದ ತತ್ವಗಳನ್ನು ಪ್ರಚಾರಗೊಳಿಸುವ ಉದ್ದೇಶದಿಂದಲೇ 'ದಕ್ಷಿಣ ಭಾರತ ಬೌದ್ಧ ಸಂಘ' ವೆಂದು ಬದಲಾಯಿಸಲು 3 ನೇ ಸಾಮಾನ್ಯ ಸಭೆ ನಿರ್ಣಯ ತೆಗೆದುಕೊಳ್ಳುತ್ತದೆ. ಅದೇ ರೀತಿ 'ಬೌದ್ಧ' ಎಂದರೆ ಯಾರು ಎಂಬ ವ್ಯಾಖ್ಯೆ ನಿಗದಿಪಡಿಸುತ್ತದೆ. ''ಯಾರು ಈ ಸಂಘದ ಸಭೆಯಲ್ಲಿ ಬಂದು ತಾನು ಮೂರ್ತಿ ಪೂಜೆಯನ್ನು ಮೌಢ್ಯ ಆಚರಣೆಗಳನ್ನು ಮತ್ತು ಜಾತಿ ತಾರತಮ್ಯವನ್ನು ಬಿಟ್ಟಿದ್ದೇನೆ. ಪಂಚಶೀಲ ತೆಗೆದುಕೊಂಡು ಜೀವನ ನಡೆಸುತ್ತೇನೆ ಎಂದು ಘೋಷಿಸಿಕೊಳ್ಳುತ್ತಾರೋ ಅವರು ಬೌದ್ಧರು'[38] ಎಂಬ ವ್ಯಾಖ್ಯಾನ ನಿಗದಿಪಡಿಸುತ್ತಾರೆ. ಇದು ಆ ಸಂದರ್ಭದಲ್ಲಿ ಬೌದ್ಧರು ತಾಳಿದ ನಿಲುವು ಮತ್ತು ವೈಚಾರಿಕ ನೆಲೆಯಲ್ಲಿ ಬೌದ್ಧ ಧರ್ಮವನ್ನು ಕಂಡುಕೊಳ್ಳಲಿಕ್ಕೆ ಪ್ರಯತ್ನಿಸಿರುವುದರ ಸಂಕೇತವಾಗಿ ಕಾಣುತ್ತದೆ.

ಹೀಗೆ ಕೆ.ಜಿ.ಎಫ್. ನ ಬೌದ್ಧರ ಬೌದ್ಧ ಪುನರುಜ್ಜೀವನ ಪ್ರಕ್ರಿಯೆ ಸಂಘಟನಾತ್ಮಕವಾಗಿ, ಮತ್ತು ಸೈದ್ಧಾಂತಿಕವಾಗಿ ಪ್ರಗತಿಪರ ಚೌಕಟ್ಟನ್ನು ಹೊಂದಿತ್ತು. ಪರಿಯ ಜಾತಿಯ ಜನರೇ ಹೆಚ್ಚಾಗಿದ್ದರೂ 'ದ್ರಾವಿಡ ನೆಲೆಗಳ' ವಿಶಾಲ ತಳಹದಿಯ ಮೇಲೆ, ಸ್ವಾಭಿಮಾನ ಮತ್ತು ಐಡೆಂಟಿಯನ್ನು ಸಾಧಿಸುವ, ಬೌದ್ಧಧರ್ಮ ಪ್ರಸಾರ

ಮಾಡುವ ಉದ್ದೇಶವನ್ನು ಹೊಂದಿತ್ತು ಎಂಬುದು ತಿಳಿದು ಬರುತ್ತದೆ. 1932 ರಲ್ಲಿ ಕೋಲಾರದಲ್ಲಿ ನಡೆದ ದಕ್ಷಿಣ ಭಾರತ ಬೌದ್ಧ ಸಂಘದ 4 ನೇ ಸಾಮಾನ್ಯ ಸಭೆ 'ಬೌದ್ಧ ಆಚರಣೆಗಳೇ ಮೂಲ ತತ್ವಗಳನ್ನು ಬದಿಗೆ ತಳ್ಳಬಾರದೆಂಬ ಉದ್ದೇಶದಿಂದ 'ವಿಧವಾ ವಿವಾಹ ಮತ್ತು ಮರಣ ಸಂಸ್ಕಾರ ವಿಧಿಗಳ ಬಗ್ಗೆ ಕೆಲವು ಬಿಕ್ಕುಗಳು ಬೇರೆ ಧರ್ಮದಂತೆ ವಿಪರಿತ ಆಚರಣೆಗಳನ್ನು ಕೈಗೊಳ್ಳುವ ಬಗ್ಗೆ ಗಂಭೀರವಾಗಿ ಪರಿಗಣಿಸುತ್ತದೆ'[39]. ಇದು ಸಂಘದ ಪ್ರಜ್ಞಾಪೂರ್ವಕ ನಿಲುವುಗಳು, ವೈಚಾರಿಕತೆಗೆ ಹಿಡಿದ ಕನ್ನಡಿಯಾಗಿ ನಮ್ಮ ಮುಂದೆ ಸ್ಪಷ್ಟವಾಗಿ ಗೋಚರಿಸುತ್ತದೆ.

ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲೂಕಿನ 'ಯಕ್ಸಂಬಾ' ಗ್ರಾಮದ 'ಮಹಾಬೋಧಿ ಸಂಘ' ದ ಬೌದ್ಧ ಸಮಾಜವೂ ಸಹಿತ ಅನ್ಯ ರಾಷ್ಟ್ರಗಳ ಬಿಕ್ಕುಗಳೊಂದಿಗೆ ಸಂಪರ್ಕ ಸಾಧಿಸಿದ್ದನ್ನು ನೋಡುತ್ತೇವೆ. 1999 ರಲ್ಲಿ ಲಂಡನ್ನಿನ ಪೂಜ್ಯ ಅಶ್ವಜಿತ ಬಂತೇಜಿಯವರು ಇಲ್ಲಿನ ಬೌದ್ಧ ಸಮಾಜಕ್ಕೆ ಭೇಟಿ ನೀಡಿ ಬೌದ್ಧ ಸಂಸ್ಕೃತಿಯ ಅವಲೋಕನ ಮಾಡಿದ್ದು ತಿಳಿದು ಬರುತ್ತದೆ.

ವಸಾಹತುಷಾಹಿ ಕಾಲಘಟ್ಟದ ಕೊನೆಯ ಸಂದರ್ಭದಲ್ಲಿ ಜಾಗತಿಕ ಮಹಾಯುದ್ಧಗಳು ನಡೆದು ರಾಜಕೀಯ ಸ್ಥಿತ್ಯಂತರಗಳು ಘಟಿಸಿದ್ದರಿಂದ ದೇಶ ದೇಶಗಳ ನಡುವೆ ಸಂಪರ್ಕಕ್ಕೆ ತೊಂದರೆಯಾಗಿ ಎರಡನೇ ಮಹಾಯುದ್ಧದ ಸಂದರ್ಭದಲ್ಲಿ ಅನ್ಯ ದೇಶದ ಬೌದ್ಧ ಬಿಕ್ಕುಗಳು ವಿರಳವಾಗಿ ಬಂದು ಹೋಗುವುದಕ್ಕೆ ಕಾರಣವಾಗಿರುವ ಅಂಶವನ್ನು ಅಲ್ಲಗಳೆಯಲಾಗಿದೆ. ಹೀಗೆ ಬೌದ್ಧ ಧರ್ಮ ಪುನರುಜ್ಜೀವನಕ್ಕೆ ಸ್ವಾತಂತ್ರ್ಯ ಪೂರ್ವ ಸಂದರ್ಭದಲ್ಲಿ ಅಡಚಣೆಗಳಿರುವುದು ವೇದ್ಯವಾಗುತ್ತದೆ. ಆದಾಗ್ಯೂ ಅನ್ಯ ದೇಶಗಳ ಬೌದ್ಧ ಬಿಕ್ಕುಗಳು ಬೌದ್ಧ ಧರ್ಮ ಪ್ರಸಾರ ಕಾರ್ಯದಲ್ಲಿ ಮಾಡಿದ ಸೇವೆ, ಕೊಡುಗೆ ತುಂಬಾ ಪ್ರಭಾವ ಶಾಲಿಯಾಗಿ ಕಂಡು ಬರುತ್ತದೆ.

'ಮಹಾಬೋಧಿ ಸೊಸೈಟಿ' ಮೂಲತಃ ಕಲ್ಕತ್ತದಲ್ಲಿ ಪ್ರಾರಂಭವಾದರೂ ಅಲ್ಲಿಗೆ ಆಗಮಿಸಿದ ಹಾಗೂ ಭಾರತದ ಪ್ರಸಿದ್ಧ ಬೌದ್ಧ ಕ್ಷೇತ್ರಗಳಿಗೆ ಪ್ರವಾಸಕ್ಕೆ ಆಗಮಿಸುತ್ತಿದ್ದ ಅನ್ಯ ದೇಶಗಳ ಬೌದ್ಧ ಬಿಕ್ಕುಗಳು ಕೆಲವೊಮ್ಮೆ ಅಲ್ಪ ಕಾಲ, ಕೆಲವೊಮ್ಮೆ ಹಲವಾರು ವರ್ಷಗಳವರೆಗೆ ಕರ್ನಾಟಕದಲ್ಲಿಯು ಸಂಚರಿಸಿ ಬೌದ್ಧ ಧರ್ಮದ ಬಗ್ಗೆ ಆಚಾರ, ವಿಚಾರಗಳನ್ನು ಹಂಚಿಕೊಂಡು ಇಲ್ಲಿನ ದಲಿತರು ಬೌದ್ಧ ಧರ್ಮದ ಬಗ್ಗೆ ಆಸಕ್ತರಾಗುವಂತೆ ಮಾಡಿದ್ದಾರೆಂದು ಹೇಳಬಹುದು. ಪೂಜ್ಯ ದಲಾಯಿ ಲಾಮಾ ಅವರು ಟಿಬೇಟ್ ದೇಶದಿಂದ ವಲಸೆ ಬಂದು ಬೈಲುಕುಪ್ಪೆ, ಮುಂಡಗೋಡ ಮುಂತಾದ ಕಡೆ ಬೌದ್ಧ ಕಾಲನಿಗಳನ್ನು ನಿರ್ಮಿಸಿ, ರಾಜಕೀಯ ಆಶ್ರಯ ಪಡೆದು, ಭಾರತೀಯ ಬೌದ್ಧ ಪರಂಪರೆಯ ಒಂದು ಪ್ರಮುಖ ಶಕ್ತಿಯಾಗಿಯೇ ನೆಲೆ ನಿಂತಿರುವುದು ಆ ಮೂಲಕ ಬೌದ್ಧ ಸಂಸ್ಕೃತಿಯ ಪ್ರಭಾವ ಕರ್ನಾಟಕದ ಜನತೆಯ ಮೇಲೆ ವಿಶೇಷವಾಗಿ ಬೌದ್ಧ ಆಸಕ್ತ ದಲಿತರ ಮೇಲೆ ಪ್ರಭಾವ ಬೀರಿರುವುದನ್ನು ಅಲ್ಲಗಳೆಯಲಾಗದು. ಆಕರ್ಷಕ ಬೌದ್ಧ ವಿಹಾರಗಳು, ಬೌದ್ಧ ಅಧ್ಯಯನ ಕೇಂದ್ರಗಳು, ಬೃಹತ್ ಆಕಾರದಲ್ಲಿ ನಿರ್ಮಿತವಾಗಿದ್ದರಿಂದ ಅಸಂಖ್ಯಾತ ದಲಿತರು, ಈ ಕಾಲನಿಗಳಿಗೆ ಭೇಟಿ ನೀಡಿ ಪ್ರೇರಣೆ ಪಡೆದುಕೊಳ್ಳುವುದು ಕಂಡು ಬಂದಿದೆ. ಹಲವಾರು ಕಾರ್ಯಕ್ರಮಗಳಲ್ಲಿ ಇಲ್ಲಿನ ಬೌದ್ಧ ಲಾಮಾ ಗುರುಗಳು ಆಗಮಿಸಿ ಬೌದ್ಧ ಪ್ರಾರ್ಥನೆ ನೆರವೇರಿಸುವುದನ್ನು ಕಾಣುತ್ತೇವೆ. (ಅನುಬಂಧ-1, ಚಿತ್ರ : 54, 70 ಗಮನಿಸಿ).



## ಸಂದರ್ಭಸೂಚಿ ಹಾಗೂ ಟಿಪ್ಪಣಿಗಳು


| | | | |
|---|---|---|---|
| 1. | Aloysius G., 1998 | : | Religion as Emancipatory Identity, A Buddhist movement among the Tamils under colonialism New Age International Pvt., Ltd., Bangalore, p-21. |
| 2. | Ibid | : | ಅದೇ, ಪುಟ ; 203-230. |
| 3. | ಚಂದ್ರಶೇಖರ ಎಸ್., 2000 ನಾಗಣ್ಣ ಸಿ. (ಅನು) | : | ದಕ್ಷಿಣ ಭಾರತ ವಸಹಾತುಶಾಹಿ ಆಡಳಿತ ಹಾಗೂ ಹೊಸ ಸಾಮಾಜಿಕ ವರ್ಗಗಳ ಉದಯ : ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ : 49. |
| 4. | ಅದೇ | : | ಪುಟ : 156. |
| 5. | ಅದೇ | : | ಪುಟ : 157. |
| 6. | Kasinath K. Kavalekar, 1979 | : | Non-Brahmin Movement in Southern India (1873-1949) Shivaji University, Kolhapur. p.82. |
| 7. | ಅದೇ | : | ಪುಟ : 83. |
| 8. | ಅದೇ | : | ಪುಟ : 69. |
| 9. | ಮಹೇಶ ಎನ್., 2001 | : | ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರ್, ಮೈಸೂರು ಸಂಸ್ಥಾನದ ಸಾಮಾಜಿಕ ಪರಿವರ್ತನೆಯ ರೂವಾರಿ, ಬಾಬಾಸಾಹೇಬ ಡಾ. ಬಿ.ಆರ್. ಅಂಬೇಡ್ಕರ್ ಅಧ್ಯಯನ ಕೇಂದ್ರ, ಮಂಡ್ಯ, ಪುಟ ; 30-33. |
| 10. | ಚಿನ್ನಸ್ವಾಮಿ ಸೋಸಲೆ ಎನ್. 2005 | : | ನಾಲ್ವಡಿ ಕೃಷ್ಣನ ಮೈಸೂರು, ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿ ನೆಲೆಯ ಅಧ್ಯಯನ (1992 ರಿಂದ 1940) ಚರಿತ್ರೆ ವಿಭಾಗ, ಮಾಲೆ -34, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ; 49. |


@ ಪಂಡಿತ ಸಿ. ಅಯೋಥಿದಾಸ್ ಮೇ, 20, 1845 ರಲ್ಲಿ ಕೋಯಿಮುತ್ತೂರ ಜಿಲ್ಲೆಯಲ್ಲಿ ಜನಿಸಿದರು. ನೀಲಗಿರಿ ಬೆಟ್ಟಗಳಲ್ಲಿ ಬೆಳೆದು ನಂತರ ಮದ್ರಾಸ್‌ನಲ್ಲಿ ವಾಸಿಸಿದರು. ಸಿದ್ದ ಔಷಧಿಯಲ್ಲಿ ದೇಸಿ ವೈದ್ಯ ಪಂಡಿತರು. ತಮಿಳುನಾಡಿನ ಚರಿತ್ರೆಯ ಬಗ್ಗೆ ಅದರಲ್ಲೂ ವಿಶೇಷವಾಗಿ 'ಪರೈಯ' ಜನಾಂಗದ ಮೂಲದ ಬಗ್ಗೆ, ಬೌದ್ಧ ಧರ್ಮದ ಬಗ್ಗೆ ಆಳವಾದ ಅಧ್ಯಯನ ಮಾಡಿದವರು. ಮೊತ್ತ ಮೊದಲ

ಬಾರಿಗೆ ಮದ್ರಾಸ್ ಪ್ರಾಂತ್ಯದಲ್ಲಿ 'ಪರ್‍ಯ' ಜನರಿಗೆ ಶಾಲೆಗಳನ್ನು ತೆರೆದ ಸಮಾಜ ಸುಧಾರಕರು ತಮಿಳುನಾಡಿನಲ್ಲಿ ಕರ್ನಾಟಕದ ಕೆ.ಜಿ.ಎಫ್. ಪ್ರದೇಶದಲ್ಲಿ ಬರ್ಮಾ, ದಕ್ಷಿಣ ಆಫ್ರೀಕಾಗಳಲ್ಲಿ ಬೌದ್ಧ ಧರ್ಮ ಪುನರುಜ್ಜೀವನಕ್ಕೆ ಕಾರಣೀಭೂತರಾದ ಬೌದ್ಧ ಪಂಡಿತರು.

11. Aloysius G., 1998 : **ಅದೇ, ಪುಟ ; 50.**

12. ಅದೇ : **ಪುಟ ; 51.**

13. ಅದೇ : **ಪುಟ ; 52.**

14. ಅದೇ : **ಪುಟ ; 55.**

15. ಅದೇ : **ಪುಟ ; 56.**

@@ ಪ್ರೊ. ಲಕ್ಷ್ಮೀ ನರಸು **(1861-1934)** ಒಬ್ಬ ಪ್ರಸಿದ್ಧ ಬೌದ್ಧ ವಿದ್ವಾಂಸರಾಗಿದ್ದರು. ಇವರ The Essence of Buddhism ಪುಸ್ತಕವನ್ನು ಡಾ. ಅಂಬೇಡ್ಕರ್‌ರವರು ಮೆಚ್ಚಿಕೊಂಡು **1948** ರಲ್ಲಿ ಮುಂಬೈನ ಥ್ಯಾಕರ್ ಆ್ಯಂಡ್ ಕಂಪನಿಯವರಿಂದ ಮರು ಮುದ್ರಿಸಿದರು. ಡಾ. ಅಂಬೇಡ್ಕರ್‌ರವರು ಈ ಆವೃತ್ತಿಗೆ ಮುನ್ನುಡಿ ಬರೆದು ಪ್ರೊ. ಲಕ್ಷ್ಮೀ ನರಸು ಬಗ್ಗೆ ಡಾ. ಪಟ್ಟಾಭಿ ಸೀತಾರಾಮಯ್ಯನವರಿಂದ ಹಲವಾರು ವಿಷಯಗಳನ್ನು ತಿಳಿದುಕೊಂಡಿದ್ದೇನೆ ಎಂದು ದಾಖಲಿಸಿದ್ದಾರೆ.

16. Loganathan I., 1993 : 'Revival of Buddhism in South India in the 19th Century', in K.N. Kadam (ed) B.R.Ambedkar: The Emancipator of the oppressed Popular Prakashan Bombay, p.4.

17. Aloysius G., 1998 : **ಅದೇ, ಪುಟ ; 59.**

18. Loganathan I., 1993 : **ಅದೇ, ಪುಟ ; 4.**

19. ಅದೇ : ಅದೇ.

20. Aloysius G., 1998 : **ಅದೇ, ಪುಟ ; 209.**

@@@ 'ಚೀವರ' : ಯಾರು ಬೌದ್ಧ ಬಿಕ್ಕುಗಳಾಗಿ ದೀಕ್ಷೆ ಪಡೆಯುತ್ತಾರೋ ಅವರಿಗೆ ಹಿರಿಯ ಬಿಕ್ಕುಗಳ ನೀಡುವ 'ಬಿಕ್ಕುಗಳ ಉಡುಪಿಗೆ' ಚೀವರ ಎಂದು ಹೇಳುವರು. ಚೀವರವನ್ನು ತಾತ್ಕಾಲಿಕವಾಗಿ ಬೌದ್ಧ ಉಪಾಸಕರು, 'ಸಮಣೇರ ದೀಕ್ಷೆ' ಪಡೆದ ಸಂದರ್ಭದಲ್ಲಿ ಧರಿಸುತ್ತಾರೆ.

**ಚೀವರ ದಾನ :** ಬೌದ್ಧ ಉಪಾಸಕರು ಮಳೆಗಾಲದ ನಂತರ ಬಿಕ್ಕುಗಳಿಗೆ ಬಿಕ್ಕುಗಳ ಉಡುಪನ್ನು ವಿನ್ಯಾಸಗೊಳಿಸಿ ದಾನವಾಗಿ ಗೌರವದಿಂದ ಅರ್ಪಿಸುತ್ತಾರೆ. ಇದನ್ನು 'ಚೀವರದಾನ' ಎಂಬ ಕಾರ್ಯಕ್ರಮ ಸಂಘಟಿಸಿಯೂ ಬೌದ್ಧ ಬಿಕ್ಕುಗಳಿಗೆ ನೀಡಲಾಗುತ್ತದೆ.

21. ಅದೇ : ಪುಟ; 210.

22. ಅದೇ : ಪುಟ; 210-211.

23. ಅದೇ : ಪುಟ; 211.

24. ಅದೇ : ಪುಟ; 213.

25. Loganathan I., 1993 : ಅದೇ, ಪುಟ; 11.

26. Aloysius G., 1998 : ಅದೇ, ಪುಟ; 64.

27. ಅದೇ : ಪುಟ; 231, 232.

28. ಅದೇ :

29. Loganathan I., 1993 : ಅದೇ, ಪುಟ; 94.

30. ಅದೇ : ಅದೇ, ಪುಟ; 95.

31. ಅದೇ :

32. Report of the Hubli Buddhist Association for the year 2003, Hubli, p.1 (16.5.2003).

33. ಅದೇ : ಪುಟ; 2.

34. Report of the Hubli Buddhist Association for the year 2002.

35. ಸಂಶೋಧನಾರ್ಥಿಯು 1991 ರಲ್ಲಿ ಬೆಂಗಳೂರಿನಲ್ಲಿ ಮಹಾಬೋಧಿ ಸೊಸೈಟಿ ಸಂಘಟಿಸಿದ್ದ "ಪ್ರಥಮ ಅಂತರರಾಷ್ಟ್ರೀಯ ಬೌದ್ಧ ಸಮಾವೇಶದಲ್ಲಿ ಭಾಗವಹಿಸಿ ಸಂಗ್ರಹಿಸಿದ ಮಾಹಿತಿಗಳು".

36. ಅದೇ ಸಂದರ್ಭ, 1991 :

37. ಪ್ರಜಾವಾಣಿ ದಿನಪತ್ರಿಕೆಯ ವರದಿ, ದಿನಾಂಕ: 25.10.2005.

38. Aloysius G. 1998 : ಅದೇ, ಪುಟ; 97.

39. ಅದೇ : ಅದೇ, ಪುಟ; 98.





## ಅಧ್ಯಾಯ-4

# ಕರ್ನಾಟಕದಲ್ಲಿ ಮತಾಂತರ ಚಳುವಳಿ ಮತ್ತು ದಲಿತರು

4.1. ಅಂಬೇಡ್ಕರ್‌ರವರ ಮತಾಂತರ ಚಳುವಳಿ ಮತ್ತು ಕರ್ನಾಟಕದ ದಲಿತರು.

4.2. ಕರ್ನಾಟಕದ ದಲಿತ ಚಳುವಳಿ ಮತ್ತು ಬೌದ್ಧಧರ್ಮ.

## ಅಧ್ಯಾಯ-4

# ಕರ್ನಾಟಕದಲ್ಲಿ ಮತಾಂತರ ಚಳುವಳಿ

**ಪ್ರಸ್ತಾವನೆ :**

ಜಗತ್ತಿನ ಎಲ್ಲಾ ಭಾಗಗಳಲ್ಲಿ ಕಾಲಕಾಲಕ್ಕೆ ಮತಾಂತರಗಳು ನಡೆದುಕೊಂಡೇ ಬಂದಿವೆ. 'ಮತಾಂತರ'ಗಳು ಸ್ವಪ್ರೇರಣೆಯಿಂದ ನಡೆಯಬೇಕೇ ಹೊರತು ಒತ್ತಾಯದ ನೆಲೆಗಳಲ್ಲಿ ನಡೆಯುವುದು, 'ಮಾನವ ಕುಲದ' ಆರೋಗ್ಯದ ದೃಷ್ಟಿಯಿಂದ ಒಳ್ಳೇಯದಲ್ಲ. ಆದರೆ, ಬಹುತೇಕ ಮತಾಂತರಗಳು ಒತ್ತಾಯದ ನೆಲೆಯಲ್ಲಿಯೇ ನಡೆದ ಬಗ್ಗೆ ಚಾರಿತ್ರಿಕ ಪುಟಗಳಲ್ಲಿ ಸಾಕಷ್ಟು ದಾಖಲೆಗಳಿವೆ. ಮತಾಂತರ ಪ್ರಕ್ರಿಯೆಯಲ್ಲಿ ಇಂದಿಗೂ ರಕ್ತ ಹರಿಯುವುದನ್ನು ಕಾಣುತ್ತೇವೆ. ಮತಾಂತರ ಸಹಿಸದ ಒಂದು ಧರ್ಮದವರು ಮತಾಂತರ ಮಾಡಿದ ಮಿಷನರಿಗಳನ್ನು ಸುಟ್ಟು ಹಾಕಿದ್ದನ್ನು ನೋಡುತ್ತೇವೆ. ಆದರೆ, ಬೌದ್ಧಧರ್ಮದ ವಿಶೇಷತೆ ಏನೆಂದರೆ 'ತನ್ನ 2500 ವರ್ಷಗಳ ಶಾಂತಿಯುತ ಪ್ರಯಾಣದಲ್ಲಿ ಬುದ್ಧನ ಹೆಸರಿನಲ್ಲಿ ಒಂದು ತೊಟ್ಟು ರಕ್ತವೂ ಹರಿದಿಲ್ಲದಿರುವುದು. ಯಾವ ಮಹಾಚಕ್ರವರ್ತಿಯೂ ತನ್ನ ಶಕ್ತಿಶಾಲಿ ಕತ್ತಿಯನ್ನು ಬುದ್ಧಧಮ್ಮದ ಪ್ರಚಾರಕ್ಕೆ ಬಳಸಿಲ್ಲ ಮತ್ತು ಮತಾಂತರವನ್ನು ಬಲತ್ಕಾರದಿಂದಾಗಲೀ, ಹೇಯ ರೀತಿ ಇಂದಾಗಲೀ ಮಾಡಿರುವುದಿಲ್ಲ. ಆದ್ದರಿಂದಲೇ ಬುದ್ಧ ಭೂಮಿಯ ಮೇಲೆ ಬದುಕಿ ಬಾಳಿದ ಪ್ರಥಮ ಹಾಗೂ ಶ್ರೇಷ್ಠ ಧರ್ಮ ಪ್ರಚಾರಕನಾಗಿದ್ದಾನೆ.'[1] ಇವತ್ತು ಹಲವಾರು ಧರ್ಮಗಳ ಅನುಯಾಯಿಗಳು ಸಂಖ್ಯಾಬಲದ ಆಧಾರದ ಮೇಲೆಯೇ ಲೌಕಿಕ ಪ್ರಗತಿಯ ಲೆಕ್ಕಾಚಾರ ಹಾಕುತ್ತಾರೆ. ಜನಸಂಖ್ಯಾ ನಿಯಂತ್ರಣಕ್ಕೆ ಒಂದು ಧರ್ಮದ ಧಾರ್ಮಿಕ ನಂಬಿಕೆಗಳು ಅಡ್ಡ ಬಂದಾಗ, ಅವರಿಗೆ ಮಿತ ಸಂತಾನದ ಕುಟುಂಬ ಕಲ್ಯಾಣ ಕಾಯ್ದೆ ಜಾರಿಗೊಳಿಸಿ ಎಂದು ಇನ್ನೊಂದು ಧರ್ಮಿಯರು ಒತ್ತಾಯಿಸುವುದನ್ನು ನೋಡುತ್ತೇವೆ. ಇನ್ನೂ ಕೆಲವು ಸಂದರ್ಭಗಳಲ್ಲಿ ಇಂತಿಂಥ ದೊಡ್ಡವರು ನಮ್ಮ ಧರ್ಮಕ್ಕೆ ಸೇರಿದ್ದಾರೆಂದು ಬೀಗುವುದನ್ನು ನೋಡುತ್ತೇವೆ. ಕೋಟ್ಯಾಧಿಪತಿಗಳು ತಮ್ಮ ಧರ್ಮಕ್ಕೆ ಬಂದರೆ ಅದನ್ನೇ ಹೇಳಿಕೊಂಡು ಪ್ರಚಾರ ಗಿಟ್ಟಿಸುವ ಧಾರ್ಮಿಕ ಸಂಘಟನೆಗಳನ್ನು ನಾವು ನೋಡುತ್ತೇವೆ. ಆದರೆ, ಬೌದ್ಧ ಧರ್ಮದಲ್ಲಿ 'ಮತಾಂತರ' ವ್ಯಕ್ತಿಯ ಪರಿವರ್ತನೆಯ ನೆಲೆಯಲ್ಲಿ ನಡೆಯುತ್ತದೆ. ಅದು 'ಮನೋಭಾವಕ್ಕಿಂತ ಬುದ್ಧಿ ಶಕ್ತಿಯ ನೆಲೆಯಲ್ಲಿ' ನಡೆಯುವಂತಹದು. ಡಾ. ಅಂಬೇಡ್ಕರ್‌ರವರ ಸಂದರ್ಭದಲ್ಲಿ ನಡೆದದ್ದು ಕೂಡ ಇದೇ ಆಗಿದೆ. ಎಲ್ಲಾ ಧರ್ಮಿಯರಿಂದ ಎಲ್ಲಾ ಆಮಿಷಗಳು, ಆಹ್ವಾನಗಳು ಬಹಿರಂಗವಾಗಿಯೇ ಬಂದರೂ ಕೂಡ ಅವರು ಕೊನೆಗೆ ಆರಿಸಿಕೊಂಡಿದ್ದು ಬೌದ್ಧಧರ್ಮವನ್ನು. ಆ ಸಂದರ್ಭದಲ್ಲಿ ಅಂಬೇಡ್ಕರ್‌ರವರು ತಮ್ಮ ತಮ್ಮ ಧರ್ಮಗಳಿಗೆ ಮತಾಂತರ ಹೊಂದಲಿ ಎಂದು ಧಾರ್ಮಿಕ ಮುಖಂಡರಲ್ಲೇ ಒಂದು ರೀತಿಯ 'ಆಕ್ಷನ್' (Auction) ನಡೆದಿರುವುದನ್ನು ನೋಡುತ್ತೇವೆ.

ಅವರೊಂದಿಗೆ ನಾಗಪುರದಲ್ಲಿ 'ಧಮ್ಮ ದೀಕ್ಷೆ' ಪಡೆಯಲು ಆಗಮಿಸಿದ್ದ 5 ಲಕ್ಷ ಅನುಯಾಯಿಗಳಿಗೆ ಅದೇ ಪ್ರಶ್ನೆಯನ್ನು ಅಂಬೇಡ್ಕರ್‌ರವರು ಕೇಳುತ್ತಾರೆ. 'ನನ್ನ ಮೇಲಿನ ಅಭಿಮಾನದಿಂದಾಗಲೀ ನಾನು ಬೌದ್ಧ ಧರ್ಮಕ್ಕೆ ಮತಾಂತರ ಹೊಂದುತ್ತಿದ್ದೇನೆ ಎಂದಾಗಲೀ ನೀವು ಬೌದ್ಧರಾಗಬೇಡಿರಿ, ನಿಮ್ಮ ಸ್ವಂತ ವಿವೇಚನೆಯಿಂದ ನಿಮಗೆ ಸ್ವೀಕರಿಸಬೇಕೆಂಬ ಉತ್ಕಟೇಚ್ಛೆ ಇದ್ದರೆ ಮಾತ್ರ ಬೌದ್ಧಧಮ್ಮ ದೀಕ್ಷೆ ಪಡೆದುಕೊಳ್ಳಿರಿ' ಎಂದು

ಹೇಳುತ್ತಾರೆ. ಅಂದು 14.10.1956 ರಂದು ನಾಗಪೂರದ ಇಂದಿನ 'ದೀಕ್ಷಾ ಭೂಮಿ'ಯಲ್ಲಿ ಸೇರಿದ್ದ 4 ಲಕ್ಷ ಜನರ ಸಮ್ಮುಖದಲ್ಲಿ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರಿಗೆ ಹಾಗೂ ಡಾ. ಸವಿತಾ ಅಂಬೇಡ್ಕರ್‌ರವರಿಗೆ ಮಹಾಬೋಧಿ ಸೊಸೈಟಿಯ ಹಿರಿಯರ ಬಿಕ್ಕು ಪೂಜ್ಯ ಯು. ಚಂದ್ರಮಣಿ'[2] ಮಹಾಥೇರರು ತಿಸರಣ, ಪಂಚಶೀಲ ಬೋಧಿಸುತ್ತಾರೆ. ಅಂಬೇಡ್ಕರ್ ದಂಪತಿಗಳಿಬ್ಬರೂ ಬುದ್ಧನ ವಿಗ್ರಹಕ್ಕೆ ತಲೆಬಾಗಿ ಗೌರವ ಸೂಚಿಸುತ್ತಾರೆ. ನಂತರ ಧ್ವನಿವರ್ಧಕದ ಕಡೆಗೆ ಬಂದು ಅಲ್ಲಿ ಸೇರಿದ್ದ ತಮ್ಮ ಅನುಯಾಯಿಗಳಿಗೆ ಅಂಬೇಡ್ಕರ್‌ರವರು ಭಾವುಕ ಧ್ವನಿಯಲ್ಲಿ 'ನಾನು ಈ ಚಳುವಳಿಯನ್ನು 1935 ರಲ್ಲಿ ಹಿಂದೂ ಧರ್ಮ ಬಿಡುತ್ತೇನೆ ಎಂದು ಹೇಳುವುದರಿಂದ ಪ್ರಾರಂಭಿಸಿದ್ದೇನೆ, ಅಲ್ಲಿಂದ ಹೋರಾಡುತ್ತಲೇ ಇದ್ದೇನೆ. ಈ ಮತಾಂತರ ನನಗೆ ಅಮಿತವಾದ ತೃಪ್ತಿ ಮತ್ತು ಕಲ್ಪಿಸಲಾರದ ಸಂತೋಷ ನೀಡಿದೆ. ನಾನು ನರಕದಿಂದ ಬಿಡುಗಡೆಗೊಂಡಿರುತ್ತೇನೆ. ಈಗ ನಿಮ್ಮಲ್ಲಿ ಯಾರಿಗೆ ಬೌದ್ಧ ಧರ್ಮ ಸ್ವೀಕರಿಸುವ ಮನಸ್ಸಿದೆಯೋ ಅವರು ಎದ್ದು ನಿಂತುಕೊಳ್ಳಿರಿ.'[3] ಎಂದಾಗ ಒಂದೇ ಬಾರಿಗೆ ಅಲ್ಲಿ ಸೇರಿದ್ದ 4 ಲಕ್ಷ ಜನರು ಎದ್ದುನಿಂತುಕೊಂಡಿದ್ದರು. ಅಂಬೇಡ್ಕರ್‌ರವರೇ ಅವರಿಗೆ ತಿಸರಣ, ಪಂಚ ಶೀಲ ಬೋಧಿಸಿದರು. ಮತ್ತು ತಾವು ರಚಿಸಿದ 22 ಪ್ರತಿಜ್ಞೆಗಳನ್ನು'[4] ಅಲ್ಲಿ ಸೇರಿದ ಎಲ್ಲರಿಗೂ ಬೋಧಿಸಿದರು. ಅಂದು ನಾಗಪೂರಕ್ಕೆ ಬಂದು ಸೇರಿಕೊಳ್ಳಲಾರದವರು ಈ ಕಾರ್ಯಕ್ರಮದಲ್ಲಿ ಭಾಗವಹಿಸಲಿಕ್ಕೆ ಸಾಧ್ಯವಾಗದೇ ಇದ್ದವರಿಗೆ ಮರುದಿನ 15.10.1956 ರಂದು ಡಾ. ಅಂಬೇಡ್ಕರ್‌ರವರೇ ಆ ಒಂದು ಲಕ್ಷ ಜನರಿಗೆ ಬೌದ್ಧ ಧಮ್ಮ ದೀಕ್ಷೆ ನೀಡಿ ಇತಿಹಾಸ ನಿರ್ಮಿಸಿ'[5] ಮಹಾ ಬಿಕ್ಕುವೇ ಆದರು. ಬೌದ್ಧ ಧರ್ಮದಲ್ಲಿ ಒತ್ತಾಯದ ಮತಾಂತರಕ್ಕೆ, ಮತಾಂತರದಿಂದ ಬೌದ್ಧರ ಸಂಖ್ಯಾಬಲವನ್ನು ಹೆಚ್ಚಿಸುವುದಕ್ಕೆ ಎಂದಿಗೂ ಯಾರೂ ಪ್ರಯತ್ನಿಸಿಲ್ಲದಿರುವುದು ವಿಶೇಷವಾಗಿದೆ. ಬುದ್ಧನ ಕಾಲದಲ್ಲಿಯೇ ಅಂತಹ ಮಹೋನ್ನತ ಘಟನೆಗಳನ್ನು ನೋಡುತ್ತೇವೆ. ಯಾರೇ ತನ್ನ ಅನುಯಾಯಿಗಳಾಗಲು ಬುದ್ಧನ ತತ್ವಗಳನ್ನು ಸ್ವೀಕರಿಸಲು ಬಂದರೂ ಕೂಡ ಬುದ್ಧ ಅವರಿಗೆ ವಿವೇಚನೆ ಮತ್ತು ವಿಶ್ಲೇಷಣೆ ಮಾಡಲು ಹೇಳುವುದನ್ನು ನೋಡುತ್ತೇವೆ. 'ನಾನು ಹೇಳಿದ್ದೇನೆ ಎಂಬ ಕಾರಣದಿಂದ ನೀವು ನನ್ನ ಮಾತನ್ನೇ ಅಂತಿಮ ಎಂದು ನಂಬಬೇಡಿ' ಎಂದು ಪದೇ ಪದೇ ಹೇಳುತ್ತಿದ್ದ. ಈ ಹಿನ್ನಲೆಯಲ್ಲಿ ಉಪಾಲಿಯ ಪ್ರಕರಣವನ್ನು ಇಲ್ಲಿ ಉಲ್ಲೇಖಿಸುವುದು ಪ್ರಸ್ತುತವೆನಿಸುತ್ತದೆ.

ಒಮ್ಮೆ ಬುದ್ಧನ ಅನುಯಾಯಿಯಾದ ಉಪಾಲಿ ಮೊದಲ ಬಾರಿಗೆ ಬುದ್ಧನನ್ನು ಭೇಟಿ ಮಾಡಿದಾಗ ಧಮ್ಮದ ಬೋಧನೆಯನ್ನು ಕೇಳಿ, ಸಂತೋಷಗೊಂಡು ತಕ್ಷಣದಲ್ಲೇ ತಾನು ಬುದ್ಧನ ಅನುಯಾಯಿಯಾಗಬೇಕೆಂದು ಅಪೇಕ್ಷೆ ವ್ಯಕ್ತಪಡಿಸಿದಾಗ ಅವನಿಗೆ ಬುದ್ಧನು ಈ ರೀತಿಯ ಎಚ್ಚರಿಕೆ ನೀಡುತ್ತಾನೆ.

'ಗೃಹಸ್ಥನೆ ಸತ್ಯವಾಗಿ, ಸಂಪೂರ್ಣವಾಗಿ ಶೋಧಿಸಬೇಕು. ನಿನ್ನಂತಹ ಪ್ರಸಿದ್ಧವಾದ ವ್ಯಕ್ತಿ ಮೊದಲು ಸಂಪೂರ್ಣ ಶೋಧನೆ ಮಾಡುವುದು ಒಳಿತು'. ಉಪಾಲಿಯು ಬುದ್ಧನ ಈ ಅನಿರೀಕ್ಷಿತವಾದ ಮಾತಿನಿಂದ ಹೆಚ್ಚು ಹರ್ಷಗೊಂಡು ಹೇಳುತ್ತಾನೆ. 'ಪ್ರಭು ನಾನು ಇನ್ನೊಂದು ಧರ್ಮದ ಅನುಯಾಯಿಯಾಗಿದ್ದರೆ, ಅದರ ಅನುಯಾಯಿಗಳು ಬೀದಿ ಬೀದಿಗಳಲ್ಲಿ ಕರೆದೊಯ್ದು ಇಂತಿಂತಹ ಲಕ್ಷಾಧಿಪತಿಯು ತನ್ನ ಹಿಂದಿನ ಧರ್ಮವನ್ನು ಬಿಟ್ಟು ನಮ್ಮ ಧರ್ಮವನ್ನು ಒಪ್ಪಿಕೊಂಡಿದ್ದಾರೆ ಎಂದು ಘೋಷಿಸುತ್ತಿದ್ದರು. ಪೂಜ್ಯರಾದ ತಾವು, ನಾನು ಸತ್ಯವನ್ನು ಪರಿಶೋಧಿಸಬೇಕೆಂದು ಸಲಹೆ ನೀಡಿದ್ದೀರಿ. ತಮ್ಮ ಸಲಹೆಯಿಂದ ನಾನು ಸಂತಸಗೊಂಡಿದ್ದೇನೆ. ನಾನು ಮತ್ತೊಮ್ಮೆ ಪ್ರಭು ಬುದ್ಧನಲ್ಲಿ, ಧಮ್ಮದಲ್ಲಿ ಮತ್ತು ಸಂಘದಲ್ಲಿ ಶರಣಾಗುತ್ತಿದ್ದೇನೆ.'[6] ಎಂದು ವಿನೀತಭಾವನೆ

ವ್ಯಕ್ತಪಡಿಸುತ್ತಾನೆ. ಆದ್ದರಿಂದ ಬೌದ್ಧ ಧರ್ಮ ಎಂದಿಗೂ ಒತ್ತಾಯದ ಮತಾಂತರಕ್ಕೆ ಪ್ರೇರಣೆ, ಪ್ರಯತ್ನಗಳನ್ನು ಪುರಸ್ಕರಿಸುವುದಿಲ್ಲವೆಂಬುದನ್ನು ನಾವು ಮೇಲಿನ ಪ್ರಕರಣದಿಂದ ತಿಳಿಯಬಹುದಾಗಿದೆ. ಕರ್ನಾಟಕದಲ್ಲಿ ಮತಾಂತರ ಚಳವಳಿಯ ಪ್ರಕ್ರಿಯೆಯನ್ನು ಪರಿಶೀಲಿಸುವ ಪೂರ್ವದಲ್ಲಿ ಈ ಹಿನ್ನಲೆ ಅವಶ್ಯಕ ಮತ್ತು ಸಕಾಲಿಕವೆನ್ನಿಸಿದ್ದರಿಂದ ಈ ಘಟನೆಯನ್ನು ಪ್ರಸ್ತುತ ಪಡಿಸಲಾಗಿದೆ.

ಚಾರಿತ್ರಿಕವಾಗಿ ಕರ್ನಾಟಕದಲ್ಲಿ ಮತಾಂತರ ಚಳುವಳಿಯ ಚರಿತ್ರೆಯನ್ನು ನಾವು 12 ನೇ ಶತಮಾನಕ್ಕೆ ಕೇಂದ್ರೀಕರಿಸಿ ನೋಡಬಹುದಾದ ಸಾಕಷ್ಟು ದಾಖಲೆಗಳಿವೆಯಾದರೂ ದೇಶದ ಬೇರೆ ಕಡೆ ಈ ಪ್ರಕ್ರಿಯೆ 18 ನೇ ಶತಮಾನದ ಪೂರ್ವಾರ್ಧದವರೆಗೆ ಸ್ಪಷ್ಟವಾಗುವುದಿಲ್ಲ. ಮುಂದೆ ಕೆಲವು ಕಾಲ ಬ್ರಿಟಿಷ್ ಸರ್ಕಾರ ಭಾರತೀಯ ಧಾರ್ಮಿಕ ನಂಬಿಕೆಗಳ ವಿಚಾರದಲ್ಲಿ 'ತಾಟಸ್ಥ್ಯ ನೀತಿ' ಅನುಸರಿಸಿತು. ಆದರೆ ಬ್ರಿಟಿಷ್ ಅಧಿಕಾರಿಗಳಲ್ಲೇ ಈ ಕುರಿತು ಭಿನ್ನಮತ ತಲೆದೋರಿತು. ಆದ್ದರಿಂದ ಮುಂದೆ ಈ ನೀತಿಯಲ್ಲಿ ಸಡಿಲಿಕೆಯುಂಟಾಯಿತು. 1838 ರಲ್ಲಿ ಕೋರ್ಟ್ ಆಫ್ ಡೈರೆಕ್ಟರ್, ಅವರ ಆದೇಶದ ಪ್ರಕಾರ ಮದ್ರಾಸ್ ಸರ್ಕಾರ ಎಲ್ಲಾ ದೇಶಿಯ ಧಾರ್ಮಿಕ ಸಂಸ್ಥೆಗಳಿಂದ ದೂರ ಸರಿಯಿತು. ಡಾ. ಎಸ್. ಚಂದ್ರಶೇಖರ ಗುರುತಿಸುವಂತೆ ''ನಿಧಾನವಾಗಿ, ಪ್ರಧಾನವಾಗಿ ಮಿಷನರಿಗಳು ತಾವು ನಡೆಸುತ್ತಿದ್ದ ಶಾಲೆಗಳ ಮೂಲಕ ಹಿಂದೂ ಕೆಳಜಾತಿಗಳವರನ್ನು ಕ್ರಿಶ್ಚಿಯನ್ನ್‌ರನ್ನಾಗಿ ಮಂತಾತರಗೊಳಿಸುವ ಕಾಯಕಕ್ಕೆ ತೊಡಗಿದವು. ಅದಕ್ಕೆ ಮೊದಲು ಮತಾಂತರಗಳು ನಡೆದಿರಲಿಲ್ಲವೆಂದಲ್ಲ, ಕರಾವಳಿ ಪಟ್ಟಣ ಪ್ರದೇಶಗಳು ಹಾಗೂ ಜಿಲ್ಲೆಗಳಲ್ಲಿ ಲಕ್ಷಾಂತರ ಮಂದಿ ಮತಾಂತರಗೊಂಡಿದ್ದರು. ಮುಖ್ಯವಾಗಿ ಮದ್ರಾಸು, ಬೆಂಗಳೂರು ಅಥವಾ ತಂಜಾವೂರ ಮುಂತಾದ ನಗರದ ಜನರು ಮತಾಂತರವಾಗುವುದು ಧರ್ಮವಿರೋಧಿಯಾಗಿತ್ತು.''[7] ಈ ವಿಷಯವನ್ನು ಗಮನಿಸಿದಾಗ ಪಟ್ಟಣಗಳಲ್ಲಿನ ಶಿಕ್ಷಣ ಪಡೆದ ಮೇಲ್ಜಾತಿಯ ಜನರೇ ಹಿಂದೂ ಧಾರ್ಮಿಕ ವ್ಯವಸ್ಥೆಯಲ್ಲಿ ಯಥಾಸ್ಥಿತಿ ಕಾಪಾಡುತ್ತಾ, ಆಂತರಿಕ ಸುಧಾರಣೆಗೆ ಪ್ರಯತ್ನಿಸುವುದು ಕಾಣುತ್ತದೆ. ಆದರೆ, ಮೊದಲು ಮೇಲ್ಜಾತಿಗಳೇ ಪಾಶ್ಚಿಮಾತ್ಯ ಜೀವನ ಸುಖ ಲಾಲಸೆಗಳಿಗೆ ಆಕರ್ಷಿತರಾಗಿ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿರುವುದು ಸ್ಪಷ್ಟವಾಗಿದೆ. ಹೀಗೆ, ಕರ್ನಾಟಕದಲ್ಲಿ ಮತಾಂತರಗಳು ಯಾವಾಗ ನಡೆದವು ಎಂಬುದಕ್ಕೆ ಸಾಕಷ್ಟು ಪ್ರಮಾಣದ ಆಕರಗಳಿಲ್ಲವಾದರೂ, ಬೇರೆ ಬೇರೆ ಧರ್ಮಗಳು ಈ ನಾಡಿನಲ್ಲಿ, ಪ್ರವೇಶ ಪಡೆದ ಮೇಲೆ ಮತಾಂತರಗಳು ನಡೆಯುತ್ತಲೇ ಬಂದಿರುವುದನ್ನು ಗಮನಿಸಬಹುದಾಗಿದೆ.

ಕರ್ನಾಟಕದ ಮಟ್ಟಿಗೆ ಇದು ಮಹತ್ವದ್ದಾದ ಪ್ರಕ್ರಿಯೆಯಾಗಿದೆ. ಹಿಂದೂ ಧರ್ಮದ ಕುರುಡು ಸಂಪ್ರದಾಯಗಳು, ಪುರೋಹಿತಷಾಹಿಗಳ ಅಟ್ಟಹಾಸ ಜಾತಿ ವ್ಯವಸ್ಥೆಯ ಕ್ರೂರತೆಯಲ್ಲಿ ನಲುಗಿದ ಜಾತಿಗಳು ಕರ್ನಾಟಕದಲ್ಲಿ ಬಸವಣ್ಣನವರ ಸಮಾಜೋ - ಧಾರ್ಮಿಕ ಆಂದೋಲನದ ಸಂದರ್ಭದಲ್ಲಿ ಬಸವಣ್ಣನು ಪ್ರತಿಪಾದಿಸಿದ ಲಿಂಗಾಯತ್ ಧರ್ಮದಲ್ಲಿ ದಲಿತರು, ಒಟ್ಟಾರೆ ಶೋಷಿತರು ಪಾಲ್ಗೊಂಡು ಹೊಸ ಉಸಿರಾಡಿದರು.

19 ನೇ ಶತಮಾನದಲ್ಲಿ ಉದಯಿಸಿದ ಸಮಾಜೋ-ಧಾರ್ಮಿಕ ಚಳುವಳಿಗಳು ರಾಷ್ಟ್ರೀಯವಾದಿ ಚಳುವಳಿಯ ಸುಧಾರಿತ ಮುಖಗಳಾಗಿ ಹೊರ ಹೊಮ್ಮಿದವೇ ಹೊರತಾಗಿ ಅವುಗಳ ಮೂಲ ಉದ್ದೇಶ ವ್ಯವಸ್ಥೆಯಲ್ಲಿ ಸ್ವಲ್ಪ ಪ್ರಮಾಣದ 'ಆಂತರಿಕ ಸುಧಾರಣೆ' ಹೊರತು, ಸಮಾಜದ ಆರ್ಥಿಕ - ಸಾಮಾಜಿಕ

ಸ್ತರಗಳಲ್ಲಿ ರಾಚನಿಕವಾದ ಬದಲಾವಣೆ (Structural Change) ಯಾಗಿರಲಿಲ್ಲ. ಮೇಲಾಗಿ ಅಂತಹ ಚಳವಳಿಗಳ ನಾಯಕರು ಹಿಂದೂ ಧರ್ಮದವರು, ಶಿಕ್ಷಣ ಪಡೆದ ಸುಶಿಕ್ಷಿತರಾಗಿದ್ದರು. ಇವರು ಶಿಕ್ಷಣದ ಪ್ರಭಾವದಿಂದ ಡಾ. ಎಸ್. ಚಂದ್ರಶೇಖರ ಅವರು ಗುರುತಿಸುವಂತೆ, ಅಸ್ಪೃಶ್ಯರ ಕರುಣಾ ಜನಕ ಸ್ಥಿತಿಯ ಬಗ್ಗೆ ಮಾತನಾಡಲು ಬಾಯಿ ತೆರೆದರು. 1886 ರಲ್ಲಿ ದಕ್ಷಿಣ ಭಾರತದ ರಾಷ್ಟ್ರೀಯ ವಾದಿಗಳು ಮೊಟ್ಟ ಮೊದಲ ಬಾರಿಗೆ ಮದ್ರಾಸಿನಲ್ಲಿ ನಡೆದ 'ದಲಿತ ವರ್ಗದ ಸಮಾವೇಶ' ವನ್ನು ನಡೆಸಿದಾಗ ಮೇಲ್ಜಾತಿ ಸಂಘಟನೆಗಳು, 'ಕ್ರಿಶ್ಚಿಯನ್ ಮಿಷನರಿಗಳ' ಮೂಲಕ ಸರ್ಕಾರ 'ಪಂಚಮರಿಗೆ' ಭೂಮಿಯನ್ನು ಕೊಡಿಸುತ್ತಿರುವುದರ ಬಗೆಗೆ ಪ್ರತಿಭಟನೆ ವ್ಯಕ್ತಪಡಿಸಿದವು. ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಿಗಳನ್ನು ಸೇರಿಸಿಕೊಳ್ಳುವಲ್ಲಿ ಮಿಷನರಿಗಳು ಭೂಮಿಯನ್ನು ಉಪಯೋಗಿಸಿಕೊಳ್ಳುತ್ತಿರುವರೆಂಬುದು ಅವರ ಆಪಾದನೆಯಾಗಿತ್ತು.''[8] ಮತಾಂತರಗಳಿಗೆ ತಡೆಯೊಡ್ಡುವಲ್ಲಿ ಹಿಂದೂ ಸುಧಾರಣಾ ವಾದಿಗಳು ಮಿಷನರಿಗಳ ಚಟುವಟಿಕೆಗಳಿಗೆ ತಡೆಯೊಡ್ಡುವ ಪ್ರಯತ್ನವಾಗಿ 1833 ರಲ್ಲಿ 'ದಿ ಹಿಂದೂ ಲಿಟರರಿ' ಸೊಸೈಟಿಯನ್ನು ಪ್ರಾರಂಭಿಸಿದರು.

ಹಿರಿಯ ದಲಿತ ಚಿಂತಕರಾದ ಡಾ. ಅರವಿಂದ ಮಾಲಗತ್ತಿಯವರು ಅಭಿಪ್ರಾಯ ಪಡುವಂತೆ ''ಹೊಸ ಮತಗಳ ಹುಟ್ಟು ಹೊಸ ಧರ್ಮದ ಆವಿಷ್ಕಾರ ಹಳೆರಿದ ಅಸಮಾನತೆಯನ್ನು ಅದರಲ್ಲೂ ಮುಖ್ಯವಾಗಿ ಅಸ್ಪೃಶ್ಯತೆಯನ್ನು ತೊಡೆದು ಹಾಕಲು ಸಾಧು ಸಂತರು ಪ್ರಯತ್ನಿಸುತ್ತಲೇ ಬಂದಿದ್ದಾರೆ. ಹೀಗಾಗಿ ಅಂದಿನಿಂದ ಹಿಡಿದು ಇಂದಿನವರೆಗೂ, ಮತಾಂತರ ಒಂದು ಧಾರ್ಮಿಕ ಅಸ್ತ್ರವಾಗಿ ಬಳಕೆಯಾಗಿದ್ದು ಕಂಡು ಬರುತ್ತದೆ.'[9] ಎಂದು ಅಭಿಪ್ರಾಯ ಪಡುತ್ತಾರೆ.

ಪಾಶ್ಚಾತ್ಯೀಕರಣಗೊಂಡ ಭಾರತೀಯರು ಹಾಗೂ ಪಶ್ಚಿಮದ ಉದಾರೀ ಸಾಮಾಜಿಕ ತತ್ವಗಳಿಗೆ ಹೊಂದಿಕೊಳ್ಳುವಂತೆ ಹಿಂದೂ ಕುಟುಂಬಗಳನ್ನು ಸುಧಾರಿಸುವ ಪ್ರಯತ್ನದಲ್ಲಿದ್ದರು. ಇಂತಹ ಪ್ರಯತ್ನಗಳು ಕ್ರಿಶ್ಚಿಯನ್ ಮಿಷನರಿಗಳು ಅಸ್ಪೃಶ್ಯರನ್ನು ಸಂಘಟಿಸಿ ಮತಾಂತರಗೊಳಿಸುವ ಸಂದರ್ಭಗಳಲ್ಲಿ ಜಾಗೃತಾವಸ್ಥೆ ತಾಳಿದ ಸಂದರ್ಭಗಳೂ ಉಂಟು. ಹಿರಿಯ ಇತಿಹಾಸ ಪ್ರಾಧ್ಯಾಪಕರಾದ ಡಾ. ಎಸ್. ಚಂದ್ರಶೇಖರ ಅವರು ಹೇಳುವಂತೆ,

'ಭಾರತದಲ್ಲಿ ವೈದಿಕ, ಪುರೋಹಿತಷಾಹಿ ಹಿಂದೂ ಧರ್ಮ ಇಲ್ಲಿನ ಬಹುಸಂಖ್ಯಾತರನ್ನು ಒಂದಿಲ್ಲೊಂದು ರೀತಿಯಲ್ಲಿ ಕತ್ತಲೆಯಲ್ಲಿಟ್ಟುಕೊಂಡು ಬಂದಿದ್ದಾರೆ. ವಾಸ್ತವವಾಗಿ ಮಿಷನರಿಗಳ ದಾಪುಗಾಲಿಗೆ ಸಾಟಿಯಾಗಿ ಹೆಜ್ಜೆ ಹಾಕಲು ತೊಡಗಿದ ಸುಧಾರಣಾ ವಾದಿಗಳು ಅಜ್ಞಾನ, ಅಂಧ ವಿಶ್ವಾಸಗಳೊಂದಿಗೆ ಚೆಲ್ಲಾಟವಾಡುತ್ತಾ ಬಂದರು. ಕಾಲಕ್ಕೆ ಇಲ್ಲಿನ ಬಹುಸಂಖ್ಯಾತ ಶೋಷಿತರು ತಮಗೆ ಅವಕಾಶ ಸಿಕ್ಕಾಗಲೆಲ್ಲ, ಶೋಷಕ ಧಾರ್ಮಿಕ ವ್ಯವಸ್ಥೆಯನ್ನು ಪ್ರಶ್ನಿಸುತ್ತಲೇ ಬಂದಿದ್ದಾರೆ.'[10] ಲೋಕಾಯತ, ಚಾರ್ವಾಕ ಪರಂಪರೆಗಳೇ ಇದಕ್ಕೆ ಸಾಕ್ಷಿಯಾಗಿವೆ. ಅದೇ ಕಾಲಕ್ಕೆ ಈ ಶೋಷಕ ವರ್ಗವೇ ಉಳಿದ ಜನರ ವೇಷಭೂಷಣ, ಆಚಾರ ವಿಚಾರಗಳನ್ನು ಅನುಸರಿಸಿ ಇಂತಹ ಆಂತರಿಕ ಪ್ರತಿಭಟನೆಗಳನ್ನು ಛಿದ್ರಗೊಳಿಸುವ, ಯಜಮಾನ ಸಂಸ್ಕೃತಿಯನ್ನು, ಧಾರ್ಮಿಕ ವ್ಯವಸ್ಥೆಯನ್ನು ರಕ್ಷಿಸುವ ಕಾರ್ಯಗಳೂ ಏಕಕಾಲಕ್ಕೆ ನಡೆದಿವೆ.

ಧಾರ್ಮಿಕ ಶೋಷಣೆ ಯಾವ ದೇಶದಲ್ಲಿ ನಡೆಯುತ್ತಾ ಬಂದಿದೆಯೋ ಆ ದೇಶಗಳಲ್ಲಿ ಶೋಷಿತ ಜನ ಅಲ್ಲಿನ ಪುರೋಹಿತಶಾಹಿಗಳಿಗೆ ಸರಿಯಾದ ಪ್ರತಿಭಟನೆ ಒಡ್ಡುತ್ತಲೇ ಬಂದಿದ್ದಾರೆ. ಇಂತಹ ಪ್ರತಿಭಟನೆಗಳಿಗೆ ಯಾವುದೇ ಧರ್ಮ ಹೊರತಾಗಿಲ್ಲ. ರೋಮ ಸಾಮ್ರಾಜ್ಯದಲ್ಲಿಯೇ ಆಗಲೀ, ಯುರೋಪನದಲ್ಲಿಯೇ ಆಗಲಿ ಇಂತಹ ಬೆಳವಣಿಗೆಗಳನ್ನು ನೋಡುತ್ತೇವೆ. ಕ್ರೈಸ್ತ ಧರ್ಮದ ಪೋಪರ 'ಪುರೋಹಿತಶಾಹಿ ಆಡಳಿತ' ವನ್ನು ಅವರ ಯಜಮಾನೀ ಮೌಲ್ಯಗಳನ್ನು (Hegemonic Values) ವಿರೋಧಿಸಿಯೇ ಪ್ರೊಟೆಸ್ಟೆಂಟ್ ಪಂಥ ಹುಟ್ಟಿಕೊಂಡಿತು. ಇಂದಿಗೂ ಸಹ ರೋಮನ್ ಕ್ಯಾಥೋಲಿಕ್‌ರು, ಪ್ರೊಟೆಸ್ಟೆಂಟರು ಸಾಂಸ್ಕೃತಿಕವಾಗಿ ಒಂದೇ ಆಗಲು ಸಾಧ್ಯವಿಲ್ಲದ್ದನ್ನು ನೋಡುತ್ತೇವೆ. ಅವರ ಧಾರ್ಮಿಕ ವ್ಯವಸ್ಥೆ ನಮಗೆ ಆಚಾರ ವಿಚಾರಗಳಲ್ಲಿ ಪ್ರತಿಶತ 90% ರಷ್ಟು ವ್ಯತ್ಯಾಸವಿರುವುದನ್ನು ಕಾಣುತ್ತೇವೆ. ಅದೇ ರೀತಿಯ ಧಾರ್ಮಿಕ ವಿಘಟನೆಯನ್ನು ಮುಸ್ಲಿಂ ಧರ್ಮದಲ್ಲಿಯೂ ಕಾಣುತ್ತೇವೆ. ಷಿಯಾ ಸುನ್ನಿ ಪಂಗಡಗಳು, ಅವರ ಆಚಾರ ವಿಚಾರಗಳನ್ನು ಸ್ವಲ್ಪ ಮಟ್ಟಿಗೆ ಬದಲಾವಣೆ ಇರುವುದನ್ನು ಕಾಣುತ್ತೇವೆ. ಬಣ್ಣದ ಆಧಾರದ ಮೇಲೆ ಅವಲೋಕಿಸಿದರೆ ಭಾರತದ ಬಹುಸಂಖ್ಯಾತ ಮುಸ್ಲಿಂರು ಮಧ್ಯ ಏಷ್ಯಾದಿಂದ ಬಂದ ಮುಸ್ಲಿಮರಿಗಿಂತ ಭಿನ್ನವಾಗಿಯೇ ಗೋಚರಿಸುತ್ತಾರೆ. ನಮ್ಮಲ್ಲಿನ ಮುಸ್ಲಿಂರನ್ನು ನೋಡಿದಾಗ, ಆರ್ಯರಂತೆ ಇವರು ನಮ್ಮ ದೇಶಕ್ಕೆ ವಲಸೆ ಬಂದವರೆಂದು ಅನ್ನಿಸುವುದೇ ಇಲ್ಲ. ಹಲವಾರು ತಜ್ಞರು ಅಭಿಪ್ರಾಯಪಡುವಂತೆ ಚರಿತ್ರೆಯ ಹಲವಾರು ಪುಟಗಳಲ್ಲಿ ತಿಳಿಸಿರುವಂತೆ, ಇಲ್ಲಿನ 'ಶೋಷಿತ ಜನರೇ ಒಂದು ಕಾಲಘಟ್ಟದಲ್ಲಿ ಮುಸ್ಲಿಂ ಧರ್ಮಕ್ಕೆ ಮತಾಂತರವಾಗಿರುವುದು' ಐತಿಹಾಸಿಕ ಸತ್ಯವಾಗಿದೆ. ಈ ಕುರಿತು ಪ್ರತ್ಯೇಕವಾದ ಅಂತರ್‌ಶಿಸ್ತಿಯ ಅಧ್ಯಯನವೇ ನಡೆಯಬೇಕಾದ ಅವಶ್ಯಕತೆ ಇದೆ.

ಅದೇ ರೀತಿಯ ಸಾಂಸ್ಕೃತಿಕ ಪ್ರತಿರೋಧಗಳು, ನಮ್ಮ ದೇಶದಲ್ಲಿ ಪ್ರಾಚೀನ ಕಾಲದಿಂದಲೂ ಕಂಡು ಬರುತ್ತವೆ. ಪ್ರತಿಭಟನೆ, ಸಂಘರ್ಷದ ಸ್ವರೂಪ ಮತ್ತು ಪ್ರಮಾಣದಲ್ಲಿ ವ್ಯತ್ಯಾಸ ಇರಬಹುದು. ಆದರೆ, ಮೂಲ ಆಶಯ 'ಯಜಮಾನೀ ಧಾರ್ಮಿಕ ವ್ಯವಸ್ಥೆಯ', 'ಶೋಷಕ ವ್ಯವಸ್ಥೆಯ' ನಿರಾಕರಣೆಯೇ ಹೊಸ ಮತಗಳ ಉದಯಕ್ಕೆ ಕಾಣವಾಗಿವೆ. ಯಾವಾಗ ಹೊಸ ಮತಗಳು ಹುಟ್ಟಿಕೊಂಡವೋ ಆ ಸಂದರ್ಭದಲ್ಲಿ ಜನರು ಈ ಪಂಥಗಳಿಗೆ ಸೇರಿಕೊಂಡಿರುವುದರಿಂದ ಅದು ಮತಾಂತರದ ಪ್ರಕ್ರಿಯೆಯೇ ಆಗಿದೆ. ಇಂತಹ ಮತಾಂತರ ಪ್ರಕ್ರಿಯೆಗಳು ಭಾರತ ಸಾಮಾಜಿಕ ಬೆಳವಣಿಗೆಯಲ್ಲಿ ಹಲವಾರು ಕಾಲಘಟ್ಟಗಳಲ್ಲಿ ನಡೆದು ಹೋಗಿವೆ.

ಈ ಪ್ರಕ್ರಿಯೆಗಳಿಗೆ ಪ್ರಜಾ ಪ್ರಭುತ್ವವಾದಿ ಸ್ವರೂಪ ದೊರೆತಾಗ 'ಯಜಮಾನಿ ಸಂಸ್ಕೃತಿಯ' ನೇತಾರರು ತಲೆ ಕೆಡಿಸಿಕೊಳ್ಳಲು ಪ್ರಾರಂಭಿಸಿದರು. 18 ಮತ್ತು 19 ನೇ ಶತಮಾನಗಳಲ್ಲಿನ ಭಾರತೀಯ ಸಮಾಜವನ್ನೇ ತೆಗೆದುಕೊಂಡರೆ, ಅದು ಸಂಪ್ರದಾಯವಾದೀ ಧಾರ್ಮಿಕತೆಯ ಸ್ವರೂಪದಿಂದ ಪರಿವರ್ತನೆಯ ಕಡೆಗೆ ಹೆಜ್ಜೆ ಹಾಕಲೇಬೇಕಾಯಿತು. ಭಾರತದ್ಯಾಂತ ಹಲವಾರು ಸಂಘ, ಸಂಸ್ಥೆಗಳು ಹುಟ್ಟಿಕೊಂಡು ಪುರೋಹಿತಶಾಹಿ ಪ್ರಣೀತ ಧಾರ್ಮಿಕ ಡಂಬಾಚಾರಗಳನ್ನು ವಿಮರ್ಶಿಸಲು ಪ್ರಾರಂಭಿಸಿದ್ದವು. ವರ್ಣಾಶ್ರಮ ವ್ಯವಸ್ಥೆಯನ್ನು ಸಾರಾಸಗಟಾಗಿ ಖಂಡಿಸುವ ವಾತಾವರಣ ಉಂಟಾಯಿತು. ಒಂದು ಧಾರ್ಮಿಕ ವ್ಯವಸ್ಥೆಯನ್ನು ವಿರೋಧಿಸಿ, ತಮ್ಮನ್ನು ಸಮಾನತೆಯಿಂದ ಪ್ರೀತಿಯಿಂದ ಕನಿಕರಿಸುವ ಧರ್ಮ ಜನತೆಗೆ ಸಿಕ್ಕಾಗ ಭಾರತದ ದಲಿತರು ಬೇರೆ ಬೇರೆ ಧರ್ಮಗಳ ಆಕರ್ಷಣೆಗಳಿಗೆ, ಅಂದರೆ, ಯಜಮಾನೀ ಸಂಸ್ಕೃತಿ ಪ್ರಣೀತ ಹಿಂದೂ ಧರ್ಮವನ್ನು

ತ್ಯಜಿಸಿ ಕ್ರೈಸ್ತ ಧರ್ಮಕ್ಕೆ ಮತಾಂತರಗೊಳ್ಳುತ್ತಲೇ ಬಂದಿದ್ದಾರೆ. ಈ ಮೊದಲೇ ವಿಶ್ಲೇಷಿಸಿದಂತೆ ಮುಸ್ಲಿಂ ಧರ್ಮ ಈ ದೇಶಕ್ಕೆ ಬಂದಾಗ ಮುಸ್ಲಿಂ ಧರ್ಮಕ್ಕೆ ಮತಾಂತರಗೊಂಡಿದ್ದಾರೆ. ಕ್ರೈಸ್ತ ಧರ್ಮ ಈ ದೇಶಕ್ಕೆ ಬಂದಾಗ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡಿದ್ದಾರೆ. ಇಲ್ಲಿಯೇ ಉದಯಿಸಿದ ಧಾರ್ಮಿಕ ಪಂಥಗಳು ಬಂದಾಗ ಆ ಪಂಥಗಳಿಗೆ ಮತಾಂತರ ಹೊಂದಿದ್ದಾರೆ. ಉದಾ : ಬೌದ್ಧ ಜೈನ್, ಸಿಖ್, ಇತ್ಯಾದಿ ಧರ್ಮಗಳಿಗೆ ಮತಾಂತರ ಹೊಂದುತ್ತಲೇ ಬಂದಿದ್ದಾರೆ.

18 ನೇ ಶತಮಾನದ ಪೂರ್ವಾರ್ಧದಲ್ಲಿ ದೊಡ್ಡ ಪ್ರಮಾಣದ ಸಾಮೂಹಿಕ ಮತಾಂತರಗಳು (Mass Conversions) ನಡೆದ ಬಗ್ಗೆ ಅಲ್ಲಲ್ಲಿ ಉಲ್ಲೇಖಗಳಿವೆ. (ಇವು ಕ್ರೈಸ್ತ ಮಿಷನರಿಗಳು ಹಮ್ಮಿಕೊಂಡ ಶೈಕ್ಷಣಿಕ ಮತ್ತು ಆರೋಗ್ಯ ಕಾರ್ಯಕ್ರಮಗಳ ಪ್ರತಿಫಲದ ನೆಲೆಯಲ್ಲಿ ನಡೆದಂತಹುಗಳು)

ಮುಂಬೈ ಪ್ರಾಂತ್ಯದ ಮಾಂಗ ಮತ್ತು ಮಹಾರರು, ಪಂಜಾಬ ಪ್ರಾಂತ್ಯದ ಚುಹಾರ್, ಮತ್ತು ಮಝಾಬಿಗಳು, ಬನಾರಸ್, ಕುಮಾಂವ್ ಮತ್ತು ಗಡವಾಲ ಗುಡ್ಡಗಾಡು ಪ್ರದೇಶದ ಡೋಮರು ಬಿಹಾರಿನ ದುಸಿಯಾ ಚಮ್ಮಾರರು, ಉತ್ತರ ಪ್ರದೇಶದ ಬಲ್ಲಿಯಾಗಳು, ಈಶಾನ್ಯ ಭಾಗದ ಗಿರಿಜನರು, ಬಂಗಾಲದ ಕಾರ್ತಾ ಬೋಜರು, ಮಧ್ಯಭಾರತದ ಬಿಲ್ಲರು, ಆಂಧ್ರ ಪ್ರದೇಶದ ಮಾಲಾ ಮತ್ತು ಮಾದಿಗರು, ಮದ್ರಾಸ್, ಪ್ರಾಂತ್ಯದ ಸಂಬಾವರರು, ಶಾನರು ಮತ್ತು 'ಪರಿಯಾ' ಗಳು. ಜಿ. ಅಲೋಸಿಯಸ್ (1998) ಅಧ್ಯಯನದಲ್ಲಿ ಪ್ರಸ್ತಾಪ ಮಾಡಿರುವಂತೆ ಬೃಹತ್ ಪ್ರಮಾಣದ ಮತಾಂತರ ಪ್ರಾರಂಭವಾದದ್ದು 1850 ರ ದಶಕದಲ್ಲಿ[11] ಈ ರೀತಿಯ ಮತಾಂತರಗಳು ಕ್ರೈಸ್ತ ಧರ್ಮದ ಪ್ರೊಟೆಸ್ಟಂಟ್ ಸಂಘಟನೆಗಳು ಜಾತಿ ವ್ಯವಸ್ಥೆಯಲ್ಲಿ ನಲುಗಿದ ಸಮುದಾಯಗಳ ಜನರನ್ನು ಚರ್ಚಿನಲ್ಲಿ ಬರಮಾಡಿಕೊಳ್ಳಲು ಮಾಡಿದಂತವುಗಳು[12]. ಆದರೆ, ವಿಚಿತ್ರವೆಂದರೆ - ಈ ಹಿಂದೆ ನೂರಾರು ವರ್ಷಗಳಿಂದ ಮೇಲ್ವರ್ಗದ ಜನ ಕ್ರೈಸ್ತ ಧರ್ಮಕ್ಕೆ ಮತಾಂತರವಾಗಿದ್ದ ಅಂಶಗಳ ಕೂಡ ಚರಿತ್ರೆಯಲ್ಲಿ ದಾಖಲಾತಿಗಳಿಲ್ಲ. ಮೊದಲು ಕ್ರೈಸ್ತಧರ್ಮಕ್ಕೆ ಮತಾಂತರಗೊಂಡವರು ಮೇಲ್ಜಾತಿಯವರೇ ಆಗಿದ್ದರು. ಅವರಿಗೆ ಇಂಗ್ಲೀಷ್ ಶಿಕ್ಷಣದ ಆಕರ್ಷಣೆ, ಲೌಖಿಕ ಜೀವನಕ್ಕೆ ಬೇಕಾದ ಪ್ರಾಶ್ಚಾತ್ಯ ಪರಿಕರಗಳು ಮತ್ತು ಮೇಲಾಗಿ ಅಧಿಕಾರದ ಲಾಲಸೆ ಆ ರೀತಿಯ ಮತಾಂತರಕ್ಕೆ ಕಾರಣವಾಗಿದ್ದವು. ಈ ಕುರಿತು ಈಗಾಗಲೇ ವಿವರಿಸಲಾಗಿದೆ. ಆದರೆ ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ 'ಜಾತಿಯ ಪೆಡಂಭೂತದಿಂದ ನಲುಗಿದ ಜನ ಸಮುದಾಯಗಳು ಕ್ರೈಸ್ತ ಧರ್ಮಕ್ಕೆ ಮತಾಂತರವಾದರೂ, ಅವು ಅಪೇಕ್ಷಿತ 'ಸಮಾನತೆ' ಯನ್ನು ಸಾಧಿಸಲಾಗಲಿಲ್ಲವೆಂಬುದು ತಿಳಿದು ಬರುತ್ತದೆ. ಹೀಗೆ ಮತಾಂತರಗೊಂಡು ಚರ್ಚಿನಲ್ಲಿ ಸರಿಯಾದ ಸ್ಥಾನಮಾನ ಸಿಗದೇ ಇದ್ದುದಕ್ಕೆ ಚರ್ಚ್ ಆಡಳಿತಕ್ಕೆ ಸವಾಲು ಹಾಕಿ ಅವರದೇ ಆದ ಚರ್ಚ್‌ಗಳನ್ನು ಪ್ರಾರಂಭಿಸಿಕೊಂಡ ಉದಾಹರಣೆಗಳನ್ನು ನೋಡುತ್ತೇವೆ. ಕೇರಳದಲ್ಲಿ 'ಬ್ರದರನ್ ಚರ್ಚ್' ತಮಿಳುನಾಡಿನಲ್ಲಿ 'ಹಿಂದೂ ಚರ್ಚ್' ಈ ರೀತಿಯಾಗಿ ಪರ್ಯಾಯ ಚರ್ಚೆಗಳನ್ನು ಸ್ಥಾಪಿಸಿಕೊಂಡ ಪ್ರಕ್ರಿಯೆ ತುಂಬಾ ವಿಶಿಷ್ಟವಾದುದಾಗಿದೆ. ಯಾವ ಸಮಾನತೆಗೆ ಹಾತೊರೆದು 'ಹಿಂದೂ ಧರ್ಮವ' ನ್ನು ಬಿಟ್ಟು ಕ್ರೈಸ್ತ ಧರ್ಮಕ್ಕೆ ಮತಾಂತರವಾದರೋ ; ಅದೇ ಚರ್ಚ್‌ನ ಪುರೋಹಿತಶಾಹಿ ವ್ಯವಸ್ಥೆಗಳನ್ನು ತಿರಸ್ಕರಿಸುವ ಪ್ರಕ್ರಿಯೆಯ ಬೆನ್ನಲ್ಲೇ ದಲಿತರು ಮುಂದೆ, ತಮಗೆ ಅಗತ್ಯವಾದ ಧಾರ್ಮಿಕ, ಸಾಂಸ್ಕೃತಿಕ ಪರ್ಯಾಯಗಳನ್ನು ಹುಡುಕುವ ಪ್ರಯತ್ನದಲ್ಲಿದ್ದುದು ಕಂಡು ಬರುತ್ತದೆ.

ದಲಿತ ಚಿಂತಕರು, ಸಾಹಿತಿಗಳು ಆದ ಡಾ. ಅರವಿಂದ ಮಾಲಗತ್ತಿಯವರು ಸಾಹಿತ್ಯದ ನೆಲೆಯ ಅಧ್ಯಯನ ಮಾಡುವಾಗ ಇದೇ ಎಳೆಗಳನ್ನು ಶೋಧಿಸುತ್ತಾರೆ. 'ಮೇಲ್ಜಾತಿಯವರು ಮತಾಂತರ ಹೊಂದುವಾಗ, ತಮ್ಮ ಜಾತಿಯನ್ನು ಬೆನ್ನಿಗೆ ಕಟ್ಟಿಕೊಂಡು ಹೋಗಿದ್ದರ ಪರಿಣಾಮವಾಗಿ ಹೊಸ ಮತ ಧರ್ಮಗಳಲ್ಲಿಯೂ ಜಾತಿಗಳು ಕಾಣಿಸಿಕೊಂಡವು. ಆ ಮತ ಧರ್ಮಗಳ ಅಬ್ಬರ ಕಡಿಮೆಯಾದಾಗ ಅವು ಮಾತೃಧರ್ಮದ ಅಂಗಗಳಾದವು. ಮತಾಂತರ ಹೊಂದಿ ಹೋದ ಜನತೆಯ ಜಾತಿಗಳು ಆಯಾ ಜಾತಿಗಳ ಉಪಜಾತಿಗಳಾದವು''[13] ಅದೇ ವೇಳೆಗೆ ತಮ್ಮಲ್ಲೂ ಜಾತಿ ಆಧಾರಿತ ವ್ಯವಸ್ಥೆ ಇರುವುದರಿಂದ ಶೋಷಿತರಾಗಿರುವುದರಿಂದ ನಮಗೂ ಮೀಸಲಾತಿ ಬೇಕೆಂದು ಬೇಡಿಕೆ ಇಟ್ಟಿರುವುದನ್ನು ಕಾಣುತ್ತೇವೆ. ಹನ್ನೆರಡನೇ ಶತಮಾನದ ನಂತರ ವೀರಶೈವ ಧರ್ಮ ಕ್ರಮೇಣವಾಗಿ ರಂಗದಿಂದ ಹಿಂದೆ ಸರಿದಾಗ ಬಸವಣ್ಣನೊಂದಿಗೆ ಇದ್ದ ಎಲ್ಲಾ ಕುಲಕಸಬುಗಳ ಸಮುದಾಯಗಳು ಮತ್ತೆ 'ಜಾತಿ' ಗಳಾಗಿಯೇ ಮಾರ್ಪಟ್ಟಿರುವುದನ್ನು ನಾವು ಇಂದಿಗೂ ಕೂಡ ಗಮನಿಸಬಹುದಾಗಿದೆ.

ಅದನ್ನೇ ಡಾ. ಅರವಿಂದ ಮಾಲಗತ್ತಿಯವರು ಇಂದಿನ ದಲಿತ ಕ್ರೈಸ್ತರ ಮೀಸಲಾತಿ ಬೇಡಿಕೆ ಹಿನ್ನಲೆಯಲ್ಲಿಯೆ ವಿಶ್ಲೇಷಿಸುತ್ತಾ ಇವರನ್ನು ದಲಿತ ಕ್ರೈಸ್ತರೆಂದು ಮಾತ್ರ ಪ್ರತ್ಯೇಕವಾಗಿ ಏಕೆ ಗಮನಿಸುತ್ತಾರೆ ಎಂದು ಪ್ರಶ್ನಿಸುತ್ತಾರೆ. ದಲಿತ ಕ್ರೈಸ್ತರೆಂದ ಮೇಲೆ, ಕ್ರೈಸ್ತ ಬ್ರಾಹ್ಮಣರು ಕ್ರೈಸ್ತ ಕ್ಷತ್ರಿಯರು, ಕ್ರೈಸ್ತ ವೈಶ್ಯರೂ ಎಂದು ಇರಲೇಬೇಕಲ್ಲವೇ ಎಂದು ಪ್ರಶ್ನಿಸುತ್ತಾರೆ. ಆದರೆ, ದಲಿತರು ಬೌದ್ಧ ಧರ್ಮಕ್ಕೆ ಬರುವಲ್ಲಿ ಯಾವುದೇ ಕಾನೂನಿನ ತೊಡಕಿಲ್ಲ. ಯಾರೂ ಬೌದ್ಧ ಧರ್ಮಕ್ಕೆ ದೀಕ್ಷೆ ಪಡೆದುಕೊಳ್ಳುತ್ತಾರೋ ಅವರೆಲ್ಲ ಮೀಸಲಾತಿ ಸೌಲಭ್ಯ ಪಡೆಯಲು ಅರ್ಹರಾಗಿದ್ದಾರೆ. ಆದರೆ, ಈ ಕುರಿತು ಖಚಿತ ಮಾಹಿತ ಇಲ್ಲದ್ದರಿಂದ ಅವರು ಬೌದ್ಧ ಧಮ್ಮ ಸ್ವೀಕರಿಸದೇ ಇರುವ ಸಾಧ್ಯತೆ ಇಲ್ಲದಿಲ್ಲ. ಆದರೆ ಬೇರೆ ಧರ್ಮಗಳಿಗೆ ಹೋದಾಗ ನೀರಿಕ್ಷೆಗಳನ್ನು (ಆಮಿಷಗಳಿಂದ, ಪ್ರೇರಣೆಗಳಿಂದಲೂ) ಮುಟ್ಟಲಾರದೇ ಬ್ರಮನಿರಸನಗೊಂಡಂತೆ ಕಾಣುತ್ತಾರೆ.

ಇದೇ ಪರಿಸ್ಥಿತಿ ಮುಂದೆ ಅವರನ್ನು 'ಬೌದ್ಧ ಧರ್ಮದ' ಕಡೆಗೆ ಆಕರ್ಷಿತರತನ್ನಾಗಿ ಮಾಡಿರುವುದನ್ನು ಅಲ್ಲಗಳೆಯಲಾಗದು. ರಾಷ್ಟ್ರೀಯ ಆಂದೋಲನ ಅತ್ಯಂತ ಸ್ಪಷ್ಟ ರೂಪ ಪಡೆದ ಅಂದಿನ ದಿನಗಳಲ್ಲಿ ಇರುವ ವ್ಯವಸ್ಥೆಯನ್ನು ಆಕಳಿನಂತೆ ತಲೆಯಾಡಿಸಿ ಒಪ್ಪಿಕೊಳ್ಳುವ ಸ್ಥಿತಿಯಿಂದಲೂ ಶೋಷಿತ ವರ್ಗಗಳು ಹೊರಬಂದಿದ್ದವೆಂಬುದು ಎದ್ದು ಕಾಣುತ್ತದೆ. ಬೇರೆ ದೇಶದಿಂದ, ಪರಕೀಯ ಬ್ರಿಟಿಷ್ ಆಡಳಿತಾಧಿಪತಿಗಳಿಂದ ನಮ್ಮಲ್ಲಿಗೆ ಬಂದು ಕ್ರೈಸ್ತ ಧರ್ಮವನ್ನು ಪೂರ್ಣ ಮನಸ್ಸಿನಿಂದಲೂ ಸ್ವೀಕರಿಸಲಾಗದ, ತಮ್ಮ ಮಾತೃ ಭೂಮಿಯಲ್ಲೇ ಜನಿಸಿದ ತಮ್ಮ ಜನಾಂಗಿಕ ಚರಿತ್ರೆಗೆ ಸಾಕಷ್ಟು ತಳಹದಿ, ತಾದಾತ್ಮ್ಯ ಹೊಂದಿದ ಮೂಲನಿವಾಸಿ ಸ್ವರೂಪದ ಧರ್ಮ (Indigenious Peoples Religion) ದ ಬೌದ್ಧಧರ್ಮದ ಕಡೆಗೆ ಆಕರ್ಷಿತರಾಗುವ, ಆ ಸಾಂಸ್ಕೃತಿಕ ನೆಲೆಗಳಲ್ಲಿ ತಮ್ಮನ್ನು ಗುರುತಿಸಿಕೊಳ್ಳುವ ಪ್ರಕ್ರಿಯೆಯಗಳನ್ನು ಈ ಸಂದರ್ಭದಲ್ಲಿ ಗುರುತಿಸಹುದಾಗಿದೆ. ಉದಾ : ತಮಿಳುನಾಡಿಯಲ್ಲಿ ಮೊಟ್ಟ ಮೊದಲ ಬಾರಿಗೆ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ, ಬೌದ್ಧ ಮಿಷನರಿ ಪಂಡಿತ ಸಿ. ಅಯೋಥಿದಾಸ ಅವರು ಬುದ್ಧನ 'ಕುಲ' ದೊಂದಿಗೆ 'ಪರಿಯ' ಜನಾಂಗದ ಚರಿತ್ರೆಯ ನೆಲೆಗಳನ್ನು ಕಟ್ಟುತ್ತಾರೆ. ಸಾಕ್ಯ ಕುಲದ ಕೆಲವು ಜನರು ದಕ್ಷಿಣಕ್ಕೆ ಬಂದು, ಇಲ್ಲಿ ಶೋಷಿತರಾಗಿ 'ಪರಿಯ' ಜನಾಂಗವಾಗಿ ಮಾರ್ಪಟ್ಟಿದೆ. ಅಶೋಕನ ಕಾಲದಿಂದಲೂ ನಾವು ಬೌದ್ಧರಾಗಿದ್ದೇವೆ. ನಮ್ಮ

ಧರ್ಮವನ್ನು ನಾವು ಮರಳಿ ಪಡೆಯುವಲ್ಲಿ ನಮಗೆ ಸಹಕರಿಸಿ'[14] ಎಂದು ಅವರು ಶ್ರೀಲಂಕಾದ ಬೌದ್ಧ ವಿಹಾರಗಳಲ್ಲಿನ ಹಿರಿಯ ಬೌದ್ಧ ಬಿಕ್ಕುಗಳಿಗೆ ಮನವಿ ಮಾಡಿಕೊಳ್ಳುತ್ತಾರೆ. ಇನ್ನೂ ಎರಡನೆಯ ಪ್ರಮುಖ ಉದಾಹರಣೆಯೆಂದರೆ, ಡಾ. ಅಂಬೇಡ್ಕರ್‌ರವರದು. ಅವರು ಬೌದ್ಧ ಧರ್ಮಕ್ಕೆ ಮತಾಂತರವಾಗುವ ಹಿನ್ನಲೆಯನ್ನು, ಸಮರ್ಥನೆಯನ್ನು ಕೊಡುತ್ತಾ ದಲಿತರು ಪ್ರಾಚೀನ ಕಾಲದಲ್ಲಿ 'ನಾಗ' ಕುಲಕ್ಕೆ ಸೇರಿದವರೆಂಬ ಜನಾಂಗಿಕ ಮೂಲದ ಸಿದ್ಧಾಂತವನ್ನು ಮಂಡಿಸುತ್ತಾರೆ. ಮೊದಲಿನಿಂದಲೂ ಈ ದೇಶದ ಮೂಲ ನಿವಾಸಿಗಳಾದ ದಲಿತರು, ಬೌದ್ಧರೇ ಆಗಿದ್ದರೆಂಬ ಚಾರಿತ್ರಿಕ ಸಮರ್ಥನೆ ವಿವರಿಸುತ್ತಾರೆ. 'ನಾಗಪುರ' ದಲ್ಲಿಯೇ ಏಕೆ ಮತಾಂತರ ಆಂದೋಲನ ಹಮ್ಮಿಕೊಳ್ಳಲಾಗಿದೆ.? ಆರ್.ಎಸ್.ಎಸ್. ಕೇಂದ್ರ ಕಚೇರಿ ಇದ್ದುದರಿಂದ ಅಂದೇ ಹಮ್ಮಿಕೊಂಡಿದ್ದ ರ್‍ಯಾಲಿಗೆ ವಿರುದ್ಧವಾಗಿ ಇಂದಿನ 'ದೀಕ್ಷಾ' ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆಯೇ? ಎಂಬ ಪತ್ರಿಕೆಗಳ, ಅಥವಾ ಪ್ರಚಲಿತವಿದ್ದ ಪ್ರಶ್ನೆಗಳಿಗೆ ಉತ್ತರಿಸುತ್ತಾ, ಅವರು,

''ಈ ಚಾರಿತ್ರಿಕ ಸಮಾರಂಭವನ್ನು ನಡೆಸಲು ನಾನು ನಾಗಪುರವನ್ನು ಆರಿಸಿಕೊಂಡಾಗ, ಆರ್.ಎಸ್.ಎಸ್. ಬಗ್ಗೆ ಯೋಚಿಸಿಯೇ ಇರಲಿಲ್ಲ. ನಾವೇಕೆ ಕಾಲು ಕೆರೆದುಕೊಂಡು ಆರ್.ಎಸ್.ಎಸ್. ವಿರುದ್ಧ ಜಗಳಕ್ಕೆ ಹೋಗಬೇಕು? ಅದಕ್ಕೆ ನಮಗೆ ಸಮಯವೂ ಇಲ್ಲ ಮತ್ತು ಅದು ಯೋಗ್ಯವೂ ಅಲ್ಲ. ಈ ರೀತಿಯ ಸುದ್ದಿಗಳು ಶುದ್ಧ ಸುಳ್ಳು....... ನಾಗಪುರವನ್ನು ಆರಿಸಿಕೊಳ್ಳಲು ಬೇರೆಯದೇ ಆದ ಕಾರಣಗಳಿವೆ. ಆರಂಭ ಕಾಲದಲ್ಲಿ ಬೌದ್ಧ ಧಮ್ಮವನ್ನು ಪ್ರಚಾರ ಮಾಡುವ ಕೆಲಸವನ್ನು ಕೈಗೆತ್ತಿಕೊಂಡವರು ನಾಗರು ಎಂಬ ಸಂಗತಿಯು ಇಂಡಿಯಾ ದೇಶದ ಬೌದ್ಧ ಚರಿತ್ರೆಯನ್ನು ಓದಿದವರೆಲ್ಲರಿಗೂ ಗೊತ್ತಿದೆ. ನಾಗರು ಅನಾರ್ಯರಾಗಿದ್ದರು. ನಾಗ ಮತ್ತು ಆರ್ಯರ ನಡುವೆ ಬೀಕರ ವೈರತ್ವವಿತ್ತು. ನಾಗರಿಗೂ ಆರ್ಯರಿಗೂ ಅನೇಕ ಭೀಕರ ಕಾಳಗಗಳು ನಡೆದಿವೆ. ಆರ್ಯರು ನಾಗರನ್ನು ಸಂಪೂರ್ಣವಾಗಿ ನಿರ್ನಾಮ ಮಾಡಬೇಕೆಂದಿದ್ದರು. ಆರ್ಯರು ಬರೆದಿರುವ ಪುರಾಣಗಳಲ್ಲಿ ಇದಕ್ಕೆ ಸಂಬಂಧಿಸಿದಂತೆ ಅನೇಕ ದಾಖಲೆಗಳಿವೆ. ಒಮ್ಮೆ ಆರ್ಯರು ಎಲ್ಲಾ ನಾಗರಿಗೂ ಬೆಂಕಿ ಇಡುತ್ತಾರೆ. ಆಗ ಅಗಸ್ತ್ಯ ಮುನಿಯು ಈ ಬೆಂಕಿಯ ಜ್ವಾಲೆಯಿಂದ ತಪ್ಪಿಸಿಕೊಳ್ಳುವಂತೆ ಒಬ್ಬ ನಾಗನಿಗೆ ಸಹಾಯ ಮಾಡುತ್ತಾನೆ. ಆ 'ನಾಗನೇ' ನಮ್ಮ ಪೂರ್ವಜನು ಮತ್ತು ಅವನಿಂದಲೇ ನಾವೆಲ್ಲರೂ ಹುಟ್ಟಬಂದಿದ್ದೇವೆ. ನಾಗರು ಆರ್ಯರ ಭೀಕರ ದಬ್ಬಾಳಿಕೆಗೆ ಬಲಿಯಾಗಿ ಅತ್ಯಂತ ಹತಾಶ ಸ್ಥಿತಿಯಲ್ಲಿದ್ದರು. ಅಂತಹ ಹತಾಶ ಬದುಕಿನಿಂದ ಪಾರಾಗಲು ಅವರೆಲ್ಲರೂ ಒಬ್ಬ ಮಹಾನ್ ವ್ಯಕ್ತಿಗಾಗಿ ಕಾಯುತ್ತಿದ್ದರು. ಅಂತಹ ಮಹಾಪುರುಷನನ್ನು ಅವರು ಭಗವಾನ್ ಬುದ್ಧರಲ್ಲಿ ಕಂಡುಕೊಂಡರು. ಹದಗೆಟ್ಟು ಅಳಿದು ಹೋಗುತ್ತಿದ್ದ ನಾಗ ಜನಾಂಗವನ್ನು ಭಗವಾನ್ ಬುದ್ಧರು ಉಳಿಸಿದರು. ಭಗವಾನ್ ಬುದ್ಧರಿಂದ ವಿಮೋಚನೆ ಪಡೆದ ನಾಗರು ಬೌದ್ಧ ಧರ್ಮವನ್ನು ವಿಶ್ವದಾದ್ಯಂತ ಹರಡಿದರು. ಈ ನಾಗರ ಪೈಕಿ ಬಹುಪಾಲು ಮಂದಿ ನಾಗಪುರಕ್ಕೆ ಸೇರಿದವರಾಗಿದ್ದರು. ಆದ್ದರಿಂದಲೇ ಈ ನಗರವನ್ನು 'ನಾಗಪುರ' ಎಂದು ಕರೆಯಲಾಗಿದೆ. ಈ ನಾಗಪುರದಲ್ಲಿ ನಾಗ ನದಿ ಹರಿಯುತ್ತಿದೆ. ಈ ನದಿಯ ದಂಡೆಯಲ್ಲಿ ನಾಗರು ವಾಸಿಸುತ್ತಿದ್ದರು. ಇಲ್ಲಿಗೆ 27 ಕಿ.ಮೀ. ದೂರದಲ್ಲಿ ನಾಗ ನದಿಯು ಹರಿಯುತ್ತಿದೆ. ಈ ನಾಗರು ಇಲ್ಲಿ ವಾಸವಾಗಿದ್ದರಿಂದಲೇ ಈ ನದಿಗೆ 'ನಾಗನದಿ' ಎಂಬ ಹೆಸರು ಬಂದಿದೆ. ದೀಕ್ಷಾ ಸಮಾರಂಭಕ್ಕೆ ನಾಗಪುರಕ್ಕೆ ಆರಿಸಿಕೊಳ್ಳಲು ಇದುವೇ ಬಲು ಮುಖ್ಯ ಕಾರಣವಾಗಿದೆ. ಬೇರೆ ಯವುದೇ ಕಾರಣಗಳೂ ಇಲ್ಲ. ಇದರ ಬಗ್ಗೆ ಯಾವದೇ ಗೊಂದಲಗಳು ಬೇಡ, ನಾಗಪುರವನ್ನು ಆರಿಸಿಕೊಳ್ಳುವುದರ ಮೂಲಕ ಯಾರನ್ನು ಕೆರಳಿಸುವ ಉದ್ದೇಶವು ನನಗಿಲ್ಲ ಅಂತಹ ವಕ್ರ ಬುದ್ಧಿಯೂ

ನನಗಿಲ್ಲ'[15] ಎಂದು ಹೇಳುತ್ತಾರೆ. ಈ ಮಾತುಗಳಲ್ಲಿ ಏಕಕಾಲದಲ್ಲಿ ಅವರು 1) ದಲಿತರು ಮೂಲ ಬೌದ್ಧರಾದ ನಾಗಕುಲಕ್ಕೆ ಸೇರಿದವರು. 2) ಬೌದ್ಧ ಧರ್ಮ ನಮ್ಮದೇ ಧರ್ಮ 3) ಹೀಗೆ ಬೌದ್ಧರಾದ ದಲಿತರನ್ನು ಪ್ರಾಚೀನ ಕಾಲದಿಂದಲೂ ಕ್ರೂರವಾಗಿ ಹಿಂಸಿಸಲಾಗಿದೆ. 4) ಆರ್.ಎಸ್.ಎಸ್. ಕೆರಳಿಸುವುದು ನನ್ನ ಉದ್ದೇಶವಲ್ಲ, ದಲಿತ ವಿಮೋಚನೆ, ಎಂಬ ಮಹತ್ವದ ಸಂದೇಶಗಳನ್ನು ನೀಡಿದ್ದು ಸ್ಪಷ್ಟವಾಗಿದೆ. ಆದ್ದರಿಂದ ಅಂಬೇಡ್ಕರ್‌ರವರ ಪೂರ್ವದಲ್ಲಿನ ದಲಿತರಲ್ಲಿಯೂ ಕೂಡ ಬೌದ್ಧ ಧಮ್ಮ ಸ್ವೀಕಾರದ ಇಂತಹ ಚಾರಿತ್ರಿಕ ಸಮರ್ಥನೆ ಬಿತ್ತರಗೊಂಡಿರುವುದನ್ನು ಕಾಣುತ್ತೇವೆ. ಈ ರೀತಿಯ ಸಾಂಸ್ಕೃತಿಕ ವಿಮೋಚನೆಯ ಚಾರಿತ್ರಿಕ ದೃಷ್ಟಿಕೋನ (The Cultural Liberation Theory of Indian History) ವು ಕೂಡ ಅಂಬೇಡ್ಕರ್‌ರವರ ಚಾರಿತ್ರಿಕ ಅಧ್ಯಯನಗಳಲ್ಲಿ ಪ್ರಾರಂಭವಾಗಿರುವುದು ಅತ್ಯಂತ ಮಹತ್ವದ ವಿಷಯವಾಗಿದೆ. ಇದು ಕೆಳಗಿನಿಂದ ಇತಿಹಾಸವನ್ನು ನೋಡುವ, ಅರ್ಥೈಸುವ ಅತ್ಯಂತ ಪ್ರಬಲ ವೈಚಾರಿಕ ಕ್ರಮವಾಗಿದೆ.

ಇದಲ್ಲದೇ ವರ್ಣಾಶ್ರಮ ಧರ್ಮದಿಂದ ಉಂಟಾದ ಅನಾಹುತಗಳನ್ನು, ಅನಾಚಾರಗಳನ್ನು ಹೋಗಲಾಡಿಸಿ ಪ್ರಗತಿಪರ ಹಿಂದೂ ದೃಷ್ಟಿಕೋನ ಪ್ರತಿಪಾದಿಸುವ ಅಥವಾ ಬೇರೆಯದೇ ಆದ ಧಾರ್ಮಿಕ ಪಂಥವನ್ನು ಪ್ರತಿಪಾದಿಸುವ ಪ್ರಯತ್ನಗಳು ಕೂಡಾ ದೇಶದ ಅನೇಕ ಕಡೆ ನಡೆದೇ ಇದ್ದವು.

ಬಂಗಾಲದಲ್ಲಿ ಪ್ರಾರಂಭಿಸಿದ ಶ್ರೀ ರಾಮಕೃಷ್ಣ ಪರಮಹಂಸರ ಧಾರ್ಮಿಕ ಪಂಥ, ಸ್ವಾಮಿ ನಾರಾಯಣಗುರು ಅವರು ಪ್ರತಿಪಾದಿಸಿದ ಚಳುವಳಿ, ಮದ್ರಾಸ್ ಪ್ರಾಂತ್ಯದಲ್ಲಿ ಪ್ರಾರಂಭವಾದ ರಾಮಲಿಂಗ ಸ್ವಾಮಿಗಳ ಧರ್ಮ, ತ್ರಾವನಕೋರ್ ಪ್ರಾಂತ್ಯದಲ್ಲಿನ ಚತ್ತಾಂಬಿ ಸ್ವಾಮಿಗಳ ಪ್ರಯತ್ನ, ಇವೆಲ್ಲವುಗಳೂ 'ದೇವರ ಮುಂದೆ ಎಲ್ಲರೂ ಸಮಾನರು'. ಆದ್ದರಿಂದ ಜಾತಿ ಆಧಾರದ ಮೇಲೆ ಯಾವುದೇ ತಾರತಮ್ಯ ಎಸಗಕೂಡದೆಂದು ಪ್ರತಿಪಾದಿಸಿದವು.

ಅದಾಗಲೇ ಪೌರ್ವಾತ್ಯ ಮತ್ತು ಪಾಶ್ಚಿಮಾತ್ಯ ವಿಧ್ವಾಂಸದಲ್ಲಿ ಭಾರತದ ಚರಿತ್ರೆ, ಧರ್ಮ ಇನ್ನಿತರ ವಿಷಯಗಳ ಬಗ್ಗೆ ಸಂಶೋಧನ ಆಸಕ್ತಿ ಬೆಳೆದು ಬಂದವು. ಬ್ರಿಟಿಷ್ ಆಡಳಿತಗಾರರು, ಮಿಲಿಟರಿ ಅಧಿಕಾರಿಗಳು ಅವರ ಸಿಬ್ಬಂದಿ ಇಲ್ಲಿನ ಚಾರಿತ್ರಿಕ ನೆಲೆಗಳ ಶೋಧನ ಬಗ್ಗೆ ಆಸಕ್ತಿ ವಹಿಸಿದರು. ಸಂಸ್ಕೃತ, ಪಾಲಿ, ಕನ್ನಡ ಹಸ್ತ ಪ್ರತಿಗಳ ಶೋಧನೆ ನಡೆಸಿ, ಅಧ್ಯಯನ ಪ್ರಾರಂಭಿಸಿದರು. ಶ್ರೀಲಂಕಾ, ಬರ್ಮಾ ಮತ್ತು ಈಶಾನ್ಯ ಗುಡ್ಡಗಾಡು ಪ್ರದೇಶದಲ್ಲಿದ್ದ ಮೂಲ ಬೌದ್ಧರು, ಬೌದ್ಧ ಧರ್ಮದ ಪ್ರಸಾರದ ಬಲವಾದ ಇಚ್ಛೆ ಮತ್ತು ಬದ್ಧತೆಯೊಂದಿಗೆ ಹೊರಗಡೆ ಬಂದರು. ಈ ನಿಟ್ಟಿನಲ್ಲಿ ಎಡ್ವಿನ ಅರ್ನಾಲ್ಡ್ (1879) ಬರೆದ 'ಏಷ್ಯಾದ ಬೆಳಕು' (The Light of Asia) ಕಾವ್ಯ ಮತ್ತು 'ಬೋಧಗಯಾದ' ಬಗ್ಗೆ ಬರೆದ ಆತನ ಲೇಖನಗಳು'[16] ಬೌದ್ಧ ಧರ್ಮದ ಬಗ್ಗೆ ಜನರಲ್ಲಿ ಆಸಕ್ತಿ ಕೆರಳಿಸಿದವು ಮತ್ತು ಜನಪ್ರಿಯವಾದವು.

ಬೌದ್ಧ ಧರ್ಮ ಪುನಃ ವ್ಯಾಪಕವಾದ ಹರಿವಿನಲ್ಲಿ ಪುನರ್ ಜನ್ಮರೂಪ ತಾಳುವಲ್ಲಿ ಬ್ರಿಟಿಷ್ ಅಧಿ ಕಾರಿಗಳು, ಥಿಯೋಸೋಫಿಕಲ್ ಸೊಸೈಟಿಯ ಕಾರ್ಯಕರ್ತರು ಅದರಲ್ಲೂ ಪ್ರಮುಖವಾಗಿ ಥಿಯೋಸೋಪಿಸ್ಟ್ ಕರ್ನಲ್ ಆಲ್ಕಾಟ್‌ರವರು ಮಹತ್ವದ ಪಾತ್ರ ವಹಿಸಿದ ಬಗ್ಗೆ ಹಲವಾರು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.[17]

1891 ರಲ್ಲಿ ಶ್ರೀಲಂಕಾದ ತರುಣ ಬಿಕ್ಕು ಅನಗಾರಿಕ ಕಲ್ಕತ್ತದಲ್ಲಿ ಧರ್ಮಪಾಲ[18] ಅವರ ನೇತೃತ್ವದಲ್ಲಿ ಪ್ರಾರಂಭವಾದ 'ಮಹಾಬೋಧಿ ಸೊಸೈಟಿ' ಆಧುನಿಕ ಕಾಲದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನ ಇತಿಹಾಸದಲ್ಲಿ ಒಂದು ಮಹತ್ವದ ಮೇಲುಗಲ್ಲು. ಅವರು ಜಾಗತಿಕ ಮಟ್ಟದಲ್ಲಿ ಬೌದ್ಧ ಅನುಯಾಯಿಗಳನ್ನು ಈ ಸಂಸ್ಥೆಯ ಮೂಲಕ ಜೋಡಿಸಲು ಪ್ರಯತ್ನಿಸಿದರು. ಎಲ್ಲೆಲ್ಲಿ ಬೌದ್ಧ ಆಸಕ್ತರಿದ್ದಾರೋ ಅವರನ್ನು ಭೇಟಿ ಮಾಡಿ ಅವರೊಂದಿಗೆ ಕೆಲಸ ಮಾಡಿದರು.

1892 ರಲ್ಲಿ ಅವರು 'ದಿ ಮಹಾಬೋಧಿ' ಎಂಬ ಪತ್ರಿಕೆಯನ್ನು (ಜರ್ನಲ್) ಪ್ರಾರಂಭಿಸಿದರು.'[19] ಧರ್ಮ ಪ್ರಸಾರದ ಉದ್ದೇಶದಿಂದಲೇ ಈ ಎರಡು ಮಹತ್ವದ ಕಾರ್ಯಗಳನ್ನು ಅವರು ಮಾಡಿದರು. ತಮಿಳುನಾಡು ಪ್ರದೇಶದಲ್ಲಿ ಪಂಡಿತ ಅಯೋಥಿದಾಸ್ ಅವರೊಂದಿಗೆ ಕೆಲಸ ಮಾಡಿ ಅಲ್ಲಿಯೂ ಮಹಾಬೋಧಿ ಸೊಸೈಟಿಯ ಶಾಖೆಯನ್ನು ತೆರೆದು ಬೌದ್ಧ ಧರ್ಮ ಬೆಳೆಸಿದರು.

'ದಿ ಮಹಾಬೋಧಿ ಸೊಸೈಟಿ ಆಫ್ ಇಂಡಿಯಾ' ದ ಉದ್ದೇಶ ಅದು ಪ್ರಕಟಿಸುವ ಸಾಹಿತ್ಯದ ಉದ್ದೇಶ ಬುದ್ಧಗಯಾವನ್ನು ಹಿಂದೂ ಪುರೋಹಿತ ಷಾಹಿಗಳಿಂದ ವಿಮೋಚನೆಗೊಳಿಸುವುದಾಗಿತ್ತು. ಮುಂದೆ 40-50 ವರ್ಷಗಳವರೆಗೆ ಅನಗರಿಕ ಧರ್ಮ ಪಾಲರು ಭಾರತದಲ್ಲಿ ಮತ್ತು ಬೇರೆ ದೇಶಗಳಲ್ಲಿ ಬೌದ್ಧಧರ್ಮ ಪ್ರಸಾರ ಮಾಡುತ್ತಾ ಬುದ್ಧನ ತತ್ವಗಳನ್ನು ಜನ ಸಮುದಾಯಗಳಲ್ಲಿ ನೆಲೆಯೂರಿಸಲು ಪ್ರಯತ್ನಿಸಿದರು. ಮುಂದೆ ಮಹಾಬೋಧಿ ಸೊಸೈಟಿಯ ಬಿಕ್ಕುಗಳ ಸಂಪರ್ಕದಲ್ಲಿದ್ದ ಅಂಬೇಡ್ಕರವರು ಅಕ್ಟೋಬರ್ 14, 1956 ರಂದು ನಾಗಪೂರದಲ್ಲಿ ತಮ್ಮ 5 ಲಕ್ಷ ಅನುಯಾಯಿಗಳೊಂದಿಗೆ ಬೌದ್ಧಧರ್ಮಕ್ಕೂ ಮತಾಂತರ ಹೊಂದಿದರು. ಅಂದು ನಾಗಪೂರದಲ್ಲಿ ಕಲ್ಕತ್ತಾದ ಮಹಾಬೋಧಿ ಸೊಸೈಟಿಯ ಹಿರಿಯ ಬಿಕ್ಕು ಯು ಚಂದ್ರಮಣಿಯವರೇ'[20] ಅಂಬೇಡ್ಕರ್ ದಂಪತಿಗಳಿಗೆ ಬೌದ್ಧ ಧಮ್ಮ ದೀಕ್ಷೆ ನೆರವೇರಿಸಿದರು.

## 4.1. ಅಂಬೇಡ್ಕರ್‌ರವರ ಮತಾಂತರ ಚಳವಳಿ ಮತ್ತು ಕರ್ನಾಟಕದ ದಲಿತರು :

ಬಾಬಾಸಾಹೇಬ ಡಾ. ಬಿ.ಆರ್. ಅಂಬೇಡ್ಕರ್‌ರವರು, ಐದು ಲಕ್ಷ ದಲಿತರೊಂದಿಗೆ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ್ದು, ಆಧುನಿಕ ಜಗತ್ತಿನ ಸಮಾಜೋ-ಧಾರ್ಮಿಕ ಚಳುವಳಿಗಳಲ್ಲಿ ತುಂಬ ಮಹತ್ವದ ಘಟನೆಯಾಗಿದೆ. ಇದು 20 ನೇ ಶತಮಾನದ ಅತ್ಯಂತ ಮಹತ್ವದ ಮತ್ತು 'ಬೃಹತ್ ಮತಾಂತರ' ಆಂದೋಲನವಾಗಿದೆ.

ಇಂದಿನ ಮಹಾರಾಷ್ಟ್ರದ ನಾಗಪೂರದಲ್ಲಿ (ಮೊದಲು ಇಂದಿನ ಮಧ್ಯಪ್ರದೇಶ ರಾಜ್ಯದಲ್ಲಿತ್ತು) 14 ಅಕ್ಟೋಬರ್ 1956 ರವಿವಾರ ಮುಂಜಾನೆ 9 ಗಂಟೆಯಿಂದ 11 ಗಂಟೆಯವರೆಗೆ ನಡೆದ ಈ ಬೃಹತ್ ಮತಾಂತರ ಘಟನೆ ಹಲವಾರು ವಿಧ್ವಾಂಸರು ಅಭಿಪ್ರಾಯ ಪಡುವಂತೆ 'ಭಾರತದಲ್ಲಿ ಬೌದ್ಧ ಧರ್ಮದ ಪುರುಜ್ಜೀವನ ಆರಂಭದ ಗಳಿಗೆ' ಎಂತಲೂ ಪರಿಗಣಿತವಾಗಿದೆ. 'ಬುದ್ಧನನ್ನು ಮರಳಿ ಮನೆಗೆ ಕರೆತಂದ ದಿನವಾಗಿ' ಪರಿಗಣಿತವಾಯಿತು. ಪ್ರಖ್ಯಾತ ಬೌದ್ಧ ಪಂಡಿತ ಡಾ. ಡಿ.ಸಿ. ಅಹಿರ್ ಅಭಿಪ್ರಾಯ ಪಡುವಂತೆ,

''ಭಾರತದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನ' ಮತ್ತೊಂದು ಯುಗಕ್ಕೆ ಕಾಲಿಟ್ಟಿತು. ಅದಕ್ಕೆ ಆಳವಾದ ಕ್ರಿಯಾತ್ಮಕ ಆಯಾಮ ದೊರೆಯಿತು. ಈ ಯುಗವನ್ನು ಭಾರತದ ಬೌದ್ಧ ಧರ್ಮದ ಚರಿತ್ರೆಯಲ್ಲಿ ''ಅಂಬೇಡ್ಕರ್ ಯುಗ''[21] ವೆಂದು ಖಂಡಿತವಾಗಿ ಕರೆಯಬಹುದು ಎಂದು ದಾಖಲಿಸಿದ್ದಾರೆ. ಅವರ ಮಾತುಗಳಲ್ಲೇ ಇದನ್ನು ದಾಖಲಿಸಿದರೆ ಉತ್ತಮವೆಂದು ತೋರುತ್ತದೆ.

"The mass conversion ceremony at Nagapur on 14 October 1956 was by all means miracle. In fact, it was a great miracle. Never before in the history of any religion in the world have so many people, at one time and at the instance of one man, changed their religion. It was an epoch making event, that changed the course of the history of Buddhism in India. On that day, the Buddhist Revival movement in India entered into an era of intense activity which can be rightly called the **'Ambedkar Era of Indian Buddhism'.**

"...... along with his half a million followers, on October 14, 1956. Thus Dr. Ambedkar made the 'home-coming of Buddha' a reality by showing the way to the suffering humanity who were in search of a Democratic and just religion like Buddhism"[22].

ಈ ''ಮಹಾ ಮತಾಂತರ'' ಚಳುವಳಿಯ ಪ್ರಭಾವದಿಂದ 1951 ರಲ್ಲಿ 1 ಲಕ್ಷ 80 ಸಾವಿರದ 823 ನೂರು ಇದ್ದ ಬೌದ್ಧರ ಜನ ಸಂಖ್ಯೆ 1961 ರಲ್ಲಿ 32 ಲಕ್ಷ 50 ಸಾವಿರ 227 ನೂರಕ್ಕೆ ಏರಿತು. ಮಹಾರಾಷ್ಟ್ರ ಒಂದೇ ರಾಜ್ಯದಲ್ಲಿ 1951 ರಲ್ಲಿ ಕೇವಲ 2 ಸಾವಿರದ 487 ಇದ್ದ ಬೌದ್ಧರ ಸಂಖ್ಯೆ 1961 ರಲ್ಲಿ 27 ಲಕ್ಷ 89 ಸಾವಿರ 501 ಕ್ಕೆ ಏರಿತು. 2001 ರಲ್ಲಿ ನಡೆದ ಜನಗಣತಿಯಂತೆ ಇಂದು ಭಾರತದಾದ್ಯಂತ 80 ಲಕ್ಷಕ್ಕಿಂತ ಹೆಚ್ಚು ಬೌದ್ಧರಿದ್ದಾರೆ. ಈ ಅಂಕಿ ಸಂಖ್ಯೆಗಳೇ ಡಾ. ಅಂಬೇಡ್ಕರ್‌ರವರ ಮತಾಂತರ ಚಳುವಳಿಯು ದೇಶದ ಇತರೇ ಪ್ರದೇಶಗಳ ಮೇಲೂ ಆದ ಸ್ಪಷ್ಟ ಪುರಾವೆಗಳನ್ನು ಒದಗಿಸುತ್ತವೆ.

ಅಂಬೇಡ್ಕರ್‌ರವರು ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ ನಂತರ ದೇಶದ ಬೇರೆ ಬೇರೆ ಭಾಗಗಳಲ್ಲಿ ಮತಾಂತರಗಳ ನಡೆದವು. ಆದರೆ ಕೆಲವೇ ಅವಧಿಯಲ್ಲಿ ಕೇಂದ್ರ ಸರ್ಕಾರ ಯಾರದೋ ಕುಟೀಲ ನೀತಿಯಿಂದ ಮತಾಂತರಗೊಂಡವರಿಗೆ ಸರ್ಕಾರದ ಸವಲತ್ತುಗಳನ್ನು ಪಡೆಯಲು ನಿರ್ಬಂಧ ವಿಧಿಸಿತು. ದೇಶಕ್ಕೆ ಸ್ವಾತಂತ್ರ್ಯ ಬಂದು ಅದೇ ತಾನೇ ಹೊಸ ಉಸಿರು ಪಡೆದುಕೊಂಡಿದ್ದ ನಿಮ್ನ ವರ್ಗಗಳು ಸರ್ಕಾರದ ಇಂತಹ ಆದೇಶದಿಂದ ದುಗುಡಕ್ಕೆ ಒಳಗಾದರು. ಅಂಬೇಡ್ಕರವರೇ ಮತಾಂತರ ಹೊಂದಿದ ದಿನ ಇಂತಹ ಪರಿಣಾಮಗಳನ್ನು ಊಹಿಸಿದರು. ಹಾಗೇನಾದರೂ ಆದರೆ ಈ ಬಗ್ಗೆ ನ್ಯಾಯಾಲಯಕ್ಕೆ ಮೊರೆ ಹೋಗಿ ದಲಿತ ವರ್ಗಗಳಿಗೆ ಮೀಸಲಾತಿ ಹಾಗೂ ಇತರ ಸಂವಿಧಾನದ ಸವಲತ್ತುಗಳನ್ನು ಉಳಿಸಿಕೊಡುವುದಾಗಿ ಘೋಷಿಸಿದ್ದರು. ಅಂದು ನಾಗಪೂರದಲ್ಲಿ ಬೌದ್ಧ ಧರ್ಮ ದೀಕ್ಷೆ ಪಡೆದ ನಂತರ, ಅಲ್ಲಿ ತಮ್ಮೊಂದಿಗೆ ಧಮ್ಮದೀಕ್ಷೆ ಪಡೆದವರನ್ನುದ್ದೇಶಿಸಿ ಮಾತನಾಡುತ್ತಾ ಅಂಬೇಡ್ಕರ್‌ರವರು 'ನಾವು ಬೌದ್ಧ ಧಮ್ಮವನ್ನು ಸ್ವೀಕರಿಸಿದ ಮೇಲೆ

ಅನೇಕ ತ್ಯಾಗಗಳನ್ನು ಮಾಡಬೇಕಾಗುತ್ತದೆ. ಸಧ್ಯಕ್ಕೆ ನಮಗೆ ದೊರಕಿರುವ ರಿಯಾಯ್ತಿ ಮೀಸಲಾತಿ ಮುಂತಾದವುಗಳಿಗೆ ಸಂಬಂಧಪಟ್ಟಂತೆ ಹೇಳುವುದಾದರೆ, ನಾನು ನಿಮಗೆ ಭರವಸೆ ನೀಡುತ್ತೇನೆ. ಅದಾವುದೂ ನಮ್ಮಿಂದ ಕಳೆದುಹೋಗುವುದಿಲ್ಲ. ಈ ದೀಕ್ಷಾ ಸಮಾರಂಭದ ನಂತರ, ನಾನು ಕೈಗೆತ್ತಿಕೊಳ್ಳಲಿರುವ ಮೊದಲ ಸಮಸ್ಯೆಯೇ ಈ ರಿಯಾಯಿತಿ ಮತ್ತು ಮೀಸಲಾತಿ ವಿಷಯವಾಗಿರುತ್ತದೆ. ನಮಗಿರುವ ಸವಲತ್ತುಗಳನ್ನು ಮುಂದೆಯೂ ಪಡೆಯಬೇಕಾದರೆ, ನಾವು ಕೋರ್ಟಿಗೆ ಮೊರೆ ಹೋಗುವುದರ ಜೊತೆಗೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಾಗುತ್ತದೆ. ಈ ಹಂತದಲ್ಲಿ ನಾನು ಯಾವ ಕ್ರಮ ಅನುಸರಿಸುತ್ತೇನೆ ಎಂದು ಹೇಳುವ ಅಗತ್ಯವಿಲ್ಲ. ಆದರೆ ಯಾವುದೇ ಕಠಿಣ ಸನ್ನಿವೇಶವನ್ನು ಎದುರಿಸಲು ನಾನು ಸಿದ್ಧನಾಗಿದ್ದೇನೆ.[23] ಎಂದು ಯಜಮಾನೀ ಸಾಂಸ್ಕೃತಿಕ ಪಟ್ಟುಗಳನ್ನು ಮೊದಲೇ ಊಹಿಸಿರುತ್ತಾರೆ. ವಿಚಿತ್ರವೆಂಬಂತೆ ಮತಾಂತರದ ನಂತರ ಕೇವಲ ಎರಡು ತಿಂಗಳಲ್ಲೇ ಅಂಬೇಡ್ಕರವರು ನಿಧನ ಹೊಂದಿದರು. ಹೀಗಾಗಿ ಒಂದು ಮಹತ್ವದ ನಿರ್ಣಾಯಕ ಘಟ್ಟ ತಲುಪಿದ್ದ ಅಂಬೇಡ್ಕರವರ ದಲಿತ ವಿಮೋಚನಾ ಚಳುವಳಿಗೆ, ಮತಾಂತರಗೊಂಡ ದಲಿತರಿಗೆ ಸವಲತ್ತುಗಳು ಇಲ್ಲವೆಂಬ ಸರ್ಕಾರಿ ಆದೇಶದಿಂದ[24] ತಾತ್ಕಾಲಿಕ ಹಿನ್ನೆಡೆಯಾಯಿತು. ಆದಾಗ್ಯೂ ದೇಶ ವಿದೇಶಗಳ ಇತರೇ ಭಾಗಗಳಲ್ಲಿ ಡಾ. ಅಂಬೇಡ್ಕರ್‌ರವರ ಪ್ರಭಾವ ದಿನೇ ದಿನೇ ಹೆಚ್ಚುತ್ತಾ ಹೋಯಿತು. ಆ ಕುರಿತು ರಾಷ್ಟ್ರೀಯ, ಅಂತರ್‌ರಾಷ್ಟ್ರೀಯ ಸ್ತರದಲ್ಲಿ ಅಧ್ಯಯನಗಳು ನಡೆದವು. ದೇಶ ವಿದೇಶಗಳ ಸಮಾಜ ವಿಜ್ಞಾನಿಗಳು ಇಂತಹ ಮಹಾನ್ ಘಟನೆಯ ಪರಿಣಾಮಗಳ ಬಗ್ಗೆ ಸಂಶೋಧನೆ ಪ್ರಾರಂಭಿಸಿದರು. ಹಲವಾರು ಬೌದ್ಧ ಸಂಘ ಸಂಸ್ಥೆಗಳು ಪ್ರಾರಂಭವಾದವು. ಇಂದು ಅಮೇರಿಕಾ ದೇಶವೊಂದರಲ್ಲೇ ಎರಡು ಸಾವಿರಕ್ಕಿಂತ ಹೆಚ್ಚು ಬೌದ್ಧ ಸಂಘ ಸಂಸ್ಥೆಗಳಿರುವುದನ್ನು ನಾವು ನೋಡಬಹುದಾಗಿದೆ. ಮಹಾಬೋಧಿ ಸೊಸೈಟಿ ತನ್ನ ಕಾರ್ಯ ಚಟುವಟಿಕೆಗಳನ್ನು ಇಮ್ಮಡಿಗೊಳಿಸಿತು. ಮತಾಂತರಗೊಂಡ ಬಾಬಾಸಾಹೇಬ ಅಂಬೇಡ್ಕರ್‌ರವರಿಗೆ ದೇಶ ವಿದೇಶಗಳಿಂದ ಅಭಿನಂದನಾ ಪತ್ರಗಳು ಬಂದವು. ಬರ್ಮಾ ದೇಶದ ಸುಪ್ರಿಂ ಕೋರ್ಟ್ ನ್ಯಾಯಾಧೀಶರಾದ ಚಾನ್ ಹ್ಟೂನ್ ರವರು ಡಾ. ಅಂಬೇಡ್ಕರ್‌ರವರಿಗೆ ಪತ್ರ ಬರೆದು,

''ತಮ್ಮ ಮಹಾನ್ ಉದಾಹರಣೆಯಿಂದ ಪ್ರೇರಿತರಾಗಿ, ಅದರ ಅನುಸರಣೆ ಎಂಬಂತೆ ಸುಮಾರು ಐದು ಸಾವಿರ ತಮಿಳರು ಸುಂದರ ಸಮಾರಂಭವೊಂದರಲ್ಲಿ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದರು''[25] ಎಂದು ಅಂಬೇಡ್ಕರ್‌ರವರು ಬೌದ್ಧ ಧರ್ಮಕ್ಕೆ ಮತಾಂತರಗೊಂಡ ಪ್ರಭಾವದ ಬಗ್ಗೆ ಹರ್ಷ ಪಡುತ್ತಾರೆ.

ಅಂಬೇಡ್ಕರ್‌ರವರು ಬೌದ್ಧ ಧರ್ಮಕ್ಕೆ ಮತಾಂತರಗೊಂಡು ಈ ಹೊತ್ತಿಗೆ 50 ವರ್ಷಗಳು, ಗತಿಸಿದರೂ, ಅವರ ಮತಾಂತರದ ಪ್ರಭಾವದ ಪ್ರಖರತೆ ಕಡಿಮೆಯಾಗಿಲ್ಲ. ಬದಲಾಗಿ ಅದು ಹೆಚ್ಚಾಗುತ್ತ ಸಾಗಿದೆ. ಇಂದು ಮಹಾರಾಷ್ಟ್ರದ ನಾಗಪೂರದಲ್ಲಿ 'ದೀಕ್ಷಾ ಭೂಮಿ' ಯಲ್ಲಿ ಪ್ರತಿವರ್ಷ ಲಕ್ಷಾಂತರ ಅನುಯಾಯಿಗಳು ಅಂಬೇಡ್ಕರ್‌ರವರ ಅನುಯಾಯಿಗಳು, ಬೌದ್ಧ ಮತ ಅನುಸರಿಸುತ್ತಿರುವ ಉಪಾಸಕರು, ಅಸಂಖ್ಯಾತ ಬಿಕ್ಕುಗಳು, ಸಮಾಜ ವಿಜ್ಞಾನಿಗಳು, ನೇತಾರರು ನೆರೆಯುತ್ತಾರೆ. ಪ್ರತಿ ವರ್ಷ ಅಕ್ಟೋಬರ್ 14 ರಂದು ತಲುಪುವಂತೆ ದೇಶದ ಎಲ್ಲಾ ಕಡೆಯ ರಸ್ತೆಗಳು ನಾಗಪೂರಕ್ಕೆ ಸೇರುತ್ತವೆ. ಒಂದು ವಾರ ಕಾಲ ನಡೆಯುವ ಈ ಕಾರ್ಯಕ್ರಮದಲ್ಲಿ 5 ರಿಂದ 10 ಲಕ್ಷ ಜನ 'ದೀಕ್ಷಾ ಭೂಮಿಗೆ' ಭೇಟಿ ನೀಡುತ್ತಾರೆ.

ಅಂಬೇಡ್ಕರ್ ಅನುಯಾಯಿಗಳು ಪ್ರತಿವರ್ಷ ಸಾವಿರ ಸಾವಿರ ಸಂಖ್ಯೆಯಲ್ಲಿ ಗುಂಪಾಗಿ ಬಂದು ಬೌದ್ಧ ಧರ್ಮ ದೀಕ್ಷೆ ಪಡೆಯುತ್ತಾರೆ. ಅಂಬೇಡ್ಕರ್‌ರವರು ಹಾಕಿಕೊಟ್ಟ ಧಮ್ಮ ಮಾರ್ಗದಲ್ಲಿ ನಡೆಯುವ ಸಂಕಲ್ಪ ಮಾಡುತ್ತಾರೆ.

ಕರ್ನಾಟಕದ ದಲಿತರೂ ಈ ನಿಟ್ಟಿನಲ್ಲಿ ಹಿಂದೆ ಬಿದ್ದಿಲ್ಲ. ಅಂದು ಅಂಬೇಡ್ಕರ್‌ರವರು ಮತಾಂತರ ಕಾರ್ಯಕ್ರಮದಲ್ಲಿ ಭಾಗವಹಿಸಲು ದೇಶಾದ್ಯಂತ ಎಲ್ಲರಿಗೂ ಮುಕ್ತ ಆಮಂತ್ರಣ ನೀಡಿದ್ದರು. ಆ ಐತಿಹಾಸಿಕ ಸಮಾರಂಭದಲ್ಲಿ ಕರ್ನಾಟಕದ ದಲಿತರೂ ಭಾವಹಿಸಿ ದೀಕ್ಷೆ ಪಡೆದುಕೊಂಡದ್ದನ್ನು ನೋಡುತ್ತೇವೆ.

2001 ರ ಜನಗಣತಿಯ ಅಂಕಿ ಸಂಖ್ಯೆಗಳನ್ನು ಗಮನಿಸಿದಾಗ ಕರ್ನಾಟಕದಲ್ಲಿನ ಬೌದ್ಧರ ಸಂಖ್ಯೆ ಹೆಚ್ಚಿಗೆಯಾಗಿರುವುದನ್ನು ನೋಡುತ್ತೇವೆ. (ಅನುಬಂಧ - viii (ಬ) ಗಮನಿಸಿ) 1991 ರ ಜನಗಣತಿಯಲ್ಲಿ ಕೇವಲ 73 ಸಾವಿರ 12 ಇದ್ದ ಬೌದ್ಧ ಸಂಖ್ಯೆ 2001 ರ ಜನಗಣತಿಯ ನಂತರ 4 ಲಕ್ಷ ಸಮೀಪಿಸಿರುವುದು. ಮತಾಂತರ ಚಳುವಳಿಯು ಜೀವಂತವಾಗಿರುವುದರ ಸಂಕೇತವಾಗಿದೆ. ಈ ರೀತಿಯ ಜನಸಂಖ್ಯೆಯ ಹೆಚ್ಚಳದ ಬಗ್ಗೆ ಮತ್ತು ಅಂಬೇಡ್ಕರ್‌ರವರ ಮತಾಂತರ ಚಳುವಳಿ ಪ್ರಭಾವದ ಪ್ರತ್ಯೇಕವಾಗಿ ಚರ್ಚಿಸಲಾಗಿದೆ. ಆದರೆ, ಜನಗಣತಿಯು ಯಾವ ರೀತಿ ನಡೆಯುತ್ತದೆ ಎಂಬ ಬಗ್ಗೆ ನಮಗೆ ಜನಗಣತಿ ಮಾನದಂಡಗಳನ್ನು ಸಮಾಜೋ ಆರ್ಥಿಕ ವಿಶ್ಲೇಷಣೆಗೆ ಬೇರೆ ಅಂಕಿ ಸಂಖ್ಯೆಗಳು ಇಲ್ಲದೇ ಇರುವುದು ಕೂಡಾ ಇಂತಹ ವಿಶ್ಲೇಷಣೆಗೆ ಮಿತಿ ಉಂಟಾಗುತ್ತದೆಯಾದರೂ, ಒಂದು ಸಾಮಾಜಿಕ ಪ್ರಕ್ರಿಯೆ ಪ್ರವಾಹ ಯಾವ ದಿಕ್ಕಿನಲ್ಲಿ ಮುನ್ನಡೆದಿದೆ ಎಂಬ ಸ್ಥಿತಿ (Trends) ಗೋಚರಿಸಿಸುತ್ತದೆ. ಆದರೆ ಬಹಳ ಮುಖ್ಯವಾಗಿ ಈ ವಿಶ್ಲೇಷಣೆಯು ಈ ಅಧ್ಯಾಯದ ಈ ಮೊದಲಿಗೆ ಹೇಳಿದಂತೆ ಈ ಎಲ್ಲಾ ಬೆಳವಣಿಗೆ, ಬೌದ್ಧರ ಜನಸಂಖ್ಯೆ ಹೆಚ್ಚಳ, ಬೇರೆ ಧರ್ಮಗಳ ಜನಸಂಖ್ಯಾ ಹೆಚ್ಚಳದಂತೆ ಕೇವಲ ಭೌತಿಕವಾದುದಲ್ಲ. ಬದಲಾಗಿ, ಗುಣಾತ್ಮಕವೂ, ಅಂಬೇಡ್ಕರ್‌ರವರ ಆಶಯದಂತೆ ದಲಿತರು, ನಡೆದುಕೊಳ್ಳುತ್ತಿರುವುದರ ಸಂಕೇತವಾಗಿದೆಂಬುದನ್ನು ಪ್ರಸ್ತುತ ಅಧ್ಯಯನ ಮನಗೆಂಡಿದೆ.

ಮತಾಂತರ ವಸಾಹತುಷಾಹಿ ಭಾರತದಲ್ಲಿ ಅಥವಾ ಸ್ವಾತಂತ್ರೋತ್ತರ ಭಾರತೀಯ ಸಂದರ್ಭದಲ್ಲಿ ಕೇವಲ ಚರ್ಚೆಯ ಅಥವಾ ಶುಷ್ಕ ಪಾಂಡಿತ್ಯದ ವಿಶ್ಲೇಷಣೆಯ ವಿಷಯವೇ ಅಲ್ಲ, ಅದು ಹೀಗೆ ಆಗಬಾರದಿತ್ತು ಅಂಬೇಡ್ಕರ್‌ರವರು ತಮ್ಮ ಜೀವಿತದ ಕೊನೆಯಲ್ಲಿ ವಿಭಿನ್ನ ಹೆಜ್ಜೆ ಇಟ್ಟರೂ, ಅದು ಹಾಗೆ ಆಗಬಾರದಿತ್ತು ಎಂಬ ವಿಶ್ಲೇಷಣೆಯ ಚರ್ಚೆಯ ವಸ್ತುವಾಗಬಾರದು. ದಲಿತರು, ಒಟ್ಟಾರೆ ಒಂದು ಧಾರ್ಮಿಕ, ಸಾಮಾಜಿಕ ವ್ಯವಸ್ಥೆಯ ಕ್ರೂರತೆಗಳನ್ನು ಧಿಕ್ಕರಿಸಿ ಮತ್ತೊಂದು ಸಾಂಸ್ಕೃತಿಕ ಆಯಾಮದಲ್ಲಿ ತಮ್ಮ ಬದುಕನ್ನು ರೂಪಿಸಿಕೊಳ್ಳುವ ಹಿನ್ನೆಲೆಯಲ್ಲಿ ಈ ಒಟ್ಟು ಪ್ರಕ್ರಿಯೆಯನ್ನು ಗ್ರಹಿಸಬೇಕಾಗುತ್ತದೆ. ಈ ಅವಕಾಶಗಳನ್ನು ಸಂವಿಧಾನದಲ್ಲಿಯೇ ಕಲ್ಪಿಸಲಾಗಿದೆ. ಪ್ರತಿಯೊಬ್ಬರಿಗೂ ತಮ್ಮ ಪ್ರಜ್ಞೆಗೆ ಸರಿ ಹೊಂದುವ ಧರ್ಮವನ್ನು ಅನುಸರಿಸುವ ಹಕ್ಕುಗಳನ್ನು, ನಂಬಿಕೆಯ ಹಕ್ಕನ್ನು (Right to Conscience) ತಮಿಳುನಾಡಿನ ರಾಜ್ಯ ಸರ್ಕಾರ ಮತಾಂತರ ನಿಷೇದ ಕಾಯ್ದೆ ಜಾರಿ ಮಾಡಿದಾಗ ಆ ಬಗ್ಗೆ ಪ್ರತಿಕ್ರಿಯಿಸುತ್ತ ಹಿಂದಿನ ಪ್ರಧಾನಿಗಳಿಗಿದ್ದ ಅಟಲ್ ಬಿಹಾರಿ ವಾಜಪೇಯಿ ಅವರು ಮತಾಂತರ ಕುರಿತು ರಾಷ್ಟ್ರೀಯ ಚರ್ಚೆಯ ಅಗತ್ಯವಿದೆ ಎಂಬ ಹೇಳಿಕೆ ನೀಡಿದಾಗ, ಇದೇ ಮಾತನ್ನು ಪ್ರೊ. ಚಂದ್ರಶೇಖರ ಪಾಟೀಲರವರು ,

''ನಮ್ಮ ಸಂವಿಧಾನದ 25 ನೇ ಕಲಮಿನ ಪ್ರಕಾರ ಇಂಡಿಯಾ ದೇಶದ ನಾಗರಿಕರು ತಮ್ಮ ಆಯ್ಕೆಯ ಧಾರ್ಮಿಕ ನಂಬಿಕೆಯನ್ನು ಸ್ವೀಕರಿಸಲು, ಆಚರಿಸಲು ಮತ್ತು ಪ್ರಚಾರ ಮಾಡಲು ಮೂಲಭೂತ ಹಕ್ಕನ್ನು ಪಡೆದಿರುವಾಗ, ನಂಬಿಕೆಯನ್ನು ಬದಲಿಸುವ, ಮತಾಂತರದ ಸ್ವಾತಂತ್ರ್ಯವನ್ನು ಹೊಂದಿರುವಾಗ, ಅದರ ಬಗ್ಗೆ ಚರ್ಚಿಸುವುದೇನಿದೆ ? ಇಂಥ ಚರ್ಚೆ, ವಿಚಾರ, ಸಂಕಿರಣಗಳು ಅನಗತ್ಯ ಮತ್ತು ಅಪ್ರಸ್ತುತ - ಆದರೂ ಇಂಥ ವಾತಾವರಣ ನಿರ್ಮಿಸಿದವರು ಇಂಡಿಯಾ ದೇಶದ ಪ್ರಧಾನಮಂತ್ರಿ ಅಟಲ್ ಬಿಹಾರಿ ವಾಜಪೇಯಿ ಅವರು. ಸಂಘ ಪರಿವಾರದವರು ದೇಶದ ಎಲ್ಲೆಡೆ ಕ್ರೈಸ್ತ ಸಮುದಾಯದ ಮೇಲೆ ದಾಳಿ ಪ್ರಾರಂಭಿಸಿ, ಒರಿಸ್ಸಾದಲ್ಲಿ ಕ್ರೈಸ್ತ ಪಾದ್ರಿಯೊಬ್ಬರನ್ನು ಅವರ ಎಳೆ ಮಕ್ಕಳ ಸಮೇತ ಸುಟ್ಟು ಬೂದಿ ಮಾಡಿದರು. ಗುಜರಾತಿನಲ್ಲಿ ಕ್ರೈಸ್ತ ಸನ್ಯಾಸಿಯರ ಮೇಲೆ ಅತ್ಯಾಚಾರ ಸಂಭವಿಸಿತು. ಆದರೆ ಸಂವಿಧಾನ ರಕ್ಷಕ ಪ್ರಧಾನಿ ಮಾತ್ರ ''ಮತಾಂತರ''ದ ಬಗ್ಗೆ ರಾಷ್ಟ್ರೀಯ ಚರ್ಚೆ ಆಗಬೇಕೆಂದು ಅಪ್ಪಣೆ ಕೊಡಿಸಿದರು''[26] ಎಂದು ಚರ್ಚೆಯಲ್ಲಿ ಭಾಗವಹಿಸಿದ ಪ್ರೊ. ಎಸ್.ಎ.ಬ್ಯಾರಿಯವರ ಹೇಳಿಕೆಗಳನ್ನು ಉಲ್ಲೇಖಿಸುತ್ತಾ ದೇಶದ ಸಮಸ್ಯೆಗಳು ಸಾಕಷ್ಟಿದ್ದರೂ ಪ್ರೊ. ಬ್ಯಾರಿಯವರು ಹೇಳುವಂತೆ 'ವಾಜಪೇಯಿ ಅವರ ಆಧ್ಯತಾ ಪಟ್ಟಿಯೇ ಬೇರೆ, ಅವರ ಹೇಳಿಕೆಯನ್ನೇನೋ ಸೀರಿಯಸ್ಸಾಗಿ ತೆಗೆದುಕೊಳ್ಳಬೇಕಾಗಿಲ್ಲ''[27] ಆದರೆ ಅಂತಹ ಹೇಳಿಕೆಗಳು ರಾಷ್ಟ್ರವನ್ನು ತಪ್ಪುದಾರರಿಗೆ ಎಳೆಯುತ್ತವೆ. ಭಯಂಕರ ಕೆಡುಕಿನ ಪರಿಣಾಮಗಳನ್ನು ಉಂಟು ಮಾಡುತ್ತವೆ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವೆಂಬುದನ್ನು ಗಮನಿಸಬೇಕು.

ಇಂತಹ ನಿಲುವು 'ಮತಾಂತರದ' ಹಕ್ಕನ್ನು ಸಂವಿಧಾನ ಪುರಸ್ಕರಿಸಿದಾಗ, ಆ ಹಕ್ಕನ್ನು ಸಂರಕ್ಷಿಸಲು ಕಾರ್ಯಾಂಗದ ಮುಖ್ಯಸ್ಥರಾಗಿ ಸಂವಿಧಾನಾತ್ಮಕ ಹೊಣೆಗಾರಿಕೆಯ (Constitutional Responsibility) ಕಾರ್ಯನಿರ್ವಹಿಸದೇ ಸಂವಿಧಾನ ನಿರ್ಮಾಪಕರು ರೂಪಿಸಿದ ಕಾನೂನನ್ನೇ 'ಒಬ್ಬ ವ್ಯಕ್ತಿಯಾಗಿ' ವಿಮರ್ಶೆ ಮಾಡುವ ರೀತಿಯಲ್ಲಿ ಮತಾಂತರ ಬಗ್ಗೆ ಚರ್ಚೆ ಆಗಬೇಕೆಂದು ಹೇಳುವುದರ ಹಿಂದಿನ ಮನಸ್ಸಿನ 'ದ್ವಂದ್ವವನ್ನು ಬಿಂಬಿಸುತ್ತದೆಯಲ್ಲದೇ, ಧಾರ್ಮಿಕ ಅಲ್ಪಸಂಖ್ಯಾತರಲ್ಲಿ ಭಯವನ್ನುಂಟು ಮಾಡುತ್ತದೆ. ಈ ಭಯವೇ ದೇಶದಲ್ಲಿ ಕೋಮು ಗಲಭೆಗೆ ಕಾರಣವಾಗಿರುವುದನ್ನು ನೋಡುತ್ತೇವೆ.

ಇತ್ತೀಚೆಗೆ ದಲಿತರನ್ನು, ಧಾರ್ಮಿಕ ಅಲ್ಪಸಂಖ್ಯಾತರನ್ನು ಜಗಳಕ್ಕೆ ಹಚ್ಚುವ ಕೋಮುವಾದಿ ಸಂಚುಗಳನ್ನು ನಾವು ನೋಡಿದ್ದೇವೆ. 1992 ರಲ್ಲಿ ಡಿಸೆಂಬರ್ 6, ಡಾ. ಅಂಬೇಡ್ಕರ್‌ರವರ ಪುಣ್ಯಸ್ಮರಣೆಯ ದಿನ, ದಲಿತರು ಸಭೆ ಸಮಾರಂಭ ಮಾಡದಂತೆ ತಡೆಯಲು ಅಂದೇ 'ಬಾಬರಿ ಮಸೀದಿ'ಯನ್ನು ಧ್ವಂಸಗೊಳಿಸಿ ಮುಸ್ಲೀಮರು ಆ ದಿನವನ್ನು ದುಃಖದಿಂದ 'ಕಪ್ಪು ದಿನ' ವನ್ನಾಗಿ ಆಚರಿಸುವಂತೆ, ಹಾಗೆಯೇ ಹಿಂದೂ ಪರಿವಾರದವರು ಪಟಾಕಿ ಹೊಡೆದು 'ವಿಜಯೋತ್ಸವ' ಆಚರಿಸುವಂತೆ ಮಾಡುವ ಹುನ್ನಾರಗಳು ಹಿಂದೂ ಧಾರ್ಮಿಕ ಭಯೋತ್ಪಾದನೆಯ ಮುಂದುವರಿಕೆಯ ಚಿತ್ರಣವನ್ನು ನೀಡುತ್ತವೆ.

ಹಾಗೆಯೇ ಬೌದ್ಧ ಧರ್ಮಕ್ಕೆ ಮತಾಂತರ ಹೊಂದುತ್ತಿರುವ ದಲಿತರನ್ನು ತಪ್ಪುದಾರಿಗೆಳೆಯಲು ಅಂಬೇಡ್ಕರ್‌ರವರ ವಿಚಾರಗಳ ಮೇಲೆ ಹಿಂದೂ ಸನಾತನಿ ಪರಿವಾರದ ಪಂಡಿತರು ಸತತ ಬೌದ್ಧಿಕ ದುಷ್ಕೃತ್ಯಗಳನ್ನು ಎಸಗುತ್ತಲೇ ಇರುವುದನ್ನು ನೋಡುತ್ತೇವೆ. ಇತ್ತೀಚೆಗೆ ಅರುಣ ಶೌರಿಯವರು ಅಂಬೇಡ್ಕರ್‌ರವರ

ವಿಚಾರಗಳನ್ನು ತಪ್ಪಾಗಿ ಅರ್ಥೈಸಿ Worshipping of False Gods ಪುಸ್ತಕ ಬರೆದರು. ಅದರಲ್ಲಿ ಶೌರಿಯವರು 'ಅಂಬೇಡ್ಕರ್ ಅಪ್ಪಿಕೊಂಡ ಧರ್ಮ ಬುದ್ಧನ ಧರ್ಮ ಅಲ್ಲವೇ ಅಲ್ಲ' ಧರ್ಮವೊಂದರ ಮಹತ್ತನ್ನು ಅರಿತು ಕೊಳ್ಳುವ ಅಂತ : ಸಾಕ್ಷಿ ಅಂಬೇಡ್ಕರ್‌ರವರಿಗೆ ಇರಲಿಲ್ಲ. ಜೀವನದ ಅಂತಿಮ ಕಾಲದಲ್ಲಿ ಅಂಬೇಡ್ಕರ್ ಧರ್ಮಾಂತರದ ಬಗ್ಗೆ ಚಿಂತಿಸಿದರು. ಪೂರ್ವಾಗ್ರಹ ಹಾಗೂ ಸೇಡಿನ ಭಾವನೆಗಳಿಂದ ಅಂಬೇಡ್ಕರ್ ಮುಕ್ತರಾಗಲೇ ಇಲ್ಲ. ಧರ್ಮಾಂತರದ ಹೆಸರಿನಲ್ಲಿ ಅವರು ಬರೀ ರಾಜಕೀಯ ಮಾಡಿದರು'[28] ಎಂದು ತೀರ್ಮಾನಕ್ಕೆ ಬರುತ್ತಾರೆ. ಹೀಗೆ ಹೇಳುವುದರ ಮೂಲಕ ಅಂಬೇಡ್ಕರ್‌ರವರು ಸತತ ಮೂವತ್ತು ವರ್ಷಗಳಿಂದ ಚಿಂತಿಸಿ ಕಟ್ಟಿಕೊಟ್ಟ ದಲಿತ ವಿಮೋಚನೆಯ ಸಾಂಸ್ಕೃತಿಕ ಮಾದರಿಯನ್ನು ಕುರೂಪಗೊಳಿಸುವ ಪ್ರಯತ್ನ ಮಾಡಿದರು. ಆದರೆ, ಇದೇ ಅಧ್ಯಯನದ ಮೊದಲ ಭಾಗದಲ್ಲಿ ಹೇಳಿದಂತೆ, ನಾಗಪೂರದಲ್ಲಿ ಅಂಬೇಡ್ಕರ್‌ರವರು ಮಾಡಿದ ಭಾಷಣ ಓದಿದ್ದರೆ ಶೌರಿಯಂತವರು ಇಂತಹ ಬೌದ್ಧಿಕ ದಿವಾಳಿತನಕ್ಕೆ ಆಹುತಿಯಾಗುತ್ತಿರಲಿಲ್ಲವೆಂದು ತೋರುತ್ತದೆ.

ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ಶತಶತಮಾನಗಳಿಂದ ಹಿಂದೂ ಧರ್ಮದ ಕ್ರೌರ್ಯ, ಅಪಮಾನಗಳಿಂದ ತಮ್ಮನ್ನು ವಿಮೋಚನೆಗೊಳಿಸಲು ಒಂದು ಪ್ರಭಾವಶಾಲಿ 'ವೀಸಾ' ಕೊಟ್ಟಿರುವುದರಿಂದ ದಲಿತರು, ಶೋಷಿತರು ಬೌದ್ಧಧರ್ಮಕ್ಕೆ ಮತಾಂತರ ಹೊಂದುತ್ತಿರುವ ಪ್ರಕ್ರಿಯೆ ಅರುಣ ಶೌರಿಯಂತವರಿಗೆ ಸಮರ್ಥ ಉತ್ತರವಾಗಬಲ್ಲದು.

## 4.2. ಕರ್ನಾಟಕದ ದಲಿತ ಚಳವಳಿ ಮತ್ತು ಬೌದ್ಧಧರ್ಮ :

ಮಹಾರಾಷ್ಟ್ರದ ದಲಿತ ಪ್ಯಾಂಡರ್ಸ್ ಚಳವಳಿ ಬೌದ್ಧ ಧರ್ಮವನ್ನು ಗಂಭೀರವಾಗಿ ಪರಿಗಣಿಸಿತು. ಅಲ್ಲಿ ಟ್ರೇಡ್ ಯೂನಿಯನ್ ಲಾಬಿಗಳು ಪ್ರಬಲವಾಗಿದ್ದುದರಿಂದ ಕಾರ್ಖಾನೆಗಳು ಬಹಳವಿದ್ದುದರಿಂದ, ಅರೆ ಸರ್ಕಾರ ಸ್ವಾಮ್ಯದ ಉದ್ಯಮಗಳು ಗಣನೀಯ ಪ್ರಮಾಣದಲ್ಲಿರುವುದರಿಂದ ಕಾರ್ಮಿಕರ ಸಂಘಟನೆಗಳು ಡಾ. ಅಂಬೇಡ್ಕರ್‌ರವರ ಕಾಲದಿಂದ ಪ್ರಬಲವಾಗಿರುವುದನ್ನು ಕಾಣುತ್ತೇವೆ. ಟ್ರೇಡ್ ಯೂನಿಯನ್ ಬೆಂಬಲ ಹೊಂದಿದ್ದ ನಾಮದೇವ ದಸಾಳ (ಮಾರ್ಕ್ಸ್‌ವಾದೀ ಬಣ) ರಾಜಾ ಥಾಲೇ (ಬೌದ್ಧ ಸಿದ್ಧಾಂತ ಬಣ) ರಿಪಬ್ಲಿಕನ್ ಪಾರ್ಟಿಯ ಹಿನ್ನಲೆಯಲ್ಲಿ ಒಂದಿಷ್ಟು ನಾಯಕರು (ಪ್ರಕಾಶ ಅಂಬೇಡ್ಕರ್, ಅಠವಲೆ ಇತರರು) ಹೀಗೆ ಒಡೆದು ಹೋಗಿರುವುದನ್ನು ಕಾಣಬಹುದಾಗಿದೆ. ಆದರೆ ಮುಂಬೈ ಕೇಂದ್ರವಾಗಿರುವ ಟ್ರೇಡ್ ಯೂನಿಯನ್‌ಗಳು ಡಾ. ಅಂಬೇಡ್ಕರ್‌ರವರ ವಿಚಾರಗಳ ಪ್ರಭಾವಕ್ಕೆ ಒಳಗಾಗಿರುವುದನ್ನು ನೋಡುತ್ತೇವೆ. ಹೀಗಾಗಿ ಕಾರ್ಮಿಕರೂ ಹೆಚ್ಚಿನ ಸಂಖ್ಯೆಯಲ್ಲಿ ಬೌದ್ಧರಾಗಿರುವುದನ್ನು ಕಾಣುತ್ತೇವೆ. ಕಾರ್ಮಿಕರಿಗಾಗಿ, ಸಾಮಾನ್ಯ ದಲಿತ ಕೂಲಿ ಕಾರ್ಮಿಕರಿಗಾಗಿಯೇ ಮುಂಬೈನಲ್ಲಿ "ಬಹುಜನ ವಿಹಾರ"[29] ವನ್ನು ಸ್ಥಾಪಿತವಾಗಿರುವುದನ್ನು ನೋಡುತ್ತೇವೆ.

ಅಂಬೇಡ್ಕರ್‌ರವರ ನಂತರದ ಸಂದರ್ಭದಲ್ಲಿ ಬೌದ್ಧ ಧರ್ಮ ಪ್ರಸಾರ ಕಾರ್ಯದಲ್ಲಿ ಮಹಾರಾಷ್ಟ್ರದಲ್ಲಿ ದಲಿತ ಚಳವಳಿಯ ಪ್ರಮುಖ ಸಂಘಟನೆಗಳು ಮಹತ್ವದ ಪಾತ್ರ ವಹಿಸಿವೆ. ಅಂಬೇಡ್ಕರ್‌ರವರೇ ಪ್ರಾರಂಭಿಸಿದ

ಈ ಕೆಳಗಿನ ಸಂಘಟನೆಗಳು ಮಹಾರಾಷ್ಟ್ರದಲ್ಲಿ 1940 ರ ದಶಕದಲ್ಲಿಯೇ ಒಂದು ಬೌದ್ಧ ಸಮಾಜ ರೂಪುಗೊಂಡಿರುವುದಕ್ಕೆ ಪುರಾವೆ ನೀಡುತ್ತವೆ.

1) ಬೌದ್ಧ ಜನ ಪಂಚಾಯತ್ ಸಮಿತಿ (1941)[30]
2) ಪೀಪಲ್ಸ್ ಎಜ್ಯುಕೇಷನ್ ಸೊಸೈಟಿ (1945)[31]
3) ಸಮತಾ ಸೈನಿಕ ದಳ (1927)[32]
4) ಬೌದ್ಧ ಮಹಾಸಭಾ (1955)[33]

ಮುಂದೆ ಅವರು ಪ್ರಾರಂಭಿಸಲು ಇಚ್ಛಿಸಿದ ರಾಜಕೀಯ ಸಂಘಟನೆ, ಅವರ ಮರಣಾನಂತರದಲ್ಲಿ ಅಸ್ತಿತ್ವಕ್ಕೆ ಬಂದ

5) ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ

ಮತ್ತು ಅಂಬೇಡ್ಕರ್‌ರವರ ಸಿದ್ಧಾಂತಗಳನ್ನು ಮೂಲ ಪ್ರೇರಣೆಯಾಗಿ ಹುಟ್ಟಿಕೊಂಡ 'ದಲಿತ ಪ್ಯಾಂಥರ್ಸ್' (1972)[34] ಹಾಗೂ ಇನ್ನೂ ಮುಂತಾದ ಸಂಘಟನೆಗಳು ಬೌದ್ಧ ಧರ್ಮ ಪುನರುಜ್ಜೀವನದಲ್ಲಿ ಪ್ರಮುಖ ಪಾತ್ರವಹಿಸುತ್ತಾ ಬಂದವು. ಅಂಬೇಡ್ಕರ್‌ರವರು ತೋರಿಸಿದ ವಿಮೋಚನಾ ಮಾದರಿಯನ್ನು ಅನುಸರಿಸಿದವು. ದಲಿತರ ಧಾರ್ಮಿಕ, ಸಾಂಸ್ಕೃತಿಕ ಐಡೆಂಟಿಟಿಯಾಗಿ ಬೌದ್ಧ ಧರ್ಮವನ್ನು ಸ್ವೀಕರಿಸಿದವು. ಹಲವಾರು ದೀಕ್ಷಾ ಕಾರ್ಯಕ್ರಮಗಳನ್ನು, ವಿಚಾರ ಸಂಕೀರಣಗಳನ್ನು ಏರ್ಪಡಿಸಿ ಬೌದ್ಧ ಸಾಹಿತ್ಯ ಅಭಿವೃದ್ಧಿ ಪಡಿಸಿದವು.

ಇಂದು ಮಹಾರಾಷ್ಟ್ರದಲ್ಲಿ ಬೌದ್ಧ ಸಾಹಿತ್ಯ ಸಂಘಟನೆಗಳು ವಿಫಲವಾಗಿ ಬೆಳೆದು ಬೌದ್ಧ ಧರ್ಮ ಪ್ರಸಾರ, ಅನುಸರಣೆಗಳ ಕಾರ್ಯಚಟುವಟಿಕೆ ಮಾಡುತ್ತಿವೆ. ಅಂಬೇಡ್ಕರ್‌ರವರ ವಿಚಾರಧಾರೆ ಮತ್ತು ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಹಾಗೂ ಜೆ.ಪಿ. ಚಳವಳಿಯಿಂದ ಪ್ರಭಾವಿತರಾದ ದಲಿತ ವಿದ್ಯಾವಂತರು ಕರ್ನಾಟಕದಲ್ಲಿ ದಲಿತ ಸಂಘರ್ಷ ಸಮಿತಿ (ಡಿ.ಎಸ್.ಎಸ್.) 1974 ರಲ್ಲಿ ಸ್ಥಾಪಿಸಿದರು.'[35] ಪ್ರೊ. ಲಕ್ಷ್ಮಣ ತೆಲಗಾವಿಯವರು ಗುರುತಿಸಿದಂತೆ ದಲಿತ ಸಂಘರ್ಷ ಸಮಿತಿಯು ಪ್ರಾರಂಭದಲ್ಲಿ ಇಟ್ಟುಕೊಂಡ ಉದ್ದೇಶಗಳು.[36],

1) ಪರಿಶಿಷ್ಟ ಜಾತಿ, ಜನಾಂಗಗಳ ಸಮಸ್ಯೆಗಳ ಬಗ್ಗೆ ವ್ಯವಹರಿಸುವುದು.

2) ಉಪಜಾತಿಗಳನ್ನು ನಾಶಗೊಳಿಸುತ್ತಾ ಅವರ ಐಕ್ಯತೆಗಾಗಿ ಒಮ್ಮತ ರೂಪಿಸುವುದು.

3) ದಲಿತ ಆರ್ಥಿಕ ಅಭಿವೃದ್ಧಿಗಾಗಿ, ಅದರಲ್ಲೂ ವಿಶಿಷ್ಟವಾಗಿ ಗ್ರಾಮೀಣ ಪ್ರದೇಶದ ದಲಿತರಿಗೆ ಸಣ್ಣ ಕೈಗಾರಿಕೆ, ಸ್ವಂತ ಉದ್ದಿಮೆ ಪ್ರಾರಂಭಿಸಲು ಅನುವು ಮಾಡಿಕೊಡುವುದು.

4) ಹಣಕಾಸು ಸಂಸ್ಥೆಗಳನ್ನು ಪ್ರಾರಂಭಿಸಿ ಭೂ ಮಾಲೀಕ, ಮಾರವಾಡಿಗಳ ಬಡ್ಡಿ ವ್ಯೂಹದಿಂದ ಬಿಡಿಸುವುದು.

5) ದಲಿತರ ಮೇಲಾಗುವ ದೌರ್ಜನ್ಯಗಳನ್ನು ತಡೆದು ಸವರ್ಣೀಯ ಹಿಂದುಗಳ ನಡುವೆ ಸಾಮರಸ್ಯ ಸಾಧಿಸುವುದು.

6) ಶೋಷಿತ ವರ್ಗದ ಜನಾಂಗದವರಿಗೆ ಪ್ರಜಾಪ್ರಭುತ್ವದ ತತ್ವಗಳ ಆಧಾರದ ಮೇಲೆ ಶಿಕ್ಷಣ ನೀಡಲು ಮುದ್ರಣಾಲಯ ಪ್ರಾರಂಭಿಸಿ ದೈನಿಕ ಪತ್ರಿಕೆಯಾಗಲೀ ಅಥವಾ ವಾರಪತ್ರಿಕೆಯಾಗಲೀ ಪ್ರಾರಂಭಿಸುವುದು.

7) ದಲಿತ ವರ್ಗದ ಮಕ್ಕಳಿಗೆ ಒಳ್ಳೆಯ ಜ್ಞಾನಾಭಿವೃದ್ಧಿಗೆ ವಾಚನಾಲಯ ಪ್ರಾರಂಭಿಸುವುದು.

8) ಜನಾಂಗದ ಸಂಪೂರ್ಣ ಅಭಿವೃದ್ಧಿಗೆ ಆರ್ಥಿಕವಾಗಿ ರಾಜಕೀಯವಾಗಿ ಮತ್ತು ಸಾಮಾಜಿಕವಾಗಿ ಕೆಲಸ ಮಾಡುವುದು[37]' ಆಗಿತ್ತು.

ಈ ಮೇಲಿನ ಉದ್ದೇಶಗಳನ್ನು ವಿಶ್ಲೇಷಣೆ ಮಾಡಿದಾಗ ದಲಿತರು ಧಾರ್ಮಿಕವಾಗಿ ವಿಮೋಚನೆಗೊಳ್ಳಬೇಕಾದ ಮತ್ತು ಸಾಂಸ್ಕೃತಿಕ, ಧಾರ್ಮಿಕ ಬದುಕಿನ ಆಯಾಮ ಕುರಿತು ಪ್ರಸ್ತುತವಿಲ್ಲದವಿರುವುದನ್ನು ಕಾಣುತ್ತೇವೆ. ಆದರೆ, ನಂತರದ ದಿನಗಳಲ್ಲಿ ಅದರ ಸಂಸ್ಥಾಪಕ ನಾಯಕರಾದ ಪ್ರೊ. ಬಿ. ಕೃಷ್ಣಪ್ಪನವರು (ಅನುಬಂಧ : 1, ಚಿತ್ರ : 24 ನೋಡಿ) ಬೌದ್ಧ ಧರ್ಮದ ತತ್ವಗಳಿಗೆ, ದಲಿತರು ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಹೊಂದಬೇಕಾದ ನಿಲುವುಗಳನ್ನು ತಮ್ಮ ಭಾಷಣಗಳಲ್ಲಿ, ವಿಚಾರ ಸಂಕಿರಣಗಳಲ್ಲಿ, ಸಂವಾದಗಳಲ್ಲಿ ಪ್ರಸ್ತಾಪಿಸುತ್ತಲೇ ಬಂದಿರುವುದನ್ನು ಕಾಣುತ್ತೇವೆ.

## ಪ್ರೊ. ಬಿ. ಕೃಷ್ಣಪ್ಪ, ದಲಿತ ಚಳವಳಿ ಮತ್ತು ಬೌದ್ಧ ಧರ್ಮ :

ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಸಂಸ್ಥಾಪಕರಲ್ಲಿ ಪ್ರಮುಖರಾದ ಪ್ರೊ. ಬಿ. ಕೃಷ್ಣಪ್ಪನವರು ದಲಿತ ಸಂಘರ್ಷ ಸಮಿತಿಯ ರಾಜಕೀಯ ಪ್ರಯೋಗಗಳ, ಅನುಭವಗಳ ಹಿನ್ನೆಲೆಯಲ್ಲಿ ಪಡೆದ ದೃಷ್ಟಿಕೋನಗಳಿಂದ, ದಲಿತರು ಧಾರ್ಮಿಕವಾಗಿ ಸಾಂಸ್ಕೃತಿಕವಾಗಿ ಒಂದು ಐಂಡೆಟಿಟಿಯನ್ನು ಪಡೆಯದ ಹೊರತು 'ರಾಜಕೀಯ ಶಕ್ತಿಯಾಗಲು' ಹಿನ್ನಡೆಯಾಗುತ್ತದೆ ಎಂಬ ಕಾರಣದಿಂದಲೇ 1990 ದಶಕದಿಂದ ಅಂದರೆ ಅಂಬೇಡ್ಕರ್‌ರವರ ಜನ್ಮ ಶತಮಾನೋತ್ಸವ ಆಚರಣೆ ಮತ್ತು 1991 ಸಂವಿಧಾನ ತಿದ್ದುಪಡಿ ಆದೇಶವಾಗಿ, ಬೌದ್ಧಮತಕ್ಕೆ ಮತಾಂತರಗೊಂಡ ದಲಿತರಿಗೂ ಮೀಸಲಾತಿ ಸೌಲಭ್ಯ ಮುಂದುವರೆಯಿತು. ಈ ಹಂತಕ್ಕೆ ಬಂದ ನಂತರ ಬೌದ್ಧಧರ್ಮದ ಬಗ್ಗೆ ಹೆಚ್ಚು ಆಸಕ್ತಿ ವಹಿಸಿರುವುದು ಕಂಡು ಬರುತ್ತದೆ. ಕರ್ನಾಟಕದ ತುಂಬೆಲ್ಲಾ ಪ್ರವಾಸ ಮಾಡುವ ಕಾಲಕ್ಕೆ ಅಲ್ಲಲ್ಲಿ ದಲಿತರು ಬೌದ್ಧರಾಗುವ ಅವಶ್ಯಕತೆಯ ಬಗ್ಗೆ ಪ್ರಸ್ತಾಪ ಮಾಡಲು ಪ್ರಾರಂಭಿಸಿದರು. ಅಷ್ಟಾಗಿ ಲೇಖನಗಳನ್ನು ಪುಸ್ತಕಗಳನ್ನು ಹೊರತರುವಲ್ಲಿ ಚಳವಳಿಯ ದೆಸೆಯಿಂದಾಗಿ ಆ ಕಡೆ ಗಮನ ಹರಿಸದ ಪ್ರೊ. ಕೃಷ್ಣಪ್ಪನವರ ಕೆಲವೊಂದು ಲೇಖನಗಳನ್ನು ಭಾಷಣಗಳನ್ನು ಇತ್ತೀಚಿಗೆ ಬಿ. ಕೃಷ್ಣಪ್ಪ ಟ್ರಸ್ಟ್ ಪ್ರಕಟಿಸಿದೆ. ಈ ಟ್ರಸ್ಟ್ ಭದ್ರಾವತಿಯಲ್ಲಿ 'ಮತಾಂತರ' ಕುರಿತಾಗಿಯೇ ಒಂದು ವಿಚಾರ ಸಂಕಿರಣ ಏರ್ಪಡಿಸಿದ್ದು ಉಲ್ಲೇಖನೀಯ. ಇದು ಬಿ. ಕೃಷ್ಣಪ್ಪನವರ ಮುಂದೆ ಸಾಗಬೇಕಾಗಿದ್ದ ಹಾದಿಯನ್ನು ಸೂಚಿಸುವ ಸಂಕೇತವೂ ಆಗಿ ನಮಗೆ ಗೋಚರಿಸುತ್ತದೆ. ಇದಕ್ಕೆ ಪೂರಕವೆಂಬಂತೆ ಅವರ ಪತ್ನಿ ಶ್ರೀಮತಿ ಇಂದಿರಾ ಅವರು ಪ್ರೊ. ಬಿ. ಕೃಷ್ಣಪ್ಪನವರ ನಂತರದಲ್ಲಿ ಬೌದ್ಧಧರ್ಮಕ್ಕೆ ಬದ್ಧರಾಗಿರುವ ದ.ಸಂ.ಸಂ. ಬಣಗಳೊಂದಿಗೆ, ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿರುವುದು. ಪ್ರೊ. ಕೃಷ್ಣಪ್ಪನವರು ಬೌದ್ಧಧರ್ಮದ ಬಗ್ಗೆ ಹೊಂದಿದ್ದ

ಆಸಕ್ತಿಯನ್ನು ನಿಲುವುಗಳನ್ನು ಬಿಂಬಿಸುತ್ತದೆ. ಪ್ರೊ. ಬಿ. ಕೃಷ್ಣಪ್ಪನವರು ತಮ್ಮ ಒಂದು ಲೇಖನದಲ್ಲಿ 'ಹಿಂದೂ ಧರ್ಮ ಯಾವಾಗ ಹುಟ್ಟಿತು'? ಅದರ ಸಂಸ್ಥಾಪಕ ಯಾರು? ಇಂಥ ಪ್ರಶ್ನೆಗಳ ಬಗ್ಗೆ ಇತಿಹಾಸ ಸ್ಪಷ್ಟ ಉತ್ತರ ಹೇಳಿಲ್ಲ. ಈಗ ನಾವು ಹಿಂದೂ ಧರ್ಮ ಎಂದು ಯಾವುದನ್ನು ಕರೆಯುತ್ತೇವೆಯೋ ಅದು ಬೌದ್ಧಧರ್ಮಕ್ಕಿಂತ ಮುಂಚೆ ಇರಲಿಲ್ಲ. ಬೌದ್ಧ ಧರ್ಮಕ್ಕಿಂತ ಮುಂಚೆ ಆರ್ಯ ಜನಾಂಗಕ್ಕೆ ಸೇರಿದ ಯಜ್ಞ-ಯಾಗಾದಿಗಳ ಬ್ರಾಹ್ಮಣ ಧರ್ಮ (ಮತ ಇತ್ತು) ನಾಯಕನ ಪೂಜೆ, ಹಿರಿಯರ ಪೂಜೆ, ಪ್ರತಿಮೆ (Hero worship, ancestral and image worship) ಪೂಜೆಗಳಿಂದ ಒಡಗೂಡಿದ ಜನಸಾಮಾನ್ಯರ ಧರ್ಮ ಇತ್ತು. ವೈಧಿಕ ಧರ್ಮವು ಗ್ರಹಕೃತ್ಯ ಸಂಬಂಧಿಸಿತ್ತು. ಇಂತಹುದನ್ನು ಪುರೋಹಿತರು ತರುವಾಯ, ಅದ್ಭುತವಾದ ಸಾರ್ವಜನಿಕ ಯಜ್ಞ-ಯಾಗಾದಿಗಳ ಮಾಡಿದರೋ ಹಾಗೆಯೇ ಮೂಲ ನಿವಾಸಿಗಳ ಗೃಹಧರ್ಮವು ಪೂಜೆಗೆ ಬಹಿರಂಗ ಸ್ಥಳವಿಲ್ಲದೆ ಒದ್ದಾಡುತ್ತಿತ್ತು. ತರುವಾಯ ಅದು ಪೂಜೆಗೆ ದೊಡ್ಡ ದೊಡ್ಡ ದೇವಸ್ಥಾನಗಳನ್ನು ನಿರ್ಮಿಸಿತು. ಬೌದ್ಧ ಧರ್ಮವು ಇಂಥ ವ್ಯವಸ್ಥೆಯ ವಿರುದ್ಧವೇ ಬಂಡಾಯ ಎದ್ದದ್ದು. ಪುರೋಹಿತಷಾಹಿಗಳು, ಬೌದ್ಧ ಧರ್ಮವನ್ನು ಹೊಲಸುಗೊಳಿಸಿ ಸುಲಭವಾಗಿ ಜನಪ್ರೀಯ ಧರ್ಮವೊಂದರಲ್ಲಿ ವಿಲೀನಗೊಳಿಸಿದರು. ಅದಕ್ಕೆ ಪುರಾಣ ಪುಣ್ಯಕಥೆ, ಜಾತಿಧರ್ಮ ಸ್ವರ್ಗ-ನರಕ ಕಲ್ಪನೆ, ಆಶ್ರಮವಾಸ ಇತ್ಯಾದಿ ಆಚಾರಗಳನ್ನು ಸೇರಿಸಿ ಹಿಂದೂ ಧರ್ಮವಾಯಿತು[38] ಎಂದು ಹೇಳುತ್ತಾರೆ. ''ಮಹಾ ಮಾನವತಾವಾದಿ ಅಂಬೇಡ್ಕರ್'' ಎಂಬ ಲೇಖನದಲ್ಲಿ 'ಬ್ರಿಟಿಷ್ ಸಾಮ್ರಾಜ್ಯಷಾಹಿ, ಭಾರತದ ಮೇಲೆ 200 ವರ್ಷಗಳ ಆಡಳಿತವನ್ನು ನಡೆಸಿದ್ದರೆ, ಹಿಂದೂ ಸಾಮ್ರಾಜ್ಯಷಾಹಿ ಈ ದೇಶದ ಮೂಲ ನಿವಾಸಿಗಳ ಮೇಲೆ ಐದು ಸಾವಿರ ವರ್ಷಗಳಿಂದ ಆಡಳಿತ ನಡೆಸುತ್ತಿದೆ. ಅಸ್ಪೃಶ್ಯರಿಗೆ ಬ್ರಿಟಿಷ್ ಸಾಮ್ರಾಜ್ಯಷಾಹಿ ಕ್ರೌರ್ಯಕ್ಕಿಂತ ಹಿಂದೂ ಸಾಮ್ರಾಜ್ಯಷಾಹಿ ಕ್ರೌರ್ಯ ಅತ್ಯಂತ ಕ್ರೂರವಾಗಿತ್ತು ಈಗಲೂ ಕ್ರೂರವಾಗಿದೆ ಎಂದರೆ ಅದೇನು ಉತ್ಪ್ರೇಕ್ಷೆಯ ಮಾತಲ್ಲ. ಏಕೆಂದರೆ ಬೆಂಗಳೂರಿನಂತಹ ಬೃಹತ್ ನಗರದಲ್ಲಿ ಇಂದಿಗೂ ಅಸ್ಪೃಶ್ಯ ವಿದ್ಯಾವಂತನೊಬ್ಬ ತನ್ನ ಜಾತಿಯನ್ನು ಹೇಳಿಕೊಂಡು ಬಾಡಿಗೆ ಮನೆಯನ್ನು ಪಡೆದುಕೊಳ್ಳುವುದು ಸಾಧ್ಯವಿಲ್ಲ. ಜಾತಿ ತಾರತಮ್ಯ ಮೇಲು ಕೀಳುಗಳ ಭಾವನೆ 21 ನೇ ಶತಮಾನಕ್ಕೆ ಕಾಲಿಡುತ್ತಿರುವ ಭಾರತದಲ್ಲಿ ಇನ್ನೂ ಗಟ್ಟಿಗೊಳ್ಳುತ್ತಲೇ ಹೋಗುತ್ತಿರುವುದು ಆತಂಕಕಾರಿಯಾಗಿದೆ'[39] ಎಂದು ಜಾತಿ ಪದ್ಧತಿಯ ಹಿಂದಿನ ಮತ್ತು ಇಂದಿನ ಆಯಾಮಗಳನ್ನು ವಿವರಿಸುತ್ತಾರೆ. 'ಜಾತಿ ವ್ಯವಸ್ಥೆಯಂಥ ಹೇಯ ಆಚರಣೆಯುಳ್ಳ ಹಿಂದೂ ಧರ್ಮದಲ್ಲಿ ತಾನು ಇರಲಾರೆ ಎಂದು ಬೌದ್ಧಧರ್ಮವನ್ನು ಸ್ವೀಕಾರ ಮಾಡಿದ, ತಮ್ಮ ನಿರಂತರ ಚಿಂತನೆ ಬರಹಗಳಿಂದ ಕೆಳವರ್ಗದ ಜನರಲ್ಲಿ ಸ್ವಾಭಿಮಾನ ಆತ್ಮ ಗೌರವಗಳನ್ನು ತುಂಬಿದ ಅಂಬೇಡ್ಕರ್ ಒಬ್ಬ ಮಹಾನ್ ಹೋರಾಟಗಾರ, ಮಾನವತಾವಾದಿಯಾದರು '[40] ಎಂದು ಅಂಬೇಡ್ಕರ್‌ರವರ ಬೌದ್ಧ ಮತಾಂತರ ಆಂದೋಲನ ತಾತ್ವಿಕ ಹಿನ್ನೆಲೆಗಳ ಗುರುತಿಸುತ್ತಾರೆ.

## ದಲಿತ ಚಳುವಳಿಯ ಮೇಲೆ ಬೌದ್ಧ ವಕ್ತಾರರಾದ ಬಿ. ಬಸವಲಿಂಗಪ್ಪನವರ ಪ್ರಭಾವ:

ಕರ್ನಾಟಕದಲ್ಲಿ 'ಬೂಸಾ' ಪ್ರಕರಣದಿಂದ ದಲಿತರಲ್ಲಿ ಪ್ರಖರ ವೈಚಾರಿಕತೆಯ ಕಿಡಿ ಹೊತ್ತಿಸಿ ದಲಿತ ಬಹುಜನ ಸಮುದಾಯಗಳು ಹಿಂದೂ ಧರ್ಮದ ಮೌಢ್ಯ ಕಂದಾಚಾರಗಳಿಂದ ಮುಕ್ತರಾಗಿ ಬೌದ್ಧ ಧರ್ಮದ ಕಡೆಗೆ ಮುಖ ಮಾಡುವಲ್ಲಿ ಬಿ. ಬಸವಲಿಂಗಪ್ಪನವರ ಪಾತ್ರ ಮಹತ್ವದ್ದಾಗಿದೆ. (ಅನುಬಂಧ-1, ಚಿತ್ರ: 23 ನೋಡಿ) ಅವರು ಹಲವಾರು ಬೌದ್ಧ ಆಚರಣೆಗಳನ್ನು ಮಾಡುವುದರ ಮತಾಂತರ ದಲಿತ ಚಳವಳಿಯ

ಕಾರ್ಯಕರ್ತರು ತಮ್ಮ ಅಂಬೇಡ್ಕರ್‌ರವರ ಮತಾಂತರ ಚಳುವಳಿಯನ್ನು ಬೌದ್ಧಧರ್ಮದ ಕುರಿತ ವಿಚಾರಗಳನ್ನು ಗಂಭೀರವಾಗಿ ಅಧ್ಯಯನ ಮಾಡಿ ಬೌದ್ಧ ಧಮ್ಮದ ಅನುಸರಣೆಗೆ ಮುಂದಾಗಿರುವುದು ಕಂಡು ಬರುತ್ತದೆ. ಈ ರೀತಿಯ ಪ್ರಕ್ರಿಯೆಗೆ ಆ ಸಂದರ್ಭದ ಪ್ರಖರ ಪಾಂಡಿತ್ಯದ ನಾಯಕರಾದ ಬಿ. ಬಸವಲಿಂಗಪ್ಪನವರು ಮುಖ್ಯ ಕಾರಣರು ಎಂಬುದನ್ನು ಅಲ್ಲಗಳೆಯಲಾಗದು.

## ಧಮ್ಮ ಚಕ್ರ ಪ್ರವರ್ತನ ದಿನಾಚರಣೆ:

ಬಿ. ಬಸವಲಿಂಗಪ್ಪನವರು ಸ್ಥಾಪಿಸಿದ 'ಕರ್ನಾಟಕದ ಬುದ್ಧ ಧಮ್ಮ ಸಮಿತಿಯು 1985 ರಿಂದ ಸತತವಾಗಿ 'ಧಮ್ಮ ಚಕ್ರ ಪ್ರವರ್ತನ' ದಿನಾಚರಣೆಯನ್ನು ಆಚರಿಸಿರುವುದು ಕಂಡು ಬರುತ್ತದೆ. ಸಮಿತಿಯ ಆಮಂತ್ರಣ ಪತ್ರಿಕೆಯಲ್ಲಿ ಈ ಬಗ್ಗೆ ಬರೆಯುತ್ತಾ ಬಿ. ಬಸಲಿಂಗಪ್ಪನವರು ಈ ಆಚರಣೆಯ ಮಹತ್ವದ ವಿವರಣೆ ನೀಡುತ್ತಾರೆ.

'ಭಾರತೀಯರು ಯಾವಾಗಲೂ ಬೌದ್ಧಧರ್ಮ, ಸಂಸ್ಕೃತಿ ಮತ್ತು ನಾಗರಿಕತೆಯ ಭಾಗವಾಗಿಯೇ ಇದ್ದರು. ದಲಿತರು, ಹಿಂದುಳಿದವರು,ಬಡವರು ಬೌದ್ಧ ಧರ್ಮೀಯರಾಗಿದ್ದರು. ಆದರೆ ಪ್ರತ್ಯೇಕವಾಗಿದ್ದರು. ಆದ್ದರಿಂದ ಹಿಂದೂ ಧರ್ಮ, ಸಂಸ್ಕೃತಿ ಅದರ ಮೂಢನಂಬಿಕೆಗಳು ಮತ್ತು ಅಸಮಾನತೆಗಳಿಂದ ಇಂದಿಗೂ ತುಳಿಯಲ್ಪಟ್ಟ ಜನರು ಬೌದ್ಧಧರ್ಮದ ಸಮಾನತೆ, ಭ್ರಾತೃತ್ವ ಮತ್ತು ಸಾಮ್ರಾಟ ಅಶೋಕ ಬೌದ್ಧಧರ್ಮದ ಶ್ರೇಷ್ಠತೆಯನ್ನು ಒಪ್ಪಿ ಅದನ್ನು ಸ್ವೀಕರಿಸಿದ ಸಂದರ್ಭದ ನೆನಪನ್ನು ಉಳಿಸಿಕೊಳ್ಳಲು ಅಶೋಕ ವಿಜಯ ದಶಮಿಯನ್ನು ಆಚರಿಸಬೇಕಾಗಿದೆ. ಅಶೋಕ ಬೌದ್ಧ ಧರ್ಮವನ್ನು ಒಪ್ಪಿದ ದಿನವನ್ನು ವಿಜಯ ದಶಮಿಯಾಗಿ ಆಚರಿಸಲಾಗುತ್ತಿದೆ. ಅಂದು ನಾವು ಮಾನವ ಸಮಾನತೆಯನ್ನು ಎತ್ತಿ ಹಿಡಿಯುವ ಬೌದ್ಧಧರ್ಮವನ್ನು ಜನರಿಗೆ ಮತ್ತೊಮ್ಮೆ ಕರುಣಿಸುವಂತೆ, ಶೋಷಣೆ ಮಾಡುವವರಿಗೆ ಕರುಣೆ ದಯ ಪಾಲಿಸುವಂತೆ ಬುದ್ಧನಲ್ಲಿ ಯಾಚಿಸಬೇಕಾಗಿದೆ. ಹಾಗೆಯೇ ದಲಿತರು, ಹಿಂದುಳಿದವರು ಒಂದು ಸ್ಥಿರ ನಿಲುವು ಸಾಧಿಸಿ ಬೌದ್ಧ ಧರ್ಮವನ್ನು ಒಪ್ಪಿ ರಾಜ್ಯಾಂಗ ಅವರಿಗೆ ದಯಪಾಲಿಸಿರುವ ಅಂತಃಸಾಕ್ಷಿಯನ್ನು ಉಳಿಸಿಕೊಳ್ಳಬೇಕಿದೆ'[41] ಎಂದು ಪರೋಕ್ಷವಾಗಿ ಸಂವಿಧಾನಬದ್ಧವಾಗಿ ಕೊಡಮಾಡಿರುವ ಧಾರ್ಮಿಕ ಹಕ್ಕನ್ನು, ನಂಬಿಕೆಯ (Right to Conscience) ಅವರು ಪ್ರಸ್ತಾಪಿಸುತ್ತಾರೆ. ಆ ಮೂಲಕ ದಲಿತರೊಟ್ಟಿಗೆ ಹಿಂದುಳಿದ ವರ್ಗದ ಜನರು ಒಮ್ಮತಕ್ಕೆ ಬಂದು ಬೌದ್ಧ ಧರ್ಮವನ್ನು ಸ್ವೀಕರಿಸಬೇಕೆಂಬ ನಿಲುವು ಪ್ರಕಟಿಸುತ್ತಾರೆ.

ಹೀಗೆ ಬಿ. ಬಸಲಿಂಗಪ್ಪನವರು ತಮ್ಮ ಪ್ರಖರ ಮತ್ತು ಸ್ಪಷ್ಟ ವಿಚಾರಧಾರೆಯಿಂದ ದಲಿತ ಚಳವಳಿಯ ನಾಯಕರ ಮೇಲೆ, ಕರ್ನಾಟಕದ ದಲಿತ ಸಮುದಾಯಗಳ ಮೇಲೆ ಗಾಢವಾದ ಪ್ರಭಾವ ಬೀರಿ ದಲಿತರು ಬೌದ್ಧ ಧರ್ಮದೊಂದಿಗೆ ಗುರುತಿಸಿಕೊಳ್ಳುವಲ್ಲಿ ಕಾರಣರಾಗಿದ್ದಾರೆ. ಬಿ. ಬಸಲಿಂಗಪ್ಪನವರ ಬೌದ್ಧ ಧಮ್ಮ ಕಾರ್ಯಚಟುವಟಿಕೆಗಳನ್ನು ವಿಚಾರಗಳನ್ನು ಸಾಂದರ್ಭಿಕವಾಗಿ ಅಧ್ಯಾಯ 7 ರಲ್ಲಿ ಪ್ರತ್ಯೇಕವಾಗಿ ಚರ್ಚಿಸಿದೆ.

ಮಹಾರಾಷ್ಟ್ರದ ದಲಿತ ಪ್ಯಾಂಥರ್‌ನಂತೆ ಕರ್ನಾಟಕದ ದಲಿತ ಚಳವಳಿಯೂ ಹಲವಾರು ಗುಂಪುಗಳಲ್ಲಿ ಇಂದು ತಮ್ಮ ತಮ್ಮ ನೆಲೆಗಳಲ್ಲಿ ಕೆಲಸ ಮಾಡುತ್ತಿದೆಯಾದರೂ ಬೌದ್ಧ ಧಮ್ಮದ ವಿಷಯದಲ್ಲಿ ಎಲ್ಲರೂ ಸಮಾನ ಮನಸ್ಕ ಧೋರಣೆ ಹೊಂದಿರುವುದು ಕಂಡು ಬರುತ್ತದೆ. ಹಾಗೇ ನೋಡಿದರೆ ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಚಳವಳಿಯ ಸ್ವರೂಪವೇ ಬೇರೆಯಾಗಿದೆ. ಕರ್ನಾಟಕದ ದಲಿತ ಚಳವಳಿಯ ಸ್ವರೂಪವೇ ಬೇರೆ ಇಲ್ಲಿ ಕರ್ನಾಟಕದ ದಲಿತ ಚಳವಳಿಯ ಮುಂಚೂಣಿಯಲ್ಲಿದ್ದ ಡಿ.ಎಸ್.ಎಸ್. ನಲ್ಲಿ ಬೇರೆ ಬೇರೆ ಬಣಗಳಾದ ಹಿನ್ನೆಲೆಯೇ ಬೇರೆಯಾಗಿದೆ. ಆಗಲೇ ಮಹಾರಾಷ್ಟ್ರದ ಬೆಳವಣಿಗೆ ಗಮನಿಸುತ್ತಿದ್ದ ಇಲ್ಲಿನ ದಲಿತ ಚಳವಳಿಯ ನಾಯಕರು ಯಾವ 'ರಾಜಕೀಯ ಪಕ್ಷ' ಗಳಿಗೆ ಬೆಂಬಲ ಕೊಡಬೇಕು, ಅದು ಯಾವ ರೀತಿಯಾಗಿರಬೇಕು? ಎಂಬೆಲ್ಲ ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳು ಹುಟ್ಟಿಕೊಂಡು ಅವೇ ನಾಯಕರು ತಮ್ಮ ತಮ್ಮ ವೈಯಕ್ತಿಕ ಹಿತಾಸಕ್ತಿಗಳ ಹಿನ್ನೆಲೆ ಇಟ್ಟುಕೊಂಡು ಯೋಚಿಸಲು ಪ್ರಾರಂಭಿಸಿದ್ದರಿಂದ ಇಲ್ಲಿ ಹಲವಾರು ಗುಂಪುಗಳು ಹುಟ್ಟಿಕೊಂಡವೇ ಹೊರತು ಮಹಾರಾಷ್ಟ್ರದಂತೆ ಕಮ್ಯುನಿಸ್ಟ್ ಸಿದ್ಧಾಂತದ ಬಣ, ಬೌದ್ಧ ಸಿದ್ಧಾಂತದ ಬಣ ಎಂಬಂತೆ ಅಲ್ಲ ಎಂದು ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

## ಮಹಾಬೋಧಿ ಮಹಾವಿಹಾರ ಬುದ್ಧ ಗಯಾ ವಿಮೋಚನಾ ಆಂದೋಲನ:

ಧಮನಿತ ಜನಸಮುದಾಯಗಳು ತಮ್ಮ ಸಾಮೂಹಿಕ ಪ್ರಯತ್ನಗಳಿಂದ (Collective Attempts or Assertions) ಆಧುನಿಕತೆ ಮತ್ತು ಧಾರ್ಮಿಕ ಮನ್ವಂತರಕ್ಕೆ ತೆರೆದುಕೊಂಡ ಪ್ರಕ್ರಿಯೆಯ ಕುರಿತು ತೀರ ಇತ್ತೀಚಿನವರೆಗೆ ಸಮಾಜ ವಿಜ್ಞಾನಿಗಳಾಗಲಿ, ಚರಿತ್ರಕಾರರಾಗಲಿ ಒಂದು ಬಗೆಯ ನಿರ್ಲಕ್ಷ ವಹಿಸಿದ್ದನ್ನು ನಾವು ಗಮನಿಸಬಹುದು. ಇಂತಹ ಒಂದು ಶೈಕ್ಷಣಿಕ ನಿರ್ಲಕ್ಷ್ಯಕ್ಕೆ (Academic Neglegience) ಕಾರಣಗಳೇನು ಎಂಬುದು ಪತ್ತೆಯಾಗದ ಸತ್ಯವೇನಲ್ಲ. ಸಮಾಜದ ಬಹಿಷ್ಕೃತ ಜಾತಿಗಳು, ಪಂಗಡಗಳು, ನಿರ್ಲಕ್ಷಿತ ಜನಸಮುದಾಯಗಳು ಆಧುನಿಕ ಕಾಲಘಟ್ಟದಲ್ಲಿ ಸಾಂಸ್ಕೃತಿಕ ವಿಮೋಚನೆಗೆ ಒಂದು ಸಾಮೂಹಿಕ ಪ್ರಯತ್ನ ಮಾಡಿದ್ದನ್ನು ನಾವು ಕಾಣುತ್ತೇವೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪರಕೀಯ ಆಡಳಿತದಿಂದ ಹೊರಬರಲು ಹೇಗೆ ಒಂದು ಸಾಮೂಹಿಕ ಪ್ರಯತ್ನ ಮಾಡಿದವೋ ಅದೇ ಕಾಲಕ್ಕೆ ಈ ಶೋಷಿತ ಸಮುದಾಯಗಳು ತಮ್ಮ ನಿಜವಾದ ಸ್ವಾತಂತ್ರ್ಯ ಮತ್ತು ಧಾರ್ಮಿಕ ಹಕ್ಕುಗಳಿಗಾಗಿ ಪ್ರಯತ್ನ ಮಾಡುತ್ತಿದ್ದುದನ್ನು ಸ್ವತಃ ಮುಖ್ಯ ನಾಯಕರುಗಳೇ ನಿರ್ಲಕ್ಷಿಸಿದ್ದನ್ನು ಕಾಣುತ್ತೇವೆ. ಅಂಬೇಡ್ಕರ್‌ರವರ ಪೂರ್ವದಲ್ಲಿಯೇ 1920 ರ ದಶಕದಲ್ಲಿಯೇ ದಲಿತ ಬೌದ್ಧರು ತಮಗೆ ವಿಶೇಷ ಸವಲತ್ತುಗಳನ್ನು ಮಾನ್ಯತೆಯನ್ನು ಕೊಡಲು ವಿನಂತಿಸಿ ಗಾಂಧೀಜಿಯವರನ್ನೇ ಭೇಟಿ ಮಾಡಿ ಚರ್ಚಿಸಿದರೂ ಅವರ ಬೇಡಿಕೆಗಳಿಗೆ ಸರಿಯಾದ ಸ್ಪಂದನ ಸಿಗದೇ ಹೋಯಿತು. 1923 ರಲ್ಲಿ ಬೆಳಗಾವಿಯಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್‌ನ 'ವಾರ್ಷಿಕ ಅಧಿವೇಶನ' ಕರ್ನಾಟಕದ ಬೆಳಗಾವಿಯಲ್ಲಿ ನಡೆದ ಸಂದರ್ಭದಲ್ಲಿ ಕೋಲಾರದ ದಲಿತ ಬೌದ್ಧ ನಾಯಕರಾದ ಜಿ. ಅಪ್ಪಾದೊರೈಯಾರ್ ಅವರ ನೇತೃತ್ವದಲ್ಲಿ ಬೆಳಗಾವಿಗೆ ಆಗಮಿಸಿ ಗಾಂಧೀಜಿಯವರಲ್ಲಿ ತಮ್ಮ ಬೇಡಿಕೆಗಳನ್ನು ಮಂಡಿಸಿ ಚರ್ಚಿಸಿದರು. ಅಧಿವೇಶನದಲ್ಲಿ ಬೋಧಗಯಾ ಮಹಾವಿಹಾರವನ್ನು ಬೌದ್ಧರಿಗೆ ಬಿಟ್ಟುಕೊಡುವ ನಿರ್ಣಯ ಮಂಡಿಸಲು ಒತ್ತಾಯಿಸಿದರು. ಗಾಂಧೀಜಿಯವರು ಈ ಹಿಂದೆಯೂ ಈ ಕುರಿತು ವಚನವಿತ್ತಿದ್ದರೂ ಸಹ ಈ ವಿಷಯದಲ್ಲಿ ಜಾತಿ, ವರ್ಣದ ಬಗ್ಗೆ ಭಿನ್ನ ವಿಚಾರ ವ್ಯಕ್ತಪಡಿಸಿದ್ದರಿಂದ ತಿರುಗಿ ಬರಿಗೈಯಿಂದ ಮರಳಿಹೋದರು[42].

## ಬೋಧಗಯಾ ವಿಮೋಚನಾ ಆಂದೋಲನ ಮತ್ತು ಕರ್ನಾಟಕದ ದಲಿತ ಬೌದ್ಧರು :

ಬುದ್ಧನಿಗೆ ಜ್ಞಾನೋದಯವಾದ ಸ್ಥಳ ಬೋಧಿ ವೃಕ್ಷವುಳ್ಳ ಬೌದ್ಧಗಯಾ ಮಹಾವಿಹಾರವು, ಹಿಂದೂ ಮಹಾಂತರ ಕೈಯಲ್ಲಿತ್ತು. ಅದನ್ನು ಬಿಡಿಸಿ ಬೌದ್ಧ ಧರ್ಮದವರಿಗೆ ಬಿಟ್ಟುಕೊಡಬೇಕೆಂಬ ಆಂದೋಲನ 1891 ರಿಂದಲೂ ನಡೆದಿರುವುದನ್ನು ಕಾಣುತ್ತೇವೆ. 1891 ರಲ್ಲಿ ಮಹಾಬೋಧಿ ಸೊಸೈಟಿಯನ್ನು ಪ್ರಾರಂಭಿಸಿದ ಶ್ರೀಲಂಕಾದ ಬಿಕ್ಕು ಅನಗಾರಿಕ ಧರ್ಮಪಾಲರು ಆ ಸಂದರ್ಭದಲ್ಲೇ ಬುದ್ಧಗಯಾ ಮಹಾವಿಹಾರವನ್ನು ಬೌದ್ಧರಿಗೆ ಹಸ್ತಾಂತರಿಸಲು ಒತ್ತಾಯಿಸಿದರು. ಆದರೆ ಇಂದಿನವರೆಗೂ ಪೂರ್ಣವಾಗಿ ಬೌದ್ಧರ ಪವಿತ್ರ ಸ್ಥಳವನ್ನು ಬೌದ್ಧರಿಗೆ ಬಿಟ್ಟುಕೊಟ್ಟಿಲ್ಲ. 1891 ರಲ್ಲಿ ನಾಲ್ಕೈದು ಅನುಯಾಯಿಗಳೊಂದಿಗೆ ತೆರಳಿ, ಬೌದ್ಧರಿಗೆ ಈ ಮಹಾವಿಹಾರವನ್ನು ಬಿಟ್ಟುಕೊಡಲು ಮನವಿ ಮಾಡಿದರೂ ಅದನ್ನು ಬೌದ್ಧರಿಗೆ ಬಿಟ್ಟುಕೊಡಲಿಲ್ಲ. ಮುಂದೆ, ಶ್ರೀಲಂಕಾದ ಹಿರಿಯ ಬೌದ್ಧ ಬಿಕ್ಕುಗಳೂ ಈ ಕುರಿತು ಪ್ರಯತ್ನ ನಡೆಸಿದರೂ ನಿರೀಕ್ಷಿತ ಫಲ ಕಾಣಲಿಲ್ಲ. ಅದರೊಂದಿಗೆ ಕೋಲಾರದ ದಲಿತ ಬೌದ್ಧರೂ ಗಾಂಧೀಜಿಯವರಿಗೂ ಮನವಿ ಮಾಡಿಕೊಂಡೂ ರಾಷ್ಟ್ರೀಯ ಕಾಂಗ್ರೆಸ್ ಬೌದ್ಧರ ಈ ಬೇಡಿಕೆಯನ್ನು ಬೆಂಬಲಿಸದಿರುವುದನ್ನು ಈಗಾಗಲೇ ವಿವರಿಸಲಾಗಿದೆ.

ಪ್ರಸ್ತುತ ಸಂದರ್ಭದಲ್ಲಿ 1992 ರಲ್ಲಿ ಅಖಿಲ ಭಾರತ ಬುದ್ಧಗಯಾ ವಿಮೋಚನಾ ಆಂದೋಲನದ ಮಹಾಬೋಧಿ ಮಹಾವಿಹಾರ ಆ್ಯಕ್ಷನ್ ಕಮೀಟಿಯನ್ನು ಪೂಜ್ಯ ಬಿಕ್ಕು ಆಚಾರ್ಯ ನಾಗಾರ್ಜುನ ಸುರಾಯಿ ಸಸಾಯಿ ಇವರ ನೇತೃತ್ವದಲ್ಲಿ ರಚಿಸಲಾಗಿದೆ. (ಅನುಬಂಧ-1, ಚಿತ್ರ : 33 ಮತ್ತು 34 ನೋಡಿ) ಬಿಕ್ಕು ಆಚಾರ್ಯ ನಾಗಾರ್ಜುನ ಸುರಾಯಿ ಸಸಾಯಿ ಇವರು ಚಾರಿತ್ರಿಕವಾಗಿ 'ಬುದ್ಧಗಯಾ ಮಹಾವಿಹಾರ' ವನ್ನು ಬೌದ್ಧ ಧರ್ಮಿಯರಿಗೆ ಬಿಟ್ಟುಕೊಡಲು ಅಖಿಲ ಭಾರತ ಮಟ್ಟದ ಹೋರಾಟ ಪ್ರಾರಂಭಿಸಿದ್ದಾರೆ. ಅವರು ಹೇಳುವಂತೆ, 'ಏಷ್ಯಾದ ಬೆಳಕು' ಮಹಾಕಾವ್ಯ ರಚಿಸಿದ ಸರ್ ಎಡ್ವಿನ್ ಆರ್ನಾಲ್ಡ್ ಅವರು ಸಹ 1885 ರಲ್ಲಿ ಈ ಬೌದ್ಧ ಪವಿತ್ರ ಸ್ಥಳಕ್ಕೆ ಭೇಟಿ ನೀಡಿ, ಮಹಾವಿಹಾರವನ್ನು ಬೌದ್ಧ ಧರ್ಮಿಯರಿಗೆ ಬಿಟ್ಟುಕೊಡಲು ಬ್ರಿಟಿಷ್ ಸರ್ಕಾರಕ್ಕೆ ಮನವಿ ಮಾಡಿದ್ದಾರೆ. 1891 ರಲ್ಲಿ ಬಿಕ್ಕು ಅನಗಾರಿಕ ಧರ್ಮಪಾಲರು ನಾಲ್ಕೈದು ಬಿಕ್ಕುಗಳೊಂದಿಗೆ ಈ ವಿಹಾರಕ್ಕೆ ಆಗಮಿಸಿ ಈ ಕ್ಷೇತ್ರವನ್ನು ಬೌದ್ಧ ಧರ್ಮಿಯರಿಗೆ ಬಿಟ್ಟುಕೊಡಲು ಮನವಿ ಮಾಡಿಕೊಳ್ಳುತ್ತಾರೆ. ಆದರೆ ಬ್ರಾಹ್ಮಣ ಪುರೋಹಿತರು ಅವರನ್ನು ನಿಂದಿಸಿ ಬುದ್ಧನ ಮೂರ್ತಿಯನ್ನು ಹೊರಗೆ ಎಸೆಯುತ್ತಾರೆ. ಈ ಪ್ರಕರಣ ನ್ಯಾಯಾಲಯದ ಮುಂದೆ ಹೋದಾಗ ಜಿಲ್ಲಾ ನ್ಯಾಯಾಧೀಶರು 'ಈ ಮಂದಿರವು ಸತತವಾಗಿ, ಕ್ರಮವಾಗಿ ಬೌದ್ಧರಿಂದಲೇ ಆರಾಧಿಸುತ್ತ ಬಂದಿದೆ. ಬೌದ್ಧ ಯಾತ್ರಿಕರೇ ಹೆಚ್ಚಾಗಿ ಇಲ್ಲಿಗೆ ಭೇಟಿ ನೀಡುತ್ತಾರೆ. ಹಿಂದೂ ಧಾರ್ಮಿಕ ಆಚರಣೆಗಳು ಯಾವ ಪ್ರಕಾರವು ಇಲ್ಲಿ ಕಂಡು ಬರುವುದಿಲ್ಲ. ಶತಮಾನಗಳಿಂದ ಇಲ್ಲಿ ಹಿಂದೂ ಧಾರ್ಮಿಕ ಆಚರಣೆಗಳಿವೆ ಎಂಬುದನ್ನು ದೃಢ ಪಡಿಸುವ ಯಾವ ಪುರಾವೆಗಳು ಇಲ್ಲ'[43] ಎಂದು ಅಭಿಪ್ರಾಯ ಪಡುತ್ತಾರೆ. ಕಲ್ಕತ್ತಾ ಹೈಕೋರ್ಟ್‌ನ ನ್ಯಾಯಾಧೀಶರಾಗಿದ್ದ ಮ್ಯಾಕ್ ಫೆರಸನ್ ಕೂಡ 'ಮಹಾಬೋಧಿ ವಿಹಾರವು ಪ್ರಾಚೀಲ ಕಾಲದಿಂದಲೂ ಬೌದ್ಧರಿಗೆ ಪವಿತ್ರ ಸ್ಥಳವಾಗಿದೆ. ಇದು ಬೌದ್ಧ ದೇವಾಲಯ ಇದು ಹಿಂದು ಮಹಾಂತರ ಕೈಯೊಳಗಿದೆಯಾದರೂ ಹಿಂದೂ ದೇವಾಲಯವಾಗಿ ಇದನ್ನು ಪರಿವರ್ತಿಸಿಲ್ಲ. ಹಿಂದು ದೇವತೆಗಳ ಯಾವ ಮೂರ್ತಿಗಳೂ ಇಲ್ಲಿರುವುದಿಲ್ಲ. ಹಿಂದೂ ಆಚರಣೆಗಳಾವುವು ಇರುವುದಿಲ್ಲ. ಆದ್ದರಿಂದ ಇದು ಬೌದ್ಧ ಧರ್ಮಿಯರಿಗೆ ಬೌದ್ಧ ಯಾತ್ರಿಕರಿಗೆ ಮುಕ್ತವಾಗಿ ತೆರೆದಿರುತ್ತದೆ, ಬೌದ್ಧ

ಆಚರಣೆಗಳಿಗೆ ಇಲ್ಲಿ ಸ್ವಾತಂತ್ರ್ಯವಿದೆ ಎಂದು ಅಭಿಪ್ರಾಯಪಟ್ಟರು. 1949 ರಲ್ಲಿ ಬಿಹಾರ ಸರ್ಕಾರ 'ಬೋಧಗಯಾ ಮಂದಿರ ಕಾಯ್ದೆ' ಯನ್ನು ಪಾಸು ಮಾಡಿತು. ಇದರಿಂದ ಹಿಂದೂ ಮಹಾಂತರ ಕೈತಪ್ಪಿಸಿ 4 ಜನ ಹಿಂದು, 4 ಜನ ಬೌದ್ಧರಿರುವ ಹಾಗೂ ಬುದ್ದಗಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಅಧ್ಯಕ್ಷರಾಗಿರುವ ಒಂದು ಆಡಳಿತ ಮಂಡಳಿ ಜಾರಿಗೆ ಬಂದಿತು. ಬ್ರಾಹ್ಮಣರೇ ಪ್ರಭಾವಶಾಲಿಯಾಗಿದ್ದ 'ಬುದ್ಧನನ್ನು ವಿಷ್ಣುವಿನ ಅವತಾರ' ಎಂದು, ಬುದ್ಧ ಹಿಂದೂ ದೇವತೆ ಎಂದು ಜಗತ್ತಿಗೆ ನಂಬಿಸುವ ಕಾರ್ಯ ಮಾಡುತ್ತಿದ್ದಾರೆಂದು'[44] ಬಿಕ್ಕು ಆಚಾರ್ಯ ನಾಗಾರ್ಜುನ ಸುರಾಯಿ ಸಸಾಯಿ ಆರೋಪಿಸುತ್ತಾರೆ. ಬಿಕ್ಕು ನಾಗಾರ್ಜುನ ಸುರಾಯಿ ಸಸಾಯಿ ಅವರು ಈ ಮಹಾವಿಹಾರಕ್ಕೆ ಬ್ರಾಹ್ಮಣ ಪುರೋಹಿತರಿಂದಾದ ತೊಂದರೆಗಳನ್ನು ಈ ರೀತಿ ಪಟ್ಟಿ ಮಾಡುತ್ತಾರೆ.

1. ಈ ಮಹಾವಿಹಾರದಲ್ಲಿದ್ದ ಬುದ್ಧನ ಮೂಲ ಮೂರ್ತಿಗಳನ್ನು ಒಡೆಯಲಾಗಿದೆ, ಕಳವು ಮಾಡಿಕೊಂಡು ಹೋಗಲಾಗಿದೆ.
2. ಈ ವಿಹಾರಕ್ಕೆ ಕೊಟ್ಟ ದಾನದತ್ತಿಗಳ ಲೆಕ್ಕ ಇಟ್ಟಿರುವುದಿಲ್ಲ.
3. ಅಖಿಲ ಭಾರತ ಮಟ್ಟದಲ್ಲಿ ಆಂದೋಲನ ಮತ್ತು ಪ್ರತಿಭಟನೆ ಮಾಡಿದಾಗ ಸದ್ಯದ ಆಡಳಿತ ಮಂಡಳಿಗೆ ಚುನಾವಣೆ ನಡೆಸಲಾಗುತ್ತಿದೆ.
4. ಬುದ್ಧನಿಗೆ ಅಗೌರವಿಸಲು ಮಹಾ-ವಿಹಾರದೊಳಗೆ ಕಳವಿನಿಂದ ಶಿವಲಿಂಗ ಮತ್ತು ಇತರ ಹಿಂದೂ ದೇವತೆಗಳನ್ನು ಪ್ರತಿಷ್ಠಾಪಿಸಲಾಗಿದೆ.
5. ಬೌದ್ಧ ಧರ್ಮಕ್ಕೆ ವ್ಯತಿರಿಕ್ತವಾದ ಹಿಂದೂ ಆಚರಣೆಗಳನ್ನು ಪ್ರಾರಂಭಿಸಲಾಗಿದೆ.
6. ಯಾತ್ರಿಕರು ನೀಡುವ ದಾನದತ್ತಿಗಳನ್ನು ದುರುಪಯೋಗ ಪಡಿಸಿಕೊಳ್ಳಲು ಪುರೋಹಿತರು ಗೂಂಡಾಗಳನ್ನು ಇಟ್ಟುಕೊಂಡಿದ್ದಾರೆ.

ಆರ್ಯ ನಾಗಾರ್ಜುನ ಸುರಾಯಿ ಸಸಾಯಿ ಅವರು 1949 ರ 'ಬೋಧ ಗಯಾ ಟೆಂಪಲ್ ಆ್ಯಕ್ಟ್'ಗೆ ತಿದ್ದುಪಡಿ ತರಲು ಭಾರತ ಸರ್ಕಾರದ ಮೇಲೆ, ಬಿಹಾರ ಸರ್ಕಾರದ ಮೇಲೆ 'ಅಖಿಲ ಭಾರತ ಮಹಾಬೋಧಿ ಮಹಾವಿಹಾರ ಆ್ಯಕ್ಷನ್ ಕಮೀಟಿಯ ನೇತೃತ್ವದಲ್ಲಿ ಭಾರತದಾದ್ಯಂತ ದಲಿತ ಸಂಘಟನೆಗಳ ಬೆಂಬಲದೊಂದಿಗೆ ವಿಮೋಚನಾ ಚಳವಳಿ ಮುಂದುವರೆಸಿದ್ದಾರೆ. 'ಚರ್ಚಗಳು ಕ್ರೈಸ್ತರ, ಕೈಯೊಳಗೆ, ಮಸೀದಿಗಳು ಮುಸ್ಲಿಂರ ಕೈಯೊಳಗೆ ದೇವಸ್ಥಾನಗಳು ಹಿಂದೂಗಳ ಕೈಯಲ್ಲಿ ಇರುವಾಗ ಬೌದ್ಧರಿಗೆ ಪವಿತ್ರ ಯಾತ್ರಾ ಸ್ಥಳವಾದ ಬುದ್ಧಗಯಾ ಮಹಾವಿಹಾರ ಬೌದ್ಧ ಧರ್ಮಿಯರಿಗೆ ಯಾಕೆ ಇರಬಾರದು'[45] ಎಂದು ಪ್ರತಿಪಾದಿಸುತ್ತಿದ್ದಾರೆ. ಅವರು ಇತ್ತೀಚಿಗೆ ವಿಶ್ವ ಸಂಸ್ಥೆಯ ವೇದಿಕೆಗಳಲ್ಲಿ ಈ ಕುರಿತು ಹಕ್ಕು ಪ್ರಸ್ತಾಪ ಮಾಡಿ ಜಾಗತಿಕ ವೇದಿಕೆಗಳ ಪ್ರಾಜ್ಞರ ಗಮನ ಸೆಳೆಯುವ ಪ್ರಯತ್ನ ಮಾಡಿದ್ದಾರೆ. (ಅನುಬಂಧ-1, ಚಿತ್ರ : 33 ಮತ್ತು 34 ನೋಡಿ) ಈ ರೀತಿ ಬೌದ್ಧರ ಮಾನವ ಹಕ್ಕುಗಳು ಉಲ್ಲಂಘನೆಯಾಗುವುದರಿಂದ ಯುನೆಸ್ಕೊ ಮಹಾನಿರ್ದೇಶಕರು ಈ ಕುರಿತು ಮಧ್ಯಸ್ಥಿಕೆ ವಹಿಸಿ ಭಾರತ ಸರ್ಕಾರಕ್ಕೆ ನಿರ್ದೇಶನ ನೀಡಬೇಕೆಂದು ಮನವಿ ಸಲ್ಲಿಸಿದ್ದಾರೆ. ಈ ಮನವಿಗೆ ದಲಿತ ಮುಖಂಡರೂ ಸಹಿ ಹಾಕಿರುವುದು ಕಂಡು ಬರುತ್ತದೆ. ಜಿನೇವಾದಲ್ಲಿ 2002 ರಲಲಿ ಮಾನವ ಹಕ್ಕುಗಳ ಉಪ ಸಮಿತಿಗೆ ನೀಡಿದ ಮನವಿಯಲ್ಲಿ ಬುದ್ಧಗಯಾ ಮಹಾವಿಹಾರವನ್ನು ಬೌದ್ಧರಿಗೆ ಸ್ಮರಿಸುವಲ್ಲಿ ವಿಶ್ವಸಂಸ್ಥೆ

ಸಂಬಂಧಿಸಿದವರಿಗೆ ನಿರ್ದೇಶನ ನೀಡಬೇಕೆಂದು ಸಹಿ ಹಾಕಿದವರಲ್ಲಿ ಬಿಕ್ಕು ನಾಗಾರ್ಜುನ ಸುರಾಯಿ ಸಸಾಯಿ, ಕೆನರಾ ಬ್ಯಾಂಕ್ ಪ.ಜಾ. ಪಂಗಡದ ಧುರೀಣರಾದ ಕರ್ನಾಟಕದ ಎಫ್.ಹೆಚ್. ಜಕ್ಕಪ್ಪನವರೂ ಸಹಿತ ರುಜು ಹಾಕಿರುವವುದನ್ನು ಕಾಣುತ್ತೇವೆ[46].

**ಧಾರ್ಮಿಕ ಹಕ್ಕುಗಳು :**

ದಲಿತ ಬೌದ್ಧರಿಗೆ ಸಂಬಂಧಿಸಿದಂತೆ ಈ ಮನವಿಯಲ್ಲಿ ಪ್ರಥಮ ಬಾರಿಗೆ ಧಾರ್ಮಿಕ ಹಕ್ಕುಗಳನ್ನು ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರತಿಪಾದಿಸಲಾಗಿದೆ. ಈ ಪ್ರಯತ್ನ ಸ್ವಾತಂತ್ರ್ಯೋತ್ತರ ಭಾರತದ ಸಂದರ್ಭದಲ್ಲಿ ಭಾರತದ ದಲಿತ ಚಳವಳಿ ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ 20 ಕೋಟಿಗಿಂತಲೂ ಹೆಚ್ಚಿಗಿರುವ ಶೋಷಿತರ ಧಾರ್ಮಿಕ ಹಕ್ಕುಗಳನ್ನು* ಹಾಗೂ ಮಾನವ ಹಕ್ಕುಗಳನ್ನು ಪ್ರತಿಪಾದನೆ ಮಾಡುವ ಮಟ್ಟಕ್ಕೆ ಮುಟ್ಟಿರುವುದು ಉಲ್ಲೇಖನೀಯವಾಗಿದೆ.

ಈ ಶೀರ್ಷಿಕೆ ಅಡಿಯಲ್ಲಿ ಈ ಕೆಳಗಿನಂತೆ ಮನವಿ ಮಾಡಲಾಗಿದೆ. 'ತಕ್ಷಣವೇ ಮಹಾಬೋಧಿ ಮಂದಿರ ಕಾಯ್ದೆ 1949 ಕ್ಕೆ ತಿದ್ದುಪಡಿ ತಂದು ಈ ವಿಶ್ವ ಪರಂಪರೆಯ ಪಟ್ಟಿಯಲ್ಲಿನ ಬೌದ್ಧವಿಹಾರವನ್ನು ಬೌದ್ಧಧರ್ಮಿಯರಿಗೆ ಬಿಟ್ಟು ಕೊಡಲು ಸಂಬಂಧಿಸಿದವರಿಗೆ ಕ್ರಮ ತೆಗೆದುಕೊಳ್ಳಲು ಸೂಚಿಸುವುದು'.

---

★ **Religious Rights :**

Please ensure immediate amendment of Mahabhodi Temple Act, 1949 and handover the management of the Mahabhodi Temple Gya. Which has been declared as World Heritage Monument by the UNESCO to the people of Buddhist faith. It is a norm in India that people of same faith manage their own people.

**Increase Quota Percentage :**

The Present Percentage of Quota was fixed on the basis of 1971 census. Many Castes and Tribes have been added to the schedule Castes and Tribes. The population of Dalit and Tribals has been considerabily increased. Therefore the percentage of quota should be increased on the basis of 2001 census.

Since the Buddhist converts have been granted reservation rights since 1991, their percentage with other SC., in C and D group recruitment by Public Sector Enterprises be raised from 7 to 17. 4% in Maharashtra State and resulted backlog be filledup in all departments of Central and State Governments and Public Sector enterprises.

'ಮೀಸಲಾತಿಯಲ್ಲಿ 2001 ರ ಜನಗಣತಿಯಂತೆ ಹೆಚ್ಚಾಗಿರುವ ಪ.ಜಾ. ಜನಾಂಗದ ಪ್ರಮಾಣದಂತೆ ಸೇವೆಯಲ್ಲಿ ಮೀಸಲಾತಿ ನಿಗದಿಪಡಿಸುವುದು. ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದವರಿಗೂ ಮೀಸಲಾತಿ ಅನ್ವಯವಾಗುವ ಸಂವಿಧಾನದ ತಿದ್ದುಪಡಿ ಆದೇಶ 1991 ರಲ್ಲಿ ಜಾರಿಗೆ ಬಂದಿರುವುದರಿಂದ ಮಹಾರಾಷ್ಟ್ರದಲ್ಲಿ ಮೀಸಲಾತಿ ಪಡೆಯುವವರ ಪ್ರಮಾಣ ಪ್ರತಿಶತ 7 ರಷ್ಟು ಹೆಚ್ಚಾಗಿದೆ. ಆದ್ದರಿಂದ ಅದನ್ನು 17.4% ಪ್ರತಿಶತಕ್ಕೆ ಹೆಚ್ಚಿಸುವುದು. ಅಂದಿನಿಂದ ಇಲ್ಲಿಯವರೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರನ್ನು ಎಲ್ಲಿ ಇಲಾಖೆಗಳಲ್ಲಿ, ಸಾರ್ವಜನಿಕ ಕ್ಷೇತ್ರದ ಮಹಿಮೆಗಳಲ್ಲಿ ಬ್ಯಾಕಲಾಗ್ ನೇಮಕಾತಿಗಳನ್ನು ಮಾಡಿಕೊಳ್ಳುವುದು'[47]. ಯಾಕೆಂದರೆ ಬೌದ್ಧರಾಗಿ ಮತಾಂತರ ಹೊಂದಿದ ದಲಿತರು 1956 ರಿಂದ 1991 ರವರೆಗೆ ಮೀಸಲಾತಿ ಸೌಲಭ್ಯದಿಂದ ವಂಚಿತರಾಗಿದ್ದಾರೆ ಎಂಬ ಕಾರಣದಿಂದ ಇಂತಹ ಕ್ರಮ ಅಗತ್ಯವೆಂದು ಹೇಳುತ್ತಾರೆ.

ಡಾ. ಅಂಬೇಡ್ಕರ್ ಮತ್ತು ಬೌದ್ಧ ಧಮ್ಮದ ತತ್ವಗಳ ಪ್ರಸಾರದಲ್ಲಿ ಬುದ್ಧಗಯಾದ ಮಹಾಬೋಧಿ ಮಹಾ ವಿಹರದ ವಿಮೋಚನಾ ಆಂದೋಲನದಲ್ಲಿ ಕರ್ನಾಟಕದ ದಲಿತ ಬೌದ್ಧರು, ದಲಿತ ಸಂಘಟನೆಗಳು ವಿಶೇಷವಾಗಿ ಬ್ಯಾಂಕ್‌ಗಳ ಪ.ಜಾ., ಪ.ಪಂ. ನೌಕರರ ಸಂಘಟನೆಗಳು ಮಹತ್ವದ ಪಾತ್ರ ವಹಿಸಿವೆ. ಕೆನರಾ ಬ್ಯಾಂಕ್ ಪ.ಜಾ., ಪ.ಪಂ. ಪಂಗಡ ನೌಕರ ಒಕ್ಕೂಟ ಈ ನಿಟ್ಟಿನಲ್ಲಿ ವಿಶೇಷ ಕೊಡುಗೆ ಸಲ್ಲಿಸಿದೆ. ಅದು ಹೊರತಂದ ಕ್ಯಾಲೆಂಡರ್‌ಗಳಲ್ಲಿ, ಕರಪತ್ರಗಳಲ್ಲಿ ಅಂಬೇಡ್ಕರ್‌ರವರ ವಿಚಾರಗಳ ಜೊತೆಗೆ ಬುದ್ಧನ ತತ್ವಗಳನ್ನು ಪ್ರಕಟಿಸಿ ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿಯೂ ಬೌದ್ಧಧಮ್ಮದ ತತ್ವಗಳ ಪ್ರಸಾರಕ್ಕೆ ಕಾರಣವಾಗಿದೆ. ಶ್ರೀ ಎಫ್. ಹೆಚ್. ಜಕ್ಕಪ್ಪನವರ ಹಿಡಿದುಕೊಂಡು ಹಲವಾರು ಪದಾಧಿಕಾರಿಗಳು ತಮ್ಮ ತಮ್ಮ ನೆಲೆಗಳಲ್ಲಿ ಬೌದ್ಧಧಮ್ಮ ಸತ್ವಗಳ ಪ್ರಸಾರ ಮಾಡುತ್ತಾ ಬಂದಿದ್ದಾರೆ. ಬುದ್ಧಗಯಾ ವಿಮೋಚನಾ ಆಂದೋಲನದಲ್ಲಿ ದೆಹಲಿಗೆ, ಬುದ್ಧಗಯಾಕ್ಕೆ ದಲಿತ ಯುವಕರು ಹೋಗಲು ನೆರವು ನೀಡಿದ್ದಾರೆ. ಜಾಥಾಗಳಿಗೆ, ಬೌದ್ಧ ಕಾರ್ಯಕ್ರಮಗಳಿಗೆ ನೆರವು ನೀಡುತ್ತಾ ಬಂದಿರುವುದನ್ನು ಗಮನಿಸಬಹುದಾಗಿದೆ. ಒಂದು ರೀತಿಯಲ್ಲಿ ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ದಲಿತರ ಮಾನವ ಹಕ್ಕುಗಳ ಪ್ರತಿಪಾದನೆ, ದಲಿತರ ಧಾರ್ಮಿಕ ಹಕ್ಕು ತಾಯಗಳಲ್ಲಿ ಮೇಲೆ ಪ್ರಸ್ತಾಪಿಸಿದ ಕರ್ನಾಟಕದ ಮುಖಂಡರಾದ ಶ್ರೀ ಎಫ್.ಹೆಚ್. ಜಕ್ಕಪ್ಪನವರಂತವರು ಆ ಮಟ್ಟಕ್ಕೆ ಬೆಳೆಯಲು ಕಾರಣವಾಗಿದ್ದು ಕೆನರಾ ಬ್ಯಾಂಕ್‌ನ ದಲಿತ ವರ್ಗದ ನೌಕರರ ನೈತಿಕ ಬೆಂಬಲ ಎಂದರೆ ತಪ್ಪಾಗಲಾರದು. ಹೀಗಾಗಿ ಅವರೆಲ್ಲ ಬೌದ್ಧಧರ್ಮಕ್ಕೆ ಔಪಚಾರಿಕವಾಗಿ ಮತಾಂತರವಾಗದಿದ್ದರೂ ಹಲವಾರು ನೌಕರರು ಬೌದ್ಧ ರೀತಿಯ ಜೀವನ ಸಾಗಿಸುತ್ತಿದ್ದಾರೆ ಮತ್ತು ಪ್ರಖರ ಬೌದ್ಧೀಯತೆಯೊಂದಿಗೆ ಬೌದ್ಧ ಧಮ್ಮದ ತತ್ವಗಳನ್ನು ಪ್ರಚಾರಗೊಳಿಸುತ್ತಿದ್ದಾರೆ.

ಬುದ್ಧಗಯಾ ಮಹಾಬೋಧಿ ಮಹಾವಿಹಾರ ವಿಮೋಚನಾ ಚಳವಳಿಯಲ್ಲಿ ಮೇಲೆ ವಿವರಿಸಿದ ಅಂತರಾಷ್ಟ್ರೀಯ ಮಟ್ಟದ ಹೋರಾಟದ ಜೊತೆಗೆ ಕರ್ನಾಟಕದ ದಲಿತ ಬೌದ್ಧರು ಆಗಾಗ ಭಾಗವಹಿಸುತ್ತ ಬಂದಿದ್ದಾರೆ. ಈ ಆಂದೋಲನದ ನೇತೃತ್ವ ವಹಿಸಿದ ರಾಷ್ಟ್ರೀಯ ಅಧ್ಯಕ್ಷ ಬದಂತ ಆರ್ಯ ನಾಗಾರ್ಜುನ ಸುರಾಯಿ ಸಸಾಯಿ ಅವರು ಬಿಜಾಪೂರ, ಬೀದರ್, ಹುಬ್ಬಳ್ಳಿ ಬೆಂಗಳೂರಿನ ದಲಿತ ಚಳವಳಿಯ ನಾಯಕರ ಸಂಪರ್ಕದಲ್ಲಿರುವುದರಿಂದ ಕರ್ನಾಟಕದ ಹಲವಾರು ಬೌದ್ಧ ಅನುಯಾಯಿಗಳು, ಅನೇಕ ವಿದ್ಯಾರ್ಥಿಗಳು, ನೌಕರರು ಅವರು ನೀಡಿದ ಕರೆಗೆ ಸ್ಪಂದಿಸಿ ಹೋರಾಟದಲ್ಲಿ ಭಾಗವಹಿಸಿದ್ದಾರೆ. ಹಿರಿಯ ಬೌದ್ಧ ಉಪಾಸಕರಾದ ಶ್ರೀ ಎಂ.ಜಿ. ಕ್ಯಾತನ್ (ಬಿಜ್ಜರಗಿ, ಬಿಜಾಪೂರ ಬೌದ್ಧ ಚಳವಳಿಯ ಪ್ರಬಾವದಲ್ಲಿರುವವರು) ಧಾರವಾಡದ ತಮ್ಮ

ಯುವ ಮಿತ್ರರಿಗೆ ಬರೆದ ಪತ್ರದಲ್ಲಿಮ ವಿಷಯ 'ಬುದ್ಧಗಯಾ' ದ ಜೊತೆ ಕರ್ನಾಟಕದ ದಲಿತ ಬೌದ್ಧರ ತಾದಾತ್ಮ್ಯ ಎಷ್ಟು ಘಾಡವಾಗಿದೆಯೆಂಬುದನ್ನು ತೋರಿಸುತ್ತದೆ. ಎಂ.ಜಿ. ಖ್ಯಾತನ್ ಬರೆಯುತ್ತಾರೆ.

''ಸಾರ್ವತ್ರಿಕ ಶಿಕ್ಷಣದಲ್ಲಿ ಶಿಕ್ಷಣ ನೀಡಲು ನಾವು ಮನೆ ಮನೆಗೆ ತೆರಳಿ ಬಾಗಿಲು ತಟ್ಟುವಂತೆ ಇಂದು ನಾನು 1 ನೇ ನವ್ಹೆಂಬರ್, 1996 ರಿಂದ ಪ್ರಾರಂಭವಾಗುವ ''ಬುದ್ಧಗಯಾ'' ಮಹಾಬೋಧಿ ಮುಕ್ತಿ ಆಂದೋಲನದ 9 ನೇ ಘಟ್ಟದ ಹೋರಾಟದಲ್ಲಿ ಸಹೃದಯ ಸಹಕಾರ ಆಂದೋಲನ ಪ್ರಾರಂಭಿಸುವ ನಿಮಿತ್ತ ನಿಮ್ಮ ಹೃದಯ ಮಂದಿರದ ಬಾಗಿಲನ್ನು ತಟ್ಟಲಿಕ್ಕೆ ಬಂದಿದ್ದೇನೆ', ಈ ವಿಚಾರದ ಬಗ್ಗೆ ನಿಮಗೆ ಸವಿಸ್ತಾರವಾಗಿ ವಿವರಿಸಲು ಆಗದೇ ಇದ್ದುದರಿಂದ ಆ ಆಂದೋಲನದ ಸಂಪೂರ್ಣ ಇತಿಹಾಸವನ್ನೇ ಸಾರುವ ಮಾಹಿತಿ ಪತ್ರಿಕೆಯನ್ನು ಇದರ ಜೊತೆಗಿಟ್ಟದ್ದೇನೆ. ದಿಲ್ಲಿಗೆ ಹೋಗುವುದು ಎಂದರೆ ಆರ್ಥಿಕ ಪ್ರಶ್ನೆ, ಅದರ ನಿವಾರಣೆಗೆ ರೇಲ್ವೆ ಉಚಿತ ಪಾಸನ್ನು ಇಟ್ಟದ್ದೇನೆ. ಇದರಲ್ಲಿ ಎರಡು ಫ್ರೀ ಪಾಸಗಳಿವೆ. ಅವುಗಳನ್ನು ನಿಮಗೆ ಎಷ್ಟು ಬೇಕೋ ಅಷ್ಟು ಸಂಖ್ಯೆಯಲ್ಲಿ ಝೆರಾಕ್ಸ್ ಪ್ರತಿ ಮಾಡಿಕೊಂಡು ಉಪಯೋಗಿಸಬಹುದು.

'ಇದನ್ನು ನಾವು ರಮಾಯಿ ಸ್ಮೃತಿ ಬುದ್ಧ ವಿಹಾರ ಸಮಿತಿಯಿಂದ ಸಿದ್ಧ ಪಡಿಸಿದ್ದೇವೆ. ಅವುಗಳನ್ನು ಬೇರೆ ಬೇರೆ ಬಡಹಳ್ಳಿಯ ಜನರಿಗೆ ಕಳಿಸಬೇಕಾಗಿದೆ. ಅಲ್ಲಿ ಆರ್ಥಿಕ ತೊಂದರೆಯಿಂದ ಮತ್ತು ಇನ್ನೂ ಕೆಲವು ತೊಂದರೆಗಳಿಂದ ಜನಗಳಿಗೆ ತಲುಪಲಿಕ್ಕಿಲ್ಲ ಎಂಬ ಒಂದೇ ಒಂದು ಕಳಕಳಿಯ ಚಿಂತನೆಯಿಂದ ನಿಮ್ಮಂತ ಕ್ರಾಂತಿಕಾರಿ ಸಹೃದಯರಿಗೆ ಸ್ವಲ್ಪ ಪ್ರಮಾಣದಲ್ಲಿ ಕಳಿಸುತ್ತಿದ್ದೇನೆ. ಆದ್ದರಿಂದ ನೀವು ಈ ಒಂದು ಸಂಘಟನೆಯನ್ನು ಅತ್ಯಂತ ಯಶಸ್ವಿ ರೀತಿಯಲ್ಲಿ ಮಾಡುತ್ತೀರಿ ಎಂದು ಬಲವಾಗಿ ನಂಬಿದ್ದೇನೆ. ತಪ್ಪು ತಿಳಿಯಬಾರದು ನನ್ನ ಒಂದು ಸಣ್ಣ ಸಲಹೆಯ ಬಗ್ಗೆ ವಿಚಾರಿಸಿ. ಸರಿ ಎನಿಸಿದರೆ ಆದನ್ನು ಅನುಸರಿಸಿದರೆ ಒಳಿತು. ಅದೇನೆಂದರೆ ದಿಲ್ಲಿಯ ಮಾರ್ಗ ಬಹಳ ದೂರ ಮತ್ತು ಕಷ್ಟ ಸಹಿಸಲಾರದಷ್ಟು ತೊಂದರೆಯ ಪ್ರಶ್ನೆ ಅದಕ್ಕೆ ನಾವು ''ಕೆಲವು ಜನರಿಗೆ ಬೌದ್ಧ ಧರ್ಮದ 'ಚೀವರ' ಹಾಕಿಸಿದರೆ ಅಂದರೆ ಮಹಾರಾಷ್ಟ್ರ ಮತ್ತು ಉತ್ತರ ಪ್ರದೇಶದಲ್ಲಿ ಬೌದ್ಧಧರ್ಮದ ಚೀವರಕ್ಕೆ ಬಹಳಷ್ಟು ಮಹತ್ವ ಕೊಡುವರು ಮತ್ತು ಅಂಥವರಿಗೆ ಟ್ರೇನ್‌ನಲ್ಲಿ ಎಲ್ಲ ರೀತಿಯ ವ್ಯವಸ್ಥೆಯೂ ಆಗುತ್ತದೆ. ಆದ್ದರಿಂದ ನೀವು ಈ ವಿಷಯದಲ್ಲಿ ಬಿಜಾಪೂರದಲ್ಲಿರುವ ಬೌದ್ಧ ವಿಹಾರ ನಿರ್ಮಾಣ ಸಮಿತಿಯ ಅಧ್ಯಕ್ಷರಿಗೆ ಪತ್ರ ಬರೆದು ವಿಶೇಷ ಮಾಹಿತಿ ಪಡೆದುಕೊಳ್ಳಬೇಕಾಗಿ ಕೋರಿಕೆ. ಇದನ್ನು ಮಾಡುವುದರಿಂದ ನಾವು ಕೆಲವರಿಗೆ ಇಲ್ಲಿಯೇ ಬೌದ್ಧ ಧರ್ಮ ಸ್ವೀಕರಿಸಲು ಅನುವು ಮಾಡಿಕೊಟ್ಟಂತಾಗುತ್ತದೆ ಮತ್ತು ನಮ್ಮ ಆ ಆಂದೋಲನದ ಗುಂಪಿಗೆ ಒಂದು ಒಳ್ಳೆಯ ಮೆರಗು ದೊರೆಯುತ್ತದೆ. ಆದ್ದರಿಂದ ಯಾವುದಕ್ಕೂ ಸೂಕ್ಷ್ಮ ರೀತಿಯಿಂದ ವಿಚಾರಿಸಿ ಸಹೃದಯದಿಂದ ಸ್ಪಂದಿಸುತ್ತೀರಿ ಎಂದು ಹಾರೈಸುವೆ. ಮನೆಯಲ್ಲಿನ ಹಿರಿಯರಿಗೆ ನನ್ನ ಬೌದ್ಧ ಭೀಮ ನಮನಗಳನ್ನು ತಿಳಿಸಿರಿ[48] .... ಮುರಲಿ. (ದಿನಾಂಕ : 10-10-1996 ತಮ್ಮ ಧಾರವಾಡದ ಸಹೋದ್ಯೋಗಿ ಮಿತ್ರರಿಗೆ ಬರೆದ ಪತ್ರ) 'ಅಖಿಲ ಭಾರತೀಯ ಧಮ್ಮಸೇನಾ' ದ ವತಿಯಿಂದ ಹೊರಡಿಸಲಾದ ಆಂದೋಲನ ಸಂಕ್ಷಿಪ್ತ ಇತಿಹಾಸ ವಿವರಸುವ ಮೊದಲಿನ 8 ಹಂತಗಳ ಹೋರಾಟದ ಚಿತ್ರಣ ಮತ್ತು 9 ನೇ ಹಂತದ ಹೋರಾಟದ ರೂಪರೇಷೆಗಳನ್ನು ಈ ಕರಪತ್ರದಲ್ಲಿ ಬಂದಂತ ಆರ್ಯ ನಾಗಾರ್ಜುನ ಸುರಾಯಿ ಸಸಾಯಿ ಅವರು ವಿವರಿಸುತ್ತಾರೆ. ಪ್ರಸ್ತುತ ಅಧ್ಯಯನ ದೃಷ್ಟಿಯಿಂದ ಈ ಕರಪತ್ರದ ಒಕ್ಕಣೆಯನ್ನು ಮೂಲದಲ್ಲಿ ಇದ್ದಂತೆಯೇ ಕೊಡುವುದು ಅಗತ್ಯವೆನಿಸಿದೆ.

## ಅಖಿಲ ಭಾರತೀಯ ಧಮ್ಮಸೇನಾ
## ಬುದ್ಧಗಯಾ ಮಹಾಬೋಧಿ ಮಹಾವಿಹಾರ ಆಲ್ ಇಂಡಿಯಾ ಆ್ಯಕ್ಷನ್ ಕಮೀಟಿ

(ಆಲ್ ಬುದ್ಧಿಷ್ಟ್ ಆ್ಯಂಡ್ ಅಂಬೇಡ್ಕರಾಯಿಟ್ಸ್ ಆರ್ಗನೈಜೆಶನ್ಸ್ ಸಂಪೂರ್ಣ ವಿಶ್ವ ಹಾಗೂ ಭಾರತದ ಬೌದ್ಧ ಜನರ ಪ್ರತಿಷ್ಠೆ ಮತ್ತು ಹಕ್ಕುಗಳೊಂದಿಗೆ ಬುದ್ಧಗಯಾ ಮಹಾಬೋಧಿ ಮಹಾವಿಹಾರ ಮತ್ತು ಆಂದೋಲನದ)

### 9 ನೇ ಘಟ್ಟದ ಹೋರಾಟದ ಜಾಹೀರ ಘೋಷಣೆ

1 ನೇ ನವ್ಹೆಂಬರ್ 1996 ರಂದು ಪಂತ ಪ್ರಧಾನರ ನಿವಾಸ ಸ್ಥಾನ ಹಾಗೂ ಸಂಸದ ಭವನದ ಮುಂದೆ ''ಭವ್ಯ ಮೋರ್ಚಾ'' ಬುದ್ಧಯಾದಲ್ಲಿ ಬೋಧಿ ವೃಕ್ಷದ ಕೆಳಗೆ ಭಗವಾನ ಬುದ್ಧರು ಜ್ಞಾನ ಪ್ರಾಪ್ತಿಯನ್ನು ಮಾಡಿದರು, ಜಗತ್ತಿನ ಎಲ್ಲ ತೀರ್ಥ ಸ್ಥಳಗಳಲ್ಲಿ ಇದನ್ನು ಸರ್ವ ಶ್ರೇಷ್ಠಯೆಂದು ತಿಳಿಯಲಾಗಿದೆ. ಭೋದಿಸತ್ವ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ಬೌದ್ಧ ಧರ್ಮವನ್ನು ಪುನರುಜ್ಜೀವನಗೊಳಿಸಿದ ನಂತರ ಭಾರತದ ಬೌದ್ಧ ಜನರಿಗೆ ಇದೊಂದು ಮಹಾನ ತೀರ್ಥ ಸ್ಥಾನವಾಗಿದೆ. ಎಂಬುದು ಎಲ್ಲರಿಗೂ ವಿಧಿತವಾದ ವಿಷಯ. ಇಂಥ ಬೌದ್ಧರ ಪವಿತ್ರಸ್ಥಾನ ಇವತ್ತೂ ಕೂಡಾ ಹಿಂದೂ ಬ್ರಾಹ್ಮಣವಾದಿಗಳ ಮುಖಾಂತರವೇ ಆಡಳಿತಕ್ಕೊಳಪಟ್ಟಿದೆ. ಇಂತಹ ಪವಿತ್ರಸ್ಥಾನದ ಮುಕ್ತಿಗೋಸ್ಕರವಾಗಿ ಸಮಸ್ತ ಭಾರತದ ಬೌದ್ಧಿಷ್ಠರು ಹಾಗೂ ಭೋದಿಸತ್ವ ಅಂಬೇಡ್ಕರ್‌ರ ಅನುಯಾಯಿಗಳು ಮಹಾಬೋಧಿ ಮಹಾವಿಹಾರ ಮುಕ್ತಿಗೊಳಿಸಲು ಸರ್ವರು ಸಂಘಟಿತರಾಗಿ ಇಲ್ಲಿಯವರೆಗೆ ಹಂತ ಹಂತಗಳಲ್ಲಿ ಯಶಸ್ವಿಯಾಗಿ 8 ನೇಯ ಹಂತದ ಮೋರ್ಚಾವನ್ನು ನಡೆಸಿದ್ದಾಗಿದೆ. ಅದರ ಪರಿಣಾಮವಾಗಿ ಜನತಾದಳದ ಪ್ರಮುಖ ಮುಖಂಡರಾದಂಥ ಹಿಂದಿನ ಪ್ರಧಾನಮಂತ್ರಿಗಳಾದ ಮಾನನೀಯ ಶ್ರೀ ವ್ಹಿ.ಪಿ. ಸಿಂಗ್ ಸಾಹೇಬರು ರೇಲ್ವೆ ಮಂತ್ರಿಗಳಾದ ಮಾನನೀಯ ಶ್ರೀ ರಾಮವಿಲಾಸ ಪಾಸ್ವಾನರು ಜನತಾದಳದ ಅಧ್ಯಕ್ಷರು ಹಾಗೂ ಬಿಹಾರದವರು ಸಂಪೂರ್ಣ ಸಮರ್ಥನೆ ಸೂಚಿಸಿದ್ದಾರೆ. ಇದಲ್ಲದೇ ಹಿಂದಿನ ಪ್ರಧಾನ ಮಂತ್ರಿಗಳಾದಂಥ ಮಾನ್ಯ ನರಸಿಂಹರಾವ್ ಮತ್ತು ಬಿ.ಎಸ್.ಪಿ. ಅಧ್ಯಕ್ಷರಾದಂಥ ಮಾನ್ಯ ಕಾನ್ಶಿರಾಮರು ಸಹ ಸಂಪೂರ್ಣ ಸಮರ್ಥನೆ ಕೋರಿದ್ದಾರೆ. ಸಮಸ್ತ ಭಾರತದ ರಿಪಬ್ಲಿಕನ್ ಪಾರ್ಟಿ ಒಂದಾಗಿ ನನಗೆ ಸಮರ್ಥನೆಯನ್ನು ಕೊಟ್ಟು ನಮ್ಮ ಜೊತೆಗಿದ್ದಾರೆ. ಈ ರೀತಿಯಾಗಿ ಸರಕಾರ ಹಾಗೂ ಬೇರೆ ಪಕ್ಷಗಳ ಸಮರ್ಥನೆಯು ನನಗೆ ಸಂಪೂರ್ಣವಾಗಿ ದೊರಕಿರುತ್ತದೆ. ಅದಕ್ಕಾಗಿ ಸಮಸ್ತ ಭಾರತದ ಬೌದ್ಧರು ಈ ಪ್ರತಿಷ್ಠೆಯ ಹಕ್ಕನ್ನು ಪಡೆಯಲು ಜನತಂತ್ರ ಹಾಗೂ ಧರ್ಮ ನಿರಪೇಕ್ಷ ಮಾರ್ಗದಲ್ಲಿ ಹೊರಟು ವಿಜಯಿಗಳಾಗುವ ಮಾರ್ಗದತ್ತ ಮುಂದುವರೆದಿದ್ದಾಗಿದೆ. ಇದರಲ್ಲಿ ನಾವು ಜಯಶಾಲಿಗಳಾಗಿಯೇ ತೀರುವೆವೆಂಬ ವಿಜಯದ ಮಾರ್ಗದತ್ತ ಸಾಗಿದ್ದೇವೆ. ಆದುದರಿಂದ ಸಮಸ್ತ ಬೌದ್ಧ ಉಪಾಸಕ ಉಪಾಸಕಿಯರಲ್ಲಿ ಹಾಗೂ ಅಂಬೇಡ್ಕರ್ ಅನುಯಾಯಿಗಳಲ್ಲಿ ಮತ್ತು ಸ್ನೇಹ ಭಾವನೆಯುಳ್ಳ ಎಲ್ಲ ಅಭಿಮಾನಿಗಳಲ್ಲಿ ನಾನು ನಿವೇದಿಸುವುದೇನೆಂದರೆ ಬರುವ 1 ನೇ ನವ್ಹೆಂಬರ್, 1996 ರಿಂದ ಸಮಸ್ತ ಭಾರತ ಅಷ್ಟೇ ಅಲ್ಲ ಸಂಪೂರ್ಣ ಜಗತ್ತಿನ ಬೌದ್ಧರ ಪ್ರತಿಷ್ಠೆ ಹಾಗೂ ಹಕ್ಕುಗಳ ಯಶಸ್ಸಿಗಾಗಿ ಭಾರತ ಭೂಮಿಯಲ್ಲಿ ಅಷ್ಟೇ ಅಲ್ಲ ಇಡೀ ಜಗತ್ತಿನ ಎಲ್ಲ ಬೌದ್ಧರ ಭೂಮಿಯಲ್ಲಿ ಕೂಡಾ 'ಬುದ್ಧಗಯಾ ಮಹಾಬೋಧಿ ಮಹಾವಿಹಾರದ ಮುಕ್ತಿ ಆಂದೋಲನದ 9 ನೇ ಘಟ್ಟದ ಹೋರಾಟವನ್ನು ಪ್ರಾರಂಭಿಸಲಾಗುವುದು.

ಸಂಯುಕ್ತ ಮೋರ್ಚಾ ಸರಕಾರದ ಮಾನ್ಯ ಪ್ರಧಾನ ಮಂತ್ರಿಗಳಾದ ಶ್ರೀ ದೇವೇಗೌಡರವರ ನಿವಾಸಸ್ಥಾನದ ಎದುರು ಹಾಗೂ ಪಾರ್ಲಿಮೆಂಟ್ ಭವನದ ಎದುರಿಗೆ 1 ನೇ ನವ್ಹೆಂಬರ್ 1996 ರಂದು ಲಕ್ಷೋಪಲಕ್ಷ ಬೌದ್ಧ ಜನರು ಹಾಗೂ ಸಾವಿರಾರು ಬಿಕ್ಕುಗಣ (ಭಂತೇಜಿಗಳು) ಸಹಸ್ರ ಪಂಚಶೀಲ ಧ್ವಜಗಳ ಕೆಳಗೆ ಭಾರತದ ಬೌದ್ಧರ ಸ್ವತಂತ್ರ ಹಕ್ಕನ್ನು ಹೊತ್ತು ಜಗತ್ತಿನ ಬೌದ್ಧರ ಹಾರ್ಧಿಕ ಇಚ್ಛೆಗಳೊಂದಿಗೆ ಪಂಥ ಪ್ರಧಾನರ ನಿವಾಸಸ್ಥಾನದೆಡೆ ಶಕ್ತಿಶಾಲಿಯಾದ ಪ್ರತಿಭಟನಾ ಮೆರವಣಿಗೆಯು ಮುಂದೆ ಸಾಗುವುದು. ಭಾರತದ ಐತಿಹಾಸಿಕ ಕೆಂಪು ಕೋಟೆಯ ಮೈದಾನದಿಂದ ಮಾನ್ಯ ಪ್ರಧಾನ ಮಂತ್ರಿಗಳ ನಿವಾಸದವರೆಗೆ ಈ ಪ್ರತಿಭಟನಾ ಮೆರಣಿಗೆಯು ಮುಂದೆ ಸಾಗುವುದು. ಹೊಸದಿಲ್ಲಿಯಲ್ಲಿ 4 ನೇ ಘಟ್ಟದ ಹೋರಾಟವನ್ನು ಸಮಸ್ತ ಬೌದ್ಧರು ಶಕ್ತಿಯುತವಾಗಿ ನಡೆಸಿಕೊಟ್ಟರು. ಇದಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಹಾಗೂ ಶಕ್ತಿಯುತವಾಗಿ ಡಾ. ಬಾಬಾಸಾಹೇಬ ಅಂಬೇಡ್ಕರ್‌ರ ಜಯಘೋಷದೊಂದಿಗೆ ಮುಂದೆ ಸಾಗೋಣ. ಇಲ್ಲಿಯವರೆಗೆ ಪ್ರಧಾನಮಂತ್ರಿ ಹಾಗೂ ಉಳಿದ ಪ್ರಮುಖ ಮಂತ್ರಿ ಮಹೋದಯ ಮತ್ತು ನೇತಾರವರಿಗೆ ಆಂದೋಲನದ ಸಂಪೂರ್ಣ ರಿಕಾರ್ಡ್‌ನ್ನು ಪುಸ್ತಕದ ರೂಪದಲ್ಲಿ ನಿರ್ಮಿಸಿ 9 ನೇ ಘಟ್ಟದ ಹೋರಾಟದ ಸೂಚನೆ ಹಾಗೂ ಜ್ಞಾಪನಾ ಪತ್ರವನ್ನು ಮೂರು ಸಲ ಅರ್ಪಿಸಿದ್ದೇನೆ. ಭೂತಪೂರ್ವ ಪ್ರಧಾನಮಂತ್ರಿ ವ್ಹಿ.ಪಿ.ಸಿಂಗ್ ಅವರ ಒಂದು ಪತ್ರ ನನಗೆ ಮುಟ್ಟಿರುತ್ತದೆ. ಅದರಲ್ಲಿ ಮಾನ್ಯರು ಸದಾ ಮಹಾಭೋದಿ ಮಹಾವಿಹಾರ ಮುಕ್ತಿ ಆಂದೋಲನಕ್ಕೆ ಸಮರ್ಥನೆ ನೀಡುತ್ತಾ ಬರೆದಿದ್ದಾರೆ. ಮಾನ್ಯ ರೇಲ್ವೆ ಮಂತ್ರಿಗಳಾದ ಶ್ರೀ ರಾಮವಿಲಾಸ ಪಾಶ್ವಾನವರು ಮಹಾಭೋದಿ ಮಹಾವಿಹಾರವನ್ನು ಮುಕ್ತಿಗೊಳಿಸುವದು ತಮ್ಮ ಕರ್ತವ್ಯವೆಂದು ಹೇಳಿದ್ದಾರೆ. ಕಾರಣ ಈ 9 ನೇ ಘಟ್ಟದ ಹೋರಾಟ ಅಂತಿಮ ಹೋರಾಟವಾಗಲಿದೆಯೆಂದು ನನ್ನ ಭಾವನೆ. ಈ ಆಂದೋಲನದ ಸ್ವರೂಪವು ಲಕ್ಷ ಲಕ್ಷ ಜನರು ಆಮರಣ ಉಪವಾಸ ಮತ್ತು ಕೆಲವು ಜನರು ಆತ್ಮ ದಹನದ ನಿರ್ಧಾರವನ್ನು ಸಹ ಪ್ರಕಟಿಸಿರುತ್ತಾರೆ. ಅದಕ್ಕಾಗಿಯೇ ಬೌದ್ಧ ಜನರ ಈ ಅಂತಿಮ ಮಹಾನ್ ಹೋರಾಟದಲ್ಲಿ ಹೆಮ್ಮೆಯಿಂದ ತಾವೆಲ್ಲರೂ ಭಾಗವಹಿಸಿ ಪ್ರತಿಷ್ಠೆಯ ಪವಿತ್ರ ಬುದ್ಧಗಯಾದ ಮಹಾಬೋಧಿ ಮಹಾವಿಹಾರದ ಮುಕ್ತಿಯನ್ನು ಸ್ವಾತಂತ್ರ್ಯವನ್ನು ಪ್ರಾಪ್ತ ಮಾಡೋಣ ಹಾಗೂ ಸಂಘರ್ಷ ಮಾಡೋಣ, ಸಂಘರ್ಷ, ಸಮಾಧಿ, ಅಗ್ನಿ ಆಂದೋಲನಗಳ ಮುಖಾಂತರ ಬೋಧಿಸತ್ವ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ಧರ್ಮದ ಪುನರುಜ್ಜೀವನ ಮಾಡಿದರು. ಭೋದಿಸತ್ವ ಡಾ. ಬಾಬಾಸಾಹೇಬ ಅಂಬೇಡ್ಕರ್‌ರು ಉದ್ಘೋಷಿಸಿದ 'ನಾನು ಸಂಪೂರ್ಣ ಭಾರತವನ್ನು ಬೌದ್ಧ ಮಯ ಮಾಡುವೆ ಎಂಬ ಪ್ರತಿಜ್ಞೆಯನ್ನು ಪೂರ್ಣಗೊಳಿಸುವ ಛಲದೊಂದಿಗೆ ಭಾರತದ ಎಲ್ಲ ಬೌದ್ಧ ಹಾಗೂ ಅಂಬೇಡ್ಕರ್‌ರ ಅನುಯಾಯಿಗಳು ಸಿಂಹಗಳಂತೆ ಧಮ್ಮ ಸೇನೆಯ ಸೈನಿಕರಾಗಿ ಈ ಪವಿತ್ರ ಕಾರಣಕ್ಕಾಗಿ ಈ ಹೋರಾಟದಲ್ಲಿ ಭಾಗವಹಿಸಬೇಕೆಂದು ವಿನಂತಿಸುತ್ತೇನೆ. ನಾನು ಬದಂತ ಆರ್ಯ ನಾಗಾರ್ಜುನ ಸುರಾಯಿ ಸಸಾಯಿ ಈ ಆಂದೋಲನದ ಮುಂದಾಳತ್ವ ವಹಿಸಿ ತಮಗಿಂತ ಮುಂದೆ ಸಾಗುತ್ತೇನೆ. ನಾನೂ ಯಾವ ಕಾರಣಕ್ಕೂ ಹಿಂದೆ ಸರಿಯುವದಿಲ್ಲ. ತಮ್ಮೆಲ್ಲರಿಗೂ ಯಾವುದೇ ತರಹ ತೊಂದರೆ ಆಗದಂತೆ ನೋಡಿಕೊಳ್ಳುತ್ತೇನೆ. ಪ್ರಸಂಗ ಬಂದರೆ ನಾನು ಮೊದಲು ಮರಣ ಹೊಂದುವೆ. ಈ ಉತ್ತಮಕಾರಣಕ್ಕಾಗಿ ಸಮಸ್ತ ಭಾರತದ ಭೀಮ ಸೈನಿಕರು ಹಾಗೂ ಧಮ್ಮ ಸೈನಿಕರು ಒಂದಾಗಿ ಭೋದಿಸತ್ವ ಡಾ. ಅಂಬೇಡ್ಕರ್ ಹಾಗೂ ತಥಾಗತ ಬುದ್ಧರ ಈ ಮಿಷನ್ ಅನ್ನು ಮುಂದೆ ಸಾಗಿಸೋಣ. ನಾನು ಮತ್ತೊಮ್ಮೆ ತಮ್ಮಲ್ಲಿ ವಿನಂತಿಸಿ ಕೇಳಿಕೊಳ್ಳುವುದೇನೆಂದರೆ ಸಂಪೂರ್ಣ ಯುವಕ ಜನರು ಹತ್ತು ಹದಿನೈದು ದಿನಗಳವರೆಗೆ 'ಶ್ರಮಣರಾಗಿ' ಚೀವರದ ಕವಚವನ್ನು ಧರಿಸಿ ಬುದ್ಧ ಜನರ ಸ್ವತಂತ್ರತಾ ಹಕ್ಕಿನ ಪ್ರತಿಷ್ಠೆಗಳ ಪ್ರಾಪ್ತಿಗೋಸ್ಕರ ಈ ಮಹಾನ ಯುದ್ಧದಲ್ಲಿ ಸಹಸ್ರ, ಸಹಸ್ರ ಸಂಖ್ಯೆಯಲ್ಲಿ ಭಾಗಿಗಳಾಗಬೇಕೆಂದು ವಿನಂತಿಸುತ್ತೇನೆ.

**ಬದಂತ ಆರ್ಯ ನಾಗಾರ್ಜುನ ಸುರಾಯಿ ಸುಾಯಿ**
(ರಾಷ್ಟ್ರೀಯ ಅಧ್ಯಕ್ಷ ಬುದ್ಧಗಯಾ ಮಹಾಬೋಧಿ ಮಹಾವಿಹಾರ ಆಲ್ ಇಂಡಿಯಾ
ವಿಮೋಚನಾ ಆ್ಯಕ್ಷನ್ ಕಮೀಟಿ)

**ಸೂಚನೆ :** 1) ಮುಂದಿನ ಸೂಚನೆಗಳನ್ನು ಸಮಯ ಸಮಯಕ್ಕೆ ಕಳಿಸುತ್ತಾ ಇರುತ್ತೇನೆ. ದಿಲ್ಲಿಯಲ್ಲಿ ನಡೆಯಲಿರುವ ಈ ಆಂದೋಲನದ ಮುನ್ಸೂಚನೆಯನ್ನು ರೈಲ್ವೆ ಮಂತ್ರಿ ಹಾಗೂ ಗ್ರಹ ಮಂತ್ರಿಗಳಿಗೂ ಕಳುಹಿಸಲಾಗಿದೆ.

2) ಈ ಪ್ರಕಟನೆಯನ್ನು ಓದಿ ತಾವು ಕೂಡ ಹೆಚ್ಚಿನ ಸಂಖ್ಯೆಯಲ್ಲಿ ಪ್ರಕಟಿಸಿ ಹೆಚ್ಚಿನ ಪ್ರಚಾರ ಕೊಡಿರಿ.

## ಕರ್ನಾಟಕ ದಲಿತ ಸಂಘರ್ಷ ಸಮಿತಿ ಮತ್ತು ಬೌದ್ಧಧರ್ಮ :

ಕರ್ನಾಟಕ ದಲಿತ ಸಂಘರ್ಷ ಸಮಿಟಿಯಲ್ಲಿ ವೈಚಾರಿಕ ಪ್ರಖರ ಚಿಂತನೆ ಹೊಂದಿದ್ದ ಲಕ್ಷ್ಮಿಪತಿ ಕೋಲಾರ ಅವರು ದಲಿತ ಸಂಘರ್ಷ ಸಮಿತಿಯು ಡಾ. ಬಿ. ಆರ್. ಅಂಬೇಡ್ಕರ್‌ರವರ ಬೌದ್ಧ ನೆಲೆಯನ್ನು ಹೊಂದಿರುವುದನ್ನು ಸೋದಾರಣವಾಗಿ ಸಾಂಸ್ಕೃತಿಕ ಪರಂಪರೆಯ ಬುನಾದಿಯನ್ನು ಕಟ್ಟಿಕೊಡುತ್ತಾರೆ. ಅವರು ಹೇಳುವಂತೆ

'ದಲಿತ ಸಂಘರ್ಷ ಸಮಿತಿ, ಸಾಂಸ್ಕೃತಿಕ ಅರ್ಥದಲ್ಲಿ ಸ್ವಾಭಿಮಾನ ಚಳವಳಿಯಾಗಿದೆ. ಚಾರ್ವಾಕರಿಂದ ಹಿಡಿದು ಅಂಬೇಡ್ಕರ್‌ವರೆಗೂ ಮುಂದುವರೆದುಕೊಂಡೇ ಬಂದ ಈ ಸ್ವಾಭಿಮಾನ ಚಳವಳಿ ಅಂಬೇಡ್ಕರ್ ಕಾಲದಲ್ಲಿ ರಾಜಕೀಯ ಆಯಾಮವನ್ನು ಪಡೆಯಿತು. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ 12 ನೇ ಶತಮಾನದ ವಚನ ಚಳವಳಿಯು ಕೂಡ ಜಾತಿ ವಿನಾಶವನ್ನೇ ಪ್ರಧಾನವಾಗಿಸಿಕೊಂಡಿದ್ದು, ಕೊನೆಯಲ್ಲಿ ವೈಧಿಕ ಪ್ರಾಬಲ್ಯದ ಪ್ರಭುತ್ವದ ವಿರುದ್ಧ ತೀವ್ರ ಸ್ವರೂಪದ ಧಂಗೆಯಾಗಿ ಮಾರ್ಪಾಟ್ಟಿತು. ಹೀಗಾಗಿ ವಚನ ಚಳವಳಿ ಆ ಕಾಲದ ಮಹತ್ವದ ರಾಜಕೀಯ ಸ್ವರೂಪದ 'ಸ್ವಾಭಿಮಾನ' ಚಳವಳಿಯೇ ಆಗಿದೆ. ತಮಿಳುನಾಡಿನ ಪೆರಿಯಾರ್ ಇ.ವಿ. ರಾಮಸ್ವಾಮಿ ನಾಯ್ಕರ್ ದ್ರಾವಿಡ್ ಚಳವಳಿಯೂ ಕೂಡ ಅಬ್ರಾಹ್ಮಣ ರಾಜಕೀಯದ ಗಟ್ಟಿ ಬೀಜಗಳನ್ನೇ ತನ್ನ ಒಡಲಲ್ಲಿ ಹುದುಗಿಸಿಕೊಂಡಿತು. ಚಾರ್ವಾಕರು ಮತ್ತು ಪ್ರಾಚೀನ ಭೌತವಾದಿಗಳ ಕಾಲದಲ್ಲಿ ಸಾಂಸ್ಕೃತಿಕ ಸ್ವರೂಪವನ್ನು ಪಡೆದಿದ್ದ ಸ್ವಾಭಿಮಾನ ಚಳವಳಿ ಬುದ್ಧ ಬಸವರ ಕಾಲಕ್ಕೆ 'ಆಧ್ಯಾತ್ಮಿಕ ಆಯಾಮ' ವನ್ನು ಪಡೆದುಕೊಂಡಿತು. ಆ ನಂತರದ ಜೋತಿಬಾ ಫುಲೆ, ನಾರಾಯಣಗುರು ದಾಸಪಂಥ ಸಂತರ ಕಾಲದಲ್ಲಿ ಆಧ್ಯಾತ್ಮ ಹಾಗೂ ಸಾಮಾಜಿಕ ನೆಲೆಗಳೆರಡರಲ್ಲಿ ಸ್ವಾಭಿಮಾನ ಚಳವಳಿ ಅರಳಿತ್ತು. ಅಂಬೇಡ್ಕರ್‌ರ ಬೌದ್ಧ ಮತಕ್ಕೆ ಮತಾಂತರಗೊಂಡದ್ದರ ಹಿನ್ನೆಲೆಯಲ್ಲೂ ಕೂಡ ಈ ಸ್ವಾಭಿಮಾನ ಚಳವಳಿಯ ದೀರ್ಘ ಪರಂಪರೆಯ ಅರಿವು ಇದೆ. ದಲಿತರಿಗೆ ತಮ್ಮ ಅವಮಾನದ ಸಂಸ್ಕೃತಿಗೆ ಎದುರಾಗಿ ಸಂಘರ್ಷಾತ್ಮಕ ಸಂಸ್ಕೃತಿಗೆ ಆಧ್ಯಾತ್ಮ ಪರಂಪರೆಯೊಂದನ್ನು ಒದಗಿಸಿಕೊಡುವ ಪ್ರಯತ್ನದಂಗವಾಗಿಯೇ ಅವರು ಬೌದ್ಧಧರ್ಮ ಮತ್ತು ತತ್ವವನ್ನು ಅಂಗೀಕರಿಸಿದ್ದು ಕೂಡ" ಎಂದು ಹೇಳುತ್ತಾರೆ. ಹೀಗೆ ಹೇಳುವಲ್ಲಿ ದಲಿತ ಸಂಘರ್ಷ ಸಮಿತಿಯು

ಅಂಬೇಡ್ಕರ್‌ರವರ ಪರಂಪರೆಯನ್ನೇ ಮುಂದುವರೆಸಿರುವುದಾಗಿ ಹೇಳುವ ಇಚ್ಛೆಯನ್ನು ಗಮನಿಸಬಹುದಾಗಿದೆ. ಮುಂದುವರೆದು ಈ ಲೇಖನದಲ್ಲಿ ಅವರು ದಲಿತ ನಾಯಕತ್ವ ಮತ್ತು ಬೌದ್ಧಧರ್ಮದ ಗ್ರಹಿಕೆಗಳನ್ನು ತುಂಬಾ ಸೂಕ್ಷ್ಮ ನೆಲೆಯಲ್ಲಿ ಅವಲೋಕಿಸುತ್ತಾರೆ. ಅವರು ದಲಿತರ ಶೋಷಿತ ಅವಮಾನಿತ ಸಂಸ್ಕೃತಿಯಿಂದ ವಿಮೋಚನೆ ಹೊಂದುವ ಜೊತೆಗೆ ಮೇಲ್ಜಾತಿಯವರೂ ಸಾಂಸ್ಕೃತಿಕ ವಿಮೋಚನೆ ಹೊಂದುವ ಅನಿವಾರ್ಯತೆ ಅನಾವರಣಗೊಳಿಸುತ್ತಾರೆ. ಅವರು ದಲಿತ ಚಳವಳಿ ಸ್ವರೂಪದ ಬಗ್ಗೆ ಪರಾಮರ್ಶೆ ಮಾಡುತ್ತಾ 'ದಲಿತ ಸಂಘರ್ಷ ಸಮಿತಿಯ ಸಾಂಸ್ಕೃತಿಕ ನಾಯಕತ್ವಕ್ಕೆ ತಮ್ಮ ನೈತಿಕ ಹೋರಾಟ ಸರ್ವ ವಿಧದಲ್ಲೂ ಒಂದು ಆಧ್ಯಾತ್ಮ ಹೋರಾಟವೇ ಆಗಿದೆ ಎಂಬ ತಿಳುವಳಿಕೆ ಇದೆ. ಆದರೆ ಈ ತಿಳುವಳಿಕೆ ಚಳವಳಿಯ 'ಸಾಮಾಜಿಕ ನಾಯಕತ್ವಕ್ಕೆ' ಅಷ್ಟಾಗಿ ಇದ್ದಂತಿಲ್ಲ. ಹಿಂದೆ ತಿಳಿಸಿರುವಂತೆ ಅಂಬೇಡ್ಕರ್ ಬೌದ್ಧಮತಕ್ಕೆ ಸೇರಿದ್ದು ಕೂಡ ದಲಿತರ ಆಂದೋಲನದ ಸಂಸ್ಕೃತಿಗೆ ಸ್ವಾಭಿಮಾನ ಮತ್ತು ಆಧ್ಯಾತ್ಮದ ಎರಡು ಮುಖಗಳ ಸತ್ವಯುತ ಪರಂಪರೆಯನ್ನು ಒದಗಿಸಿಕೊಡುವ ಅಂಗವಾಗಿಯೇ. ಎಲ್ಲ ರೀತಿಯಲ್ಲೂ ನ್ಯಾಯಯುತವಾದ ಮನುಷ್ಯನ ಘನತೆಯನ್ನು, ಜಾತಿ ಕಾರಣದಿಂದಲೇ ಕಳೆದುಕೊಂಡಿರುವ ಮೇಲ್ಜಾತಿಯವರಿಗೂ ದೊರಕಿಸಿಕೊಡುವುದರ ಮೂಲಕ ಶತ್ರುವಿನ ಸಾಂಸ್ಕೃತಿಕ ವಿಮೋಚನೆಯ ಆಶಯವನ್ನು ಒಳಗೊಂಡ ನೈತಿಕ ಹೋರಾಟವೇ ಆಧ್ಯಾತ್ಮಿಕ ಹೋರಾಟವಾಗಿದೆಯಷ್ಟೇ. ಆಧ್ಯಾತ್ಮವೆನ್ನುವುದು ಮತಾಂಧರ ಧರ್ಮವಲ್ಲವೆಂಬುದನ್ನು ಸ್ಪಷ್ಟ ಪಡಿಸುವುದೊಳಿತು'[50] ಎಂದು ಹೇಳುತ್ತಾರೆ. ಈ ರೀತಿಯ ಪ್ರಕ್ರಿಯೆ ಅಂದರೆ ಬಿಳಿಯರು ಮತ್ತು ಕರಿಯರ ನಡುವೆ ನಡೆದ ಸಾಂಸ್ಕೃತಿಕ ಸಂಘರ್ಷಗಳಲ್ಲಿ ಕಾಣಬಹುದಾಗಿದೆ ಎಂದು ಹೇಳುತ್ತ ಅಲ್ಲಿ ಅವರು ತಾವು ನೂರಾರು ವರ್ಷ ಶೋಷಿಸಿದ ಕರಿಯರನ್ನು ಬೇರೆ ಎಲ್ಲಿಗೋ ಮಾರಾಟ ಮಾಡುವುದನ್ನು ನಿಲ್ಲಿಸಿದ್ದು ಮುಖ್ಯವಾಹಿನಿಯಲ್ಲಿ ಕರಿಯರಿಗೆ ಸ್ಥಾನ ಕೊಟ್ಟಿರುವುದು ಇವೆಲ್ಲ ಅಸಮಾನತೆ ನೀಡುವಂತೆ ಮಾಡಿದ್ದು ಮುಂದುವರೆದು, ಕರಿಯರು ತಮ್ಮ ಸಾಂಸ್ಕೃತಿಕ ವಿಮೋಚನೆ ಸಾಧಿಸುವಂತೆ ಸಹಕರಿಸುತ್ತಿರುವುದನ್ನು ಗಮನಿಸಬಹುದಾಗಿದೆ. 'ಕರಿಯರ ಸಮಗ್ರ ಅಭಿವೃದ್ಧಿಯಲ್ಲಿ ನಮಮ ಹಿತವೂ ಅಡಗಿದೆ' ಎಂಬುದನ್ನು ಅವರು ಮನಗಂಡಿದ್ದಾರೆ ಅಂತಹ ನಿರೀಕ್ಷೆಯನ್ನೇ ಲಕ್ಷ್ಮೀಪತಿ ಕೋಲಾರ ಅವರು ಸವರ್ಣೀಯರಿಂದ ನಿರೀಕ್ಷಿಸುವಂತೆ ತೋರುತ್ತದೆ. ಆದರೆ ದೇವನೂರು ಮಹಾದೇವ ಅವರು ಅಮೇರಿಕಾದಲ್ಲಿ 'ಕರಿಯರ ಶಿಕ್ಷಣಕ್ಕೆ ಬಳಿಯರು 8.5 ಕೋಟಿ ಡಾಲರುಗಳಷ್ಟು ವಂತಿಗೆ ನೀಡಿದ್ದಾರೆ. ಆದರೆ 'ಭಾರತದಲ್ಲಿ ಇದನ್ನು ನೆನಪಿಸಿಕೊಳ್ಳಲು ಸಾಧ್ಯವಿಲ್ಲ, ಡಾ. ಅಂಬೇಡ್ಕರ್‌ರವರು 1932 ಹರಿಜನ ಸೇವಕ ಸಂಘದ ಠಕ್ಕರ್ ಬಾಪಾ ಅವರಿಗೆ ಬರೆದ ಪತ್ರದಲ್ಲಿ ಶ್ರೀ ಸವರ್ಣೀಯ ಹಿಂದುಗಳು ಅಸ್ಪೃಶ್ಯರನ್ನು (ಕರಿಯರಂತೆ) ಸೇವಕರನ್ನಾಗಿಯಾದರೂ ಮಾಡಿಕೊಂಡು ಮನೆಯೊಳಕ್ಕೆ ಬಿಟ್ಟುಕೊಳ್ಳುವಂತಾಗಲು ಪ್ರೇರಣೆ ನೀಡಿರಿ'' ಎಂದು ವಿನಂತಿಸುತ್ತಾರೆ. ಈ ವಿನಂತಿ ಯಾತನಮಯವಾಗಿ ಸವರ್ಣೀಯರ ಭಾರತದ ಸಾಮಾಜಿಕ ಪರಿಸ್ಥಿತಿಯಲ್ಲಿ ಇದೂ ಪ್ರಗತಿಯ ಕಡೆಗೆ ಇಟ್ಟ ಒಂದು ಹೆಜ್ಜೆಯಾಗುತ್ತದೆ. ಹಳ್ಳಿಗಾಡಿನಲ್ಲಿ ಸವರ್ಣಿಯರ ಮನೆಗೆ ಅಸ್ಪೃಶ್ಯರ ಪ್ರವೇಶ ಇಂದಿಗೂ ಕನಸಿನ ಮಾತು. ಭಾರತದ ಮುಕ್ಕಾಲು ಭಾಗವಿರುವ ಹಳ್ಳಿಗಾಡಿನಲ್ಲಿ ಸಮಾಜದಿಂದ ಹೊರಕ್ಕೆ ಎಸೆಯಲ್ಪಟ್ಟ ಅಸ್ಪೃಶ್ಯರ ನಿರ್ಬಂಧ, ನಿಷೇಧ, ಪ್ರತ್ಯೇಕತಾ ಭೇದಗಳು ಜೀವಂತವಾಗಿದೆ''[51] ಎಂದು 'ಜಾತಿ' ಆಧಾರಿತ ಸಾಂಸ್ಕೃತಿಕ ವೈರುಧ್ಯವನ್ನು ವಿಶ್ಲೇಷಿಸುತ್ತಾರೆ.

ಲಕ್ಷ್ಮೀಪತಿ ಕೋಲಾರ ಅವರು ಪ್ರತಿಪಾದಿಸಿದ 'ಮೇಲ್ವರ್ಗದ ಸಾಂಸ್ಕೃತಿಕ ಬಂಧನ' ಮತ್ತು ದಲಿತರ ಸಾಂಸ್ಕೃತಿಕ ವಿಮೋಚನೆಯ ಪ್ರಶ್ನೆಗೆ ಸಾಹಿತಿ ಶ್ರೀ ದೇವನೂರು ಮಹಾದೇವ ಅವರು ಉತ್ತರ ನೀಡಿದಂತಾಗಿದೆ.

ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಧೋರಣೆಯನ್ನು ವಿಶ್ಲೇಷಿಸುವಾಗ ಈ ರೀತಿ ಮೇಲಿನ ಇಬ್ಬರು ದಲಿತ ವಕ್ತಾರರ ಹೇಳಿಕೆಗಳು ನಮಗೆ ವಿಷಯದ ಸೂಕ್ಷ್ಮತೆಯನ್ನು ಪರಿಚಯಿಸುತ್ತವೆ. ಆದರೆ ದಲಿತ ಚಳವಳಿ ಮುಂದೆ ತೆಗೆದುಕೊಳ್ಳಬೇಕಾದ ನಿಲುವನ್ನು ವಿವರಿಸುತ್ತಾ ದಲಿತ ಚಳವಳಿಯು ಈ ಸಂಕ್ರಮಣಾವಸ್ಥೆಯಲ್ಲಿ . . ಪರಸ್ಪರ 'ನಂಬಿಕೆ' ಮತ್ತು 'ಆಧ್ಯಾತ್ಮ' ವೆಂಬುದು ಪ್ರತಿಯೊಬ್ಬರ ಮನಸ್ಸಿನ ಸ್ಥಿತಿಯಾಗಬೇಕಾಗಿದೆ.'[52] ಎಂದು ಹೇಳುತ್ತಾರೆ. ಆಧ್ಯಾತ್ಮವೆಂದರೆ ಈ ಮೊದಲೇ ವಿವರಿಸಿದಂತೆ 'ಅಂಬೇಡ್ಕರ್‌ರವರ ಸಾಂಸ್ಕೃತಿಕ ವಿಮೋಚನೆಯ ಮಾದರಿ' ಎಂದು ಖಂಡಿತವಾಗಿ ಹೇಳಬಹುದು. ಸಾಹಿತಿಗಳಾದ ಶ್ರೀ ದೇವನೂರು ಮಹಾದೇವ ಅವರು ಸಂದರ್ಶನವೊಂದರಲ್ಲಿ 'ಕೊನೆಗೊಳ್ಳದ ಮುಖ ಪಡೆದಿರುವ ಜಾತೀಯತೆಯ ಬಗ್ಗೆ' ಕೇಳಿದ ಪ್ರಶ್ನೆಗೆ (ಎನ್.ಎಸ್. ಪುಷ್ಪಾ)

"ಜಾತಿ ಎಂಬುದು ಮಿದುಳಿಗೆ ಬದಲು ಸವರ್ಣೀಯರು ತಮ್ಮ ತಲೆ ಒಳಗೆ ತುಂಬಿಕೊಂಡಿರುವ ಮಲ. ಮೊದಲು ಇದನ್ನು ಅವರಿಗೆ ಅರಿವಾಗಿಸಬೇಕು. ಆ ಮೇಲೆ ಆಸ್ತಿ ಸಂಬಂಧಿಸಿ ಮಿಳಿತವಾಗಿರುವ ಜಾತತ್ವ ತೆಗೆಯುವ ಕಡೆ ಹೋರಾಟವಾಗಬೇಕು" ಎನ್ನುತ್ತಾರೆ. ಆಗ ಸಂದರ್ಶಕರು 'ನಿಮ್ಮ ಜಾತಿಯ ಬಗ್ಗೆ ನಿಮಗೆ ಕೀಳರಿಮೆ ಇತ್ತಾ? ಇದೆಯಾ? ಎಂಬ ಪ್ರಶ್ನೆಗೆ (ಎನ್. ಎಸ್. ಪುಷ್ಪಾ) ಇತ್ತು. "ಈಗ ಮೇಲರಿಮೆ ಇದೆ, ನನ್ನ ಜಾತಿ ಯಾರನ್ನೂ ಕೊಂದಿಲ್ಲ, ಅವಮಾನಿಸಿಲ್ಲ ಸುಲಿದಿಲ್ಲ ತಿಂದಿಲ್ಲ" ಎನ್ನುತ್ತಾರೆ.

'ಮತಾಂತರ ಇದಕ್ಕೆ ಪರಿಹಾರ ಮಾರ್ಗ ಅಂತ ಅಂದ್ಕೋಡಿದ್ದೀರಾ? ಎಂಬ ಪ್ರಶ್ನೆಗೆ (ಪ್ರಹ್ಲಾದ್) 'ನಾನು ವೈಯಕ್ತಿಕವಾಗಿ ಇಡೀ ಭಾರತವೇ ಬೌದ್ಧಮಯವಾಗಬೇಕು ಅನ್ನುವವ. ಈ ಬೌದ್ಧ ಧರ್ಮವೂ ಒಂದು ಸಂಸ್ಥೆಯಾಗಿ ಕೊಳಕಾಗಬಾರದು ಎಂದು ಆಶಿಸುವವ. ಆದರೆ ನಮ್ಮ ಅಸ್ಪೃಶ್ಯ ಜನಾಂಗ ಹಿಂದೂ ಧರ್ಮದ ಮೇಲಿನ ಸೇಡಿನ ಸಲುವಾಗಿ ಮುಸ್ಲಿಂ ಕಡೆವಾಲುತ್ತಿದೆ. ಹಿಂದೂ ಕ್ರೌರ್ಯ ಕಂಡರೆ ಬೇಡವೆನ್ನಲಾರೆ"[53] ಎಂದು ದಲಿತ ಎನ್ನುವ ಪದವನ್ನು ಹೆಚ್ಚು ವ್ಯಾಪ್ತಿಯನ್ನುಳ್ಳ ಪರಿಕಲ್ಪನೆಯಾಗಿ ಉಪಯೋಗಿಸಬಹುದೆ? ಎಂಬ ಮಾವಳ್ಳಿ ಶಂಕರ ಅವರ ಪ್ರಶ್ನೆಗೆ, ದೇವನೂರು ಮಹಾದೇವ 'ದಲಿತ ಎಂದರೆ ಅಸ್ಪೃಶ್ಯರೊಡನೆ ಇತರೇ ಅವಮಾನಿತ ಪಂಗಡಗಳನ್ನು ಒಳಗೊಳಿಸಬಹುದು ಅಷ್ಟೇ. ದಲಿತ ಎಂದರೆ ಬಡವರು ಎಂದು ಸಮೀಪಿಸುವವರು ಸಾಂಸ್ಕೃತಿಕ ತುಳಿತದ ಭೀಕರತೆಯ ಅರಿವಿಲ್ಲದವರು ಅಷ್ಟೇ, ಅಷ್ಟೇಯಾಕೆ ಮಾರ್ಕ್ಸ್ ಕೂಡ ಭಾರತದ ಅಸ್ಪೃಶ್ಯರನ್ನು 'ಕಠಿಣ ಶ್ರಮಜೀವಿ' ಗಳು ಅನ್ನುತ್ತಾನೆ. ಒಂದು ಜಾತಿ ಒಗ್ಗಟ್ಟಾಗುವುದು ಅಸಮಾನತೆಯನ್ನು ಹೆಚ್ಚು ಮಾಡುತ್ತದೋ, ಕಮ್ಮಿ ಮಾಡುತ್ತದೋ ಎಂಬುದರಿಂದ ಇದನ್ನು ಅಳೆಯಬೇಕು'[54] ಎನ್ನುತ್ತಾರೆ.

ಇಂತಹ ವೈಚಾರಿಕವಾದ ಸೈದ್ಧಾಂತಿಕ ಸಂವಾದಗಳ ಮುಂದುವರಿಕೆಯಾಗಿಯೇ ಕರ್ನಾಟಕ ದಲಿತ ಸಂಘರ್ಷ ಸಮಿತಿ 1990 ರ ದಶಕದಲ್ಲಿ ಬೌದ್ಧ ಧರ್ಮವನ್ನು ದಲಿತರ ಸಾಂಸ್ಕೃತಿಕ ಐಡೆಂಟಿಟಿಯಾಗಿ ಪರಿಗಣಿಸಿದ್ದನ್ನು ನಾವು ಕಾಣುತ್ತೇವೆ. 1997 ರಿಂದ ಸತತವಾಗಿ ಬೌದ್ಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿದೆ. ಅದರಲ್ಲಿ ಪ್ರಮುಖವಾಗಿ,

1. ಬುದ್ಧ ಬರಲಿ ನಮ್ಮ ಊರಿಗೆ, ಎಂಬ ರಾಜ್ಯಾದ್ಯಂತ ಅರಿವಿನ ಜಾಥಾ ಕಾರ್ಯಕ್ರಮ ವಿಚಾರ ಸಂಕಿರಣಗಳು ಮತ್ತು ಪುಸ್ತಕ ಪ್ರಕಟನೆ (ಅನುಬಂಧ -1, ಚಿತ್ರ : 54 ಮತ್ತು 55 ಗಮನಿಸಿ).

2. ''ಬೌದ್ಧ ಭಾರತ'' ವಿಚಾರ ಸಂಕಿರಣ (1997)

3. 'ಸಂಬುದ್ಧ', 'ಸಂಘರ್ಷ' ಪತ್ರಿಕೆಗಳ ಮೂಲಕ ಡಾ. ಅಂಬೇಡ್ಕರ್‌ರವರ ಮತ್ತು ಬೌದ್ಧ ಧರ್ಮ ಕುರಿತ ಲೇಖನಗಳು : ಪ್ರಕಟನೆ, ಪ್ರಚಾರ.

4. 'ಬುದ್ಧ ಜಯಂತಿ' ಪ್ರಯುಕ್ತ 'ಬುದ್ಧ ಬೆಳಗಲಿ ಮಾನವತೆ ಅರಳಲಿ, ಎನ್ನುವ ರಾಜ್ಯಮಟ್ಟದ ವಿಚಾರ ಸಂಕಿರಣ.

ಹೀಗೆ ಅನೇಕ ಕಾರ್ಯ ಚಟುವಟಿಕೆಗಳ ಮೂಲಕ ಬೌದ್ಧ ಧಮ್ಮವನ್ನು ದಲಿತರ ಸಾಂಸ್ಕೃತಿಕ ವಿಮೋಚನೆಯ ಸಾಧನವಾಗಿ ಎಲ್ಲ ಶೋಷಿತ ಸಮುದಾಯಗಳ ಐಕ್ಯತೆಯ ಕಾರ್ಯತಂತ್ರವಾಗಿ ಬೌದ್ಧ ಧಮ್ಮ ತತ್ವಗಳನ್ನು ಪ್ರಸಾರ ಮಾಡುತ್ತಿದೆ. ಇಲ್ಲಿ ಅತ್ಯಗತ್ಯವಾಗಿ ದಾಖಲಿಸಬೇಕಾದ ಸಂಗತಿಯೆಂದರೆ, ಬೌದ್ಧ ಧಮ್ಮವನ್ನು ಗ್ರಾಮ ಗ್ರಾಮಗಳಿಗೂ ಕೊಂಡೊಯ್ಯುತ್ತಿರುವುದು ಆ ಮೂಲಕ ಹಳ್ಳಿಗಾಡಿನಲ್ಲಿಯೂ ಮಹಾರಾಷ್ಟ್ರದಂತೆ ಗ್ರಾಮ ಬೌದ್ಧ ಧಮ್ಮ ಬೆಳೆಸುತ್ತಿರುವುದು ಪ್ರಮುಖವಾಗಿದೆ.

ಇತ್ತೀಚಿಗೆ ಕರ್ನಾಟಕದ ಎಲ್ಲಾ ದಲಿತ, ಸಂಘಟನೆಗಳು ಬೌದ್ಧ ಸಂಘಟನೆಗಳೊಂದಿಗೆ ಬೆಂಗಳೂರಿನಲ್ಲಿ ಬೌದ್ಧ ಧಮ್ಮ ದೀಕ್ಷಾ ಸಮಾರಂಭದ ಸಂಘಟನೆಗೂ ಕೂಡಿ ಕೆಲಸ ಮಾಡಿರುವುದು 'ಬೌದ್ಧ ಧಮ್ಮದ ಮೂಲಕ ದಲಿತರ ಸಮಗ್ರ ವಿಮೋಚನೆಯ ಸಾಧನೆಗೆ ಹಾಕುತ್ತಿರುವ ಹೆಜ್ಜೆ ಗುರುತುಗಳನ್ನು ಸೂಚಿಸುತ್ತದೆ.

## 'ಬುದ್ಧ ಭಾರತ ನಿರ್ಮಾಣ' ದ ಸಂಕಲ್ಪ :

ಮೂಲದ ಕರ್ನಾಟಕ ದಲಿತ ಸಂಘರ್ಷ ಸಮಿತಿಯಿಂದ ಸೈದ್ಧಾಂತಿಕ, ಕಾರ್ಯತಂತ್ರಾತ್ಮಕ ಭಿನ್ನಾಭಿಪ್ರಾಯಗಳಿಂದ ಪ್ರತ್ಯೇಕಗೊಂಡು ಕಾರ್ಯನಿರ್ವಹಿಸುತ್ತಿರುವ ಮಾವಳ್ಳಿ ಶಂಕರ ಮತ್ತು ಇತರರು ಕೂಡಿ ಕೆಲಸ ಮಾಡುತ್ತಿರುವ ಕರ್ನಾಟಕ ದಲಿತ ಸಂಘರ್ಷ ಸಮಿತಿ (ರಿ) ಅಂಬೇಡ್ಕರ್‌ವಾದ ಸಂಘಟನೆಯು ಸ್ಪಷ್ಟವಾಗಿ ದಲಿರಿಗಷ್ಟೇ ಏಕೆ ಇಡೀ ಭಾರತ ಬೌದ್ಧಮಯವಾಗಬೇಕೆಂಬ ಸಂಕಲ್ಪವನ್ನು ಹೊಂದಿದೆ. ಅನೇಕ ವಿಚಾರ ಸಂಕಿರಣ, ಕಮ್ಮಟ, ಅರಿವಿನ ಕಾರ್ಯಕ್ರಮಗಳ ಮೂಲಕ ದಲಿತರು ಬೌದ್ಧ ರೀತಿಯ ಜೀವನಕ್ಕೆ ಬರಲು ವ್ಯಾಪಕ ಪ್ರಯತ್ನ ಮಾಡುತ್ತಿದೆ. 'ಅಂಬೇಡ್ಕರ್‌ವಾದ' ಪತ್ರಿಕೆ ಒಂದು ಅರ್ಥದಲ್ಲಿ ಕರ್ನಾಟಕದಲ್ಲಿ ಧಮ್ಮದ ಮತ್ತು ''ದಲಿತರ ಧಾರ್ಮಿಕ ಸ್ವಾತಂತ್ರ್ಯದ ಮುಖವಾಣಿ'' ಯಂತೆ ಹೊರಬರುತ್ತಿರುವುದು ಗಮನಾರ್ಹವಾಗಿದೆ. (ಅನುಬಂಧ - 1 ರ ಚಿತ್ರ : 67 ಮತ್ತು 68 ನ್ನು ನೋಡಿ) ಮೂಲ ಡಿ. ಎಸ್.ಎಸ್. ಪ್ರಣಾಳಿಕೆ, ಸದಸ್ಯತ್ವದ ನಿಬಂಧನೆಗಳು, ಆಶಯಗಳನ್ನೇ ಹೊಂದಿದ್ದರೂ ಅದಕ್ಕಿಂತ ವಿಭಿನ್ನವಾಗಿ, ದಲಿತ ವಿಮೋಚನೆಯ, ದಲಿತ ಚಳವಳಿಯ ಮುಂದುವರೆದ ಕಾಲಘಟವನ್ನು ಸೂಚಿಸುವ ರೀತಿಯಲ್ಲಿ ಸದಸ್ಯತ್ವಕ್ಕೆ ನಿಬಂಧನೆ ವಿಧಿಸಲಾಗಿದೆ. ನಿರ್ಬಂಧನೆಗಳು ಈ ಕೆಳಗಿನಂತಿವೆ'[55].

1) ದಲಿತ ಸಂಘರ್ಷ ಸಮಿತಿ ಸದಸ್ಯತ್ವ ಹೊಂದಲು 18 ವರ್ಷಕ್ಕೆ ಮೇಲ್ಪಟ್ಟವರಾಗಿರಬೇಕು. ಸದಸ್ಯತ್ವ ಪಡೆದ ದಿನದಿಂದ ಒಂದು ವರ್ಷದ ಒಳಗೆ ನವೀಕರಣಗೊಳಿಸಬೇಕು.

2) ಡಾ. ಬಾಬಾಸಾಹೇಬ ಅಂಬೇಡ್ಕರ್ ವಾದದಲ್ಲಿ ನಂಬಿಕೆ ಇಟ್ಟು ನಮ್ಮ ವಿಮೋಚನಾ ಹೋರಾಟವನ್ನು ಮುನ್ನೆಡೆಸುವುದು.

3) ಬೌದ್ಧ ಧರ್ಮದ ಆಶಯಗಳನ್ನು ನಮ್ಮ ದಿನ ನಿತ್ಯದ ಬದುಕಿನಲ್ಲಿ ಅಳವಡಿಸಿಕೊಳ್ಳುವುದು.

4) ಬ್ರಾಹ್ಮಣ (ಹಿಂದೂ) ಧರ್ಮದ ಮೌಲ್ಯಗಳನ್ನು ಮತ್ತು ಆಚರಣ ಪದ್ಧತಿಗಳನ್ನು ತಿರಸ್ಕರಿಸುವುದು.

5) ರಾಷ್ಟ್ರ, ಅಂತರರಾಷ್ಟ್ರೀಯ ಮಟ್ಟದಲ್ಲಿ ನಡೆಯುವ ಸಮಾನತಾ ಹೋರಾಟಗಳನ್ನು ಬೆಂಬಲಿಸುವುದು.

6) ಬಹುಜನ ಸಮಾಜ ನಿರ್ಮಾಣದಲ್ಲಿ ನಂಬಿಕೆ ಇಡುವುದು.

7) ಲಿಂಗ ಭೇದದ ತಾರತಮ್ಯವನ್ನು ಧಿಕ್ಕರಿಸುವುದು.

8) ವರ್ಗರಹಿತ, ಜಾತಿ ರಹಿತ, ಸಮ ಸಮಾಜ ನಿರ್ಮಾಣ ಮಾಡುವುದು.

ಈ ಮೇಲಿನ ನಿಬಂಧನೆಗಳಲ್ಲಿ ಸ್ಪಷ್ಟವಾದ ನಿಲುವು, ಅಂಬೇಡ್ಕರ್‌ರವರ ವಿಚಾರಗಳಲ್ಲಿ ಬದ್ಧತೆ ಮತ್ತು ಬೌದ್ಧ ಧಮ್ಮದ ಕಾಳಜಿ ವ್ಯಕ್ತವಾಗಿರುವುದನ್ನು ಕಾಣುತ್ತೇವೆ. ಕರ್ನಾಟಕ ದಲಿತ ಸಂಘರ್ಷ ಸಮಿತಿ (ರಿ), (ಅಂಬೇಡ್ಕರ್‌ವಾದ) ಸಂಘಟನೆಯ ರಾಜ್ಯ ಸಂಚಾಲಕರು ಅಂಬೇಡ್ಕರ್‌ವಾದ ಮಾಸಪತ್ರಿಕೆಯ ಸಂಪಾದಕರೂ ಆದ ಮಾವಳ್ಳಿ ಶಂಕರ್ ಅವರು ಬಿ. ಕೃಷ್ಣಪ್ಪನವರ ನಂತರ ಬೌದ್ಧ ಧರ್ಮ ಪ್ರಸಾರವನ್ನು ಗಂಭೀರವಾಗಿ ಪರಿಗಣಿಸಿ ಕಾರ್ಯನಿರ್ವಹಿಸುತ್ತಿರುವುದನ್ನು ಕಾಣುತ್ತೇವೆ. ಎಲ್ಲಾ ದಲಿತ ಸಂಘಟನೆಗಳ ನಾಯಕರುಗಳು, ಹಿರಿಯ ಬೌದ್ಧ ವಿಧ್ವಾಂಸರಗಳನ್ನು ಸಂಘಟಿಸಿ, 'ಬುದ್ಧ ಧಮ್ಮ ದೀಕ್ಷಾ ಸಮಾರಂಭದ ಸಿದ್ಧತಾ' ಸಮಿತಿಯಲ್ಲಿ ಸಕ್ರೀಯವಾಗಿ ಕಾರ್ಯ ನಿರ್ವಹಿಸಿ ದಲಿತ ಚಳವಳಿಯ ಕಾರ್ಯಕರ್ತರು ಬೌದ್ಧ ದೀಕ್ಷೆ ಪಡೆಯುವಂತೆ ಮಾಡಿದ್ದಾರೆ. ನಾಗಪೂರ ದೀಕ್ಷಾ ಭೂಮಿಗೆ ಕಾರ್ಯಕರ್ತರನ್ನು ಕಳುಹಿಸುತ್ತಿದ್ದಾರೆ. ಬೌದ್ಧ ಆಚರಣೆಗಳ ಮೂಲಕ ದಲಿತರು ತಮ್ಮ ಜೀವನದಲ್ಲಿ ಉನ್ನತಿ ಸಾಧಿಸಲು ಪ್ರೇರಣೆ ನೀಡುತ್ತಿದ್ದಾರೆ. 'ಬುದ್ಧ ಭಾರತದ ನಿರ್ಮಾಣ ಸಂಕಲ್ಪ' ಹೊಂದಿದ ಅವರು 'ಇಂದಿನ ವಿಷಮ ಸಮಸ್ಯೆಗಳಿಂದ ಬಿಡುಗಡೆಯಾಗಲು ಭಾರತ ದೇಶ ಬೌದ್ಧ ಧರ್ಮ ಸ್ವೀಕರಿಸಬೇಕು' ನೈತಿಕ ತತ್ವಗಳ ತಳಹದಿಯ ಮೇಲೆ ನಿಂತ ಧರ್ಮ ಎಂದರೆ ಬೌದ್ಧ ಧರ್ಮ ಒಂದೇ. ಸಾಮಾನ್ಯ ಮಾನವರ ಒಳಿತಿಗಾಗಿ, ಶ್ರೇಯಸ್ಸಿಗಾಗಿ ಹೇಗೆ ಶ್ರಮಿಸಬೇಕು ಎಂಬುದನ್ನು ಬೌದ್ಧ ಧರ್ಮ ಸೂಚಿಸುತ್ತದೆ'[56] ಎಂದು ತಮ್ಮ ಆಶಯಗಳನ್ನು ಕರ್ನಾಟಕದ ದಲಿತ ಚಳವಳಿಯ ಬೌದ್ಧ ಧರ್ಮವನ್ನು 'ದಲಿತರ ಧಾರ್ಮಿಕ, ಸಾಂಸ್ಕೃತಿಕ ವಿಮೋಚನೆಯ ಸಾಧನವಾಗಿ ಪರಿಕಲ್ಪಿಸುವುದರ ಜೊತೆಗೆ ಹಿಂದಿಗಿಂತಲೂ ಪ್ರಸ್ತುತ ಘಟ್ಟದಲ್ಲಿ ಬೌದ್ಧ ಧರ್ಮವನ್ನು ಸ್ವೀಕರಿಸಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಅಂಬೇಡ್ಕರ್‌ರವರು 'ಬಹಿಷ್ಕೃತ' ಅಸ್ಪೃಶ್ಯರನ್ನು 'ಬೌದ್ಧರೆಂದು ಗುರುತಿಸಿದ ಚಾರಿತ್ರಿಕ ಪಥದಲ್ಲಿ ನಡೆಯುತ್ತ ಇಂದು 'ಪ್ರತ್ಯೇಕ

ಸ್ತಾನ್' 'ದಲಿತ ಸ್ತಾನ್' ಬೇಡಿಕೆಯಿಂದ ಶೋಷಕ ವ್ಯವಸ್ಥೆಯನ್ನು ಎಚ್ಚರಿಸಿ 'ಬುದ್ಧ ಭಾರತದ ಸಂಕಲ್ಪ' ದೊಂದಿಗೆ 'ಪ್ರಬುದ್ಧ ಭಾರತ' ದ ನಿರ್ಮಾಣಕ್ಕೆ ಶ್ರಮಿಸುತ್ತಿರುವುದು ಭಾರತದ ಶೋಷಿತರ ಚಳವಳಿಯ ಮಹತ್ವದ ಆಯಾಮವಾಗಿದೆ ಹಾಗೂ ವಿಶಿಷ್ಟವಾದ ಪ್ರಕ್ರಿಯೆಯಾಗಿದೆ. ಇಂದು 'ಬೌದ್ಧ ಧರ್ಮ' ದ ಕುರಿತು ತುಂಬಾ ಗಂಭೀರವಾಗಿ ಕಾರ್ಯ ಚಟುವಟಿಕೆಗಳನ್ನು ಕರ್ನಾಟಕದ ದಲಿತ ಚಳವಳಿ ಹಮ್ಮಿಕೊಂಡು ಮಹಾರಾಷ್ಟ್ರಕ್ಕಿಂತ ಹೆಚ್ಚಿನ ಸ್ಪಷ್ಟತೆ, ವಿಶಿಷ್ಟತೆ ಕಂಡು ಬರುತ್ತಿರುವುದು ಗಮನಿಸಬೇಕಾದ ಅಂಶವಾಗಿದೆ.

## 'ದಲಿತ ಸ್ತಾನ್' ಬೇಡಿಕೆಯಿಂದ - ಪ್ರಬುದ್ಧ ಭಾರತ ಪ್ರತಿಪಾದನೆಯವರೆಗೆ' :

ಮೊದಲು ಅಂಬೇಡ್ಕರ್‌ರವರು ಪ್ರತ್ಯೇಕ ಚುನಾವಣಾ ಕ್ಷೇತ್ರಗಳಿಗೆ ಬೇಡಿಕೆ ಇಟ್ಟರು. ಭೂಮಿಯನ್ನು ರಾಷ್ಟ್ರೀಕರಣ ಮಾಡಲು ಒತ್ತಾಯಿಸಿದರು. ಸಾಂಸ್ಕೃತಿಕ ಸ್ವಾಯತ್ತತೆಯನ್ನು ಸಾಧಿಸಲು ಬೌದ್ಧ ಧರ್ಮಕ್ಕೆ ಮತಾಂತರಗೊಂಡು 'ಬೌದ್ಧ ಭಾರತ' ಪ್ರತಿಪಾದಿಸಿದರು. ಅಂಬೇಡ್ಕರ್‌ರವರ ನಂತರ ಅವರ ವಿಚಾರಗಳಿಂದ ಪ್ರೇರಿತರಾಗಿ ಸವರ್ಣೀಯರಲ್ಲಿ ನಡುಕ ಹುಟ್ಟಿಸುವ ಉಗ್ರ ದಲಿತ ಹೋರಾಟ ರೂಪಿಸಿದವರು ಬಿ. ಶ್ಯಾಮಸುಂದರ ಅವರು. ಅವರು ಅಂಬೇಡ್ಕರ್‌ರವರ ಪ್ರತ್ಯೇಕ ಚುನಾವಣಾ ಕ್ಷೇತ್ರದ ಪ್ರಸ್ತಾಪದ ಮಾದರಿಯಲ್ಲೇ 'ದಲಿತರು ಸಮಗ್ರ ಅಭಿವೃದ್ಧಿ' ಸಾಧಿಸಲು ದಲಿತರಿಗೆ ಪ್ರತ್ಯೇಕ ರಾಷ್ಟ್ರದ ಅವಶ್ಯಕತೆಯ 'ದಲಿತ ಸ್ತಾನ್' ಬೇಡಿಕೆ ಪ್ರತಿಪಾದಿಸಿದರು. ಇದು ಅಂಬೇಡ್ಕರ್‌ರವರ ಹೋರಾಟದ ಕಾರ್ಯತಂತ್ರದಿಂದ ಇನ್ನೂ ಮುಂದೆ ಹೋಗಿ ತೆಗೆದುಕೊಂಡ ನಿರ್ಧಾರವಾಗಿತ್ತೆಂದು'[57] ಡಾ. ಮನೋಹರ ಯಾದವ ಅಭಿಪ್ರಾಯ ಪಡುತ್ತಾರೆ. ಬಿ. ಶ್ಯಾಮಸುಂದರ ಅವರು 1, ಜನೇವರಿ 1965 ರಂದು ನಾಂದೇಡದಲ್ಲಿ ನಡೆದ ಅಖಿಲ ಭಾರತ ಪರಿಶಿಷ್ಟ ಜಾತಿಗಳ ಪ್ರತಿನಿಧಿ ಸಭಾ' ದ ಸಮ್ಮೇಳನಕ್ಕೆ ಆಗಮಿಸಿದ ಎಲ್ಲಾ ರಾಜ್ಯಗಳ ಪ್ರತಿನಿಧಿಗಳ ಅಭಿಪ್ರಾಯ ಕ್ರೋಢೀಕರಿಸಿ 'ಭಾರತದ 12 ಕೋಟಿ (ಅಂದಿನ ಸಂದರ್ಭದಲ್ಲಿ) ಶೋಷಿತ ಮಾನವ ಜೀವಿಗಳ ನಾಲ್ಕು ತುರ್ತು ಅವಶ್ಯಕತೆಗಳನ್ನು ರೂಪಿಸಿ ನಿರ್ಣಯ ತೆಗೆದುಕೊಳ್ಳುತ್ತಾರೆ.

ಈ ನಿರ್ಣಯಗಳನ್ನು 1968 ರಲ್ಲಿ ಮತ್ತೇ ನಾಂದೇಡನಲ್ಲಿ ಬಿ. ಶ್ಯಾಮಸುಂದರ ಅವರ ಅಧ್ಯಕ್ಷತೆಯಲ್ಲಿ ಪುನರ್ ರಚಿತಗೊಂಡ 'ಅಖಿಲ ಭಾರತ ಪರಿಶಿಷ್ಟ ಜಾತಿಗಳ ಫೆಡರೇಷನ್' ನಲ್ಲಿ ಮಂಡಿಸಿ ನಿರ್ಣಯಿಸಿರುತ್ತಾರೆ. ನಾಲ್ಕು ತುರ್ತು ಅಗತ್ಯಗಳು (The Four Immediate Needs) ಶೀರ್ಷಿಕೆಯಲ್ಲಿ ಪ್ರಕಟವಾದ ಈ ನಿರ್ಣಯಗಳನ್ನು ಪುಸ್ತಕ ರೂಪದಲ್ಲಿ ಮುದ್ರಿಸಿ ರಾಷ್ಟ್ರದ ಮುಂದೆ ಮಂಡಿಸುತ್ತಾರೆ[58] ಹಾಗೂ ಎಲ್ಲ ಮಹತ್ವದ ಪ್ರಾಧಿಕಾರಗಳ ಗಮನಕ್ಕೆ ತರುತ್ತಾರೆ.

### 1. ಹೊಸ ಅಧ್ಯಾಯ ತೆರೆಯೋಣ :

ಸಾಮಾಜಿಕವಾಗಿ ಪ್ರತ್ಯೇಕ ಮಾಡಿದ ನಮ್ಮನ್ನು ಭೌಗೋಳಿಕವಾಗಿ ಪ್ರಾದೇಶಿಕವಾಗಿಯೂ ಹೊರಗಿಡುವ ಸಲುವಾಗಿ ಪ್ರತಿಯೊಂದು ತಾಲೂಕು, ಮತಕ್ಷೇತ್ರದಲ್ಲಿ ಪ್ರತಿಶತ 25% ರಷ್ಟು ಹಳ್ಳಿಗಳನ್ನು ಪರಿಶಿಷ್ಟ ಜಾತಿಯ ಜನರಿಗೆ ಬಿಟ್ಟುಕೊಡಬೇಕು. ಇದರಿಂದ ದಿನವೂ ಸವರ್ಣೀಯರ ದಬ್ಬಾಳಿಕೆ, ಅಸ್ಪೃಶ್ಯತೆಯ

ಅಸ್ಪೃಶ್ಯತೆಯ ಆಚರಣೆಗೆ ಅಂತ್ಯಹಾಡಬಹುದಾಗಿದೆ. ಇದು ಶೋಷಿತರ ಹಿತದೃಷ್ಠಿಯಿಂದ ಎನ್ನುವುದಕ್ಕಿಂತಲೂ ರಾಷ್ಟ್ರದ ಹಿತದೃಷ್ಠಿಯಿಂದ ಮುಖ್ಯವಾಗಿದೆ.

'ಹೀಗೆ ಪ್ರತ್ಯೇಕಿಸುವ ಹಳ್ಳಿಗಳಲ್ಲಿನ ಸವರ್ಣಿಯರ ಆಸ್ತಿಗಳನ್ನು ಸರ್ಕಾರ ಸ್ವಾಧೀನ ಪಡಿಸಿಕೊಂಡು ಅವರಿಗೆ ಸೂಕ್ತ ಪರಿಹಾರ ನೀಡಿ ಅಂತಹ ಹಳ್ಳಿಗಳಲ್ಲಿ ಕೇವಲ ದಲಿತರಿಗೆ ಕೊಟ್ಟರೆ, ಅಲ್ಲಿ ಗ್ರಾಮದ ಆಡಳಿತ ಪರಿಶಿಷ್ಟರ ಕೈಯಲ್ಲಿ ಇರುತ್ತದೆ. ಅಲ್ಲಿ 'ನಿಜವಾದ ಸ್ಥಳೀಯ ಸರ್ಕಾರ' (Local Self Government) ಇರುತ್ತದೆ. ಅದು ನಿಜವಾದ ಅರ್ಥದಲ್ಲಿ ಸೂಕ್ತವಾದ ಆಡಳಿತ ವಿಕೇಂದ್ರಿಕರಣ' ವೆಂದು ನಿರ್ಣಯದಲ್ಲಿ ಹೇಳಲಾಗಿದೆ. ಇತ್ತೀಚಿಗೆ ದಲಿತ ಮಹಿಳೆಯರು, ದಲಿತರು ಪಂಚಾಯತಿಗಳ ಅಧ್ಯಕ್ಷರಾದರೂ ಅಲ್ಲಿನ ಆಡಳಿತ ಅವರನ್ನು ಮನಸ್ಪಾರೆ ಒಪ್ಪಿಕೊಳ್ಳದ ಕೆಲವು ಸವರ್ಣೀಯ ಸದಸ್ಯರ ಮನೋಭೂಮಿಕೆಗೆ ಅಂದೇ ಬಿ. ಶಾಮಸುಂದರ ಕನ್ನಡಿ ಹಿಡಿದಂತಿದೆ.

2. ಪರಿಶಿಷ್ಟ ಜಾತಿಯ ಜನರಿಗೆ ಒಂದು ಪ್ರತ್ಯೇಕ ಚುನಾವಣಾ ಕ್ಷೇತ್ರ, ಪ್ರಾತಿನಿಧ್ಯ ಮತ್ತು ಸ್ವ-ಅಭಿವ್ಯಕ್ತಿಗೆ ಬೇಡಿಕೆ ಇವುಗಳನ್ನು ನಿಗದಿ ಪಡಿಸುವಾಗ ಸಂವಿಧಾನದ ವಿಧಿ 325 ಜೊತೆಗೆ 329 ನೇ ವಿಧಿಯನ್ನು ಪರಿಗಣಿಸಬೇಕು. ಜನಸಂಖ್ಯೆಗೆ ಅನುಗುಣವಾಗಿ ರಾಜಕೀಯ ಪ್ರಾತಿನಿಧ್ಯವಿರಬೇಕು.

3. **ಪರಿಶಿಷ್ಟ ಜಾತಿಯ ವಿಶ್ವವಿದ್ಯಾಲಯ :**

ಸ್ವಾತಂತ್ರೋತ್ತರ ಭಾರತದಲ್ಲಿ ಕೇವಲ ಹಿಂದೂ ಧರ್ಮ ಮತ್ತು ಹಿಂದೂ ಸಂಸ್ಕೃತಿಗಳನ್ನೇ ಎಲ್ಲರೂ ಅನುಸರಿಸಬೇಕು ಎನ್ನುವ ವಾತಾವರಣವಿದೆ. ಅವುಗಳನ್ನು ಅನುಸರಿಸುವುದೇ ಉತ್ತಮವೆಂದು ಬಿಂಬಿಸಲಾಗುತ್ತಿದೆ. ಉಳಿದ ಧರ್ಮೀಯರು ಬಹಳ ವರ್ಷಗಳಿಂದ ತಮ್ಮ ತಮ್ಮ ಧರ್ಮಗಳನ್ನು ಅನುಸರಿಸುತ್ತ ಬಂದಿರುವ ಈ ದೇಶದಲ್ಲಿ 'ಯಜಮಾನಿ ಸಂಸ್ಕೃತಿ, ಧರ್ಮದ (Majority Community) ಸಿದ್ಧಾಂತವನ್ನು ಅನುಸರಿಸುವಂತೆ ಒತ್ತಾಯಿಸಿದಂತಾಗಿದೆ. (Indoctrination) ಇದು ನಮ್ಮ ದೇಶದ ಸಂವಿಧಾನದ ಹಿತದೃಷ್ಠಿಯಿಂದ ಒಳ್ಳೇಯದಲ್ಲ, ಸ್ವಾತಂತ್ರ್ಯ ಬಂದು 17 ವರ್ಷಗಳೂ ಕಳೆದರೂ 'ವಿಶ್ವವಿದ್ಯಾಲಯ' ಗಳಿಂದ ಪದವಿ ಪಡೆದು ಹೊರಬರುವ ನೂರಾರು ಕಲೆ, ವಿಜ್ಞಾನ ವಾಣಿಜ್ಯ, ಕಾನೂನು, ವೈದ್ಯಕೀಯ, ಇಂಜನೀಯರಿಂಗ್ ಪಧವೀದರರು ಸವರ್ಣೀಯ ಹಿಂದು ಯುವಕರಿಗೆ ಹೋಲಿಸಿಕೊಂಡು ಇನ್ನೂ ಕೀಳರಿಮೆಯಿಂದ ನರಳುತ್ತಿದ್ದಾರೆ. ಅವರು ದೈಹಿಕವಾಗಿ, ಮಾನಸಿಕವಾಗಿ, ಬೌದ್ಧಿಕವಾಗಿ ಅಶಕ್ತರೆಂದಲ್ಲ ಬದಲಾಗಿ ಹಾಗೆ ಕೀಳರಿಮೆಯ ಜೀವನ ಸಾಗಿಸುವ ಶಿಕ್ಷಣವನ್ನು ನೀಡಲಾಗುತ್ತಿದೆ. ಅವರು ತಮ್ಮಷ್ಟಕ್ಕೆ ತಾವೇ ನಗಣ್ಯತಾ ಭಾವನೆ ಬೆಳೆಸಿಕೊಂಡು ಸಾಮಾಜಿಕ, ಆರ್ಥಿಕ, ರಾಜಕೀಯ ಕ್ಷೇತ್ರದಲ್ಲಿ ತಮ್ಮ ಸ್ಥಾನ ಪಡೆಯುವಲ್ಲಿ ಅಸಫಲರಾಗಿದ್ದಾರೆ. ಅವುಗಳನ್ನು ಭಾವಿಸಲೂ ಅವರಿಂದಾಗುತ್ತಿಲ್ಲ, ವ್ಯಕ್ತಿಯ 'ವೈಯಕ್ತಿಕತೆಯನ್ನು' ಕೊಲ್ಲುವ ಶಿಕ್ಷಣ ಪದ್ಧತಿ ಇರಕೂಡದು.

ಇಂತಹ ದಯನೀಯ ಪರಿಸ್ಥಿತಿಯಿಂದಾಗಿ ನಾವು 'ಪರಿಶಿಷ್ಟ ಜಾತಿಯ ಜನರಿಗಾಗಿಯೇ' ಒಂದು ಪ್ರತ್ಯೇಕ ವಿಶ್ವವಿದ್ಯಾಲಯವನ್ನು ಸ್ಥಾಪಿಸಲು ಕೇಳುತ್ತಿದ್ದೇವೆ. ಈ ರೀತಿಯ ವಿಶ್ವವಿದ್ಯಾಲಯ ಹಾಗೂ ಶಿಕ್ಷಣ ಕ್ರಮಕ್ಕೆ ಈಗಾಗಲೇ ಡಾ. ಅಂಬೇಡ್ಕರ್‌ರವರು ಮುಂಬೈ ಮತ್ತು ಔರಂಗಾಬಾದ್‌ನಲ್ಲಿ ಪ್ರದೇಶದಲ್ಲಿ ಸ್ಥಾಪಿಸಿದ ಮಹಾವಿದ್ಯಾಲಯಗಳು ಸೂಕ್ತ ಮಾದರಿ ಒದಗಿಸಿವೆ. ಆದ್ದರಿಂದ ಸರ್ಕಾರ ಅಂತಹ ಮಹಾವಿದ್ಯಾಲಯಗಳನ್ನು ಹೆಚ್ಚಾಗಿ ಪ್ರಾರಂಭಿಸಿ ಅವುಗಳನ್ನು ಈ ಹೊಸ ಪ್ರತ್ಯೇಕ ವಿಶ್ವವಿದ್ಯಾಲಯಕ್ಕೆ ಸಂಲಗ್ನಗೊಳಿಸಿ ಅದಕ್ಕೆ ಡಾ. ಬಿ.ಆರ್. ಅಂಬೇಡ್ಕರ್ ಅವರ ಹೆಸರಿಡಬೇಕೆಂದು ನಿರ್ಣಯಿಸುತ್ತದೆ. ಆ ನೂತನ ವಿಶ್ವವಿದ್ಯಾಲಯದ ಪಠ್ಯಕ್ರಮ ವ್ಯಕ್ತಿಗಳಲ್ಲಿ 'ಸ್ವಾಭಿಮಾನ ಸೃಷ್ಟಿಸಿ ಅವರು ಉಪಯುಕ್ತ ಭಾರತೀಯರಾಗುವಂತೆ' ತಮ್ಮ ಹಿಂದಿನ ಚರಿತ್ರೆಯ ಬಗ್ಗೆ ಅಸಹ್ಯ ಪಟ್ಟುಕೊಳ್ಳದೆ ನಂಬಿಕೆಯಿಂದ ಉತ್ತಮ ಭವಿಷ್ಯ ನಿರೀಕ್ಷಿಸುವವರಾಗಬೇಕು. ಇದಕ್ಕಾಗಿ ಒಂದು ಸಮಿತಿಯನ್ನು ತಕ್ಷಣ ಪ್ರಾರಂಭಿಸಬೇಕು.

**4. ಪರಿಶಿಷ್ಟ ಜಾತಿಯವರಿಗಾಗಿಯೇ ಒಂದು ರಾಜಕೀಯ ಸಂಘಟನೆ :**

ಎಲ್ಲ ಭಾಗಗಳಿಂದ ಬಂದ ಶೋಷಿತರ ಜನರ ಪರವಾಗಿ, 'ಅಖಿಲ ಭಾರತ ಮಟ್ಟದಲ್ಲಿ ಒಂದು ಪ್ರತ್ಯೇಕ ರಾಜಕೀಯ ಸಂಘಟನೆಯ ಅಗತ್ಯವಾಗಿದೆ. ಇಂತಹ ಸಂಘಟನೆ ಇಲ್ಲದೇ ಪರಿಶಿಷ್ಟದಲ್ಲಿ ನಿಜವಾದ ನಾಯಕತ್ವ ಬೆಳೆದುಬರಲಾರದು.

**ಅದು ಈ ಕೆಳಗಿನ ಮೂರು ಉದ್ದೇಶಗಳನ್ನು ಹೊಂದಿರಬೇಕು.**

1) ಪರಿಶಿಷ್ಟ ಜಾತಿಯ ಯುವಕ / ಯುವತಿಯವರಿಗೆ ಉನ್ನತ ಶಿಕ್ಷಣ ನೀಡುವುದು.
2) ಪರಿಶಿಷ್ಟ ಜಾತಿಯ ಸಂವಿಧಾನಿಕವಾಗಿ ಮಾನವ ಹಕ್ಕುಗಳ ರಕ್ಷಣೆ ಮಾಡುವುದು.
3) ಆಂಗ್ಲ ಮತ್ತು ಸ್ಥಳೀಯ ಭಾಷೆಗಳಲ್ಲಿ ವಾರಪತ್ರಿಕೆ ಪ್ರಾರಂಭಿಸಿ ಅವರ ಅಭಿವೃದ್ಧಿಗೆ ಕಾರಣವಾಗುವುದು.

ಈ ನಿರ್ಣಯಗಳು ಸಂಪೂರ್ಣವಾಗಿ ಡಾ. ಅಂಬೇಡ್ಕರ್‌ರವರ ವಿಚಾರಧಾರೆಯಿಂದ ಪ್ರಭಾವಿತವಾಗಿದ್ದವೆಂಬುದು, ಅವು ಇವತ್ತಿನ ಜಾಗತೀಕರಣದ ಸಂದರ್ಭದಲ್ಲಿ ಒಟ್ಟಾರೆ ದಲಿತರ ಮಾನವ ಹಕ್ಕುಗಳ ಹೋರಾಟದವರಲ್ಲಿ ತಮ್ಮದೇ ಆದ ಪ್ರಾಮುಖ್ಯತೆಯನ್ನು ಹೊಂದಿದವಾಗಿವೆ ಎಂಬುದು ಗೋಚರಿಸುತ್ತದೆ.

ಆ ಮೂಲಕ ಜಾತ್ಯತೀತತೆ, ಭಾರತ ರಾಷ್ಟ್ರೀಯತೆಗೆ ಬದ್ಧವಾದ, ಸ್ವಾವಲಂಬಿ ನಾಗರಿಕರನ್ನು ನಿರ್ಮಾಣ ಮಾಡುವ, ಕೀಳರಿಮೆಯಿಂದ ಯುವಕರನ್ನು ಪಾರುಮಾಡಿ ಉಪಯುಕ್ತ ಭಾರತೀಯರನ್ನಾಗಿ ಮಾಡುವ ಸಂಕಲ್ಪಗಳು ಚಿಂತನಾರ್ಹವಾಗಿವೆ. ಅದೇ ಕಾಲಕ್ಕೆ ಬದಲಾಗಬೇಕಾದ ನಮ್ಮ ಶಿಕ್ಷಣ ಪದ್ಧತಿಯ, ತತ್ವಾನುಸರಣೆಗಳ ಬಗ್ಗೆಯೂ ಸಹಿತ ಪ್ರಾಜ್ಞರ ಗಮನ ಸೆಳೆಯುತ್ತದೆ.

ಬಿ. ಶಾಮಸುಂದರ ಅವರು ಮುಖ್ಯವಾಗಿ ಪರಿಶಿಷ್ಟರ ಚಳವಳಿಗೆ ವ್ಯಾಪಕ ನೆಲೆಗಟ್ಟನ್ನು ಒದಗಿಸುವ ನಿಟ್ಟಿನಲ್ಲಿ ಸದಾ ಪ್ರಯತ್ನಿಸುತ್ತಿದ್ದುದರಿಂದ ಹಿಂದುಳಿದವರು, ಅಲ್ಪಸಂಖ್ಯಾತರನ್ನು ಒಟ್ಟೊಟ್ಟಿಗೆ ಕೂಡಿಸಿಕೊಂಡು ಭೂಮಾಲೀಕರಿಗೆ, ಸವರ್ಣೀಯರಿಗೆ ಭಯ ಹುಟ್ಟಿಸುವ ಮನೋಭೂಮಿಕೆಯುಳ್ಳವರಾಗಿದ್ದರಿಂದ ಅವರು ಅಂಬೇಡ್ಕರ್‌ರವರು ಪ್ರತಿಪಾದಿಸಿದ ಬೌದ್ಧ ಧಮ್ಮಾಧಾರಿತ ಸಾಂಸ್ಕೃತಿಕ ವಿಮೋಚನೆಯ ಬಗ್ಗೆ ಸ್ಪಷ್ಟ ನಿಲುವು ತಾಳಿರಲಿಲ್ಲ. ಅವರ ನಿಲುವುಗಳಲ್ಲಿ ಪ್ರಬಲ ಬೌದ್ಧೀಯತೆ ಮೇಲ್ನೋಟಕ್ಕೆ ಕಂಡುಬಂದರೂ ಕೂಡಾ 'ದಲಿತ ಚಳವಳಿಯ ಕಾರ್ಯತಂತ್ರವಾಗಿ ಅವರು ಅಂತಹ ಅನಿಸಿಕೆಗಳನ್ನು ದಲಿತ, ಹಿಂದುಳಿದ ಅಲ್ಪ ಸಂಖ್ಯಾತರ ಏಕತೆಯ ಹಿನ್ನೆಲೆಯಲ್ಲಿ ಪರೋಕ್ಷವಾಗಿ ಹೇಳಿರಬಹುದಾದ ಸಾಧ್ಯತೆ ಇದೆ. ಭೀಮಸೇನೆಯ ಸಂಘಟನೆಗಾಗಿ ಹೈದ್ರಾಬಾದ್, ಔರಾಂಗಾಬಾದ್‌ನ ಮುಸ್ಲಿಂ ನಾಯಕರ, ಅಧಿಕಾರಿಗಳ, ಕಾರ್ಯಕರ್ತರು ಹೀಗೆ ವ್ಯಾಪಕ ಬೆಂಬಲ ಪಡೆದವರಾಗಿದ್ದರಿಂದ, ಧಾರ್ಮಿಕ ಐಡೆಂಟಿಟಿಯ ಪ್ರಶ್ನೆ ಎದುರುದಾಗ ಮತಾಂತರ ವಿರೋಧಿಸಿದ್ದು ಉಂಟು. ಡಾ. ಮನೋಹರ ಯಾದವ ಅಭಿಪ್ರಾಯ ಪಡುವಂತೆ ಬಿ. ಶ್ಯಾಮಸುಂದರ ನಾಸ್ತಿಕರಾಗಿದ್ದರು. ಯಾವ ಧರ್ಮದಲ್ಲಿಯೂ ಅವರಿಗೆ ನಂಬಿಕೆ ಇರಲಿಲ್ಲ. ಅವರಿಗೆ ಶೋಷಣೆಯಿಂದ ದಲಿತರು ಮುಕ್ತರಾಗಲು ಯಾವ ಧರ್ಮವೂ ಅವರಿಗೆ ಉತ್ತರವಾಗಿ ಕಾಣಲಿಲ್ಲ. ಅವರು ಪರಿಶಿಷ್ಟ ಜಾತಿಯ ಜನತೆ ಇಸ್ಲಾಂ, ಕ್ರೈಸ್ತ ಧರ್ಮ ಅಥವಾ ಬೌದ್ಧ ಧರ್ಮಕ್ಕಾಗಲೀ ದಲಿತರು ಮತಾಂತರ ಹೊಂದುವುದನ್ನು ವಿರೋಧಿಸಿದವರು (ರಾಜಶೇಖರ 1978 : 9), ಆದಾಗ್ಯೂ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ಸಿದ್ಧಾಂತವೇ ಅವರ ವಿಚಾರಧಾರೆಗೆ ಆಧಾರವಾಗಿತ್ತು'[59] ಎಂದು ಅಭಿಪ್ರಾಯ ಪಡುತ್ತಾರೆ. ಅವರು ಬಿ. ಶಾಮಸುಂದರ ಅವರನ್ನು ಕರ್ನಾಟಕ ದಲಿತ ಚಳವಳಿಯ ಪಿತಾಮಹ'[60] ಎಂದು ಗುರುತಿಸುತ್ತದೆ.

ಪ್ರಸ್ತುತ ಕಾಲಘಟ್ಟದಲ್ಲಿ ದಲಿತ ಚಳವಳಿ, ಆವೇಶ ಆಕ್ರೋಶಗಳ ಹಂತಗಳನ್ನು ದಾಟಿ ಆಲೋಚನೆ ಮತ್ತು ಅಭಿವೃದ್ಧಿಯ ಕಡೆಗೆ ಮುಖಮಾಡಿ ಸಾಗುತ್ತಿದೆ. ಅಬಿವೃದ್ಧಿಯ ಕಡೆಗೆ ಮುಖಮಾಡಿ ಸಾಗುತ್ತಿದೆ. ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿ, ಈ ಮೊದಲೇ ಚರ್ಚಿಸಿದಂತೆ 1990 ರ ದಶಕದಲ್ಲಿ ದಲಿತರ ಸಾಂಸ್ಕೃತಿಯ ಐಡೆಂಟಿಯ ಮಹತ್ವವನ್ನೂ, ಸಾಂಸ್ಕೃತಿಕ ಸ್ವಾವಲಂಬನೆಯ ಮಹತ್ವವನ್ನು (Cultural Self-Reliance) ಮನಗಂಡು 1997 ರಲ್ಲಿ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ನಿರ್ವಾಣ ದಿನವನ್ನು 'ರಾಜ್ಯಾದ್ಯಂತ ಬೌದ್ಧ ಧರ್ಮ' ಸಪ್ತಾಹವಾಗಿ ಆಚರಣೆ ಮಾಡಿದೆ.'[61] ಡಿಸೆಂಬರ್ 6 ರಿಂದ 13 ರ ವರೆಗೆ ಆಚರಿಸಿದ ಬೌದ್ಧ ಧರ್ಮ ಸಪ್ತಾಹದ ಅಂಗವಾಗಿ ಧಾರವಾಡ ಜಿಲ್ಲಾ ಶಾಖೆಯು ಬೌದ್ಧ ಭಾರತ 'ವಿಚಾರ ಸಂಕಿರಣ ಹಮ್ಮಿಕೊಂಡು ಹೊರಡಿಸಿದ ಕರಪತ್ರದಲ್ಲಿ ಬುದ್ಧ ಅಂಬೇಡ್ಕರ್, ಕಾನ್ಷಿರಾಂ ಮತ್ತು ಬಿ.ಕೃಷ್ಣಪ್ಪನವರ ಭಾವ ಚಿತ್ರಗಳನ್ನು ಮೇಲಿನ ಭಾಗದಲ್ಲಿ ಮುದ್ರಿಸಿ, 'ದಲಿತರು ಹಿಂದೂಗಳಲ್ಲ, ಬೌದ್ಧರು : ಅಂಬೇಡ್ಕರ್ ವಾದವೊಂದೇ ನಮ್ಮ ವಿಮೋಚನಾ ಸಿದ್ಧಾಂತ : ಬಿ.ಎಸ್.ಪಿ. ಯೊಂದೇ ನಮ್ಮ ರಾಜಕೀಯ ಪಾರ್ಟಿ'[62], ಎಂಬ ಪ್ರೊ. ಬಿ. ಕೃಷ್ಣಪ್ಪನವರ ಹೇಳಿಕೆಯನ್ನು ಪ್ರಕಟಿಸಿದೆ. (ಅನುಬಂಧ-1, ಚಿತ್ರ : 55 ನೋಡಿ)

ಈ ಸಂದರ್ಭದಲ್ಲಿ "ಅಂಬೇಡ್ಕರ್‌ವಾದ ಮತ್ತು ಶೋಷಿತ ಸಮುದಾಯಗಳ ವಿಮೋಚನೆ" ಬಹುಜನ ಸಮುದಾಯವನ್ನು ಸಾಂಸ್ಕೃತಿಕ ಅನನ್ಯತೆ, ಹಿಂದೂ ಧರ್ಮ ಮತ್ತು ಬೌದ್ಧ ಧರ್ಮಗಳ ತುಲನಾತ್ಮಕ ಅಧ್ಯಯನ, ಬಹುಜನ ಸಮಾಜ ರಚನೆ ಮತ್ತು ರಾಜಕೀಯ ಆಂದೋಲನ ಕಾನ್ಷಿರಾಂ ಅವರ ವಿಚಾರಗಳು,

ಕರ್ನಾಟಕದಲ್ಲಿ ದಲಿತ ಚಳವಳಿಯ ಸ್ವರೂಪ ಮತ್ತು ಮುಂದಿನ ಹೆಜ್ಜೆ, ದಲಿತ ಸಾಂಸ್ಕೃತಿ ಪರಂಪರೆಯ ಕುರಿತು ಗೋಷ್ಠಿಗಳನ್ನು ಏರ್ಪಡಿಸಲಾಗಿತ್ತು. 1999 ರಲ್ಲಿ ರಾಜ್ಯದಾದ್ಯಂತ 'ಬುದ್ಧ ಬರಲಿ ನಮ್ಮ ಊರಿಗೆ'[62] ಎಂಬ ಜಾಥಾ ಕಾರ್ಯಕ್ರಮ ಹಮ್ಮಿಕೊಂಡಿದೆ. ಈ ಸಂದರ್ಭದ ಕರಪತ್ರವು ಡಿ.ಎಸ್.ಎಸ್. ನ ದಲಿತರ ಧಾರ್ಮಿಕ ಸಾಂಸ್ಕೃತಿಕ ಬದುಕಿನ ಆಯಾಮಗಳಿಗೆ ಹಿಡಿದ ಕನ್ನಡಿಯಾಗಿದೆ' ಕರಾರುವಕ್ಕಾಗಿ ಭಾರತದಲ್ಲಿ ಬೌದ್ಧರ ಜನಸಂಖ್ಯೆಯ ವಿಶ್ಲೇಷಣೆ ಮಾಡಿ ದಲಿತ ಸಮುದಾಯದ ಎಲ್ಲ ಶಕ್ತಿಗಳು ಒಂದಾಗಿ ಬೃಹತ್ ಚಳವಳಿ ಮಾಡುವ ಸಂಕಲ್ಪ ಮಾಡಿದ್ದು ಕಂಡು ಬರುತ್ತದೆ.

'ಶೋಷಿತ ಜನಾಂಗದ ವಿಮೋಚನದಾತ ದುರ್ಬಲ ವರ್ಗಗಳ ಹರಿಕಾರ, ಬೋಧಿಸತ್ವ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ಕೇವಲ ಹಿಂದೂ ಧರ್ಮದ ಹೀನ ಜಾತಿ ಪದ್ಧತಿ ಮೇಲಿನ ಜಿಗುಪ್ಸೆ ಹಾಗೂ ತಾತ್ಸಾರದಿಂದ ಮಾತ್ರ ಬೌದ್ಧ ಧರ್ಮಕ್ಕೆ ಮತಾಂತರಗೊಳ್ಳಲಿಲ್ಲ, ಬದಲಾಗಿ ಅವರು ಆಳವಾದ ಅಧ್ಯಯನ ಮತ್ತು ಅನುಭವದ ಆಧಾರದ ಮೇಲೆ ಇಡೀ ದುರ್ಬಲ ವರ್ಗಗಳ ಸಾಂಸ್ಕೃತಿಕ ಏಕತೆ, ಹಾಗೂ ಪ್ರಗತಿಯ ಧ್ಯೋತಕವಾಗಿ ಬೌದ್ಧ ಧರ್ಮಕ್ಕೆ ಪ್ರಜ್ಞಾಪೂರ್ವಕವಾಗಿ ಮತಾಂತರಗೊಂಡರು. ಚರಿತ್ರೆಯಲ್ಲಿ ಸಾಮ್ರಾಟ ಅಶೋಕನ ನಂತರ ಬೌದ್ಧ ಧರ್ಮವನ್ನು ಪುನರ್ ಉತ್ಥಾನ ಮಾಡಿದ ಧರ್ಮ ಸಾಮ್ರಾಟರಾದರು'[63] ಎಂದು ವಿವರಿಸಲಾಗಿದೆ. ಈ ವಾಕ್ಯಗಳಲ್ಲಿ ಸ್ಪಷ್ಟವಾಗಿ ಡಿ.ಎಸ್.ಎಸ್. ಡಾ. ಅಂಬೇಡ್ಕರ್‌ರವರ ಬೌದ್ಧ ಮತಾಂತರದ ಮಹತ್ವ ಮತ್ತು ತಾತ್ವಿಕ ನೆಲೆಗಟ್ಟನ್ನು ಅರಿತುಕೊಂಡು ಶೋಷಿತ ಸಮುದಾಯಗಳ, ಸಾಂಸ್ಕೃತಿಕ ಐಕ್ಯತೆ ಮತ್ತು ಪ್ರಗತಿಗೆ ಕರೆ ನೀಡಿರುವುದನ್ನು ಕಾಣುತ್ತೇವೆ. ಮುಂದುವರೆದು 'ಈ ಕುರಿತು ಕರ್ನಾಟಕದಲ್ಲಿ ಗಂಭೀರ ಚಿಂತನೆ ಅಗತ್ಯವಿದೆ. ಸಾಂಸ್ಕೃತಿಕವಾಗಿ ಛಿದ್ರಗೊಂಡಿರುವ ಜನಾಂಗಗಳು ದಲಿತ ಚಳುವಳಿಯ ಕಾರ್ಯಕರ್ತರು, ಅಂಬೇಡ್ಕರ್‌ವಾದಿ ರಾಜಕಾರಣಿಗಳು, ಅಧಿಕಾರಿಗಳು, ಗಂಭೀರವಾಗಿ ಆಲೋಚಿಸಿ ಅಂಬೇಡ್ಕರ್‌ರವರು ತೋರಿದ 'ಪರ್ಯಾಯ ಸಾಂಸ್ಕೃತಿಕ ಮಾರ್ಗವಾದ' ಬೌದ್ಧ ಧರ್ಮದತ್ತ ದಿಟ್ಟ ಹೆಜ್ಜೆ ಇಡಬೇಕಾದ ಚಾರಿತ್ರಿಕ ಅಗತ್ಯವಿದೆ. ಇಲ್ಲವಾದರೆ ಅಂಬೇಡ್ಕರ್‌ರವರ ಹೋರಾಟ ಅಪೂರ್ಣವೇ ಸರಿ'[64] ಎಂದು ತುಂಬಾ ಎಚ್ಚರಿಕೆಯ ನಿಲುವು ಪ್ರಕಟಿಸಿದೆ.

ಪ್ರಪ್ರಥಮ ಬಾರಿಗೆ 'ಪರ್ಯಾಯ ಸಾಂಸ್ಕೃತಿಕ ಮಾರ್ಗವಾಗಿ ಬೌದ್ಧಧರ್ಮ' ಎಂಬ ಪರಿಕಲ್ಪನೆ ಹೊರಹೊಮ್ಮಿರುವುದು ಕರ್ನಾಟಕದ ದಲಿತ ಚಳುವಳಿಯ ಮಹತ್ವದ ತಿರುವು ಮತ್ತು ಕಾಲಘಟ್ಟ ಎಂಬುದು ಮಹತ್ವದ್ದಾಗಿದೆ. ಆ ಮೂಲಕ ದಲಿತ ಚಳುವಳಿಯ ಎಲ್ಲ ಶಕ್ತಿಗಳು ಧರ್ಮದ ವಿಷಯದಲ್ಲಿ ಒಂದಾಗಿ ಬರಬೇಕೆಂಬ ನಿಲುವು ಪ್ರಕಟಿಸಿದೆ. ಸಾಕಷ್ಟು ರಾಜಕೀಯ ಕಾರ್ಯತಂತ್ರಗಳು, ರಾಜಕೀಯ ಸಿದ್ಧಾಂತದ ಬಗ್ಗೆ ತೀರ್ಮಾನ ಎಲ್ಲ ಅನುಭವಗಳು ದಕ್ಕಿದ ಮೇಲೆ 'ಸಾಂಸ್ಕೃತಿಕ ಐಡೆಂಟಿಟಿಯ (Cultural Identity) ಕುರಿತು ಈ ನಿಲುವು ಸಹಜವಾದ ನೆಲೆಯಲ್ಲಿ ಪ್ರಕಟಣೆಗೊಂಡಿರುವುದು ಕರ್ನಾಟಕದ ದಲಿತ ಚಳವಳಿಯ ಚರಿತ್ರೆಯಲ್ಲಿ ಮಹತ್ವದ ಅಧ್ಯಾಯ ಮತ್ತು ಅದು ಭವಿಷ್ಯದಲ್ಲಿ ದಲಿತರ ವಿಮೋಚನೆಯ ನೆಲೆ ಬೌದ್ಧ ಧರ್ಮದ ಐಡೆಂಟಿಟಿಯಲ್ಲಿ ಅಂಬೇಡ್ಕರ್‌ರವರು ಹಾಕಿಕೊಟ್ಟ ಮಾರ್ಗದಲ್ಲಿ ಎನ್ನುವುದನ್ನು ಪ್ರಕಟ ಪಡಿಸುತ್ತದೆ. ಇಲ್ಲಿಯವರೆಗೆ 'ಅಂಬೇಡ್ಕರ್ ಜಯಂತಿ, ಪರಿನಿರ್ವಾಣ ಆಚರಣೆಗಳು, ಕೇವಲ ಅವರ ವಿಚಾರಗಳ ಚಿಂತನ ಮಂಥನ ಕಾರ್ಯಕ್ರಮಗಳು ಒಂದೇ ದಿನಕ್ಕೆ ಸೀಮಿತವಾಗುತ್ತಿದ್ದವು. ಈ ಕಾಲಘಟ್ಟದಿಂದ ಅಂತಹ ಚಿಂತನ ಮಂಥನಗಳ ಜೊತೆಗೆ ಅವುಗಳಿಗೆ ಕ್ರಿಯಾತ್ಮಕ

ಆಯಾಮ (Action Oriented Approach) ಕೊಟ್ಟು ಪ್ರತಿಯೊಂದು ತಾಲೂಕು, ಹೋಬಳಿ ಹಳ್ಳಿಗಳಲ್ಲಿ ಸತತ ಒಂದು ತಿಂಗಳ ಪರ್ಯಾಂತರ ಬುದ್ಧ ಸಂದೇಶ ಅಂಬೇಡ್ಕರ್ ವಿಚಾರಗಳನ್ನು ಪ್ರಚಾರಗೊಳಿಸುವ ಸಂಕಲ್ಪ ತೋರಿಸಿರುವುದು ಮಹತ್ವದ ಪ್ರಯತ್ನವಾಗಿ ಕಂಡುಬರುತ್ತಿದೆ.

ಮುಂದೆ 'ಸಂಘರ್ಷ' ಪತ್ರಿಕೆಯಲ್ಲಿ ಕೂಡ ಬುದ್ಧನ ಸಂದೇಶ ತತ್ವಗಳನ್ನು ಬೌದ್ಧ ಧರ್ಮದ ಕುರಿತ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ನಿಲುವುಗಳನ್ನು ಪ್ರಚಾರಗೊಳಿಸುತ್ತಲೇ ಬಂದಿದೆ. (ಅನುಬಂಧ :1, ಚಿತ್ರ : 68 ನೋಡಿ)

ಬುದ್ಧ ಜಯಂತಿಯ ನಿಮಿತ್ತ ಮೇ 8, 2000 ರಂದು ಬೆಂಗಳೂರಿನಲ್ಲಿ ಬುದ್ಧ ಬೆಳಗಲಿ 'ಮಾನವತೆ ಅರಳಲಿ' (ಅನುಬಂಧ-1, ಚಿತ್ರ: 56 ನೋಡಿ) ಎಂಬ ರಾಜ್ಯ ಮಟ್ಟದ ವಿಚಾರ ಸಂಕಿರಣ ಹಮ್ಮಿಕೊಂಡಿರುವುದು ಡಿ. ಎಸ್. ಎಸ್. ನ ದಲಿತರ ಸಾಂಸ್ಕೃತಿಕ ವಿಮೋಚನೆಯ ಕಾರ್ಯತಂತ್ರವನ್ನು ಕಳಕಳಿಯನ್ನು ಬಿಂಬಿಸುತ್ತದೆ. ಆ ಸಂದರ್ಭದಲ್ಲಿ ಹೊರಡಿಸಿದ ಕರಪತ್ರ ಕಟುವಾದ ವಿಮರ್ಶೆಯ ಮೂಲಕ 'ಹಿಂದೂ ಧರ್ಮದ ಮೇಲೆ ಸಮರಶೀಲತೆಯನ್ನು ಪ್ರದರ್ಶಿಸಿದೆ. ವಿಚಾರ ಸಂಕಿರಣಕ್ಕೆ ಬಿಹಾರದ, ಮಹಾಬೋಧಿ ಮಹಾವಿಹಾರ, ಬುದ್ಧಗಯಾದ ಕಾರ್ಯದರ್ಶಿಗಳಾದ ಪೂಜ್ಯ ಬಂದಂತ ಪ್ರಜ್ಞಾ ಶೀಲ ಬಂತೇಜಿಯವರನ್ನು ಉದ್ಘಾಟಕರಾಗಿ ಆಹ್ವಾನಿಸಲಾಗಿದೆ. ದೇವನೂರು ಮಹಾದೇವ, ಡಾ. ಹೆಚ್.ಸಿ. ಮಹಾದೇವಪ್ಪ ಡಾ. ಸಿದ್ದಲಿಂಗಯ್ಯ, ಡಾ. ಹೆಚ್.ಜೆ. ಲಕ್ಕಪ್ಪಗೌಡ, ಡಿ.ಜಿ. ಸಾಗರ, ಪ್ರೊ. ಬಿ. ಗಂಗಾಧರಮೂರ್ತಿ, ದೇವೇಂದ್ರ ಹೆಗ್ಗಡೆ ಮುಂತಾದವರು ಭಾಗವಹಿಸಿದ ಈ ವಿಚಾರ ಸಂಕಿರಣದ ಕರಪತ್ರದಲ್ಲಿ ಮಂಡಿಸಿದ ವಿಚಾರಗಳು ಉಲ್ಲೇಖನಿಯವಾಗಿವೆ. ಪ್ರಸ್ತುತ ಅಧ್ಯಯನದ ಕಾಳಜಿಗಳ, ತಾತ್ವಿಕ ನೆಲೆಗಟ್ಟುಗಳ ದೃಷ್ಠಿಯಿಂದ ಅದರಲ್ಲಿ ಭಾಗವನ್ನು ದಾಖಲಿಸುವುದು ಸಮಂಜಸವಾಗಿದೆ.

'ಹಿಂದೂ ಧರ್ಮವನ್ನೂ ಪರಿಷ್ಕರಿಸಿ, ಅದನ್ನು ಮಾನವೀಯಗೊಳಿಸಲು ಚರಿತ್ರೆಯಲ್ಲಿ ಹಲವು ಚಿಂತನೆ, ಆಗ್ರಹ, ಚಳುವಳಿಗಳು ನಡೆದಿವೆ. ದಯಾನಂದ ಸರಸ್ವತಿ, ನಾರಾಯಣ ಗುರು ಮುಂತಾಗಿ ಸಮಾಜ ಸುಧಾರಕರಾದ ಕಬೀರ, ಕನಕದಾಸ, ರವಿದಾಸ ಮುಂತಾದ ಸಂತರು, ಸ್ವಾಮಿ ವಿವೇಕಾನಂದರ ಮುಂತಾದ ಆಧ್ಯಾತ್ಮಿಕರು ಎತ್ತಿದ ಮಾನವೀಯ ಪ್ರಶ್ನೆಗಳ ಮುಂದೆಯೂ ಹಿಂದೂ ಧರ್ಮ ತನ್ನ ಹೀನಾಯ ವ್ಯವಸ್ಥೆಯನ್ನು ಹಾಗೇ ಉಳಿಸಿಕೊಂಡಿದೆ. ಹಿಂದೂ ಧರ್ಮ ವಾಸ್ತವದಲ್ಲಿ ಬ್ರಾಹ್ಮಣ ಧರ್ಮವಾಗಿರುವ ಕಾರಣ, ದೇಶದ ಶೇಕಡಾ 90 ರಷ್ಟು ಜನಸಮುದಾಯವು ಬ್ರಾಹ್ಮಣ ಧರ್ಮ ನಿರ್ದೇಶಿತ ಸ್ಥಾನಮಾನ ಒಪ್ಪಿಕೊಂಡು ಸ್ವಾತಂತ್ರ್ಯ, ಸ್ವಾಭಿಮಾನ ಹಾಗೂ ಮನುಷ್ಯ ಗೌರವಗಳಿಂದ ವಂಚಿತವಾಗಿದೆ. ಈ ದಿಕ್ಕಿನಲ್ಲಿ ವ್ಯವಸ್ಥಿತ ಚಿಂತನೆಯು ನಿರಂತರವಾಗಿ ನಡೆಯಬೇಕಾಗಿದೆ. ಅಸ್ಪೃಶ್ಯರ ಹಾಗೂ ಬ್ರಾಹ್ಮಣೇತರ ಸಮುದಾಯಗಳಿಗೆ ಸೇರಿದವರಲ್ಲಿ ಕೂಡ ಹಿಂದೂ ಧರ್ಮದ ಅಮಾನವೀಯ ವ್ಯವಸ್ಥೆಯ ಬಗ್ಗೆ ಬಹು ಗಂಭೀರ ಚರ್ಚೆ ನಡೆಯುವುದು ಈಗ ಎಂದಿಗಿಂತಲೂ ಅತ್ಯವಶ್ಯವಾಗಿದೆ. ಈ ಸಮುದಾಯಗಳಲ್ಲಿನ ವಿದ್ಯಾವಂತರು, ಪ್ರಜ್ಞಾವಂತರು ಪಾರಂಪರಿಕ ತಿಳುವಳಿಕೆ ಹೊಂದಿದ ಹಿರಿಯರು ಈ ದಿಕ್ಕಿನಲ್ಲಿ ದಿಟ್ಟ ಹೆಜ್ಜೆ ಇಡಬೇಕಿದೆ. ಸಹಸ್ರಮಾನಗಳಿಂದಲೂ ಅಮಾನವೀಯ ಅಂಶಗಳನ್ನು ಒಳಗೊಂಡು ಬುದ್ಧಿ - ಹೃದಯ ಸ್ವಾಧೀನ ಕಳೆದುಕೊಂಡಿರುವ ಹಿಂದೂ ಧರ್ಮಕ್ಕೆ ತೀವ್ರ ಆಘಾತ (Severe Shock) ನೀಡುವ ಅವಶ್ಯಕತೆಯ ಬಗ್ಗೆ ಚರ್ಚೆಯಾಗಬೇಕಿದೆ. ಅಸ್ಪೃಶ್ಯ ಸಮುದಾಯಗಳವರಂತೂ ಹಿಂದೂ ಧರ್ಮದ ಕಕ್ಷೆಯ ಹೊರಗೆ ತಮ್ಮನ್ನು

ಗುರುತಿಸಿಕೊಳ್ಳುವ ದೃಢ ಚಿಂತನೆಯೊಂದು ವ್ಯಾಪಕಗೊಳ್ಳಬೇಕಾದುದು ಅತ್ಯನಿವಾರ್ಯವಾಗಿದೆ. ಹಿಂದೂ ಎಂದುಕೊಳ್ಳುವಷ್ಟು ಮತ್ತು ಎನಿಸಿಕೊಳ್ಳುವಷ್ಟು ಕಾಲವೂ ಅಸ್ಪೃಶ್ಯ ಸಮುದಾಯಗಳವರಿಗೆ ಅಪಾರ ಅವಮಾನದ ಕಳಂಕ ಅಂಟಿಕೊಂಡೇ ಇರುತ್ತದೆ. ಇವರು ಹಿಂದೂ ಧರ್ಮವನ್ನು ತಾಂತ್ರಿಕವಾಗಿ ಹಾಗೂ ವೈಚಾರಿಕವಾಗಿ ಧಿಕ್ಕರಿಸಿದಾಗಲೇ ಹೊಸ ಬದುಕು ಆರಂಭಿಸಲು ಸಾಧ್ಯ. ಹೊಳೆದ ಹೊಸ ಚಿಂತನೆಯನ್ನು ಹೊಸ ಹಣತೆಗೆ ಹಚ್ಚಿ ಹೊಸ ಬದುಕು ಆರಂಭಿಸಲು ಸಾಧ್ಯ. ಡಾ. ಅಂಬೇಡ್ಕರ್‌ರವರು ನಡೆದ ದಾರಿಯಲ್ಲಿ ನಾವೂ ನಡೆದಾಗ ಅಜ್ಞಾನ, ಅಸಮಾನತೆ ಮತ್ತು ದಾಸ್ಯದಿಂದ ಬಿಡುಗಡೆ ಹೊಂದಲು ಸಾಧ್ಯ.'[65]

ಈ ರೀತಿಯಾಗಿ ಕರ್ನಾಟಕದ ದಲಿತ ಸಮುದಾಯ, ಚಳವಳಿಗಳು ಇತ್ತೀಚಿನ ದಿನಗಳಲ್ಲಿ ಬೌದ್ಧ ಧರ್ಮವನ್ನು ಗಂಭೀರವಾಗಿ ಪರಿಗಣಿಸಿ ಪ್ರತಿಪಾದಿಸುತ್ತಿರುವ 'ಬುದ್ಧ ಭಾರತದ' ಪರಿಕಲ್ಪನೆಗೆ 1980 ರ ದಶಕದಲ್ಲಿಯೇ ಬಿ. ಬಸವಲಿಂಗಪ್ಪನವರು ಬುನಾದಿ ನಿರ್ಮಿಸಿದ್ದನ್ನು ವಿವರಿಸಲಾಗಿದೆ. ಆಗಲೇ ಅವರು ಡಾ. ಅಂಬೇಡ್ಕರ್‌ರವರು ರೂಪಿಸಿದ ವಿಮೋಚನಾ ಮಾದರಿ, ಅದರ ಮಹತ್ವವನ್ನು ಕರ್ನಾಟಕ ದಲಿತ ಸಮುದಾಯಕ್ಕೆ ಬುದ್ಧಿ ಜೀವಿ ವಲಯಕ್ಕೆ ಪ್ರಸ್ತಾಪಿಸಿದ್ದರು. ದಲಿತರು ಬೌದ್ಧಧಮ್ಮ ಸ್ವೀಕರಿಸದೇ ಅನ್ಯ ಮಾರ್ಗವಿಲ್ಲವೆಂದು ಪ್ರತಿಪಾದಿಸಿದ್ದರು. 1980 ರ ದಶಕದಲ್ಲೇ ಕರ್ನಾಟಕದ 'ದಲಿತ ಚಳವಳಿ' ಸಾಗಬೇಕಾದ ಮಾರ್ಗವನ್ನು ಸೂಚಿಸಿದ್ದರು. ಕರ್ನಾಟಕ ವಿಶ್ವವಿದ್ಯಾಲಯದ ಡಾ. ಅಂಬೇಡ್ಕರ್ ಅಧ್ಯಯನ ಪೀಠವು 1988 ರಲ್ಲಿ ಸಂಘಟಿಸಿದ್ದ ವಿಚಾರ ಸಂಕಿರಣದಲ್ಲಿ ಪಾಲ್ಗೊಂಡು ಬಿ. ಬಸವಲಿಂಗಪ್ಪನವರು 'ಧರ್ಮ ಮತ್ತು ಪರಿಶಿಷ್ಟರ ವಿಮೋಚನೆ : ಡಾ. ಅಂಬೇಡ್ಕರ್ ಪರಿಕಲ್ಪನೆಗಳು' ಎಂಬ ಪ್ರಬಂಧ ಮಂಡಿಸುತ್ತಾರೆ. ಆ ಪ್ರಬಂದಧಲ್ಲಿ ಡಾ. ಅಂಬೇಡ್ಕರ್‌ರವರು ಯಾಕೆ ಬೌದ್ಧಧಮ್ಮಕ್ಕೆ ಮತಾಂತರ ಹೊಂದಿದರು. ಹಿಂದೂ ಧರ್ಮ ದಲಿತರನ್ನು ಹೇಗೆ ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಶೋಷಣೆ ಮಾಡಿದೆ, ದಲಿತರು ಬೌದ್ಧ ಧರ್ಮದಿಂದ ಸಾಧಿಸಬೇಕಾದ ಪ್ರಗತಿ, ಬೌದ್ಧ ಶಿಕ್ಷಣದ ಮಹತ್ವ ದಲಿತರು, ಭಾರತದ ಬಹುಸಂಖ್ಯಾತ ಜನರು ಮೊದಲು ಬೌದ್ಧರೇ ಆಗಿದ್ದರು. ಪ್ರಸ್ತುತ ಕಾಲಘಟ್ಟದಲ್ಲಿ ಅಶೋಕನಂತೆ ಬೃಹತ್ ರೀತಿಯಲ್ಲಿ ಧರ್ಮ ಪ್ರಸಾರ ಮಾಡುವ ಅಗತ್ಯ ಕುರಿತು ತಮ್ಮ ವಿಚಾರಗಳನ್ನು ಮಂಡಿಸುತ್ತಾ ತುಂಬಾ ಮಹತ್ವದ ಮಾತುಗಳನ್ನಾಡಿದ್ದಾರೆ. ಈಗ ಡಾ. ಅಂಬೇಡ್ಕರ್‌ರವರು ಅಖಿಲ ಭಾರತ ಮಟ್ಟದಲ್ಲಿ ರಾಷ್ಟ್ರಾದ್ಯಂತ ದಲಿತರ ಆಧ್ಯಾತ್ಮ ನಾಯಕರಾಗಿದ್ದಾರೆ. (Spiritual leader) ಪರಿಶಿಷ್ಟ ಜಾತಿಗಳು, ಧಮನಿತರು ಹಿಂದೂ ಧರ್ಮಕ್ಕೆ ಗುಡ್‌ಬೈ ಹೇಳಿ ಶೀಘ್ರದಲ್ಲಿಯೇ ಬೌದ್ಧ ಧಮ್ಮ ಸ್ವೀಕರಿಸುತ್ತಾರೆಂಬ ವಿಶ್ವಾಸ ನನಗಿದೆ'[66] ಎಂದು ಭಾರತದಲ್ಲಿ ಬೌದ್ಧ ಧರ್ಮದ ಬಗ್ಗೆ ಭವಿಷ್ಯ ನುಡಿದಿದ್ದಾರೆ. ಈ ಭವಿಷ್ಯ ದಲಿತ ಬಹುಜನರು ತೆಗೆದುಕೊಳ್ಳುವ ನಿರ್ಧಾರದ ಮೇಲೆ ಅವಲಂಬಿತವಾಗಿದೆ. ಭಾರತದಲ್ಲಿ ಇಪ್ಪತ್ತು ಕೋಟಿಗಿಂತ ಹೆಚ್ಚಿರುವ ದಲಿತ ಜನಸಮುದಾಯಗಳಿಗೆ ಇಂತಹ ಸಾಂಸ್ಕೃತಿಕ ಮಹತ್ವದ ಅರಿವು ಅವರು ಎಷ್ಟರ ಮಟ್ಟಿಗೆ ಶಿಕ್ಷಣ ಪಡೆದುಕೊಳ್ಳುತ್ತಾರೆ, ಎಂತಹ ಶಿಕ್ಷಣ ಪಡೆದುಕೊಳ್ಳುತ್ತಾರೆ ಎಂಬುದನ್ನು ಅವಲಂಬಿಸಿದೆ. ನಂತರದಲ್ಲಿ ಅವರ ಪ್ರಜ್ಞೆ ಜಾಗೃತವಾಗಿ ಅವರು ಅಂಬೇಡ್ಕರ್‌ರವರು ತೋರಿಸಿದ ರಥದಲ್ಲಿ ಸಾಗುವುದರ ಮೇಲೆ, ಸಾಂಸ್ಕೃತಿಕ ಸ್ವಾಯತ್ತತೆ (Cultural Autonamy) ಸಾಧಿಸುವುದರ ಮೆಲೆ ಅವರ ಭವಿಷ್ಯವೂ ನಿಂತಿದೆ. ಬೌದ್ಧ ರೀತಿಯ ತಾತ್ವಿಕ ವಿಮೋಚನೆಯ ಪಥದಲ್ಲಿ ದಲಿತರು 'ನಡೆದಷ್ಟು ದಾರಿ ಇದೆ, ಪಡೆದಷ್ಟು ಭಾಗ್ಯವಿದೆ'' ಎಂದು ಹೇಳಿದರೆ ತಪ್ಪಾಗಲಾರದು.

★★★★★

## ಸಂದರ್ಭಸೂಚಿ ಹಾಗೂ ಟಿಪ್ಪಣಿಗಳು


1. ನಾರದ ಥೇರ (ಮೂಲ), 2000 ಎಸ್. ನರಸಿಂಹಯ್ಯ (ಅನು) : ಬೋಧಿ ಪೂರ್ಣಿಮಾ ಬೌದ್ಧ ಧರ್ಮದ ಒಂದು ಸಂಕ್ಷಿಪ್ತ ಪರಿಚಯ, ಮಹಾಬೋಧಿ ಸೊಸೈಟಿ, ಬುದ್ಧ ವಚನ ಟ್ರಸ್ಟ್ ಬೆಂಗಳೂರು, 2000, ಪುಟ, 22-23.

2. Ahir D.C., 1998 : Buddhism 50 years of Independence 1947-97, Status, Growth and Development, B.R. Publishing Corporation, New Delhi, p-113.

3. ಅದೇ : ಪುಟ ; 114.

4. Sangha Rakshita, 1986 : Ambedkar and Buddhism windhorse publications, Glasgow, p-138.

5. ಅದೇ : ಪುಟ ; 142.

6. ನಾರದ ಥೇರ (ಮೂಲ), 2000 ಎಸ್. ನರಸಿಂಹಯ್ಯ (ಅನು) : ಅದೇ, ಪುಟ ; 23.

7. ಚಂದ್ರಶೇಖರ ಎಸ್. (ಮೂಲ), 2000 ನಾಗಣ್ಣ ಸಿ. (ಅನು) : ದಕ್ಷಿಣ ಭಾರತ, ವಸಾಹತುಷಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, 2000, ಪುಟ; 28.

8. ಅದೇ : ಪುಟ ; 114.

9. ಅರವಿಂದ ಮಾಲಗತ್ತಿ, 2002 : 'ಅಸ್ಪೃಶ್ಯತೆ -ಮತಾಂತರ - ಮೀಸಲಾತಿ' ದಲಿತ ಚಿಂತನೆ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-112.

10. ಚಂದ್ರಶೇಖರ ಎಸ್. (ಮೂಲ), 2000 ನಾಗಣ್ಣ ಸಿ. (ಅನು) : ಅದೇ ಪುಟ 154.

11. Aloysius G., 1998 : Religion as Emancipatory Identity, A Buddhist movement among the Tamils under colonialism New Age International Pvt., Ltd., Bangalore, P-18.

12. ಅದೇ : ಪುಟ ; 18.

13. ಮೊಗಳ್ಳಿ ಗಣೇಶ (ಸಂ), 2000, : ದಲಿತ ಚಿಂತನೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ: 112.

14. Aloysius G., 1998 : ಅದೇ.

15. ಅಂಬೇಡ್ಕರ್ ಬಿ.ಆರ್. (ಮೂಲ), ಎಂ. ಗೋಪಿನಾಥ (ಅನು), 1998 : ಬುದ್ಧ ಮಾರ್ಗದಿ ನಡೆಯೋಣ, ವಿಮೋಚನೆ ಪಡೆಯೋಣ, ದಲಿತ ಸಾಹಿತ್ಯ ಸಂಘಟನೆ, ಬೆಂಗಳೂರು, ಪುಟ ; 2.

16. Ahir D.C., 1998 : ಅದೇ.

17. Ahir D.C., (1972), P.C. Almond (1988), P.V.Bapat (1971), L. Trevor (1980), T.S. Wilkinson and M.M. Thomos (1974), Eleanor Zelliot (1979)

18. Ahir D.C., 1998 : ಅದೇ, ಪುಟ ;

19. Aloysius G., 1998 : ಅದೇ,

20. Ahir D.C., 1998 : ಅದೇ, ಪುಟ ; 113.

21. ಅದೇ : ಪುಟ ; 115.

22. : ಪುಟ ; 115.

23. ಅಂಬೇಡ್ಕರ್ ಬಿ.ಆರ್. (ಮೂಲ), : ಅದೇ, ಪುಟ ; 6

24. Ahir D.C., 1998 : ಅದೇ, ಪುಟ ; 115.

25. Ajanath S., 1993 : Quoted in Aloysius G., 1998: ಪೂರ್ವೋಕ್ತ; ಪುಟ ; 103.

26. ಚಂದ್ರಶೇಖರ ಪಾಟೀಲ, 1999 : 'ಮತಾಂತರ ಮತ್ತು ಮೇರಾ ಭಾರತ ಮಹಾನ್' ಸಂಕ್ರಮಣ, ಸಂಪುಟ ; 34, ಸಂಚಿಕೆ, 6, ಪುಟ ; 6.

27. ಅದೇ : ಪುಟ ;

28. ಕಾಂಚ ಐಲಯ್ಯ, ಗೋವಿಂದ ತಳವಳ್ಕರ್ : ಮಂಗಳೂರ ವಿಜಯ, ಕೆ. ವೀರಮಣಿ, 1997 ಅಂಬೇಡ್ಕರ್ ಮೇಲೆ ಆಕ್ರಮಣ, ಡಾ. ಅಂಬೇಡ್ಕರ್ ಬಗ್ಗೆ ತಿರುಚಿ ಬರೆದ ಅರುಣ ಶೌರಿಯವರ 'Worshipping False Gods' ಕುರಿತು ಪ್ರತಿಕ್ರಿಯೆಗಳು, ಸಂಬುದ್ಧ ಪ್ರಕಾಶನ, ಬೆಂಗಳೂರು, ಪುಟ ; 22.

29. Ahir D.C., 1998 : ಅದೇ, ಪುಟ ; 5.

30. Jayashree B. Gokhale, 1986 : "The Sociological Effects of Ideological Change: Buddhist Conversion of Maharashtrian Untouchaples" (in) "Journal of Asian Ethics" Vol: XLV:2, 1986, University of Pennsylvavia, p.280

31. ಅದೇ : ಪುಟ ; 279.

32. Rodrigues Valerian, (ed) 2002 : The Essential writings of B.R. Ambedkar, Oxford University Press, New Delhi, p-10.

33. ಅದೇ : ಪುಟ ; 559.

34. Manohar Yadav, 1998 : 'Career of Dalit Movement in Karnataka' in Journal of Social and Economic Development, Vol-I, No.I, ISEC, Banglaore. p.114.

35. ಲಕ್ಷ್ಮಣ ತೆಲಗಾವಿ, 1999 : ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು (ಏಕೀಕರಣೋತ್ತರ ಕರ್ನಾಟಕ ಚಳವಳಿ, ಸಂಪುಟ-5) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ: 57.

36. ಅದೇ : ಪುಟ ; 87-88.

37. ಶ್ರೀಧರನ್ ಓ, 1997 : 'ಡಾ. ಅಂಬೇಡ್ಕರ್ ಚಿಂತನೆಯಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಮತ್ತು ಬಹುಜನ ಸಮಾಜ ಪಕ್ಷ (ಕರ್ನಾಟಕ ದಲಿತ ಸಂಘರ್ಷ ಸಮಿತಿ, (ರಾಜ್ಯ ಸಮಿತಿ) ಬೆಂಗಳೂರು, ಉದ್ಧರಣೆ : ಪ್ರೊ. ಲಕ್ಷ್ಮಣ ತೆಲಗಾವಿ. ಪೂರ್ವೋಕ್ತ ಪುಟ : 87-88.

38. ಕೃಷ್ಣಪ್ಪ ಬಿ., 2000 : 'ಹಿಂದೂ ಧರ್ಮ - ಪುರೋಹಿತಶಾಹಿ' ಪ್ರೊ. ಬಿ. ಕೃಷ್ಣಪ್ಪ ಚಳವಳಿಗಳು ಮತ್ತು ಬರಹಗಳು, ಪ್ರೊ. ಬಿ. ಕೃಷ್ಣಪ್ಪ ಟ್ರಸ್ಟ್(ರಿ)., ಬೆಂಗಳೂರು, ಪುಟ ; 71-72.

39. ಕೃಷ್ಣಪ್ಪ ಬಿ. 2003 : 'ಮಾನವತಾವಾದಿ ಅಂಬೇಡ್ಕರ್' ಅಂಬೇಡ್ಕರ್‌ವಾದ, ಅಕ್ಟೋಬರ್ 2003, ಬೆಂಗಳೂರು, ಪುಟ ; 8.

40. ಅದೇ : ಪುಟ ; 9.

41. ಬೌದ್ಧ ಧರ್ಮ ಚಕ್ರಪರಿವರ್ತನ ಸಮಿತಿ, ಬುದ್ಧಭೂಮಿ, ಬೆಂಗಳೂರು ಇವರು ಕರ್ನಾಟಕ ವಿಶ್ವವಿದ್ಯಾಲಯದ ಎಸ್.ಸಿ.ಎಸ್.ಟಿ. ನೌಕರರ ಸಂಘದ ಕಾರ್ಯದರ್ಶಿ, ಶ್ರೀ ಸಿ.ಎಲ್. ಹೊಸಮನಿ ಇವರಿಗೆ ಕಳುಹಿಸಿದ ಆಮಂತ್ರಣ ಪತ್ರಿಕೆ (14.10.1989)

42. Aloysius G., 1998 : ಪೂರ್ವೋಕ್ತ ಪುಟ ; 84.

43. Bikku, Arya Nagarjuna Surai Sasai, 2002 : "Brahmin Control over the Bodhgaya : Complaint to UN, in Dalit Voice Sept. 16-30, 2003, Bangalore, p-18.

44. ಅದೇ : ಅದೇ ಪುಟ.

45. ಅದೇ : ಪುಟ ; 19.

46. Varhade Yogesh (ed), 2004 : World Confernce on Human Rights Education, Souvenir, ACJP Speak, Jan 25-28, Mumbai, 2004. p-69.

47. ಅದೇ : ಪುಟ 64.

48. ವರ್ಧನ್ ಬಿ.ಕೆ.ಎಸ್. (ಸಂಶೋಧನಾರ್ಥಿ) ಇವರಿಗೆ, ಬರೆದ ಪತ್ರ, ವೈಯಕ್ತಿಕ ಕಡತದಿಂದ (1996)

49. ಲಕ್ಷ್ಮೀಪತಿ ಕೋಲಾರ, 1993 : 'ದಲಿತ ಚಳವಳಿ : ಒಂದು ಪರಾಮರ್ಶೆ' ಡಾ. ಅರವಿಂದ ಮಾಲಗತ್ತಿ (ಸಂ) : ದಲಿತ ಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, 2002, ಪುಟ ; 180-181.

50. ಅದೇ : ಪುಟ ; 186.

51. ದೇವನೂರು ಮಹಾದೇವ, 2002 : 'ವರ್ಣಬೇಧ ನೀತಿ ಮತ್ತು ಅಸ್ಪೃಶ್ಯತೆ' ಮೊಗಳಿ ಗಣೇಶ (ಸಂ) : ದಲಿತ ಚಿಂತನೆ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, 2002, ಪುಟ ; 295

52. ಲಕ್ಷ್ಮೀಪತಿ, ಕೋಲಾರ, 1993 : ಪೂರ್ವೋಕ್ತ ಪುಟ ; 187.

53. ಚಂದ್ರಿಕಾ ಪಿ. (ಸಂ), 1999 : ಯಾರ ಜಪ್ತಿಗೂ ಸಿಗದ ನವಿಲುಗಳು, (ದೇವನೂರು ಮಹಾದೇವರ ಸಾಹಿತ್ಯ ಕುರಿತು), ಅಭಿನವ ಪ್ರಕಾಶನ, ಬೆಂಗಳೂರು, ಪುಟ ; 186.

54. ಅದೇ : ಪುಟ ; 187.

55. ಮಾವಳ್ಳಿ ಶಂಕರ್, 2003 : ಅಂಬೇಡ್ಕರ್ ವಾದ, ಮಾಸಪತ್ರಿಕೆ, ಸಂಪುಟ ; 1, ಸಂಚಿಕೆ ; 2, ಬೆಂಗಳೂರು, ಹೊದಿಕೆಯ ಪುಟ, 19.

56. ಅದೇ : ಅದೇ ಪುಟ.

57. Manohar Yadav, 1998 : ಪೂರ್ವೋಕ್ತ ಪುಟ ; 114

58. Shamsunder B., 1969 : "The Four Immediate Needs of Twelve Crore Suprressed Human in India, Receiption Committee of Nanded SC., ST People Conference, R.K. Printers, Delhi, p: 6-16.

59. Manohar Yadav, 1998 : ಪೂರ್ವೋಕ್ತ ಪುಟ ; 113.

60. ಅದೇ : ಪುಟ ; 114.

61. ಕರ್ನಾಟಕ ದಲಿತ ಸಂಘರ್ಷ ಸಮಿತಿ (ರಿ)., ಧಾರವಾಡ ಜಿಲ್ಲಾ ಶಾಖೆ, ಕರ್ಕಿ ಬಸವೇಶ್ವರ ನಗರ, ಹುಬ್ಬಳ್ಳಿ, ದಲಿತ ವಿದ್ಯಾರ್ಥಿ ಒಕ್ಕೂಟ, ಧಾರವಾಡ ಜಿಲ್ಲಾ ಶಾಖೆ, ದಲಿತ ಮಹಿಳಾ ಒಕ್ಕೂಟ ಧಾರವಾಡ ಜಿಲ್ಲೆ ಇವರು ಹೊರಡಿಸಿದ ಕರಪತ್ರ, ಡಿಸೆಂಬರ್, 1997,

62. ಕರ್ನಾಟಕ ದಲಿತ ಸಂಘರ್ಷ ಸಮಿತಿ (ರಾಜ್ಯ ಸಮಿತಿ) ಇವರ ಕರಪತ್ರ, 1999.

63. ಅದೇ : ಅದೇ

64. ಅದೇ : ಅದೇ

65. ಕರ್ನಾಟಕ ದಲಿತ ಸಂಘರ್ಷ ಸಮಿತಿ ; 2000: 'ಬುದ್ಧ ಬೆಳಗಲಿ, ಮಾನವತೆ ಅರಳಲಿ' ಕರಪತ್ರ ಮೇ, 2000, ಬೆಂಗಳೂರು, ಪುಟ ; 1-2.

66. Basavalingappa B., 1991 : The Emancipation of Scheduled Castes; The Ambedkar Path, Karnataka Buddha Dhamma Samiti, Bangalore, p-8.

★★★★★



## ಅಧ್ಯಾಯ-5

# ಬೌದ್ಧ ಮಾದರಿಗಳು ಮತ್ತು ಜನಸಂಖ್ಯಾ ಸ್ಥಿತಿಗತಿಯ ವಿಶ್ಲೇಷಣೆ

5.1. ಅಂಬೇಡ್ಕರ್‌ರವರ ಮತಾಂತರ ಚಳುವಳಿ ಮತ್ತು ಬೌದ್ಧರ ಜನಸಂಖ್ಯಾ ಸ್ಥಿತಿಗತಿಯ ವಿಶ್ಲೇಷಣೆ.

5.2. ಬೌದ್ಧ ಮಾದರಿಗಳು ಮತ್ತು ಮತಾಂತರದ ಪರಿಣಾಮಗಳು.

ಅಧ್ಯಾಯ-5

# ಬೌದ್ಧ ಮಾದರಿಗಳು ಮತ್ತು ಜನಸಂಖ್ಯಾ ಸ್ಥಿತಿಗತಿಯ ವಿಶ್ಲೇಷಣೆ

## 5.1. ಅಂಬೇಡ್ಕರ್‌ರವರ ಮತಾಂತರ ಚಳವಳಿ ಮತ್ತು ಬೌದ್ಧರ ಜನಸಂಖ್ಯಾ ಸ್ಥಿತಿಗತಿಯ ವಿಶ್ಲೇಷಣೆ :

ಡಾ. ಅಂಬೇಡ್ಕರ್‌ರವರ 'ಮಹಾ ಮತಾಂತರ' ಆಂದೋಲನದ ಪರಿಣಾಮವೆಂಬಂತೆ ಪ್ರತಿ ಜನಗಣತಿಯ ನಂತರ ಬೌದ್ಧರ ಜನಸಂಖ್ಯೆ ಬೆಳವಣಿಗೆಯಾಗುತ್ತಲೇ ಇದೆ. ಅಂಬೇಡ್ಕರ್‌ರವರೊಂದಿಗೆ ಅಕ್ಟೋಬರ್ 14, 1956 ರಂದು ನಾಲ್ಕು ಲಕ್ಷ ಹಾಗೂ ಮರು ದಿನ ಒಂದು ಲಕ್ಷ ಹೀಗೆ ಒಟ್ಟು 5 ಲಕ್ಷಕ್ಕಿಂತ ಹೆಚ್ಚು ದಲಿತರು ಬೌದ್ಧಧರ್ಮಕ್ಕೆ ಮತಾಂತರಗೊಂಡರು. ಅಂದಿನಿಂದ ಇಂದಿನವರೆಗೂ ಈ ಚಳವಳಿಯ ಪ್ರಭಾವದ ದ್ಯೋತಕವೆಂಬಂತೆ ಅಧ್ಯಾಯ-1 ರಲ್ಲಿ ಹೇಳಿದಂತೆ ಬೌದ್ಧ ರೀತಿಯ ಜೀವನ ಶೈಲಿ ಹೊಂದಿ ತಾವು ಬೌದ್ಧ ಧರ್ಮಿಯರೆಂದು ಹೇಳಿಕೊಳ್ಳದವರ ಸಂಖ್ಯೆ ಸಾಕಷ್ಟಿದ್ದರೂ, ಇತ್ತೀಚೆಗೆ ತಾವು ಬೌದ್ಧಧರ್ಮಕ್ಕೆ ಸೇರಿದವರೆಂದು ಜನಗಣತಿಯಲ್ಲಿ ನೊಂದಾಯಿಸುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಅಸಂಖ್ಯಾತ ಜನರು ಅಂಬೇಡ್ಕರ್‌ರವರ ತತ್ವಗಳನ್ನು ಅನುಸರಿಸಿ ಬೌದ್ಧಮಯ ಜೀವನ ನಡೆಸುತ್ತಿರುವರಾದರೂ, ಅಧಿಕೃತವಾಗಿ ಜನಗಣತಿಯಲ್ಲಿ ಬೌದ್ಧರೆಂದು ನಮೂದಿಸಿಕೊಳ್ಳುವ ಪ್ರಕ್ರಿಯೆ ಇತ್ತಿಚೀಗೆ ಮಾತ್ರ ಕಂಡು ಬರುತ್ತಿದೆ. ಜನಗಣತಿಯ ಸಂದರ್ಭದಲ್ಲಿ ದಲಿತ ಚಳವಳಿಯ ನೇತಾರರು ಒತ್ತಾಯಿಸಿದ ಹಿನ್ನೆಲೆಯಲ್ಲಿ ಸರ್ಕಾರ ದಲಿತರಿಗೆ ಜನಗಣತಿ ಕಾಲಂನಲ್ಲಿ ಬೌದ್ಧರೆಂದು ನಮೂದಿಸಿಕೊಳ್ಳಲು ಅವಕಾಶ ಕೂಡ ನೀಡಿದ್ದನ್ನು ಗಮನಿಸಬಹುದಾಗಿದೆ. (ಅನುಬಂಧ-viii, ಅ ಮತ್ತು ಡ) ಆದರೆ ಬೌದ್ಧರೆಂದು ನಮೂದಿಸಿದರೆ ಮೀಸಲಾತಿ ಸೌಲಭ್ಯ ಸಿಗುವುದಿಲ್ಲವೆಂಬ ಅಂಜಿಕೆಯಿಂದ ಸಂವಿಧಾನದ ತಿದ್ದುಪಡಿ ಆದೇಶ, ಆ ಕುರಿತ ನಿಯಮಗಳ ಕುರಿತು ಖಚಿತ ಮಾಹಿತಿ ಇಲ್ಲದ ಕಾರಣ, ಹಾಗೆ ನೊಂದಾಯಿಸದೇ ಬೌದ್ಧರೀತಿಯ ಜೀವನ ನಡೆಸುವವರೂ ಇದ್ದಾರೆ. ಬೌದ್ಧ ದೀಕ್ಷೆ ಪಡೆದು ಮತಾಂತರ ಹೊಂದಿದ ದಲಿತರು, ದಲಿತ ಸಂಘಟನೆಗಳು ಜನಗಣತಿಯಲ್ಲಿ ತಮ್ಮನ್ನು ಬೌದ್ಧರೆಂದು ನಮೂದಿಸಿಕೊಳ್ಳಲು ಬೇಡಿಕೆ ಮಂಡಿಸಿ ಪ್ರತಿಭಟನೆ, ರ್‍ಯಾಲಿ ಹಮ್ಮಿಕೊಂಡಿದ್ದಾರೆ. (ಗುಲ್ಬರ್ಗಾ, ಬೀದರ, ಬೆಂಗಳೂರು, ಹುಬ್ಬಳ್ಳಿ ಮುಂತಾದ ಕಡೆ ಇಂತಹ ರ್‍ಯಾಲಿಗಳು ನಡೆದ ಬಗ್ಗೆ ವರದಿಗಳಿವೆ) ಪ್ರಜಾಪ್ರಭುತ್ವದಲ್ಲಿ ಯಾವುದೇ ಜನಸಮುದಾಯದ ಬೆಲೆ ನಿರ್ಧಾರವಾಗುವುದು, ಒಂದು ಸಮುದಾಯವನ್ನು ಗುರುತಿಸುವುದು ಜನಸಂಖ್ಯೆಯ ಆಧಾರದ ಮೇಲಿಂದಲೇ ಎನ್ನುವುದು ಮುಖ್ಯವಾಗಿದೆ. ಆದರೆ, ಹಲವಾರು ದಲಿತ ಮುಖಂಡರು ಅಭಿಪ್ರಾಯ ಪಡುವಂತೆ ಜನಗಣತಿ ಸಂದರ್ಭದಲ್ಲಿ ಧರ್ಮದ 'ಕಾಲಂ' ನಲ್ಲಿ ಬೌದ್ಧರೆಂದು ಬರೆಸಿದಾಗಲೂ, ಗಣತಿದಾರರ ತಪ್ಪು ಗ್ರಹಿಕೆಯಿಂದ ಆ ರೀತಿಯ ನಮೂದಿಸುವಿಕೆ ಸಾಧ್ಯವಾಗುವುದೇ ಇಲ್ಲ. ಪಟ್ಟಣ ಪ್ರದೇಶಗಳಲ್ಲೂ ದಲಿತರು ಬೌದ್ಧರೆಂದು ಹೇಳಿದಾಗಲೂ ಗಣತಿದಾರರು ಅಂತಹ ನಮೂದಿಸುವಿಕೆಯಲ್ಲಿ ಅಲಕ್ಷ್ಯ ವಹಿಸುತ್ತಾರೆ. ಕುಟುಂಬದ ಮಾಹಿತಿ ನೀಡುವವರು ತಾವು ಪರಿಶಿಷ್ಟ ಜಾತಿ ಎಂದಾಕ್ಷಣ ಆ ಕುಟುಂಬ 'ಹಿಂದೂ ಧರ್ಮ' ಕ್ಕೆ ಸೇರಿದೆ ಎಂದು ಅವರೇ ತೀರ್ಮಾನ ತೆಗೆದುಕೊಂಡು ಧರ್ಮದ ಕಾಲಂನಲ್ಲಿ 'ಬೌದ್ಧರೆಂದು' ಹೇಳಿದಾಗಲೂ ನಮೂದಿಸಿಕೊಳ್ಳದೇ ಇರುವ ಅಂಶಗಳು ಸಹಿತ ಕಂಡು ಬಂದಿವೆ. ಈ ರೀತಿ ತಿಳಿಯದೇ ಮಾಡಿದ ಅಥವಾ ನಿರ್ಲಕ್ಷ್ಯದ ಅಥವಾ ತಪ್ಪು ಮಾರ್ಗದರ್ಶನದ ಪ್ರಯತ್ನಗಳೇ ಎಂಬುದು ಪರಿಶೀಲಿಸಬೇಕಾದ ವಿಷಯವಾಗಿದೆ. ಆದರೆ, ಬಹುತೇಕ ಸಂದರ್ಭಗಳಲ್ಲಿ ಇದು ಉದ್ದೇಶ

ಪೂರ್ವಕವಾಗಿರಲೂಬಹುದು. ಡಾ. ಅಂಬೇಡ್ಕರ್‌ರವರು ಜನಗಣತಿಯ ಈ ರೀತಿಯ ವೈಪರಿತ್ಯಗಳನ್ನು ತಮ್ಮ ಅಧ್ಯಯನಗಳಲ್ಲಿ ಬಿಂಬಿಸಿದ್ದು ಉಂಟು. '1911 ರ ಜನಗಣತಿ ಮಾಡುವಾಗ, ಅಂದಿನ ಜನಗಣತಿ ಕಮೀಷನರ್ ಮೊದಲ ಬಾರಿಗೆ ಅಸ್ಪೃಶ್ಯರನ್ನು ಪ್ರತ್ಯೇಕವಾಗಿ ಗಣತಿ ಮಾಡಲು ಯೋಜಿಸುತ್ತಾರೆ. ಆಗ ಸವರ್ಣೀಯ ಹಿಂದುಗಳಿಂದ ಇಂತಹ ಜನಗಣತಿಗೆ ವಿರೋಧ ವ್ಯಕ್ತವಾಗುತ್ತದೆ'[1] ಆಗ ಜನಗಣತಿಯ ಅಧೀಕ್ಷಕರು ತಯಾರಿಸಿದ ಪ್ರಶ್ನಾವಳಿ ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ಮಹತ್ವದ್ದು ಎನಿಸುತ್ತದೆ. ಆ ಪ್ರಶ್ನೆಗಳು ಹೀಗಿವೆ.

'ಪರಿಶಿಷ್ಟ ಜಾತಿ' ಮತ್ತು 'ಜನಾಂಗ' ಯಾರೆಂದರೆ,

1) ಯಾರು ಬ್ರಾಹ್ಮಣರ ಪ್ರಭುತ್ವವನ್ನು ನಿರಾಕರಿಸಿದ್ದಾರೋ ಅವರು,
2) ಬ್ರಾಹ್ಮಣ ಅಥವಾ ಹಿಂದು ಪುರೋಹಿತನಿಂದ ಯಾವುದೇ ಮಂತ್ರವನ್ನು ಸ್ವೀಕರಿಸದವರು.
3) ವೇದಗಳ ಪ್ರಾಮಣ್ಯವನ್ನು ನಿರಾಕರಿಸಿದವರು.
4) ಶ್ರೇಷ್ಠ ಹಿಂದೂ ದೇವರುಗಳನ್ನು ಪೂಜಿಸಲಾರದವರು.
5) ಒಳ್ಳೇಯ ಬ್ರಾಹ್ಮಣರಿಂದಲೂ ಸೇವೆ ವಂಚಿತರು.
6) ಬ್ರಾಹ್ಮಣ ಪುರೋಹಿತರೇ ಇಲ್ಲದವರು.
7) ಸಾಮಾನ್ಯ ಹಿಂದೂ ದೇವಾಲಯದ ಒಳಗಡೆ ಪ್ರವೇಶವಿಲ್ಲದವರು.
8) ಇವರನ್ನು ಮುಟ್ಟಿದರೆ, ಮೈಲಿಗೆ ಆಗುತ್ತದೆ ಎಂಬ ಹಣೆ ಪಟ್ಟಿ ಹೊಂದಿದವರು.
9) ತಮ್ಮ ಜನರು ಸತ್ತರೆ, ಹೆಣವನ್ನು ಹೂಳುವವರು.
10) ದನದ ಮಾಂಸ ತಿನ್ನುವವರು ಮತ್ತು ಆಕಳನ್ನು ಪೂಜಿಸದವರು.[2]

ಈ ರೀತಿಯ ಪ್ರಶ್ನೆಗಳನ್ನು ಗಣತಿಯ ಮಾನದಂಡಗಳನ್ನಾಗಿಸಬೇಕಾದರೆ ಅತ್ಯಂತ ಪ್ರಬಲವಾದ ಹಿಂದೂ ಧರ್ಮವಿರೋಧಿ ಅಸ್ಪೃಶ್ಯರನ್ನು ಗಮನಿಸಿಯೇ ಇಂತಹ ಖಚಿತ ಪ್ರಶ್ನೆಗಳನ್ನು ಕೇಳಿರಬಹುದೆಂದು ಕಾಣುತ್ತದೆ. ಈ ರೀತಿಯ ಸಂವೇದನಾ ಶೀಲ ಪ್ರಶ್ನೆಗಳನ್ನು ಅನ್ವಯಿಸಿ ಗಣತಿ ಮಾಡುವ ಮನಸ್ಸುಗಳಾವವು? ಎಂಬ ಪ್ರಶ್ನೆಯನ್ನು ಬೌದ್ಧರ ಜನಗಣತಿಯ ಸುತ್ತಮುತ್ತ ಇರುವ ಪ್ರಶ್ನೆಗಳ ಹಿನ್ನಲೆಯಲ್ಲಿ ವಿಶ್ಲೇಷಿಸಬೇಕಾಗುತ್ತದೆ.

ಲಭ್ಯವಿರುವ ಜನಗಣತಿಯ ಅಂಕಿ ಸಂಖ್ಯೆಗಳನ್ನೇ ಆಧರಿಸಿ ವಿಶ್ಲೇಷಣೆ ಮಾಡಿದಾಗ್ಯೂ ಕೂಡ, ಆಶ್ಚರ್ಯಕರ ಒಲವುಗಳು (Trends) ಕಂಡುಬರುತ್ತವೆ. ಭಾರತದಲ್ಲಿ ಬೌದ್ಧಧರ್ಮದ ಪುನರುಜ್ಜೀವನ 'ನಾಗಪುರದ ಮತಾಂತರ ಚಳವಳಿಯಿಂದ' ಎಂದು ಹಲವಾರು ತಜ್ಞರು ದಾಖಲಿಸಿದರೂ ಕೂಡ, ಚಾರಿತ್ರಿಕವಾಗಿ ಅದರ ಬೀಜ ಅಂಕುರಗೊಂಡಿದ್ದು 1891 ರಲ್ಲಿಯೇ ಎಂದು ಹೇಳಬೇಕಾಗುತ್ತದೆ. ಯಾಕೆಂದರೆ ಆ ವರ್ಷ ಮೂರು ಮಹತ್ವದ ಘಟನೆಗಳು ಘಟಿಸಿದವು. ಅವು ಭಾರತದ ಚರಿತ್ರೆಯ ದಿಕ್ಕು ಮತ್ತು ಗತಿಯನ್ನೇ ಬದಲಿಸಿದವು.

ಮೊದಲನೆಯ ಘಟನೆ - ಏಪ್ರಿಲ್ 14, 1891 ರಂದು ಡಾ. ಅಂಬೇಡ್ಕರರವರ ಜನನ

ಎರಡನೆಯ ಘಟನೆ - ಮೇ 1891 ಕಲ್ಕತ್ತದಲ್ಲಿ 'ಮಹಾಬೋಧಿ ಸೊಸೈಟಿಯ' ಸ್ಥಾಪನೆ

ಮೂರನೆಯ ಘಟನೆ - 1891 ರಲ್ಲಿ ಆಂಧ್ರಪ್ರದೇಶದ ಭಟ್ಟಿಪ್ರೊಲುವಿನಲ್ಲಿ ಬುದ್ಧನ ಅಸ್ಥಿಯ ಅವಶೇಷಗಳು ಉತ್ಖನನದಿಂದ ಶೋಧಿಸಲ್ಪಟ್ಟವು.

ಆದ್ದರಿಂದ, 1891 ರ ಸಮಯದಲ್ಲೇ ಭಾರತದಲ್ಲಿ 'ಬೌದ್ಧಧರ್ಮದ ಪುನರುಜ್ಜೀವನ' ನಿಜವಾದ ಅರ್ಥದಲ್ಲಿ ಪ್ರಾರಂಭವಾಯಿತೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

1891 ರಲ್ಲಿ ಭಾರತದಲ್ಲಿ ಕೇವಲ 50 ಸಾವಿರ ಮಾತ್ರ ಇದ್ದ ಬೌದ್ಧರ ಜನಸಂಖ್ಯೆ 1951 ರ ಜನಗಣತಿಯ ನಂತರ ಅಂದರೆ 60 ವರ್ಷಗಳ ಅವಧಿಯಲ್ಲಿ 1 ಲಕ್ಷ 80 ಸಾವಿರಕ್ಕೆ ಮುಟ್ಟಿತು. ಕರ್ನಾಟಕದಲ್ಲಿ ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ನೋಡುವುದಾದರೆ, 1991 ರಲ್ಲಿ 73 ಸಾವಿರ [3], ಇದ್ದ ಬೌದ್ಧರ ಜನಸಂಖ್ಯೆ 2001 ರಲ್ಲಿ ನಾಲ್ಕು ಲಕ್ಷ [4] ಸಮೀಪಿಸಿರುತ್ತದೆ. ಈ ಕೆಳಗಿನ ಕೋಷ್ಟಕದಲ್ಲಿ ಅಖಿಲ ಭಾರತ ಮಟ್ಟದ ಒಂದು ನೋಟವನ್ನು ಕಾಣಬಹುದು.

## ಭಾರತದಲ್ಲಿ ಬೌದ್ಧರ ಜನಸಂಖ್ಯಾ ಸ್ಥಿತಿಗತಿಯ ಕೋಷ್ಟಕ ★

| ಜನಗಣತಿ ವರ್ಷ | ಭಾರತ | ಮಹಾರಾಷ್ಟ್ರ | ಕರ್ನಾಟಕ | ಷರಾ |
|---|---|---|---|---|
| 1951 | 1,80,823 | 2,487 | | ಈ ಸಂಖ್ಯೆಯಲ್ಲಿ ಪ್ರತಿಶತ 80% ರಷ್ಟು ಪರಿಶಿಷ್ಟ ಜಾತಿ ಜನಾಂಗದಿಂದ ಮತಾಂತರ ಹೊಂದಿದ ಬೌದ್ಧರಾಗಿರುತ್ತಾರೆ. |
| 1961 | 32,50,227 | 27,89,501 | 9,770 | |
| 1971 | 38,12,325 | 32,64,223 | 14,139 | |
| 1981 | 47,19,796 | 39,46,149 | 42,251 | |
| 1991 | 63,87,500 | 50,40,786 | 73,012 | |
| 2001 | 79,55,207 | 58,38,710 | 3,93,300 [5] | |

★ ಇದು ಲಭ್ಯವಿರುವ, ಜನಸಂಖ್ಯೆಯ ಅಂಕಿ ಸಂಖ್ಯೆಗಳನ್ನು ಆಧರಿಸಿ ರಚಿಸಿದ ಕೋಷ್ಟಕವಾಗಿದೆ.

★ ಸೂಚಿಸಿದ ಹಲವಾರು ಜನಗಣತಿ ವರ್ಷಗಳಲ್ಲಿ ಬೌದ್ಧರು ಹೆಚ್ಚಾಗಿರುವ ಹಿಮಾಲಯ, ಈಶಾನ್ಯ ಭಾರತ ಪ್ರದೇಶಗಳಲ್ಲಿ ಜನಗಣತಿಯ ಅಂಕಿ ಸಂಖ್ಯೆಗಳನ್ನು ಒಟ್ಟು ಸಂಖ್ಯೆಯಲ್ಲಿ ಕೂಡಿಸಿರುವುದಿಲ್ಲ.

★ 1951 ರಿಂದ 1991 ರ ವರೆಗೆ ಅಂಕಿ ಸಂಖ್ಯೆಗಳನ್ನು ಮುಖ್ಯವಾಗಿ ಡಿ.ಸಿ. ಅಹಿರ ಅವರ ಪುಸ್ತಕದಿಂದ ಬಳಸಿಕೊಳ್ಳಲಾಗಿದೆ.

1951 ರ ಜನಗಣತಿಯ ಪ್ರಕಾರ ಭಾರತದಲ್ಲಿ ಕೇವಲ 1 ಲಕ್ಷ 80 ಸಾವಿರ ಇದ್ದ ಬೌದ್ಧರ ಜನಸಂಖ್ಯೆ 50 ವರ್ಷಗಳಲ್ಲಿ 80 ಲಕ್ಷ ಮುಟ್ಟಿದೆ (2001) ಇದು ಭಾರತದಲ್ಲಿ ಬೌದ್ಧ ಧರ್ಮೀಯರ ಸಂಖ್ಯೆ ದಿನದಿಂದ ದಿನಕ್ಕೆ ಬೆಳೆಯುತ್ತಿರುವುದರ ಸ್ಪಷ್ಟ ಸೂಚನೆಯಾಗಿದೆ. (ಅನುಬಂಧ-8 (ಬ) ಗಮನಿಸಿ)

ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ಬೌದ್ಧಧರ್ಮಕ್ಕೆ ಮತಾಂತರಗೊಂಡ ಬೆನ್ನ ಹಿಂದಲ್ಲೇ ಅಂದಿನ ಕೇಂದ್ರ ಸರ್ಕಾರ ಕೆಲವು ಹಿಂದೂ ಧರ್ಮದ ಹಿತಾಸಕ್ತಿಗಳ ಒತ್ತಾಯಕ್ಕೆ ಮಣಿದು ಒಂದು ಆಜ್ಞೆಯನ್ನು ಹೊರಡಿಸಿತು. ಸದರೀ ಆಜ್ಞೆಯಲ್ಲಿ 'ಯಾರು ಬೌದ್ಧ ಧರ್ಮಕ್ಕೆ ಮತಾಂತರ ಹೊಂದುತ್ತಾರೋ ಅಂತವರಿಗೆ ಪರಿಶಿಷ್ಟ ಜಾತಿಯ ಜನರಿಗೆ ಸಾಂವಿಧಾನಿಕವಾಗಿ ಇರುವ ಮೀಸಲಾತಿ ಸೌಲಭ್ಯಗಳನ್ನು ನಿರ್ಬಂಧಿಸಲಾಗಿದೆ.' ಎಂದು ತಿಳಿಸಲಾಯಿತು. ಈ ನಿರ್ಬಂಧದಿಂದ ದಲಿತರು ಸಂದಿಗ್ದತೆಗೆ ಒಳಗಾದರೂ ಕೂಡ, ಅಂಬೇಡ್ಕರ್‌ರವರು ನೈತಿಕ ಧೈರ್ಯ ತುಂಬಿದರು. ಈ ಕುರಿತು ನ್ಯಾಯಾಲಯದಲ್ಲಿ ಕಾನೂನು ಹೋರಾಟ ಮಾಡುವುದಾಗಿ ಪ್ರಕಟಿಸಿದರು. ಆದರೆ ಕೆಲವೇ ತಿಂಗಳುಗಳಲ್ಲಿ ಅವರು ಮರಣ ಹೊಂದಿದ್ದರಿಂದ ಈ ಹೋರಾಟಕ್ಕೆ ಹಿನ್ನೆಡೆಯಾಯಿತು. ಈ ತಕ್ಷಣದ ಬೆಳವಣಿಗೆಯಿಂದ ಮತಾಂತರ ಚಳವಳಿಗೆ ತಾತ್ಕಾಲಿಕ ಹಿನ್ನೆಡೆ ಕಂಡು ಬಂದರೂ ಕೂಡ, ದಲಿತರು ಬೌದ್ಧ ಧರ್ಮಕ್ಕೆ ಮತಾಂತರ ಗೊಳ್ಳುತ್ತಲೇ ಬಂದರು. ಕೇಂದ್ರ ಸರ್ಕಾರದ ಆಜ್ಞೆಯ ಪ್ರಭಾವದಿಂದ ಜನಸಂಖ್ಯೆಯ ಬೆಳವಣಿಗೆಯ ದರದಲ್ಲಿ ಹಿನ್ನೆಡೆ ಕಂಡುಬಂದಿದ್ದು ಸ್ಪಷ್ಟವಾಗಿದೆ. ಮುಂದೆ ವ್ಹಿ. ಪಿ. ಸಿಂಗ್‌ರವರ ಸರ್ಕಾರ 1991 ರಲ್ಲಿ ಸಂವಿಧಾನಕ್ಕೆ ತಿದ್ದುಪಡಿ ತಂದು ಬೌದ್ಧ ಧರ್ಮಕ್ಕೆ ಮತಾಂತರಗೊಂಡ ದಲಿತರಿಗೆ ಸಾಂವಿಧಾನಿಕವಾಗಿ ಪರಿಶಿಷ್ಟರಿಗೆ ಇರುವ ಸೌಲಭ್ಯಗಳು ಮುಂದುವರೆಯುತ್ತವೆ ಎಂದು ಆದೇಶ ಹೊರಡಿಸಿದಾಗ (ನೋಡಿ, ಅನುಬಂಧ - viii (ಅ)) ಮತ್ತೆ ಅಧಿಕೃತವಾಗಿ ಬೌದ್ಧರೆಂದು ನಮೂದಿಸುವ ಪ್ರಕ್ರಿಯೆ ಪ್ರಾರಂಭವಾಗಿದ್ದನ್ನು ಕಾಣಬಹುದಾಗಿದೆ. ಇದರಲ್ಲಿ ಇನ್ನು ವಿಶೇಷವಾಗಿ ಹೇಳುವುದಾದರೆ ಭಾರತದಲ್ಲಿ ಕಂಡುಬರುವ ಒಟ್ಟು ಬೌದ್ಧರಲ್ಲಿ ಮಹಾರಾಷ್ಟ್ರ ರಾಜ್ಯದಲ್ಲಿಯೇ ಪ್ರತಿಶತ 80% ರಷ್ಟು ಬೌದ್ಧರು ಕಂಡು ಬರುತ್ತಾರೆ. 1991 ರಲ್ಲಿ ಕರ್ನಾಟಕದಲ್ಲಿ ನೊಂದಾಯಿತ ಬೌದ್ಧರ ಸಂಖ್ಯೆ 73 ಸಾವಿರ ಇದ್ದದ್ದು 2001 ರಷ್ಟೋತ್ತಿಗೆ 4 ಲಕ್ಷಕ್ಕೆ ಮುಟ್ಟಿದೆ. ಅಂದರೆ ಕರ್ನಾಟಕದಲ್ಲಿಯೂ ಅಂಬೇಡ್ಕರವರ ಅನುಯಾಯಿಗಳು ಅವರಿಗೆ ಉಂಟಾದ ಕಾನೂನಿನ ತಿಳುವಳಿಕೆಯಿಂದಾಗಿ (ಬೌದ್ಧರೆಂದು ನಮೂದಿಸಿ ಕೊಂಡರೂ ಮೀಸಲಾತಿ ಲೌಲಭ್ಯ ಮುಂದುವರೆಯುತ್ತದೆ ಎಂಬ ತಿಳುವಳಿಕೆ) ಅಧಿ ಕೃತವಾಗಿ ಜನಗಣತಿಯ ಧರ್ಮದ ಕಾಲಂನಲ್ಲಿ ಬೌದ್ಧರೆಂದು ನಮೂದಿಸಿಕೊಳ್ಳುವ ಬೆಳವಣಿಗೆಯನ್ನು ಕಾಣುತ್ತೇವೆ. ಒಟ್ಟು 80 ಲಕ್ಷದ ಜನ ಸಂಖ್ಯೆಯನ್ನು ಹಂಚಿಕೆ ಆಧಾರದ ಮೇಲೆ ವಿಶ್ಲೇಷಿಸುವುದಾದರೆ, ಎಲ್ಲಾ ವಯಸ್ಸಿನ ಬೌದ್ಧರಲ್ಲಿ ಒಟ್ಟು ಪುರುಷರ ಸಂಖ್ಯೆ : 40, 74, 550, ಮಹಿಳೆಯರ ಸಂಖ್ಯೆ : 38,81,052. ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿರು ಬೌದ್ಧರು : 48,93,610. ನಗರ ಪ್ರದೇಶದಲ್ಲಿ : 30,61,597. ಎಂದು ಕಂಡು ಬರುತ್ತದೆ. ಅಂದರೆ ಪಟ್ಟಣ ಪ್ರದೇಶಕ್ಕಿಂತ ಗ್ರಾಮೀಣ ಪ್ರದೇಶದಲ್ಲಿಯೇ ದಲಿತ ಬೌದ್ಧರು ಅಂದರೆ ಒಟ್ಟು ಬೌದ್ಧರಲ್ಲಿರುವ ಪ್ರತಿಶತ 90% ರಟ್ಟಿರುವ ಪರಿಶಿಷ್ಟ ಜಾತಿಯಿಂದ ಬಂದ ಬೌದ್ಧರು ವಾಸಿಸುವುದು ಗ್ರಾಮೀಣ ಪ್ರದೇಶದ ದಲಿತರ ಒಲವನ್ನು (Trend) ಸೂಚಿಸುತ್ತದೆ. ಅಂಬೇಡ್ಕರ್‌ರವರ ಚಳವಳಿಗೆ ಅವರ ವಿಚಾರಧಾರೆಗೆ ತಮ್ಮನ್ನು ಒಗ್ಗಿಸಿಕೊಂಡವರು ಹೆಚ್ಚಾಗಿ ಗ್ರಾಮೀಣ ಪ್ರದೇಶದಿಂದ ಬಂದವರು ಎಂಬುದು ಶಿಕ್ಷಣ ಪಡೆದು ಅಂಬೇಡ್ಕರ್‌ರವರ ವಿಚಾರಧಾರೆಯಿಂದ ಒಟ್ಟು ಪ್ರಭಾವಕ್ಕೆ ಗ್ರಾಮೀಣ ದಲಿತರು ತಮ್ಮನ್ನು ತೆರೆದುಕೊಂಡಿರುವುದು ಇದರಿಂದ ವ್ಯಕ್ತವಾಗುತ್ತದೆ. ಅದೇ ರೀತಿ ಬೌದ್ಧ ಧರ್ಮ ಸ್ವೀಕಾರ ಮಾಡುತ್ತಿರುವ ಪ್ರಕ್ರಿಯೆ ಗ್ರಾಮೀಣ ಪ್ರದೇಶದಲ್ಲಿಯೇ ಹೆಚ್ಚಾಗಿ ಕಂಡು ಬರುತ್ತಿದೆ.

1991 ಹಾಗೂ 2001 ರ ಜನಗಣತಿಗಳು ಇನ್ನೊಂದು ವಿಷಯವನ್ನು ಬಹಿರಂಗಗೊಳಿಸಿವೆ, ಅದೇನೆಂದರೆ ಜನಸಂಖ್ಯೆಯ ಬೆಳವಣಿಗೆ ದರದಲ್ಲಿ ವ್ಯತ್ಯಾಸ ಕಂಡು ಬಂದಿದೆ. ಅಂಕಿ ಅಂಶಗಳನ್ನು ವಿಶ್ಲೇಷಿಸಿದರೆ

1961 ರಿಂದ ಇಲ್ಲಿಯವರೆಗೆ ಅಂದರೆ 2001 ರ ಜನಗಣತಿಯವರೆಗೆ ಹಿಂದೂ ಧರ್ಮವೆಂದು ನೊಂದಾಯಿಸಿಕೊಳ್ಳುತ್ತಿದ್ದವರ ಸಂಖ್ಯೆ ಪ್ರತಿ ಜನಗಣತಿಯಿಂದ ಜನಗಣತಿಗೆ ಕುಸಿಯುತ್ತ ಸಾಗಿದೆ.

1961 ರಲ್ಲಿ (84.4) ರಷ್ಟಿದ್ದ ಹಿಂದೂ ಜನಸಂಖ್ಯೆಯ ಬೆಳವಣಿಗೆ ದರ 1971 ರಲ್ಲಿ (82.7) 1981 ರಲ್ಲಿ (82.6) 1991 ರಲ್ಲಿ (82.0) 2001 ರಲ್ಲಿ (82. 9) ಹೀಗೆ ಇಳಿಕೆಯ ಕ್ರಮದಲ್ಲೆ ಇದೆ.[6] ಹಿಂದೂ ಧರ್ಮದ ಶೋಷಣೆಯಿಂದ ಬೇಸತ್ತ ದಲಿತ ಹಿಂದುಳಿದವರು ಇಂದಿಗೂ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿ ಬುದ್ದನ ತತ್ವಗಳಿಗೆ ಮಾರು ಹೋಗುತ್ತಿರುವ ಧೋರಣೆಯನ್ನು ಇದು ಬಿಂಬಿಸುತ್ತದೆ. ಹಿಂದುಳಿದ ವರ್ಗದವರೂ ಬೌದ್ದಧರ್ಮಕ್ಕೆ ಮತಾಂತರಗೊಳ್ಳುತ್ತಿರುವದು ಕರ್ನಾಟಕದಲ್ಲಿಯೇ ಕಂಡು ಬಂದಿದೆ. ಇದು ಹಿಂದುಳಿದ ವರ್ಗದ ಜನರೂ ಅಂಬೇಡ್ಕರ್‌ರವರ ಪ್ರತಿಪಾದಿಸಿದ 'ವಿಮೋಚನೆಯ ಸಾಧನವಾಗಿ ಬೌದ್ದಧರ್ಮ' (Religion as Emancipatory Tool) ಎಂಬಂತೆ ಅವರ ಮತಾಂತರ ಚಳವಳಿಯ ಸಂದೇಶವನ್ನು ಒಪ್ಪಿಕೊಂಡು ಬೌದ್ದಧರ್ಮಕ್ಕೆ ಮತಾಂತರ ಹೊಂದುತ್ತಿದ್ದಾರೆ.

2001 ರಂದು ಪ್ರಜಾವಾಣಿ ದಿನಪತ್ರಿಕೆಯಲ್ಲಿ ಪ್ರಕಟವಾದ ವರದಿಯಂತೆ ಬೆಂಗಳೂರಿನ ಪ್ರೇಜರಟೌನಿನ ಆರ್. ಪ್ರದೀಪಕುಮಾರ ರೆಡ್ಡಿ ಶ್ರೀರಾಮ ಮಂದಿರ ಪ್ರದೇಶದ ಜಿ. ಪದ್ಮಾವತಿ, ಶೇಷಾದ್ರಿಪುರಂನ ಎನ್. ಸತ್ಯನಾರಾಯಣ, ಆರ್. ಪಿ. ಸಿ. ಲೇಔಟ್, ಎಚ್.ಸಿ.ಲೋಕೇಶ್ ಮತ್ತು ರಾಜಾಜಿ ನಗರದ ಬಿ. ಗಂಗಬೈರಯ್ಯಾ ಅವರು ಈಚೆಗೆ ನಗರದ ಮಹಾಬೋಧಿ ಸೊಸೈಟಿಯಲ್ಲಿ ಬೌದ್ದಧರ್ಮ ಸ್ವೀಕರಿಸಿದ್ದರು'[7], ಆದರೆ ಹಿಂದುಳಿದ ವರ್ಗ (ಎ) ಪಟ್ಟಿಯಲ್ಲಿ ಮತಾಂತರಗೊಂಡ ಹಿಂದುಳಿದ ವರ್ಗದ ಬೌದ್ದರನ್ನು ಸೇರಿಸಿದೆ, ಜಾತಿ ಪ್ರಮಾಣ ಕೊಟ್ಟಿಲ್ಲದ ಕಾರಣ ಇವರ ಮೀಸಲಾತಿ ಕೋರಿಕೆಯನ್ನು ರಾಜ್ಯ ಚುನಾವಣಾ ಆಯೋಗ ಪರಿಗಣಿಸದ ವಿಷಯ ಪ್ರಸ್ತಾಪವಾಗಿದೆ. ಈ ಕುರಿತು ಆಯೋಗ ಪರೀಶೀಲನೆ ನಡೆಸಿ ಕಾನೂನು ಇಲಾಖೆಯಿಂದ ಅಭಿಪ್ರಾಯ ಪಡೆದಿದೆ. ವಸಲಮ್ಮ ಪಾಲ್ ಹಾಗೂ ಕೊಚ್ಚಿ ವಿಶ್ವವಿದ್ಯಾಲಯಗಳ ನಡುವಿನ ಪ್ರಕರಣದಲ್ಲಿ ಸುಪ್ರಿಂಕೋರ್ಟ್ ನೀಡಿರುವ ತೀರ್ಪಿನ ಪ್ರಕಾರ ಸಂವಿಧಾನದ 15(4) ಹಾಗೂ 16(4) ಸೆಕ್ಷನ್‌ಗಳ ಪ್ರಕಾರ ಮತಾಂತರಗೊಂಡ ಹಿಂದುಳಿದವರು ಮೀಸಲಾತಿ ಪಡೆಯಲು ಸಾದ್ಯವಿಲ್ಲ ಎಂದು ಅಧೀನ ಕಾರ್ಯದರ್ಶಿಗಳು ಸ್ಪಷ್ಟ ಪಡಿಸಿದ್ದಾರೆಂದು ವರದಿ ಮಾಡಿದೆ'[8]. ಈ ಘಟನೆಯನ್ನು ಮುಖ್ಯವಾಗಿ ಹಿಂದುಳಿದ ವರ್ಗದವರೂ ಮತಾಂತರಗೊಳ್ಳುತ್ತಿದ್ದಾರೆಂಬುದಕ್ಕೆ ಅಧ್ಯಯನ ದೃಷ್ಟಿಯಿಂದ ಉಲ್ಲೇಖಿಸಲಾಗಿದೆ. ಹಾಗೆಯೇ 1961-71 ರ ಸುಮಾರಿಗೆ ಬೌದ್ದ ಜನ ಸಂಖ್ಯೆಯ ದರ 17.1 ಇದ್ದದ್ದು 1971 ರಲ್ಲಿ (23.8 ) 1981-91 ರಲ್ಲಿ ( 35.03) 1991- 2001 ರಲ್ಲಿ ( 24.5 ) ಹೀಗೆ ದಾಖಲಾಗಿದೆ.'[9]

1981-91 ರ ದಶಕದಲ್ಲಿ ಮಹಾರಾಷ್ಟ್ರ ಮತ್ತು ಇತರ ರಾಜ್ಯಗಳಲ್ಲಿ ಡಾ. ಅಂಬೇಡ್ಕರ್‌ರವರ ವಿಚಾರ ಧಾರೆಯಿಂದ ಪ್ರಭಾವಿತವಾಗಿ ದಲಿತ ಚಳವಳಿ ಅತ್ಯಂತ ಉನ್ನತ ಮಟ್ಟದ ಪ್ರಖರತೆಯನ್ನು ತಲುಪಿತ್ತು. ಆದರೆ ತದನಂತರ 1990 ರ ದಶಕದಲ್ಲಿ ಚಳವಳಿಯು ಹಲವಾರು ರಾಜಕೀಯ ಸಂದಿಗ್ದತೆಗಳಿಗೆ ಒಳಗಾಗಿ ಅದು ಬೌದ್ದ ಧರ್ಮಕ್ಕೆ ದಲಿತರು ಬರುವ ಪ್ರಕ್ರಿಯೆಯ ಮೇಲೂ ತನ್ನ ಪ್ರಭಾವ ಬೀರಿದ್ದನ್ನು ಕಾಣಬಹುದಾಗಿದೆ. ಅಂದರೆ ''ದಲಿತ ಚಳವಳಿ ಯಾವಾಗ ಪ್ರಬಲವಾಗುತ್ತದೆಯೋ ಆಗ ಮತಾಂತರ ಚಳವಳಿಯೂ

ತೀವ್ರವಾಗುತ್ತದೆ". ಮತಾಂತರ ಚಳವಳಿ ತೀವ್ರಗೊಂಡಂತೆ ಬೌದ್ಧರ ಜನಸಂಖ್ಯೆಯಲ್ಲಿಯೂ ಹೆಚ್ಚಳ ಕಂಡುಬಂದಿರುವುದನ್ನು ಗಮನಿಸಬಹುದಾಗಿದೆ.

ಕರ್ನಾಟಕ್ಕೆ ಸಂಬಂಧಿಸಿದಂತೆ ಲಭ್ಯವಿರುವ ಅಂಕಿ ಸಂಖ್ಯೆಗಳನ್ನು ವಿಶ್ಲೇಷಿಸಿದಾಗ, 1970 ರ ಹಾಗೂ 80 ರ ದಶಕದಲ್ಲಿ ಕರ್ನಾಟಕದಲ್ಲಿ ದಲಿತ ಚಳವಳಿ ತನ್ನ ಪ್ರಖರತೆಯ ಉನ್ನತ ಮಟ್ಟವನ್ನು ತಲುಪಿದ್ದರಿಂದ ಅಧಿಕೃತವಾಗಿ ತಾವು ಬೌದ್ಧರೆಂದು ದಲಿತರು ನೋಂದಾಯಿಸಿಕೊಳ್ಳುವ ಪ್ರಕ್ರಿಯೆ ತೀಕ್ಷ್ಣವಾಗಿದ್ದರಿಂದ ಬೌದ್ಧ ಜನಸಂಖ್ಯೆಯು 2001 ಕ್ಕೆ 4 ಲಕ್ಷ ತಲುಪಿರುವದು ಕಂಡುಬಂದಿದೆ. 2001 ರಲ್ಲಿ ರಾಷ್ಟ್ರ ಮಟ್ಟದಲ್ಲಿ, ಕರ್ನಾಟಕದ ಬೆಂಗಳೂರಿನಲ್ಲಿ ಹಾಗೂ ಇತ್ಯಾದಿ ಕಡೆ ಬೃಹತ್ ಮತಾಂತರ ಕಾರ್ಯಕ್ರಮಗಳು ನಡಿದೆವೆ. ಅಲ್ಲಿ ಕರ್ನಾಟಕದ ಅಸಂಖ್ಯಾಂತ ದಲಿತರು ಬೌದ್ಧ ಧರ್ಮ ದೀಕ್ಷೆ ಪಡೆದುಕೊಂಡಿದ್ದಾರೆ. ಈ ರೀತಿಯಾಗಿ ಅನೇಕ ಮತಾಂತರದ ಅಂಕಿಸಂಖ್ಯೆಗಳು ನೇರವಾಗಿ ಲಭ್ಯವಾಗಿಲ್ಲದ ಕಾರಣ ವಿಶ್ಲೇಷಣೆಗೆ ಮಿತಿಯುಂಟಾಗಿದೆ ಎಂದು ಹೇಳಬಹುದು. ಇತ್ತೀಚಿಗೆ ಅಂದರೆ 2002 ರಲ್ಲಿ ಅಂಬೇಡ್ಕರ್‌ರವರ ವಿಚಾರಧಾರೆಯನ್ನೇ ಆಧರಿಸಿ ರಾಜಕೀಯ ಚಳವಳಿ ಪ್ರಾರಂಭಿಸಿದ, ಬಹುಜನ ಸಮಾಜ ಪಕ್ಷದ ಸಂಸ್ಥಾಪಕ ಅಧ್ಯಕ್ಷ ಕಾನ್ಷಿರಾಂ ಅವರೂ ಸಹ ತಮ್ಮ 20 ಕೋಟಿ ಬಹುಜನ ಅನುಯಾಯಿಗಳೊಂದಿಗೆ ದಿನಾಂಕ : 14.10.2006 ರಂದು ಬೌದ್ಧ ಧರ್ಮಕ್ಕೆ ಮತಾಂತರ ಹೊಂದುವುದಾಗಿ'[10] ಘೋಷಿಸಿದ್ದಾರೆ. ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ಹಿಂದೂ ಧರ್ಮ ತೊರೆದು ಬೌದ್ಧ ಧರ್ಮ ದೀಕ್ಷೆ ಪಡೆದು ಅಂದಿಗೆ (14.10.1956) 50 ವರ್ಷಗಳು ಮುಗಿಯುತ್ತವೆ. ಹೀಗಾಗಿ ಅಂಬೇಡ್ಕರ್‌ರವರ ಮತಾಂತರ ಚಳವಳಿಯ ಸುವರ್ಣ ವಾರ್ಷಿಕೋತ್ಸವ ಹಾಗೂ 50 ನೇಯ ಧರ್ಮಚಕ್ರ ಪ್ರವರ್ತನ ದಿನದತ್ತ ಎಲ್ಲ ಹಿತಾಸಕ್ತಿಗಳ ಕಣ್ಣು ದೃಷ್ಠಿ ನೆಟ್ಟಿರಬಹುದು. ನಮ್ಮ ದೇಶದ ಸಂಘಸಂಸ್ಥೆಗಳು ಕಣ್ಣು ದೃಷ್ಟಿ ಇಡದೇ ಹೊದರು ಪ್ರತಿನಿತ್ಯ ವಿದೇಶಿ ಸರ್ಕಾರದ ರಹಸ್ಯ ಶೋಧನೆಯ ಸಂಸ್ಥೆಗಳು ಬೌದ್ಧ ಧರ್ಮಕ್ಕೆ ಸೇರುತ್ತಿರುವವರ ಲೆಕ್ಕ ಹಾಕುತ್ತಲೇ ಇರುವುದನ್ನು ವೆಬ್‌ಸೈಟ್‌ಗಳಲ್ಲಿ ನೋಡಬಹುದಾಗಿದೆ.

ಈ ರೀತಿಯ ಸಂಖ್ಯಾತ್ಮಕ ವಿಶ್ಲೇಷಣೆಯ ನಂತರ ಒಂದು ಸಮಕಾಲೀನ ಸತ್ಯ ನಮಗೆ ಗೋಚರವಾಗುತ್ತದೆ. ಬೌದ್ಧ ಧರ್ಮಕ್ಕೆ ದಲಿತರು ಮತಾಂತರವಾಗುವುದನ್ನು ಅದರ ಪ್ರಸಾರವಾಗುವುದನ್ನು ಯಾವ ಶಕ್ತಿಗಳೇ ತಡೆಯಲಿ ಅದು ಆಧುನಿಕ ಭಾರತದಲ್ಲಿ ಬೆಳೆಯುತ್ತಲೇ ನಡೆದಿದೆ ಎಂಬುದು ಸ್ವಯಂ ವೇದ್ಯವಾಗಿದೆ. ಹಲವಾರು ಅಧ್ಯಯನಗಳು, ಹಲವಾರು ಸಮೀಕ್ಷೆಗಳು ದಲಿತರಲ್ಲಿ ಇಂದು ಬೌದ್ಧಧರ್ಮ ಕೇವಲ ಒಂದು ಐಡೆಂಟಿಟಿಯಾಗಷ್ಟೇ ತಾತ್ವಿಕ ನೆಲೆಯಲ್ಲಿ ಸ್ಥಿತ್ಯವಾಗಿಲ್ಲ, ಅದು ಜೀವನದ ಒಂದು ಕ್ರಮವಾಗಿ 'ಚಲನಶೀಲ ಸಂಸ್ಕೃತಿಯಾಗಿ' ಆಳವಾದ ನೆಲೆಯಲ್ಲಿಯೂ ತನ್ನ ನೆಲೆ ಸ್ಥಾಪಿಸಿದೆ. ಸರ್ಕಾರಗಳೇ ಪ್ರಯತ್ನಿಸಿದರೂ, ಕಾನೂನು ಜಾರಿಗೊಳಿಸಿದರೂ (ತಮಿಳುನಾಡು, ಗುಜರಾತ ಸರ್ಕಾರಗಳು ಮತಾಂತರ ನಿಷೇಧ ಕಾಯ್ದೆ ಜಾರಿಗೆ ತಂದಿವೆ) ಬೌದ್ಧ ಧರ್ಮಕ್ಕೆ ಮತಾಂತರಗೊಳ್ಳುತ್ತಿರುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಈ ಮಾತನ್ನು ದೇಶದ ರಾಜಧಾನಿ ನವದೆಹಲಿಯಲ್ಲಿ ಬಲಪಂಥಿಯ ಸರ್ಕಾರದ ಆಳ್ವಿಕೆ ಇರುವಾಗ ನವ್ಹೆಂಬರ 4, 2001 ರಲ್ಲಿ ನವದೆಹಲಿಯಲ್ಲಿ ಸಂಘಟಿಸಿದ ಉದಿತ್‌ರಾಜ್‌ರವರ ಮತಾಂತರ ಚಳವಳಿ ಸಾಬೀತು ಪಡಿಸಿದೆ. (ನೋಡಿ : ಅನುಬಂಧ-V, ಚಿತ್ರ : 11 ಮತ್ತು 12 ನೋಡಿ)

ಹೀಗೆ ಪ್ರಸ್ತುತ ಕಾಲಘಟ್ಟದಲ್ಲಿಯೂ ಕೂಡ ಅಂಬೇಡ್ಕರ್‌ರವರು ಪ್ರಾರಂಭಿಸಿದ ಮತಾಂತರ ಚಳವಳಿ ತನ್ನದೇ ಆದ ಗತಿಯಲ್ಲಿ ಮುನ್ನಡೆದಿದೆ. ಬೇರೆ ಬೇರೆ ಧರ್ಮಗಳಿಗೆ ದಲಿತರು ಮತಾಂತರವಾಗುತ್ತರಾದರೂ ಆ ಗತಿ ಬೌದ್ಧ ಧರ್ಮಕ್ಕೆ ಮತಾಂತರವಾಗುತ್ತಿರುವುದರ ತೀವ್ರತೆಗಿಂತ ಸ್ವಲ್ಪ ನಿಧಾನವೆಂದೇ ಹೇಳಬೇಕು. ಬೇರೆ ಬೇರೆ ಧರ್ಮಗಳು ದಲಿತರು ತಮ್ಮ ಧರ್ಮಕ್ಕೆ ಮತಾಂತರಗೊಳ್ಳಲು ಪ್ರೇರಣೆ ನೀಡುತ್ತಿರಬಹುದು. ಆದರೆ, ದಲಿತರು ಬೌದ್ಧ ಧರ್ಮಕ್ಕೆ ಪ್ರತಿನಿತ್ಯ ಬರುತ್ತಿರುವುದರ ಹಿಂದೆ ಅವರ ಪ್ರಜ್ಞೆ, ಸ್ವಂತ ನಿರ್ಧಾರ ಇರುತ್ತದೆ. ಅದನ್ನೇ ಬುದ್ಧ ಪ್ರತಿಪಾದಿಸಿರುವುದು ಬೌದ್ಧ ಧರ್ಮವು ಮನೋಭಾವಕ್ಕಿಂತ (Emotional) ಬುದ್ಧಿಶಕ್ತಿಗೆ (Intellect) ಹೆಚ್ಚು ಹಿಡಿಯುತ್ತದೆ. ಇದು ಉಪಾಸಕರ ನಡತೆಗೆ ಹೆಚ್ಚು ಆಸಕ್ತಿ ತಾಳುತ್ತದೆಯೇ ಹೊರತು ಅವರ ಸಂಖ್ಯಾ ಬಲಕ್ಕಲ್ಲ[11] ಎಂಬ ನಿಲುವು ಇವತ್ತಿನ ಮತಾಂತರ ಪ್ರಕ್ರಿಯೆಯ ಮೇಲೆ ಬರೆದ ಭಾಷ್ಯದಂತಿದೆ.

ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ ಘಟನೆಗಳನ್ನು ಅವಲೋಕಿಸಿದರೆ ತಮಗೆ ಯಾವುದಾದರೂ ಲಾಭ ಸಿಗುತ್ತದೆ ಎಂದು ಮತಾಂತರ ಹೊಂದಿದ ಉದಾಹರಣೆಗಳಿಲ್ಲ. ಒಮ್ಮೆ ಬುದ್ಧ ಮಾರ್ಗಕ್ಕೆ ಬಂದರೆ, ಅದು ಬರುವಂತವರ ಮನೋಭೂಮಿಕೆಯಲ್ಲಿ ತೆಗೆದುಕೊಂಡ ಬೌದ್ಧಿಕ ನಿರ್ಣಯವಾಗಿರುತ್ತದೆ. ಬೀದರ ಜಿಲ್ಲೆಯಲ್ಲಿ ಡಾ. ಅಂಬೇಡ್ಕರ್‌ರವರೊಂದಿಗೆ 1956 ರಲ್ಲಿ ಬೌದ್ಧ ಧರ್ಮಕ್ಕೆ ಮತಾಂತರಗೊಂಡ ಗ್ರಾಮೀಣ ಭಾಗದ ಜನರು ಕೂಡ ಇಂದಿಗೂ ಕೂಡ ಅದೇ ಪ್ರಮಾಣದ ಪ್ರಖರವಾದ ಬೌದ್ಧೀಯತೆಯನ್ನು ಹೊಂದಿದವರಾಗಿರುತ್ತಾರೆ. ಮೈಸೂರು ಪ್ರಾಂತ್ಯದಲ್ಲಿ ಹಿಂದೆ ಕ್ರೈಸ್ತ ಧರ್ಮಕ್ಕೆ ಮತಾಂತರ ಹೊಂದಿದ ದಲಿತರು ಇಂದು ಅಂಬೇಡ್ಕರ್‌ರವರ ವಿಚಾರಧಾರೆಯಿಂದ ಪ್ರಭಾವಿತರಾಗಿ ಬೌದ್ಧ ಧರ್ಮದ ಕಡೆಗೆ ಬರುತ್ತಿರುವ ಪ್ರಕ್ರಿಯೆ ಹಲವಾರು ಮುನ್ನೋಟಗಳಿಗೆ ಎಡೆಮಾಡಿ ಕೊಡುತ್ತಿದೆ. ಈ ಕುರಿತು ವಿಸ್ತೃತವಾದ ಪ್ರತ್ಯೇಕ ಅಧ್ಯಯನದ ಅವಶ್ಯಕತೆ ಇದೆ. ಈ ಪ್ರಕ್ರಿಯೆ ಕರ್ನಾಟಕದಲ್ಲಿ ದಲಿತ ಚಳವಳಿ ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ತನ್ನ ಚಟುವಟಿಕೆಗಳನ್ನು ಹಮ್ಮಿಕೊಂಡಾಗ ಹೆಚ್ಚು ಪ್ರಭಾವ ಬೀರಿರುವುದನ್ನು ಕಾಣುತ್ತೇವೆ.

ಡಾ. ಅಂಬೇಡ್ಕರ್‌ರವರ ಜಯಂತಿ, ದಲಿತ ವಿಚಾರ ಸಂಕಿರಣ, ಅಥವಾ ಯಾವುದೇ ಕಾರ್ಯಕ್ರಮಗಳಲ್ಲಿ ಡಾ. ಅಂಬೇಡ್ಕರ್‌ರವರ ಭಾವಚಿತ್ರದ ಜೊತೆಗೆ ಬುದ್ಧನ ಭಾವಚಿತ್ರವನ್ನು ಪ್ರತಿಷ್ಠಾಪಿಸಿ ಕಾರ್ಯಕ್ರಮ ನಡೆಸುವುದು ಸರ್ವೇ ಸಾಮಾನ್ಯವಾಗಿ ಕಂಡು ಬರುತ್ತದೆ. ಡಾ. ಎನ್. ಚಿನ್ನಸ್ವಾಮಿ ಸೋಸಲೆಯವರು ಗಮನಿಸಿದಂತೆ ಈ ರೀತಿಯ ಪ್ರಕ್ರಿಯೆ ಅಂದರೆ 'ಡಾ. ಅಂಬೇಡ್ಕರ್‌ರವರ ಭಾವಚಿತ್ರದೊಂದಿಗೆ ಬುದ್ಧನ ಭಾವಚಿತ್ರ ಬಳಸುವುದು ಖಂಡಿತವಾಗಿ ದಲಿತರ ಮೇಲೆ, ಅದರಲ್ಲೂ ಯುವಕರ ಮೇಲೆ ಪದೇ ಪದೇ ಪ್ರಭಾವ ಬೀರಿ ಬೌದ್ಧ ಧರ್ಮದ ಕಡೆಗೆ ಆಳವಾಗಿ ಲಕ್ಷ್ಯ ವಹಿಸಲು ಆ ಕುರಿತು ತಿಳಿದುಕೊಳ್ಳಲು ಪ್ರೇರಣೆಯುಂಟು ಮಾಡಿದೆ'. ಹೀಗೆ ದಲಿತರು ಬೌದ್ಧ ಧರ್ಮದ ಕಡೆಗೆ ಬರುತ್ತಿರುವುದು ಸಂಖ್ಯಾತ್ಮಕವಾಗಿಯೂ ಹಾಗೂ 'ವಿವೇಚನಾಶೀಲ ಸಾಂಸ್ಕೃತಿಕ ನಿರ್ಣಯದ' ತಳಹದಿಯ ಮೇಲೆಯೂ ನಡೆಯುತ್ತಿದೆ ಎಂಬುದನ್ನು ಗಮನಿಸಬಹುದಾಗಿದೆ.

ದಲಿತರು ಬೌದ್ಧ ಧರ್ಮಕ್ಕೆ ಬರುವ ಗತಿ ದಕ್ಷಿಣ ಕರ್ನಾಟಕದಲ್ಲಿ ನಿಧಾನವಾಗಿ ಗೋಚರಿಸಲಿಕ್ಕೆ ಡಾ. ಅಂಬೇಡ್ಕರ್‌ರವರ ಪ್ರವಾಸಗಳಿಗೆ ಮೈಸೂರು ಒಡೆಯರ ಸರ್ಕಾರ ವಿಧಿಸಿದ ನಿರ್ಬಂಧ ಮುಖ್ಯ

ಕಾರಣವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಈ ನಿಲುವಿಗೆ ಖಚಿತವಾದ ಪುರಾವೆಗಳನ್ನು ನಾವು ನೋಡಬಹುದಾಗಿದೆ. 1920 ರ ದಶಕದಲ್ಲಾಗಲೇ ಅಂಬೇಡ್ಕರ್‌ರವರು ಅಸ್ಪೃಶ್ಯರ ನಾಯಕರೆಂದು ದೇಶವ್ಯಾಪ್ತಿಯಾಗಿ ಪ್ರಚಾರವಾಗಿರುವುದನ್ನು ನಾವು ನೋಡುತ್ತೇವೆ. ಡಾ. ಮನೋಹರ ಯಾದವ ಅವರು ಗುರುತಿಸುವಂತೆ ಮೈಸೂರು ಭಾಗದಲ್ಲಿ ದಲಿತಾಭಿವೃದ್ಧಿಯಲ್ಲಿ ತೊಡಗಿದ್ದ ಗೋಪಾಲಸ್ವಾಮಿ ಅಯ್ಯರ್,[12] ಅವರು 1920 ರಲ್ಲಿ 'ಪಂಚಮರ ರಾಜಕೀಯ ಸಮ್ಮೇಳನ' ಕ್ಕೆ ಬರಬೇಕೆಂದು ಆಹ್ವಾನಿಸಿದಾಗ, ಅಂಬೇಡ್ಕರ್‌ರವರಿಗೆ ಈ ಸಮ್ಮೇಳನಕ್ಕೆ ಬರಲು ಸಾಧ್ಯವಾಗಲಿಲ್ಲ. ಅಂಬೇಡ್ಕರ್ ಚಳವಳಿಯ ಹಲವಾರು ಆಯಾಮಗಳ ಅಧ್ಯಯನ ಮಾಡಿರುವ ಗೇಲ್ ಓಂವೆಡ್ತ ಅವರು ಹೇಳುವಂತೆ 'ಮೈಸೂರು ರಾಜ್ಯದಲ್ಲಿ ಅಂಬೇಡ್ಕರ್‌ರವರು ಪ್ರವೇಶಿಸದಂತೆ ನಿರ್ಬಂಧ ವಿಧಿಸಿದ್ದರಿಂದ ಅಂಬೇಡ್ಕರ್‌ರವರು ಈ ಸಮ್ಮೇಳನಕ್ಕೆ ಬರಲಾಗಲಿಲ್ಲ'[13] ವೆಂದು ದಾಖಲಿಸುತ್ತಾರೆ. ಆದರೆ, ಗೇಲ್ ಓಂವೆಡ್ತ ಅವರು ದಾಖಲಿಸಿದಂತೆ ಅಂತಹ ಪ್ರಗತಿಪರ ಹಿಂದೂ ರಾಜ್ಯದಲ್ಲಿಯೂ ಅಂಬೇಡ್ಕರ್ ಅಭಿಮಾನಿಗಳಿದ್ದರೆಂಬುದು ಮುಖ್ಯವಾಗಿದೆ. 1937 ರಲ್ಲಿ ಮಹಾರಾಷ್ಟ್ರದ ದಲಿತ ವಿದ್ಯಾರ್ಥಿಯೊಬ್ಬ ಬೆಂಗಳೂರಿಗೆ ಬಂದಾಗ ಆತ ಇಲ್ಲಿನ ದಲಿತ ಅಭಿವೃದ್ಧಿಯ ಕುರಿತು ಹರ್ಷಗೊಂಡವನಾಗಿ 'ಅಂಬೇಡ್ಕರ್‌ರವರ ಬಗ್ಗೆ ಇಲ್ಲಿನ ಯುವಕರ ಅನಿಸಿಕೆಗಳೇನು' ಎಂದು ಹರಿಜನ ಸೇವಕ ಸಂಘದ ವಿದ್ಯಾರ್ಥಿ ನಿಲಯಗಳ ವಿದ್ಯಾರ್ಥಿಗಳಿಗೆ ಕೇಳಿದನು. ಹಾಗೆಯೇ 'ಅಂಬೇಡ್ಕರ್‌ರವರು ಎರಡು ವರ್ಷಗಳ ಹಿಂದೆ ದಲಿತರು ಹಿಂದೂ ಧರ್ಮದಲ್ಲಿ ಇದ್ದರೆ, ಅವರಿಗೆ ಯಾವ ಹಕ್ಕುಗಳು ದೊರೆಯಲಾರವು ಎಂದು ಹೇಳಿದ ಕುರಿತು ನಿಮ್ಮಲ್ಲಿನ ಜನರ ಪ್ರತಿಕ್ರಿಯೆ ಏನು?' ಎಂದು ಕೇಳಿದಾಗ ಆಗ ಬೆಂಗಳೂರಿನ ಯುವಕ 'ಅಂಬೇಡ್ಕರ್‌ರವರು ಹೇಳಿದಂತೆ ನಾವು ಮತಾಂತರಕ್ಕೆ ಒಪ್ಪಿಕೊಂಡೆವು. ಆ ಸಮಯದಲ್ಲಿ ನಾವೆಲ್ಲ ಮುಸ್ಲಿಂ ಧರ್ಮಕ್ಕೆ ಮತಾಂತರ ಹೊಂದಲು ನಿರ್ಧರಿಸಿದ್ದೆವು. ಇದನ್ನು ವಿರೋಧಿಸಲು ಇಲ್ಲಿನ ಹಿಂದೂಗಳಿಗೆ ಧೈರ್ಯವಿರಲಿಲ್ಲ, ಮೈಸೂರು ರಾಜ್ಯದಲ್ಲಿ ಅಧಿ ಕಾರಿಗಳಿಗೆ ಅಸ್ಪೃಶ್ಯರಿಗೆ ದೇವಾಲಯಗಳನ್ನು ಮುಕ್ತವಾಗಿಸುವುದು ಬೇಕಾಗಿಲ್ಲ. 'ಇಂತಹ ಮಾನವೀಯತೆಯಿಲ್ಲದ ಧರ್ಮದಲ್ಲಿದ್ದು ಪ್ರಯೋಜನವೇನು? ಉಳಿದ ಸೌಲಭ್ಯಗಳಿಗಿಂತ, ಸಂಪತ್ತಿಗಿಂತ ನಮಗೆ ಮಾನವೀಯತೆ ಬೇಕಾಗಿದೆ'[14] ಎಂದು ವಿದ್ಯಾರ್ಥಿಗಳು ವಿವರಿಸಿದರು. ಮಹಾರಾಷ್ಟ್ರದ ಈ 'ಪ್ರವಾಸಿ ವಿದ್ಯಾರ್ಥಿ ಮುಖಂಡ' ನ ವರದಿ ಮೈಸೂರು ರಾಜ್ಯದ ಅಂದಿನ ಪರಿಸ್ಥಿತಿಗೆ ಹಿಡಿದ ಕನ್ನಡಿಯಾಗುವುದರ ಜೊತೆಗೆ ಡಾ. ಅಂಬೇಡ್ಕರ್‌ರವರ ಅನುಯಾಯಿಗಳು, ಮೈಸೂರು ರಾಜ್ಯದಲ್ಲಿ ಇದ್ದರೆಂಬುದಕ್ಕೆ ನಿದರ್ಶನ ನೀಡುತ್ತದೆ. ಡಾ. ಮನೋಹರ ಯಾದವ (1998) ಈ ಕುರಿತು ಪ್ರತಿಕ್ರಿಯಿಸುತ್ತಾ 'ಮೈಸೂರು ರಾಜ್ಯದ ದಲಿತರಿಗೆ ಆ ವೇಳೆಗೆ ಪೂರ್ಣ ಪ್ರಮಾಣದ ಅಂಬೇಡ್ಕರ್‌ರವರ ಪರಿಚಯ ಇರದೇ ಇದ್ದಿರಬಹುದು. ಸ್ವಾತಂತ್ರ ನಂತರವೇ ಅಖಿಲ ಭಾರತ ಮಟ್ಟದಲ್ಲಿ ತಮ್ಮ ಹಕ್ಕುಗಳ ರಕ್ಷಕರನ್ನಾಗಿ ತಮ್ಮ ವಿಮೋಚಕನನ್ನಾಗಿ ಪರಿಕಲ್ಪಿಸಿಕೊಂಡಂತೆ ಕಾಣುತ್ತದೆ'[15] ಎಂದು ಅಭಿಪ್ರಾಯ ಪಡುತ್ತಾರೆ. ಉತ್ತರ ಕರ್ನಾಟಕದಲ್ಲಿನ ದಲಿತರು ಈ ದೃಷ್ಟಿಯಿಂದ ಅದೃಷ್ಟವಂತರೆಂದು ಹೇಳಿದರೆ ತಪ್ಪಾಗಲಾರದು. ಈ ಭಾಗ ಮುಂಬೈ ಪ್ರಾಂತ್ಯದ ಆಡಳಿತಕ್ಕೆ ಒಳಪಟ್ಟಿದ್ದರಿಂದ, ಸರ್ಕಾರವೇ ಅಂಬೇಡ್ಕರ್‌ರವರನ್ನು ಹಲವಾರು ಸಮಿತಿಗಳಲ್ಲಿ ಸದಸ್ಯರನ್ನಾಗಿ ನಾಮಕರಣ ಮಾಡಿದ್ದರಿಂದ ಮುಂಬೈ ಹೈಕೋರ್ಟ್‌ನಲ್ಲಿ ವಕೀಲಿ ವೃತ್ತಿಯ ವಿಷಯಗಳಿಗೆ ಸಂಬಂಧಿಸಿದಂತೆ ಈ ಭಾಗದ ಜನರು ಡಾ. ಅಂಬೇಡ್ಕರ್‌ರವರ ಸಂಪರ್ಕಕ್ಕೆ ಬಂದಿದ್ದರಿಂದ ಈ ಭಾಗದ ಬೆಳಗಾವಿ, ನಿಪ್ಪಾಣಿ, ಚಿಕ್ಕೋಡಿ, ಬೇಡ್ಕಿಹಾಳ, ಅಥಣಿ, ಬಿಜಾಪೂರ, ಬಾಗಲಕೋಟ ಹಾಗೂ ಬೀದರ, ಗುಲ್ಬರ್ಗಾದಲ್ಲಿ ಹಲವಾರು ಮಹತ್ವದ ಸಭೆಗಳಿಗೆ ಅಂಬೇಡ್ಕರ್‌ರವರು ಬಂದು ಹೋಗಿದ್ದಾರೆ. 1923 ರಲ್ಲಿ ಧಾರವಾಡದಲ್ಲಿ ಅವರ ಪತ್ನಿ ರಮಾಬಾಯಿಯವರೊಂದಿಗೆ ಆಗಮಿಸಿ ಒಂದು

ತಿಂಗಳ ಕಾಲ ವಾಸ್ತವ್ಯ ಮಾಡಿದ್ದು ಕಂಡು ಬರುತ್ತದೆ. ಇಲ್ಲಿ ದಲಿತ ವರ್ಗದ ವಿದ್ಯಾರ್ಥಿಗಳಿಗೆ ಒಂದು ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದ್ದಾರೆ. ಇದೇ ವೇಳೆಗೆ ಧಾರವಾಡದಲ್ಲಿ ಮಚಗಾರ ಮಹಾಸಂಘವನ್ನು ಉದ್ಘಾಟಿಸಿದ್ದಾರೆ.[16] ಇದು ಅವರ ವ್ಯಕ್ತಿತ್ವದ ವ್ಯಾಪಕತೆಗೆ, ದಲಿತರ ಎಲ್ಲ ಜಾತಿಗಳಿಗೆ ಅವರು ಧುರೀಣತ್ವ ವಹಿಸಿದ್ದರೆಂಬುದಕ್ಕೆ ಉತ್ತಮ ನಿದರ್ಶನವಾಗಿವೆ.

ಮೈಸೂರು ಪ್ರಾಂತ್ಯದಲ್ಲಿ ತಮ್ಮ ರೀಜೆನ್ಸಿ ಅಧಿಕಾರವನ್ನು ರದ್ದುಮಾಡಿದ್ದರಿಂದ ಮೈಸೂರು ಸಂಸ್ಥಾನದ ಆಡಳಿತ 1902 ರಲ್ಲಿ ಮೈಸೂರು ಒಡೆಯರಿಗೆ ಲಭಿಸಿತು. ಪ್ರಗತಿಪರ ಕಾನೂನುಗಳ ಮೂಲಕ ವಿಶೇಷವಾಗಿ ದಲಿತಾಭಿವೃದ್ಧಿಗೆ ಪೂರಕವಾದ ಕಾರ್ಯಕ್ರಮ ಹಮ್ಮಿಕೊಂಡ ನಾಲ್ವಡಿ ಕೃಷ್ಣರಾಜ ಒಡೆಯರಂತಹ ಕ್ರಾಂತಿಕಾರಿ ಎನ್ನಬಹುದಾದ ಕಾಲಘಟ್ಟದಲ್ಲೇ ಅಂದು ಅಖಿಲ ಭಾರತ ಮಟ್ಟದ ಅಸ್ಪೃಶ್ಯ ನಾಯಕರಾಗಿ ಹೊರಹೊಮ್ಮಿದ್ದ ಅಂಬೇಡ್ಕರ್‌ರವರ ಪ್ರವೇಶಕ್ಕೆ ನಿರ್ಬಂಧ ವಿಧಿಸಿರುವುದು ಚಾರಿತ್ರಿಕ ವಿಪರ್ಯಾಸವೆಂದರೆ ಅತಿಶಯೋಕ್ತಿಯಾಗಲಾರದು. ಈ ಘಟನೆ ಜಾತಿ ವ್ಯವಸ್ಥೆಯ ಕ್ರೂರತೆ ಮತ್ತು ಹುನ್ನಾರಗಳಿಗೆ ಹಿಡಿದ ಕನ್ನಡಿಯಾಗಿದೆ. ದಲಿತ ಚಳವಳಿಯ ಚಿಂತಕ ಡಾ. ಮನೋಹರ ಯಾದವ ಈ ಘಟನೆಯನ್ನು ಕಟುವಾಗಿ ವಿಮರ್ಶಿಸುತ್ತ 'ಗಾಂಧೀಜಿಯವರಿಗೆ ಮೈಸೂರಿನಲ್ಲಿ ಸಿಕ್ಕ ರಾಜ ಮರ್ಯಾದೆ, ಅಸ್ಪೃಶ್ಯ ನಾಯಕರಾದ ಅಂಬೇಡ್ಕರ್‌ರವರ ಮೈಸೂರು ಪ್ರಾಂತ್ಯ ಪ್ರವೇಶಕ್ಕೆ ವಿಧಿಸಿದ ನಿರ್ಬಂಧ, ಗಾಂಧೀಜಿಯವರೇ 'ಮೈಸೂರು ರಾಜ್ಯ ರಾಮ ರಾಜ್ಯ ಎಂಬ ಹೇಳಿಕೆಗೆ ವ್ಯತಿರಿಕ್ತವಾದ ನಡವಳಿಕೆ ಮತ್ತು ಈ ರಾಜ್ಯದಲ್ಲಿ ದಲಿತ ಅಭಿವೃದ್ಧಿಗೆ ಇರುವ ತೊಡಕುಗಳನ್ನು ಸೂಚಿಸುತ್ತದೆ'[17] ಎಂದು ದಾಖಲಿಸುತ್ತಾರೆ. ಇದೊಂದು ರೀತಿಯಲ್ಲಿ ಶಂಬೂಕನ ಹತ್ಯೆಯನ್ನು ನೆನಪಿಸುತ್ತದೆ ಎಂದು ಬರೆಯುತ್ತಾರೆ. ಏನೆ ಇರಲಿ ಪ್ರಗತಿಪರ ನಿಲುವಿನ, ಕ್ರಿಯೆಯ, ಮೈಸೂರು ಅರಸರು ಆ ರೀತಿಯ ನಿರ್ಬಂಧ ವಿಧಿಸಲು ಕಾರಣವಾದ ಪರಿಸ್ಥಿತಿಯನ್ನು ನಾವು ವಿವರವಾಗಿ ಅವಲೋಕಿಸಬೇಕಾಗುತ್ತದೆ. ಮೈಸೂರಿನ ಅರಸರ ಕೈ ಕೆಳಗೆ ಆ ಸಂದರ್ಭದಲ್ಲಿ ನಿರ್ಧಾರಗಳನ್ನು ಕೈಗೊಳ್ಳುತ್ತಿದ್ದ ಸವರ್ಣಿಯ ಶಕ್ತಿಗಳೇ ಮೈಸೂರು ಅರಸರಿಂದ ಅಂಬೇಡ್ಕರ್‌ರವರ ಪ್ರವೇಶಕ್ಕೆ ನಿರ್ಬಂಧ ವಿಧಿಸುವಲ್ಲಿ ಹುನ್ನಾರ ಹೆಣೆದಿರುವುದನ್ನು ಅಲ್ಲಗಳೆಯಲಾಗದು.

ಆದರೆ ಮುಂದೆ ಕಾಲಕ್ರಮೇಣ ಮೈಸೂರು ಒಡೆಯರಿಗೆ ಅಂಬೇಡ್ಕರ್‌ರವರ ನಿಜವಾದ ವ್ಯಕ್ತಿತ್ವ ಪರಿಚಯವಾದಂತೆ ಕಾಣುತ್ತದೆ. ಮೈಸೂರು ಒಡೆಯರಿಗೆ ಕಾನೂನು ಸಲಹೆಗಾರರಾಗಿ ಅಂಬೇಡ್ಕರ್‌ರವರು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಜಯಚಾಮರಾಜೇಂದ್ರ ಒಡೆಯವರನ್ನು ಭೇಟಿ ಮಾಡಿದ್ದಾರೆ. ತಮ್ಮ ಉದ್ದೇಶಿತ ಬೌದ್ಧ ಬಿಕ್ಕು ತರಬೇತಿ ವಿಹಾರ'[18] ಬೆಂಗಳೂರಿನಲ್ಲಿ ಪ್ರಾರಂಭಿಸಲು ಭೂಮಿಯನ್ನು ಮಂಜೂರಿ ಮಾಡಲು ವಿನಂತಿಸಿದ್ದಾರೆ. ಅಂಬೇಡ್ಕರ್‌ರವರ ಚಿಂತನೆಗೆ ಸ್ಪಂದಿಸಿದ ಮೈಸೂರು ಮಹಾರಾಜರಿಂದ 05 ಎಕರೆ ಭೂಮಿಯನ್ನು ಕೊಡುಗೆ ನೀಡಿರುವುದು ಕಂಡು ಬರುತ್ತದೆ. ಅದೇ ಭೂಮಿಯಲ್ಲಿ ಇಂದು ಬಿ. ಬಸವಲಿಂಗಪ್ಪನವರಿಂದ ನಾಗಸೇನಾ ವಿದ್ಯಾಲಯ ಸ್ಥಾಪನೆಗೊಂಡಿರುವುದನ್ನು ಕಾಣಬಹುದಾಗಿದೆ. ಡಾ. ಅಂಬೇಡ್ಕರ್‌ರವರ ನಿಧನದ ನಂತರ ಬೆಂಗಳೂರಿನಲ್ಲಿ ಮೈಸೂರು ರಾಜರಿಂದ ಪಡೆದುಕೊಂಡ ಐದು ಎಕರೆ ಜಾಗೆಯ ಉಪಯೋಗ ನಿಂತು ಹೋಗಿತ್ತು. 80 ರ ದಶಕದಲ್ಲಿ ಕರ್ನಾಟಕದಲ್ಲಿ ಬೌದ್ಧ ಧರ್ಮ ಪುನರುಜ್ಜೀವನ ಚಳವಳಿಗೆ ಚಾಲನೆ ಕೊಟ್ಟ ಅಂಬೇಡ್ಕರ್‌ರವರ ಕಟ್ಟಾ ಅನುಯಾಯಿ ಬಿ. ಬಸವಲಿಂಗಪ್ಪನವರು ಅಲ್ಲಿ 1984 ರಲ್ಲಿ ನಾಗಸೇನಾ ವಿದ್ಯಾಲಯ

ಆರಂಭಿಸಿ ಆ ಸ್ಥಳಕ್ಕೆ 'ಬುದ್ಧ ಭೂಮಿ' ಎಂದು ನಾಮಕರಣ ಮಾಡಿದರು'.[19] ಮುಂದೆ 'ನಾಗಸೇನಾ ವಿದ್ಯಾಲಯದಲ್ಲಿಯೇ ಕರ್ನಾಟಕ ಬುದ್ಧ ಧಮ್ಮ ಸಮಿತಿಯನ್ನು'[20] ಸ್ಥಾಪಿಸಿ, ಬೌದ್ಧಧರ್ಮ ಕಾರ್ಯ ಚಟುವಟಿಕೆಗಳನ್ನು ಬಿ. ಬಸವಲಿಂಗಪ್ಪನವರು ಹಮ್ಮಿಕೊಂಡರು. ಈ ಬಗ್ಗೆ ಅಧ್ಯಾಯ 6 ರಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಈ ಹಿನ್ನಲೆಯಲ್ಲಿಯೇ ಪ್ರಸ್ತುತ ಅಧ್ಯಯನದಲ್ಲಿ ಇದೀಗ ವಿವರಿಸಿದ ಆಯಾಮ ಮಹತ್ವ ಪಡೆದುಕೊಳ್ಳುತ್ತದೆ. ಅಂಬೇಡ್ಕರ್‌ರವರು ಭಾರತದ ಯಾವುದೇ ಪ್ರದೇಶಕ್ಕೆ ಹೋಗಲಿ, ಯಾರನ್ನೇ ಭೇಟಿ ಮಾಡಲೀ ಅದರ ಉದ್ದೇಶ ಶೋಷಿತರ ವಿಮೋಚನೆ, ಪರ್ಯಾಯ ಸಾಂಸ್ಕೃತಿಕ ಬದುಕಿನ ನಿರ್ಮಾಣವೇ ಆಗಿತ್ತೆಂಬುದು ಕಾಣುತ್ತದೆ. ಇಂತಹ ಸಾಕಷ್ಟು ಪೂರ್ವ ತಯಾರಿಯಿಂದ ಅವರು ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದರು. ದೇಶದಲ್ಲಿ ನಡೆದ, ನಡೆಯುತ್ತಿರುವ ಮತಾಂತರಗಳಿಗೆ ಹೋಲಿಸಿದರೆ ಅಂಬೇಡ್ಕರ್‌ರವರ ಮತಾಂತರವು ವಿಮೋಚನಾ ಆಂದೋಲನದ ಸ್ವರೂಪದ್ದು, ಗುಣಾತ್ಮಕತೆಯಿಂದ ಕೂಡಿದ್ದು ಅನಗತ್ಯ ಅವಸರವಿಲ್ಲದ್ದು, 'ನಿಧಾನ ಗತಿಯಾದರೂ ಪ್ರಧಾನ ರೀತಿಯದು' ಎಂದು ಖಂಡಿತವಾಗಿ ಹೇಳಬಹುದು.

## 5.2. ಬೌದ್ಧ ಮಾದರಿಗಳು ಮತ್ತು ಮತಾಂತರದ ಪರಿಣಾಮಗಳು :

ಆಧುನಿಕ ಭಾರತದಲ್ಲಿ ಥೇರಾವಾದ ಮತ್ತು ಮಹಾಯಾನ ಎರಡೂ ಬೌದ್ಧ ಪಂಥಗಳು ಪ್ರಚಲಿತದಲ್ಲಿವೆ. ಭಾರತದಲ್ಲಿನ ಬೌದ್ಧರ ಪೈಕಿ ಪ್ರತಿಶತ 92 ರಷ್ಟು ಬೌದ್ಧರು ಥೇರಾವಾದ ಆಧರಿತ ತತ್ವಾಚರಣೆಗಳನ್ನು ಅನುಸರಿಸುತ್ತಿದ್ದಾರೆ. ಉಳಿದ ಪ್ರತಿಶತ 8 ರಷ್ಟು ಜನ ಅಂದರೆ ಹಿಮಾಲಯ ಪರ್ವತ ಪ್ರದೇಶದ ಆಸು ಪಾಸು ಹಾಗೂ ಟಿಬೆಟ್ ಪ್ರಭಾವದ ಜನರು ತಂತ್ರಯಾನ ಅನುಸರಿಸುವುದು ಕಂಡು ಬರುತ್ತದೆ. ಡಾ. ಅಂಬೇಡ್ಕರ್‌ರವರ ಮತಾಂತರ ಪ್ರಕ್ರಿಯೆ ಕುರಿತು ಸಮಗ್ರ ಅಧ್ಯಯನ ಮಾಡಿರುವ ಡಾ. ಡಿ.ಸಿ.ಅಹಿರ್ ಅವರು ಭಾರತದ ಬೌದ್ಧರನ್ನು ನಾಲ್ಕು ವಿಭಿನ್ನ ರೀತಿಯ ಗುಂಪುಗಳಾಗಿ ವಿಂಗಡಿಸಿದ್ದಾರೆ.'[21]

### ಮೊದಲನೆಯದಾಗಿ :

ಭಾರತದಲ್ಲಿ ಬೌದ್ಧಮತ ಉಚ್ಛ್ರಾಯ ಸ್ಥಿತಿಯಲ್ಲಿನ ಕಾಲದಿಂದ ಹಿಡಿದು ಇಲ್ಲಿಯವರೆಗೆ ಉಳಿದ ಮೂಲ ಬೌದ್ಧರು ಇವರು ಬಂಗಾಲ ಪ್ರಾಂತ್ಯದಲ್ಲಿ ವಾಸವಾಗಿರುವ 'ಬರುವಾ' ಎಂಬ ಜನಾಂಗ ಮತ್ತು ತ್ರಿಪುರಾ ಮತ್ತು ಮೀಝೋರಾಂನ 'ಚಕ್ಮಾ' ಜನರು ಲದ್ದಾಕ್‌ನ ಬೌದ್ಧರು, ಹಿಮಾಚಲ ಪ್ರದೇಶದ ಲಾಹುಲ್, ಸ್ಪಿತಿ, ಕಿಸ್ವಾರ್ ಮತ್ತು ಪಾಂಗಿ ಕೊಳ್ಳದ ಜನರು ಮತ್ತು ಅರುಣಾಚಲ ಪ್ರದೇಶದಲ್ಲಿನ ಬಹುಪಾಲು ಜನರು ಈ ಗುಂಪಿನಲ್ಲಿ ಸೇರುತ್ತಾರೆ.

### ಎರಡನೆಯದಾಗಿ :

ಜನಾಂಗೀಯ ವೈಪರೀತ್ಯಗಳಿಂದ[22], ಸ್ಥಿತ್ಯಂತರಗಳಿಂದ ಕೂಡಿದ, ನೇಪಾಳ, ಥೈಲ್ಯಾಂಡ್ ಮತ್ತು ಬರ್ಮಾದಿಂದ ಬಂದು ಪಶ್ಚಿಮ ಬಂಗಾಳದ ದಾರ್ಜಿಲಿಂಗ ಮತ್ತು ಜಲಪೈಗುರಿ ಜಿಲ್ಲೆಯಲ್ಲಿ ವಾಸಿಸುತ್ತಿರುವ ಥಮಾಂಗ್ ಮತ್ತು ಶೆರ್ಪಾಗಳು ಹಾಗೂ ಆಸ್ಸಾಮ್‌ನಲ್ಲಿ ನೆಲೆಯಾಗಿರುವ ಥಾಯಿಗಳು ಈ ಗುಂಪಿಗೆ ಸೇರುತ್ತಾರೆ.

**ಮೂರನೆಯ ವಿಂಗಡನೆ ಈ ರೀತಿಯಾಗಿದೆ.**

ಮಹಾಬೋಧಿ ಸೊಸೈಟಿಯ ಬೌದ್ಧ ಮಿಷನರಿ ಚಳವಳಿ ಪ್ರಭಾವದಿಂದ ಬೌದ್ಧಧರ್ಮದ ಕಡೆಗೆ ಆಕರ್ಷಿತರಾದವರು ಹಾಗೂ 14 ಅಕ್ಟೋಬರ್, 1956 ರಲ್ಲಿ ಬಾಬಾಸಾಹೇಬ ಡಾ. ಅಂಬೇಡ್ಕರ್‌ರವರ ಮತಾಂತರ ಆಂದೋಲನದಲ್ಲಿ ದೀಕ್ಷೆ ಹೊಂದಿ ಬೌದ್ಧಧರ್ಮ ಜೀವನಕ್ಕೆ ಬಂದವರು. ಈ ರೀತಿಯ ಮೂರನೆಯ ಪ್ರಕಾರದ ಗುಂಪು 'ಮತಾಂತರ' ಆಂದೋಲನ ಪ್ರಾರಂಭವಾದ ಕಳೆದ ಐವತ್ತು ವರ್ಷಗಳಿಂದಲೂ ಬೆಳೆಯುತ್ತಲೇ ಇದೆ.

**ನಾಲ್ಕನೆಯ ಗುಂಪಿನಲ್ಲಿ.**

ಪರಮಪೂಜ್ಯ ದಲಾಯಿಲಾಮಾ ಅವರೊಂದಿಗೆ 1959 ರಲ್ಲಿ ಟಿಬೆಟ್‌ನಿಂದ ಭಾರತಕ್ಕೆ ಬಂದು ರಾಜಕೀಯ ಆಶ್ರಯ ಪಡೆದು, ನೆಲೆ ನಿಂತಿರುವ ತಂತ್ರವಾದಿ (Tantric) ಬೌದ್ಧ ಧರ್ಮ ಪಾಲಿಸುವ ಬೌದ್ಧರು. ಇವರು ಸದ್ಯದಲ್ಲಿ ಕರ್ನಾಟಕದ ಮುಂಡಗೋಡ, ಬೈಲುಕುಪ್ಪೆ, ಹುಣಸೂರುಗಳಲ್ಲಿ ಹಾಗೂ ಲೇಹ್ ಲದ್ದಾಕ್ ಪರ್ವತ ಶ್ರೇಣಿಗಳಲ್ಲಿ ವಾಸಿಸುತ್ತಿದ್ದಾರೆ. ಅರುಣಾಚಲ ಪ್ರದೇಶದ ಬೊಂಡಿಲ್ಲಾದಲ್ಲಿಯೂ Upper Tantric College (Gyutoh) ತೆರೆದು ತಂತ್ರವಾದಿ ಮತ್ತು ಬೌದ್ಧ ಪೂಜಾ ವಿಧಿ ವಿಧಾನಗಳ ಅಧ್ಯಯನ ಮಾಡುತ್ತಿದ್ದಾರೆ. ಬುದ್ಧನು ಪ್ರಥಮ ಪ್ರವಚನ ನೀಡಿದ ಸ್ಥಾನ ಸಾರನಾಥದಲ್ಲಿ[23]. ಅತ್ಯಂತ ಮಹತ್ವದ ಟಿಬೇಟಿಯನ್ ಶೈಕ್ಷಣಿಕ ಸಂಸ್ಥೆ 'ಸೆಂಟ್ರಲ್ ಇನಸ್ಟಿಟ್ಯೂಟ್ ಆಫ್ ಹೈಯರ್ ಟಿಬೇಟಿಯನ್ ಸ್ಟಡೀಸ್' (Central Institute of Higher Tibetian Studies) ನ್ನು ಸ್ಥಾಪಿಸಿರುತ್ತಾರೆ. ಮುಂಡಗೋಡ ಬೈಲುಕುಪ್ಪೆಗಳಲ್ಲಿ ಬೌದ್ಧ ವಿಶ್ವವಿದ್ಯಾಲಯಗಳೇ ಸ್ಥಾಪಿತಗೊಂಡಿವೆ. ಇತ್ತೀಚೆಗೆ ಪ್ರಾಚೀನ ಬೌದ್ಧ ವಿಶ್ವವಿದ್ಯಾಲಯ ಹೋಲುವಂತೆ ಮುಂಡಗೋಡದಲ್ಲಿ 'ಜಾಂಗತ್ಸೆ' ಬೌದ್ಧ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ್ದಾರೆ. (ಅನುಬಂಧ-1, ಚಿತ್ರ : 70 ಗಮನಿಸಿ) ಇವೆಲ್ಲಕ್ಕಿಂತ ಮುಖ್ಯವಾಗಿ ದೇಶದ ರಾಜಧಾನಿ ನವದೆಹಲಿಯಲ್ಲಿ ಟಿಬೆಟ್ ಹೌಸ್ (Tibet House) ನ್ನು 1965 ರಲ್ಲಿ ಸ್ಥಾಪಿಸಿ 'ಟಿಬೇಟನ್ ಕಲೆ ಮತ್ತು ಸಂಸ್ಕೃತಿಯ ಕುರುಹುಗಳನ್ನು' ಪ್ರದರ್ಶಿಸಿದ್ದಾರೆ. ಇವತ್ತಿಗೆ ಭಾರತದ ಬೌದ್ಧರ ಪೈಕಿ ಸುಮಾರು 2 ಲಕ್ಷಕ್ಕಿಂತ ಹೆಚ್ಚು ಟಿಬೇಟಿಯನ್ ಬೌದ್ಧರು ಭಾರತದಲ್ಲಿ ವಾಸಿಸುತ್ತಿದ್ದಾರೆ.'[24]

ಈ ಮೇಲಿನ ನಾಲ್ಕು ರೀತಿಯ ಗುಂಪುಗಳಲ್ಲಿ ಒಟ್ಟು ಭಾರತದಲ್ಲಿರುವ ಬೌದ್ಧ ಜನಸಂಖ್ಯೆಯ ಪ್ರತಿಶತ 80 ರಷ್ಟಿರುವ ಡಾ. ಅಂಬೇಡ್ಕರರವರ ಅನುಯಾಯಿಗಳಾದ 'ನವ ಬೌದ್ಧರು' ತುಂಬಾ ಪ್ರಭಾವಶಾಲಿ ಗುಂಪಾಗಿದೆಯೆಂದು',[25] ಭಾರತದಲ್ಲಿ ಬೌದ್ಧಧರ್ಮ 50 ವರ್ಷಗಳ ಬೆಳವಣಿಗೆಯನ್ನು ಗಮನಿಸಿದ ಬೌದ್ಧ ವಿದ್ವಾಂಸ ಡಾ. ಡಿ.ಸಿ. ಅಹಿರ್ ಅಭಿಪ್ರಾಯಪಟ್ಟಿದ್ದಾರೆ. ಇದರಲ್ಲಿಯೇ ಪ್ರತಿಶತ 80 ರಷ್ಟು ಜನ ಮಹಾರಾಷ್ಟ್ರದಲ್ಲಿ ವಾಸಿಸುತ್ತಾರೆ. ಉಳಿದವರು ದೇಶದ ಬೇರೆ ಬೇರೆ ಭಾಗಗಳಲ್ಲಿ ಹಾಗೂ ವಿದೇಶಗಳಲ್ಲಿಯೂ ಇರುತ್ತಾರೆ.

ಇತ್ತೀಚಿನ ಸಂಶೋಧನಾ ಅಧ್ಯಯನಗಳು ಬೇರೆಯ ತೆರನಾದ ವರ್ಗೀಕರಣ ಕೊಡುತ್ತವೆ. ಅದರಲ್ಲಿ ಎರಡು ಅಧ್ಯಯನಗಳು ರಮೇಶ ಕಾಂಬಳೆ (1996) ಅವರು ಮುಂಬೈನಲ್ಲಿ ಕೈಗೊಂಡಿದ್ದು ಅಧ್ಯಯನ ಮತ್ತು

ಟಿ. ಫಿಟ್‌ಝುರಾಲ್ಡ್ (T. Fitzgerald) ಅವರು ನಾಗಪುರ, ಮರಾಠವಾಡಾ ಮತ್ತು ಪುಣೆಯ ಸುತ್ತಮುತ್ತಲ ಪ್ರದೇಶದಲ್ಲಿ ಕೈಗೊಂಡ ಅಧ್ಯಯನಗಳು ಮತಾಂತರದ ಪರಿಣಾಮಗಳನ್ನು ವಿವರಿಸುತ್ತವೆ. ಡಾ. ರಮೇಶ ಕಾಂಬಳೆಯವರು'[26] ಮುಂಬೈನಲ್ಲಿನ ಬೌದ್ಧರನ್ನು ಎರಡು ಗುಂಪುಗಳಲ್ಲಿ ವಿಂಗಡಿಸುತ್ತಾರೆ.

**ಮೊದಲನೆಯ ಗುಂಪು :**

''ಇವರು ತಾವು ಹಿಂದೂಗಳಲ್ಲವೆಂದು ಖಚಿತವಾಗಿ ಸ್ವತಃ ತಿಳಿದುಕೊಂಡು ಬೌದ್ಧರಾಗಿರುವವರು. ಹಿಂದೂ ಸಾಮಾಜಿಕ ವ್ಯವಸ್ಥೆ ತಮ್ಮನ್ನು ಅಸ್ಪೃಶ್ಯರೆಂದು ಕೀಳಾಗಿ ಕಂಡಿದ್ದರಿಂದ ಅದನ್ನು ತಿರಸ್ಕರಿಸಿದ್ದಾರೆ. ಬೌದ್ಧರಾಗಿರುವ ಇವರು ದೇವರ ಅಸ್ತಿತ್ವವನ್ನು ಆತ್ಮದ ಮತ್ತು ಪುನರ್ಜನ್ಮದ ಸಿದ್ಧಾಂತಗಳನ್ನು ನಿರಾಕರಿಸುತ್ತಾರೆ. ಮುಂದುವರೆದು, ಅವರು ಜಗತ್ತನ್ನು ಮತ್ತು ಸಾಮಾಜಿಕ ನೀತಿಯನ್ನು ದೈವಿಕ ಶಕ್ತಿಯಿಂದ ನಿರ್ಮಿತವಾದವುಗಳೆಂಬ ತಿಳುವಳಿಕೆಯನ್ನು ತಿರಸ್ಕರಿಸುತ್ತಾರೆ. ಅಸತ್ಯದಿಂದ ಕೂಡಿದ, ಅತಾರ್ಕಿಕತೆಯ ಮತ್ತು ದುರುದ್ದೇಶ ಹೊಂದಿದ, ಹಿಂದೂ ಪುರಾಣಗಳನ್ನು ಇವರು ತೀವ್ರ ಖಂಡಿಸುತ್ತಾರೆ. ಈ ರೀತಿಯಾಗಿ ಬೌದ್ಧರಾಗಿರುವ ಇವರು 'ಪ್ರತ್ಯೇಕವಾದೀ ಮತ್ತು ಅಸಮಾನತೆಯ ಜಾತಿ ವ್ಯವಸ್ಥೆಯನ್ನು' ತಿರಸ್ಕರಿಸುತ್ತಾರೆ'[27].

**ಎರಡನೆಯ ಗುಂಪು : ಸುಶಿಕ್ಷಿತ ಬೌದ್ಧರು.**

ಡಾ. ರಮೇಶ ಕಾಂಬಳೆ (1996) ಅವರು ಅವಲೋಕಿಸಿದಂತೆ ''ಹಿಂದೂ ಧರ್ಮ ಮತ್ತು ಹಿಂದೂ ಸಾಮಾಜಿಕ ವ್ಯವಸ್ಥೆಯ ನಿರಾಕರಣೆ ಈ ಗುಂಪಿನಲ್ಲಿಯೂ ಮೂಲ ಮಂತ್ರವಾಗಿದೆ. ಬೌದ್ಧರಾಗಿ ತಮಗೆ ಒಂದು ಹೊಸ ಐಡೆಂಟಿಟಿ (Identity) ಬಂದಿದೆ. ಹಿಂದೂ ಧರ್ಮದಲ್ಲಿದ್ದಾಗ ಇಂತಹ ಐಡೆಂಟಿಟಿ ಇರಲಿಲ್ಲವೆಂಬುದು ಈ ಗುಂಪಿನ ವಾದ. ಬೌದ್ಧರಾಗಿರುವ ತಮ್ಮಲ್ಲಿ ಸ್ವಾಭಿಮಾನ, ಸ್ವಗೌರವ, ತಮ್ಮ ಸ್ವಂತ ಶಕ್ತಿಯಲ್ಲಿ ನಂಬಿಕೆ, ಸ್ವ-ಉದ್ಧಾರದ ಮಾರ್ಗಗಳು ಸೃಷ್ಟಿಯಾಗಿವೆ ಎಂದು ಅಭಿಪ್ರಾಯ ಪಡುತ್ತಾರೆ. ಬೌದ್ಧಧರ್ಮಕ್ಕೆ ಸೇರಿರುವುದರಿಂದ ತಮ್ಮಲ್ಲಿ ಸೃಷ್ಟಿಯಾದ ವೈಚಾರಿಕತೆ ತಮಗೆ ನಿತ್ಯ ಪ್ರೇರಣೆ ನೀಡುವ, ತಮ್ಮ ಜೀವನದ ಸಮಸ್ಯೆಗಳನ್ನು ನಿಭಾಯಿಸುವ ಶಕ್ತಿಯನ್ನು ನೀಡಿದೆ ಎಂದು ಹೇಳುತ್ತಾರೆ. ಬೌದ್ಧರಾದ ತಮಗೆ ಭೂಮಿಯ ಮೇಲೆ ಇರುವ ಪ್ರಸ್ತುತ ಲೌಕಿಕ ಜೀವನ ಮುಖ್ಯವಾದದ್ದು ''ಮನುಷ್ಯನ ಪ್ರಯತ್ನದಿಂದ ಮನುಷ್ಯನ ಪುನರ್ ನಿರ್ಮಾಣ ಸಾಧ್ಯವೆಂಬುದು'' ಈ ಗುಂಪಿನ ಕೇಂದ್ರ ಕಾಳಜಿಯಾಗಿದೆ. ಬೌದ್ಧರಾದ ತಾವು ಯಾವುದೇ ಸ್ವಾರ್ಥ ಕೇಂದ್ರಿತ ಜೀವನ ನಡೆಸದೆ ನೈತಿಕ ಜೀವನಕ್ಕೆ ಬದ್ಧರಾಗಿದ್ದೇವೆ. ಜಾತ್ಯತೀತ (Secular) ತತ್ವಗಳನ್ನು ಎತ್ತಿಹಿಡಿಯುತ್ತೇವೆ. ಬುದ್ಧನ ಮಹಾನ್ ಸಂದೇಶದಂತೆ ಶಾಂತಿ, ಸಮಾನತೆ, ಸ್ವಾತಂತ್ರ್ಯ ಮತ್ತು ಭ್ರಾತೃತ್ವದ ಆಧಾರದ ಜೀವನ ನಡೆಸುತ್ತೇವೆ ಎಂಬುದು ಈ ಗುಂಪಿನ ಸರ್ವಸಮ್ಮತ ಅಭಿಪ್ರಾಯ ಬೌದ್ಧರಾಗಿದ್ದರಿಂದಲೇ ಜಾತ್ಯತೀತ, ವೈಜ್ಞಾನಿಕ ಮನೋಭಾವನೆಯ ವೈಚಾರಿಕ ಜೀವನ ಸಾಧ್ಯವಾಗಿದೆ ಎಂಬುದೂ ಈ ಗುಂಪಿನ ಸಮರ್ಥನೆ''[28]. ಜಾತಿ ಆಧಾರಿತ ಶ್ರೇಣಿಕೃತ ವ್ಯವಸ್ಥೆ ಮತ್ತು ಅದರ ಸಾಂಪ್ರದಾಯಿಕ ಆಚರಣೆಗಳು ಕೆಳಜಾತಿಯ ಜನರ ಶೋಷಣೆಗೆ, ಮೂಲ ಕಾರಣವಾಗಿರುವುದರಿಂದ ಇದು ವ್ಯಕ್ತಿಯ ವೈಯಕ್ತಿಕ ಜೀವನದಲ್ಲಿ ಬದಲಾವಣೆಯನ್ನು ತರುವುದರಿಂದ ಮಾತ್ರ ಸಾಧ್ಯ. ಇಂತಹ ವೈಯಕ್ತಿಕ ಚಿಕಿತ್ಸೆ

(Individual Level Theraphy) ದಲಿತರು ಬೌದ್ಧಧರ್ಮ ದೀಕ್ಷೆ ಪಡೆದ ನಂತರ ಸಾಧ್ಯವಾಗಿದೆ ಎಂಬುದು ಈ ಮೇಲಿನ ಅಧ್ಯಯನಗಳಿಂದ ತಿಳಿದು ಬರುತ್ತದೆ. ಅಂಬೇಡ್ಕರರವರು ಬೌದ್ಧಧರ್ಮವನ್ನು ಆಯ್ಕೆ ಮಾಡಿಕೊಂಡ ಹಿನ್ನೆಲೆ ಕೂಡ ಇದೇ ಆಗಿತ್ತು ಎಂಬುದು ಇಲ್ಲಿ ಮುಖ್ಯವಾಗುತ್ತದೆ. ಅವರ ಬರವಣಿಗೆಗಳಲ್ಲಿ ಸಾಕಷ್ಟು ಈ ಕುರಿತು ಕುರುಹುಗಳನ್ನು ನೋಡುತ್ತೇವೆ. ನಿರ್ವಾಣ ಸಿದ್ಧಾಂತ (The Doctrine of Nirvana) ಆಧ್ಯಾತ್ಮಿಕ ವಿಮೋಚನೆ (Soteriology) ಅಥವಾ ಈ ಜಗತ್ತಿನಲ್ಲಿ ದುಃಖ ಮತ್ತು ದುಷ್ಟತನ (evil) ದಿಂದ ಬಿಡುಗಡೆ ಪಡೆಯುವ ಮೂಲ ಸಿದ್ಧಾಂತದ ಶೋಧನೆಯಲ್ಲಿ ಅವರು ಇದ್ದಾಗಲೇ ಅವರಿಗೆ ಬೌದ್ಧಧರ್ಮ ಹತ್ತಿರವಾಯಿತು. ಥೇರಾವಾದ ಬೌದ್ಧಧರ್ಮ ವ್ಯವಸ್ಥೆಯೂ ವ್ಯಕ್ತಿಯ ಆಧ್ಯಾತ್ಮಿಕ ವಿಮೋಚನಾ ಕಾರ್ಯಕ್ಕೆ ಹೆಚ್ಚು ಮಹತ್ವ ಕೊಡುತ್ತದೆ. ದುಃಖದ ಪರಾಮರ್ಶೆ ಮಾಡಿ ಅದನ್ನು ನಿವಾರಿಸು ಮಾರ್ಗೋಪಾಯಗಳನ್ನು ಕಲಿಸುತ್ತದೆ. ಈ ಥೇರಾವಾದ ಸಿದ್ಧಾಂತ ಮೂಲತಃ 'ವ್ಯಕ್ತಿ ಔನತ್ಯವನ್ನು' ಸಾಧಿಸುವ ಕೇಂದ್ರ ಕಾಳಜಿಯುಳ್ಳ ಮಾರ್ಗವಾಗಿದೆ. ವ್ಯಕ್ತಿಯನ್ನು ಧ್ಯಾನ ಮತ್ತು ನಿರ್ಮಾಣ ಪಥಕ್ಕೆ ಹಚ್ಚುತ್ತದೆ. ಆ ಮೂಲಕ ವ್ಯಕ್ತಿಯೇ ಯಾವ ಮಾಧ್ಯಮವೂ ಇಲ್ಲದೇ (ವ್ಯಕ್ತಿ ಪುರೋಹಿತ, ಮೂರ್ತಿ ಅಥವಾ ಇನ್ನಾವುದೇ ಸಾಧನೆ ಇಲ್ಲದೇ) ತಾನೇ ತಾನಾಗಿ, ತನ್ನ ತನದ ಸಾಕಾರತ್ವ ಸಾಧಿಸಲು ಸಹಕರಿಸುತ್ತದೆ. ಬೌದ್ಧಿಕ ಪೊರೆಗಳನ್ನು, ದಾರಿದ್ರ್ಯವನ್ನು ಕಳಚಿಗೊಂಡು ವ್ಯಕ್ತಿ ತನ್ನನ್ನು 'ತಮ್ಮ ಸ್ವಾರ್ಥಗಳಿಗೆ ಬಂಧಿಸುವ ಶಕ್ತಿಗಳನ್ನು ಅರಿಯಲು ಅದರಿಂದ ಮುಕ್ತನಾಗಲು ಬೌದ್ಧಿಕ ದ್ರಾಢ್ಯತೆಯನ್ನು ಬೆಳೆಸುತ್ತದೆ'. ಹೀಗೆ ವ್ಯಕ್ತಿಯೇ ಇಲ್ಲಿ ಪ್ರಾಥಮಿಕ ಘಟಕ (Primary Unit) ವಾಗಿರುತ್ತಾನೆ. ಈ ಸಿದ್ಧಾಂತವೇ ಅಂಬೇಡ್ಕರ್‌ರವರ ಪ್ರತಿಪಾದನೆಯಲ್ಲಿ ಮುಖ್ಯವಾಗಿದೆ. ಹೀಗೆ ಬೌದ್ಧ ಧರ್ಮಕ್ಕೆ ಮತಾಂತರವಾದ ವ್ಯಕ್ತಿ ಮತ್ತು ಸಮಾಜದ ಕಾಳಜಿಗಳು ಏಕಕಾಲದಲ್ಲಿಯೇ ಒಂದು ವಿಮೋಚನಾ ಸೂತ್ರಕ್ಕೆ ಒಳಗಾಗುವುದನ್ನು ನೋಡುತ್ತೇವೆ.

ಡಾ. ಡಿ.ಸಿ. ಅಹಿರ್ ಅವರು ತಮ್ಮ ಅನುಭವ ಮತ್ತು ಮಹಾರಾಷ್ಟ್ರದ ಕೆಲವು ಪ್ರದೇಶಗಳಲ್ಲಿ ನಡೆಸಿದ ಅಧ್ಯಯನಗಳ ಆಧಾರದಲ್ಲಿ ಬೌದ್ಧರನ್ನು ಮೂರು ಮುಖ್ಯ ಭಾಗಗಳಲ್ಲಿ ವಿಂಗಡಿಸುತ್ತಾರೆ.

1. ಗ್ರಾಮೀಣ ಪ್ರದೇಶದಲ್ಲಿ ನೆಲೆಸಿರುವ ಬೌದ್ಧರು ಮಹಾರಾಷ್ಟ್ರದ ಮರಾಠವಾಡಾ ಪ್ರದೇಶದ ತೀರಾ ಹಿಂದುಳಿದ ಪ್ರದೇಶದ ಗ್ರಾಮಗಳಲ್ಲಿ ನೆಲೆಸಿರುವವರು.

2. ಮಧ್ಯಮ ವರ್ಗದ ಬೌದ್ಧರು, (ಅಂದರೆ ನಾಗಪುರದಲ್ಲಿ ನೆಲೆಸಿರುವ ಸುಶಿಕ್ಷಿತ ಬೌದ್ಧರ ಸ್ಥಿತಿಗತಿಯಂತೆ)

3. ಬೌದ್ಧಧರ್ಮಕ್ಕೆ ಸೇರಿ ಗ್ರಹಸ್ಥ ಜೀವನ ತ್ಯಜಿಸಿ ಬಿಕ್ಕುಗಳಾದ ಅಥವಾ ಅದಕ್ಕೆ ಸಮಾನವಾದ ಧಾರ್ಮಿಕ ಹುದ್ದೆಗಳಲ್ಲಿ(ಧಮ್ಮ ಸಂಘಟಕ, ಧಮ್ಮಾಚಾರಿ) ಕಾರ್ಯ ನಿರ್ವಹಿಸುತ್ತಿರುವವರು. ಧ್ಯಾನ, ಬೌದ್ಧ ಆಚರಣೆಗಳನ್ನು ನಡೆಸುವವರು ಈ ಪರಂಪರೆ ತ್ರೈಲೋಕ್ಯ ಬೌದ್ಧ ಮಹಾ ಸಂಘ ಸಹಾಯಕಗಣ (TBMSG) ಪುಣೆಯಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಈ ಗುಂಪು ಮುಖ್ಯವಾಗಿ Soteriological Buddism ನ ಪರಿವರ್ತಶೀಲ ಸ್ವಭಾವಕ್ಕೆ ಹೆಚ್ಚು ಒತ್ತು ಕೊಡುತ್ತದೆ.

ಡಾ. ಡಿ.ಸಿ. ಅಹಿರ್ ಅವರು ಮುಂದುವರೆದು ಹೇಳುತ್ತಾ "ಈ ಎಲ್ಲ ಮೇಲಿನ ವಿಂಗಡನೆಗಳಲ್ಲಿ ಗುಂಪುಗಳಲ್ಲಿ ಬಹಳ ಮುಖ್ಯವಾಗಿ ಎಲ್ಲ ಗುಂಪುಗಳಲ್ಲಿ ಅಂಬೇಡ್ಕರರವರ ಬರವಣಿಗೆ ಅವರ ರಾಜಕೀಯ ಮತ್ತು ಆಧ್ಯಾತ್ಮಿಕ ವಿಮೋಚನೆಯ (Soteriological) ಗುರಿಗಳು ಒಟ್ಟಾರೆ ಅಂಬೇಡ್ಕರರವರು ಕಂಡುಕೊಂಡು ಬೌದ್ಧಧರ್ಮದ ಪ್ರಜ್ಞೆ (Buddhist Intellectual Consciousness) ಎದ್ದು ಕಾಣುವ ಅಂಶವಾಗಿದೆ."[29] ಇದೇ ರೀತಿಯ ಲಕ್ಷಣಗಳು ಭಾರತದ ಉಳಿದೆಲ್ಲ ಬೌದ್ಧರಲ್ಲಿಯೂ ಎದ್ದು ಕಾಣುವುದನ್ನು ನೋಡುತ್ತೇವೆ.

ಕರ್ನಾಟಕದಲ್ಲಿ ಡಾ. ಅಂಬೇಡ್ಕರ್‌ರವರ ವಿಚಾರಗಳ, ಕೃತಿಗಳ ಆಳವಾದ ಅಧ್ಯಯನ ಮಾಡಿರುವ ವಿದ್ವಾಂಸರಾದ ಡಾ. ಮ.ನ. ಜವರಯ್ಯನವರು ಅಂಬೇಡ್ಕರರವರು ಕೈಗೊಂಡ ಮತಾಂತರದ ಆಂದೋಲನದ ಅತ್ಯಂತ ಮಹತ್ವದ ಪರಿಣಾಮಗಳ ಪಟ್ಟಿಮಾಡುತ್ತಾರೆ. ಅವರು 1978 ರಲ್ಲಿ ಪತ್ರಕರ್ತ ಅರುಣ ಸಾಧುರವರ ಸಮೀಕ್ಷೆ ಆಧರಿಸಿದ ಅಂಶಗಳನ್ನು ಈ ಕೆಳಗಿನಂತೆ ಹೇಳುತ್ತಾರೆ.'[30]

1. ಮತಾಂತರಗೊಂಡಿರುವ ಹಿಂದಿನ ಅಸ್ಪೃಶ್ಯರು ತಮ್ಮ ಹಿಂದಿನ ಕೀಳರಿಮೆಯನ್ನು ತೊರೆದಿರುತ್ತಾರೆ. ಅವರು ಹೊಸದಾಗಿ ತಮ್ಮನ್ನು ತಾವು ಗುರ್ತಿಸಿಕೊಳ್ಳುವುದು ಮಾತ್ರವಲ್ಲದೇ, ಅವರಲ್ಲಿ ಒಂದು ಅಪೂರ್ವವಾದ ಆತ್ಮವಿಶ್ವಾಸ ಮೂಡಿರುವುದು. ಎಲ್ಲಕ್ಕಿಂತಲೂ ಹೆಚ್ಚಿನದೆಂದರೆ ತಮ್ಮ ಹಿಂದು ಮೌಢ್ಯಗಳನ್ನೆಲ್ಲ ತೊರೆದಿರುವುದು ಅದರಲ್ಲೂ ಯುವಕರು ತಮ್ಮನ್ನು ಸುತ್ತುವರೆದಿದ್ದ ಅಜ್ಞಾನವನ್ನು ತೊರೆದು, ಜೀವನದ ಬಗೆಗೆ ಒಂದು ವೈಚಾರಿಕ ದೃಷ್ಟಿಯನ್ನು ಬೆಳೆಸಿಕೊಂಡಿದ್ದಾರೆ.

2. ಬೌದ್ಧ ಯುವಕರಲ್ಲಿ ಸಾಂಸ್ಕೃತಿಕವಾಗಿಯೂ ಸಾಮಾಜಿಕವಾಗಿಯೂ ಒಂದು ಪುನರುಜ್ಜೀವನದ ಪ್ರಜ್ಞೆ ಮೂಡಿ ಪ್ರಜ್ವಲಿಸಿದೆ. ಪುನರ್ಜನ್ಮ, ಅದೃಷ್ಟ ಮುಂತಾದ ಹಳೆಯ ಆಧಾರ ಶೂನ್ಯ ಆಚರಣೆಗಳ ಅವರು ನೀಗಿಕೊಂಡಿದ್ದಾರೆ. ಕಷ್ಟಪಟ್ಟು ದುಡಿಮೆ ಮಾಡುವುದು, ಶಿಕ್ಷಣ ಮತ್ತು ವೈಚಾರಿಕ ದೃಷ್ಟಿ ಧೋರಣೆಗಳು ಮಾತ್ರ ಜೀವನದಲ್ಲಿ ಪ್ರಗತಿಯನ್ನು ತರಲು ಸಾಧ್ಯವೆಂದು ಅವರು ಬಲವಾಗಿ ನಂಬಿದ್ದಾರೆ. ಜಾತೀಯ ಹಿಂದೂಗಳ ಯುವಕರಿಗೆ ಹೋಲಿಸಿದರೆ ಬೌದ್ಧ ಯುವಕರಲ್ಲಿ ಒಂದು ರೀತಿಯ ಸಂಕಲ್ಪದ ಭಾವನೆ ಮತ್ತು ಪ್ರಗತಿಪರ ದೃಷ್ಟಿ ಮಾತ್ರವಲ್ಲದೇ, ವೈಜ್ಞಾನಿಕ ಬುದ್ಧಿಯೂ ಇದ್ದಂತಿದೆ.

3. ಆರ್ಥಿಕವಾಗಿ ಹೇಳಬೇಕಾದ ವಿಷಯವೆಂದರೆ, ಬೌದ್ಧಯುವಕರಲ್ಲಿ ತೀರ ಅಲ್ಪ ಪ್ರಮಾಣದ ಪ್ರಗತಿ ಮಾತ್ರ ಸಾಧ್ಯವೆನಿಸಿದೆ. ಇನ್ನೂ ಸರಿಯಾಗಿ ಹೇಳಬೇಕೆಂದರೆ, ಮತಾಂತರಕ್ಕೆ ಮೊದಲು ಅವರ ಆರ್ಥಿಕ ಸ್ಥಿತಿ ಏನಿತ್ತೋ ಅದಕ್ಕಿಂತ ಹೆಚ್ಚಿನ ಬದಲಾವಣೆಯೇನೂ ಈಗ ಆಗಿಲ್ಲ. ಆದರೆ, ತಮ್ಮ ಹಿಂದಿನ ಮೌಢ್ಯವನ್ನು ತೊರೆದು ವೈಚಾರಿಕ ಪಥಾವಲಂಬಿಗಳಾದ ಬೌದ್ಧಯುವಕರಲ್ಲಿ ಅಪಾರವಾದ ಜ್ಞಾನದ ತೃಷೆ ಇದೆ. ಶಿಕ್ಷಣಕ್ಕಾಗಿ ಅವರು ಹಾತೊರೆಯುತ್ತಾರೆ. ಬಹುಶಃ ಅವರ ಆರ್ಥಿಕ ಪ್ರಗತಿಯ ಕೀಲಿಕೈ ಈ ಶಿಕ್ಷಣದಲ್ಲೇ ಅಡಗಿರಬೇಕಲ್ಲವೆ?.[31]

1981 ರಲ್ಲಿ ಇದೇ ರೀತಿಯ ಇನ್ನೊಂದು ಅಧ್ಯಯನದ ಕುರಿತು ಡಾ. ಮ.ನ. ಜವರಯ್ಯನವರು ಗಮನ ಸೆಳೆಯುತ್ತಾರೆ. ಅವರು ಎ.ಎ. ದಾತೆ ಅವರ ಅಧ್ಯಯನ ಉಲ್ಲೇಖಿಸಿ "ಬೌದ್ಧರಾಗಿ ಮತಾಂತರಗೊಂಡವರಿಗೆ ಲಭ್ಯವಾದ ಬಹು ಮುಖ್ಯವಾದ ಲಾಭವೆಂದರೆ ಅದು ಮಾನಸಿಕವಾದುದು. ಹಿಂದೂ ಧರ್ಮದ ಜಾತಿ ವ್ಯವಸ್ಥೆಯಲ್ಲಿ ಅವರು ಪಟ್ಟಿರುವ ಬವಣೆಯನ್ನು ಸಂಪೂರ್ಣವಾಗಿಯೂ ತೊರೆದಿರುವ ಅವರು ಪ್ರಪ್ರಥಮವಾಗಿ ತಮ್ಮ ಕೀಳರಿಮೆಯನ್ನು ನೀಗಿಕೊಂಡಿರುವುದು. ಸಾಂಸ್ಕೃತಿಕವಾಗಿ ನವಬೌದ್ಧರು ಬಹುದೊಡ್ಡ ಬದಲಾವಣೆಗೆ ಒಳಗಾಗಿದ್ದಾರೆ. ಆರ್ಥಿಕವಾಗಿ ಮಾತ್ರ ಹಾಗೆಯೇ ಇದ್ದಾರೆ. ಆದರೆ ಅವರಲ್ಲಿ ಬಹುತೇಕ ಎಲ್ಲರೂ ತಮ್ಮ ಹಿಂದಿನ ಮೂಢನಂಬಿಕೆಗಳಿಂದ ಬಹುದೂರ ಸಾಗಿದ್ದಾರೆ. ಡಾ. ಮ.ನ. ಜವರಯ್ಯನವರು 'ಮತಾಂತರ ಆಂದೋಲನದ ಈ ಪರಿಣಾಮಗಳು ಮತ್ತು ಪ್ರಭಾವಗಳೇ ಭಾರತದ ಜನಗಣತಿಯ ಧಾರ್ಮಿಕ ಸರಣಿಯ ಅಂಕಿ ಅಂಶಗಳಲ್ಲಿ ಬೌದ್ಧಧರ್ಮೀಯರ ಸಂಖ್ಯೆಯ ಹೆಚ್ಚಳಕ್ಕೆ ಕಾರಣ ಮತ್ತು ಜೀವಂತ ಸಾಕ್ಷಿ ಎಂದು ಅಭಿಪ್ರಾಯ ಪಡುತ್ತಾರೆ. ಮುಂದುವರೆದು ಅಂಬೇಡ್ಕರ್‌ರವರು ಆಯ್ಕೆ ಮಾಡಿಕೊಂಡ ಬೌದ್ಧಧರ್ಮ ನಿರ್ಜೀವ ಅಥವಾ ಸತ್ತ ಧರ್ಮ'[32] ಎಂಬ ಪತ್ರಕರ್ತ ಡಾ. ವ್ಹಿ.ಟಿ. ರಾಜಶೇಖರ ಅವರ ಅಭಿಪ್ರಾಯ ತನ್ನಿಂದ ತಾನೇ ನಿರರ್ಥಕವೂ ಅಸಂಗಜಸವೂ ಆದುದೆಂದು ಹೇಳುತ್ತಾರೆ. ಏನೇ ಆದರೂ ಅಂಬೇಡ್ಕರ್‌ರವರು ಆರಂಭಿಸಿದ ಅಸ್ಪೃಶ್ಯರ ಮತಾಂತರ ಆಂದೋಲನವನ್ನು ಮಾತ್ರ ತಡೆಯಲು ಯಾರಿಂದಲೂ ಸಾಧ್ಯವಾಗಿಲ್ಲ. 'ಇದೊಂದು ಮಹಾಪ್ರವಾಹ ಈ ಪ್ರವಾಹಕ್ಕೆ ಒಂದು ಮಹಾದ್ವಾರ ನಿರ್ಮಾಣವಾದದ್ದು 1956 ಅಕ್ಟೋಬರ 14 ರಂದು ಡಾ. ಅಂಬೇಡ್ಕರ್‌ರವರು ಲಕ್ಷಾಂತರ ಅನುಯಾಯಿಗಳೊಡನೆ ಬೌದ್ಧ ಧರ್ಮ ದೀಕ್ಷೆ ಪಡೆದು, ಅದೇ ಮಹಾದ್ವಾರದ ಮೂಲಕ ಈಗ ಮತಾಂತರದ ಪ್ರವಾಹ ಮುಂದೆ ಸಾಗಿದೆ. ಈ ಪ್ರವಾಹವನ್ನು ತಡೆದು ನಿಲ್ಲಿಸುವುದು, ಸಾವಿರ ಪೇಜಾವರಗಳಿಂದಲೂ ಹತ್ತಿಕ್ಕಲು ಸಾಧ್ಯವಿಲ್ಲವೆಂದು ಹೇಳುತ್ತೇನೆ'[33] ಎಂದು ಅಂಬೇಡ್ಕರ್‌ರವರ ಮತಾಂತರ ಆಂದೋಲನದ ಪ್ರಮುಖವಾದ ಕಾಳಜಿಗಳನ್ನು ವಿಶ್ಲೇಷಿಸುತ್ತಾರೆ.

ದಲಿತರು ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ ನಂತರ ಅವರಲ್ಲಾದ ವೈಯಕ್ತಿಕ ಮತ್ತು ಸಾಮೂಹಿಕ ನೆಲೆಯ ಬದಲಾವಣೆಗಳನ್ನು ಮಹಾರಾಷ್ಟ್ರದ ಬೌದ್ಧ ಮತಾಂತರ ಚಳವಳಿಯ ಹಿನ್ನೆಲೆಯಲ್ಲಿ ಮೇಲಿನಂತೆ ವಿಶ್ಲೇಷಿಸಲಾಗಿದೆ. ಪ್ರಸ್ತುತ ಅಧ್ಯಯನಕಾರನೂ ಸಹಿತ ಯಾದೃಚ್ಛಿಕವಾಗಿ ಗುರುತಿಸಿ ಕರ್ನಾಟಕದಲ್ಲಿನ ಬೌದ್ಧ ಉಪಾಸಕರನ್ನು, ಸಂಘ ಸಂಸ್ಥೆಗಳನ್ನು ಭೇಟಿ ಮಾಡಿ ಮತ್ತು ಮಾಹಿತಿ ನಮೂನೆಗಳನ್ನು ಕಳುಹಿಸಿ ಮಾಹಿತಿ ಸಂಗ್ರಹಿಸಿದಲ್ಲಿನ ಎಲ್ಲ ವಿಷಯಗಳು ಮೇಲೆ ಅವಲೋಕಿಸಿದ ಅಧ್ಯಯನಗಳ ತೀರ್ಮಾನಗಳನ್ನೇ ಪುಷ್ಟೀಕರಿಸುತ್ತವೆ. ಅಧ್ಯಯನದಲ್ಲಿ ಅಲ್ಲಲ್ಲಿ ಅಂತಹ ವಿವರಗಳನ್ನು ಅರ್ಥೈಸುವಿಕೆಗೆ ಬಳಸಿಕೊಂಡಿದ್ದನ್ನು ಗಮನಿಸಬಹುದಾಗಿದೆ.



# ಸಂದರ್ಭಸೂಚಿ ಹಾಗೂ ಟಿಪ್ಪಣಿಗಳು


1. Rodrigues Valerian, 2002 : Essential Writings of B.R. Ambedkar, Oxford University Press, New Delhi, p-335.
2. ಅದೇ : ಪುಟ ; 336.
3. Ahir D.C., 1998 : Buddhism 50 years of Independence 1947-97, Status, Growth and Development, B. R. Publishing Corporation, New Delhi, p-49.
4. Govt. of India : The First Report on Religion Census of India – 2001, www.censusindia.org.
5. Ahir D.C., 1998 : ಪೂರ್ವೋಕ್ತ : ಪುಟ : 49.
6. Govt. of India, 2001 : Census of India-2001, (Statement (1)(a)
7. ಪ್ರಜಾವಾಣಿ : ದಿನಾಂಕ 27, ಅಕ್ಟೋಬರ್ 2001 ಕನ್ನಡ ದಿನಪತ್ರಿಕೆ.
8. ಅದೇ : 21, ಅಕ್ಟೋಬರ್ 2001.
9. Govt. of India, 2001 : ಪೂರ್ವೋಕ್ತ
10. http://www.cia.gov/cia/publications/adhernts.com. www.wikipedia, the Free Emcyclopedia.htm.
11. ನಾರದ ಥೇರ (ಮೂಲ), 2000 ಎಸ್. ನರಸಿಂಹಯ್ಯ (ಅನು) : ಬೋಧಿ ಪೂರ್ಣಿಮಾ ಬೌದ್ಧ ಧರ್ಮದ ಒಂದು ಸಂಕ್ಷಿಪ್ತ ಪರಿಚಯ, ಮಹಾಬೋಧಿ ಸೊಸೈಟಿ, ಬುದ್ಧ ವಚನ ಟ್ರಸ್ಟ್ ಬೆಂಗಳೂರು, 2000, ಪುಟ, 23.
12. Manohar Yadav, 1998 : 'Career of Dalit Movement in Karnataka' in Journal of Social and Economic Development, Vol-I, No.I, ISEC, Banglaore. p.111.
13. Omvedt Gail, 1994. : 'Dalits and the Democratic Revolution, sage publication, New Delhi, p.130.
14. ಅದೇ : ಅದೇ, ಪುಟ ; 268.
15. Manohar Yadav, 1998 : ಅದೇ, ಪುಟ ; 111.

| | | |
|---|---|---|
| 16. ಅದೇ | : | ಅದೇ, ಪುಟ. |
| 17. ಅದೇ | : | ಪುಟ ; 112. |
| 18. ಮಂಗ್ಳೂರ ವಿಜಯ, 2002 | : | <u>ಸಂಘರ್ಷ</u> ಅಂಬೇಡ್ಕರ್ ಜೀವನ - ಸಾಧನೆ, ಸಂಬುದ್ಧ ಪ್ರಕಾಶನ, ಬೆಂಗಳೂರು, ಪುಟ ; 436. |
| 19. ಹಿಮ್ಮಡಿ ವೈ. ಬಿ., 2002 | : | 'ಬಿ ಬಸವಲಿಂಗಪ್ಪನವರ ಜೀವನ ಮತ್ತು ಸಾಧನೆ' <u>'ಸ್ವಾಭಿಮಾನ ಶಿಲ್ಪಿ'</u> ಹುಬ್ಬಳ್ಳಿ - ಧಾರವಾಡ ಮಹಾನಗರ ಪಾಲಿಕೆ, ಹುಬ್ಬಳ್ಳಿ, ಪುಟ ; 5. |
| 20. ಅದೇ | : | ಅದೇ, ಪುಟ ; 6. |
| 21. Ahir D.C., 1998 | : | ಅದೇ, ಪುಟ ; 199. |
| 22. ಅದೇ | : | ಅದೇ ಪುಟ, |
| 23. ಅದೇ | : | ಪುಟ, 129. |
| 24. Ahir D.C., 1998 | : | ಅದೇ, ಪುಟ ; 132. |
| 25. ಅದೇ | : | ಪುಟ ; 200. |
| 26. Ramesh Kamble, 1996 | : | <u>Being Buddhist : A Case study in Bombay</u>, The Asiatic Society Vol. 38, No. I. |
| 27. Ahir D.C., 1998 | : | ಅದೇ ಪುಟ ; 118. |
| 28. Ramesh Kamble, 1996 | : | ಪೂರ್ವೋಕ್ತ |
| 29. ಅದೇ | : | ಅದೇ ಪುಟ ; 120. |
| 30. ಜವರಯ್ಯ ಮ.ನ., 1991 | : | <u>ಅಂಬೇಡ್ಕರ್ ವಿಚಾರ ಸಾಹಿತ್ಯ ಸಮಗ್ರ ಅಧ್ಯಯನ</u> (ಸಂಶೋಧನಾ ಮಹಾಪ್ರಬಂಧ), ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು, ಪುಟ ; 255. |
| 31. ಅದೇ | : | ಅದೇ ಪುಟ ; 256. |
| 32. ಅದೇ | : | ಅದೇ ಪುಟ ; 257. |
| 33. ಅದೇ | : | ಅದೇ ಪುಟ ; 264. |

★★★★★



## ಅಧ್ಯಾಯ-6

# ಕರ್ನಾಟಕದ ಪ್ರಮುಖ ಬೌದ್ಧ ವಿಹಾರಗಳು ಮತ್ತು ಆಚರಣೆಗಳು

6.1. ಪ್ರಮುಖ ಬೌದ್ಧ ವಿಹಾರಗಳು.

6.2. ಕರ್ನಾಟಕದ ಬೌದ್ಧರ ಪ್ರಮುಖ ಆಚರಣೆಗಳು.

## ಅಧ್ಯಾಯ - 6

# ಕರ್ನಾಟಕದ ಪ್ರಮುಖ ಬೌದ್ಧ ವಿಹಾರಗಳು ಮತ್ತು ಆಚರಣೆಗಳು

**ಪ್ರಸ್ತಾವನೆ :**

ಬೌದ್ಧ ವಿಹಾರಗಳ ; 'ಆರಾಮ' ಗಳ ಅಥವಾ 'ಸಂಘಾರಾಮ' ಗಳ ಪರಿಕಲ್ಪನೆ ಬುದ್ಧನ ಜೀವಿತ ಕಾಲದಲ್ಲಿಯೇ ಉಗಮವಾಗಿದ್ದು ಕಂಡು ಬರುತ್ತದೆ. ಬೌದ್ಧ ಪಂಡಿತ ಬುದ್ಧ ಘೋಷನು 'ಚುಲ್ಲವಗ್ಗ' ವನ್ನು ಪ್ರಸ್ತಾಪಿಸಿ ಬೌದ್ಧ ಬಿಕ್ಕುಗಳು ಎಲ್ಲಿ 'ವಾಸ' ವಿರಬೇಕು ಎಂಬ ಬಗ್ಗೆ ವಿವರಗಳನ್ನು ನೀಡಿರುವುದು ಕಂಡು ಬರುತ್ತದೆ. ಬುದ್ಧನ ಅನುಯಾಯಿಯಾಗಿದ್ದ ರಾಜಗ್ರಹದ ಒಬ್ಬ ವ್ಯಾಪಾರಸ್ಥನು 'ಒಂದೇ ದಿನ 60 ವಿಹಾರಗಳನ್ನು ಕಟ್ಟಿಸುತ್ತಾನೆ, ಅಲ್ಲಿಗೆ ಆಗಮಿಸಿದ ಬುದ್ಧನು ಆ ವಿಹಾರಗಳನ್ನು ನೋಡಿ, ಇಂತಹ 'ವಿಹಾರ'ಗಳೇ ಬೌದ್ಧ ಬಿಕ್ಕುಗಳಿಗೆ ವಾಸಕ್ಕೆ ಯೋಗ್ಯವಾಗಿವೆ. ಇವುಗಳನ್ನು ಸಂಘಕ್ಕೆ ದಾನವಾಗಿ ಕೊಡಬೇಕು ಎಂದು ಕೇಳಿದಾಗ, ಆ ವ್ಯಾಪಾರಿಯು 60 ವಿಹಾರಗಳನ್ನು ಸಂಘಕ್ಕೆ ನೀಡುತ್ತಾನೆ. ಬುದ್ಧ ಆತನಿಗೆ ಧನ್ಯವಾದ ಹೇಳುತ್ತಾನೆ. ಮಳೆಗಾಲದಲ್ಲಿ ಬಿಕ್ಕುಗಳು ವಾಸಿಸಲು ಮುಂದೆ ಇವುಗಳನ್ನು ಉಪಯೋಗಿಸಲಾಯಿತು'[1] ಎಂದು ವಿವರಗಳು ತಿಳಿಸುತ್ತವೆ. ಮೊದಮೊದಲು ಗುಡಿಸಲು, ಗುಹೆಗಳಲ್ಲಿ ವಾಸಿಸುತ್ತ ಬಂದ ಬಿಕ್ಕುಗಳು ಕಾಡು ಪ್ರಾಣಿಗಳಿಂದ, ನೈಸರ್ಗಿಕ ನಿಕೋಪಗಳಿಂದ ರಕ್ಷಿಸಿಕೊಳ್ಳಲು ಜನವಸತಿಯು ಇರುವ ಗ್ರಾಮಗಳ ಪಕ್ಕದಲ್ಲಿ ವಿಹಾರಗಳನ್ನು ಸ್ಥಾಪಿಸಿಕೊಳ್ಳುತ್ತಾ ಬಂದಿರುವುದನ್ನು ಕಾಣುತ್ತೇವೆ. ಬೌದ್ಧ ವಿಹಾರಗಳು ದೇವಾಲಯದ ಸ್ವರೂಪಕ್ಕಿಂತ ಭಿನ್ನವಾದ, ಯಾವುದೇ ನಿರ್ಬಂಧಗಳಿಲ್ಲದ ಎಲ್ಲರೂ ಪ್ರವೇಶ ಪಡೆಯಬಹುದಾದ ಭೌತಿಕ ಕಟ್ಟಡಗಳಾಗಿವೆ. ಇವು ಖಚಿತವಾಗಿ 'ಬೌದ್ಧ ಸಂಘ' ದ ಬಿಕ್ಕುಗಳು ಧಮ್ಮದ ಬೋಧೆ, ಲೌಕಿಕ ಶಿಕ್ಷಣ ನೀಡಲು ಉಪಯೋಗಿಸಲು ಪ್ರಾರಂಭಿಸಿದವು. ಬರುಬರುತ್ತಾ ಈ ಕಟ್ಟಡಗಳು 'ಶಿಕ್ಷಣ ಪ್ರಸಾರ' ನೀಡುವ ಕೇಂದ್ರಗಳಾಗಿ ಪರಿವರ್ತಿತವಾದದ್ದು, ಅನೇಕ ರಾಜರುಗಳ ನೆರವಿನಿಂದ ಈ ವಿಹಾರಗಳಿಗೆ ನೆರವು ದೊರೆತು ಕೆಲವೇ ಜನರ ಸ್ವತ್ತಾಗಿದ್ದ ಶಿಕ್ಷಣ 'ಸಾರ್ವತ್ರಿಕ' ವಾಗಿದ್ದನ್ನು ಹಲವಾರು ಅಧ್ಯಯನಗಳು ದಾಖಲಿಸಿರುವುದನ್ನು ಕಾಣುತ್ತೇವೆ. ಮೊದಲು ಇಲ್ಲಿ ಲೌಖಿಕ ಜೀವನಕ್ಕೆ ಅಗತ್ಯವಾದ ಕೌಶಲ್ಯಗಳನ್ನು ಕಲಿಸಲು ಹೆಚ್ಚು ಒತ್ತು ನೀಡಲಾಗಿತ್ತು. ''ಬಿಕ್ಕುಗಳು ತಮ್ಮ ಉಪಯೋಗಕ್ಕೆ ಬೇಕಾದ ಉಡುಪುಗಳನ್ನು, ತಾವೇ ಸಿದ್ಧಪಡಿಸಿಕೊಳ್ಳಬೇಕಾಗಿತ್ತು. ಹೀಗಾಗಿ ವಿಹಾರ ಕೇವಲ ಧಾರ್ಮಿಕ ಚಟುವಟಿಕೆಗಳ ಕೇಂದ್ರವಾಗದೆ, ಆಧ್ಯಾತ್ಮಿಕ ಸಾಧನೆಗಷ್ಟೇ ಸೀಮಿತವಾಗದೇ ಲೌಕಿಕ ಜೀವನಕ್ಕೆ ಬೇಕಾದ ಕೌಶಲ್ಯಗಳ ತರಬೇತಿ ನೀಡುವ 'ಕಲೆ ಮತ್ತು ಕರಕುಶಲ ವೃತ್ತಿಗಳ ಶಾಲೆ'ಯಾಗಿತ್ತು.'[2] 'ಜೇತವನ' ವಿಹಾರವು ಅತ್ಯಂತ ಮಾದರಿಯ ವಿಹಾರವಾಗಿತ್ತೆಂದು ತಿಳಿದುಬರುತ್ತದೆ. ಅನಾಥ ಪಿಂಡಿಕ ಎಂಬ ವ್ಯಾಪಾರಿಯು 'ಜೇತ' ಎಂಬ ಉದ್ಯಾನವನದಲ್ಲಿ ನಿರ್ಮಿಸಿದ ವಿಹಾರವು ಬುದ್ಧನಿಂದಲೇ ಪ್ರಶಂಸೆಗೆ ಪಾತ್ರವಾಗಿದ್ದು 'ಚುಲ್ಲವಗ್ಗ' ದಲ್ಲಿ ಪ್ರಸ್ತಾಪಿತವಾಗಿದೆ. ಆ ಸಂದರ್ಭದಲ್ಲಿ ಬುದ್ಧನು 'ವಿಹಾರವು ಪಟ್ಟಣಕ್ಕೆ ಅತೀ ದೂರದಲ್ಲಿ ಅಥವಾ ಅತೀ ಸಮೀಪವೂ ಇರಕೂಡದು. ಬರು ಹೋಗುವವರಿಗೆ ಅನುಕೂಲ ಸ್ಥಳದಲ್ಲಿರಬೇಕು'[3] ಹೀಗೆ ಹೇಳುವಲ್ಲಿ 'ವಿಹಾರವು' ಸಾಮಾನ್ಯ ಜನತೆಗೂ ಈ ಕಟ್ಟಡ ಜನೋಪಯೋಗಿ ಕಾರ್ಯಕ್ಕೆ ತೊಡಗಿಸಿಕೊಳ್ಳಬೇಕೆಂಬ ಆಶಯವುಳ್ಳದ್ದಾಗಿ ಇರಬೇಕೆಂಬುದು ಕಂಡು ಬರುತ್ತದೆ. ಹೀಗೆ 'ವಿಹಾರ' ವು ಒಂದು ಧಾರ್ಮಿಕ ಕೇಂದ್ರದ ಸ್ವರೂಪವುಳ್ಳದ್ದಾಗಿರದೇ ಜನಕಲ್ಯಾಣ, ಜನತಾ ಶಿಕ್ಷಣ ಪ್ರಸಾರ ಕಾರ್ಯದ ಉದ್ದೇಶ ಹೊಂದಿದ ಜಾತ್ಯತೀತ ಕೇಂದ್ರ (Secular Centre) ವಾಗಿರುವುದನ್ನು ಕಾಣುತ್ತೇವೆ.

ಕರ್ನಾಟಕದಲ್ಲಿ ಅಶೋಕನ ಪೂರ್ವ ಕಾಲದಲ್ಲಿಯೇ ಬೌದ್ಧ ಧರ್ಮ ಪ್ರಚಲಿತವಿದ್ದುದನ್ನು ಹಲವಾರು ಚರಿತ್ರಕಾರರು ದಾಖಲಿಸಿದ್ದಾರೆ. (ತಾಳ್ತಜೆ ವಸಂತಕುಮಾರ : 1988, ಲಕ್ಷ್ಮಣ ತೆಲಗಾವಿ ; 2004, ಇತ್ಯಾದಿ) ದಕ್ಷಿಣಾಪಥದ ನಾಗಾರ್ಜುನಕೊಂಡವು ಬೌದ್ಧರ ಒಂದು ಬೃಹತ್ ಕೇಂದ್ರವಾಗಿದ್ದನ್ನು ಈಗ ಅಲ್ಲಿ ಕಾಯ್ದಿಟ್ಟಿರುವ ಬೌದ್ಧ ಅವಶೇಷಗಳೇ ಖಚಿತಪಡಿಸುತ್ತವೆ. ಅದೇ ರೀತಿ ಆಂಧ್ರ ಪ್ರದೇಶಕ್ಕೆ ಸಮೀಪದಲ್ಲಿರುವ ನಮ್ಮ ಗುಲ್ಬರ್ಗ ಜಿಲ್ಲೆಯ 'ಸನ್ನತಿ' ಕೂಡ ಒಂದು ದೊಡ್ಡ ಬೌದ್ಧ ಕೇಂದ್ರವಾಗಿರುವುದನ್ನು ಉತ್ಖನನಗಳು ದೃಢಪಡಿಸಿದೆಯಾದಾಗ್ಯೂ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಇನ್ನೂ ಹೆಚ್ಚಿನ ಪ್ರಮಾಣದ ಉತ್ಖನನ ನಡೆದರೆ ಸ್ಪಷ್ಟ ಚಿತ್ರಣ ಸಿಗಬಹುದಾಗಿದೆ. ದೀಪವಂಶ, ಮಹಾವಂಶ ಬೌದ್ಧ ಕೃತಿಗಳಲ್ಲಿ ಈ ಬಗ್ಗೆ ವಿವರಗಳು ಲಭ್ಯವಾಗಿವೆ. 'ಮಹಾವಂಶ' ದಲ್ಲಿ ''ಥೇರ ಮಹಾದೇವನು 'ಮಹಿಷಮಂಡಲ' ಕ್ಕೆ ಹೋಗಿ, 40 ಸಾವಿರ ಜನರಿಗೆ ಸತ್ಯದ ಬೋಧೆ ಮಾಡಿ, 'ಪಬ್ಬಜ್ಜ' ದೀಕ್ಷೆ ನೀಡಿದನು. ರಕ್ಷಿತ ಥೇರನು 'ಬನವಾಸಿ'ಗೆ ಹೋಗಿ, 'ಅನಮತಗ್ಗ ಸುತ್ತ' ವನ್ನು ಬೋಧಿಸಿ 60 ಸಾವಿರ ಜನರಿಗೆ ಬೌದ್ಧದೀಕ್ಷೆ ನೀಡಿದನು, 37 ಸಾವಿರ ಜನರಿಗೆ 'ಪಬ್ಬಜ್ಜ' ದೀಕ್ಷೆ ನೀಡಿದನು, 500 ವಿಹಾರಗಳನ್ನು ಕಟ್ಟಿಸಲಾಯಿತು, ಹೀಗೆ ಆ ರಾಷ್ಟ್ರದಲ್ಲಿ ಧರ್ಮವನ್ನು ಸ್ಥಾಪಿಸಲಾಯಿತು''[4] ಎಂಬ ಮಹತ್ವದ ವಿವರಗಳಿವೆ. ಅದೇ ಹೀಗೆ ವಿಶಾಲ ವ್ಯಾಪ್ತಿಯಲ್ಲಿ ಅಂದರೆ ಈ ಕಡೆ ಗುಲ್ಬರ್ಗಾ ಜಿಲ್ಲೆಯ 'ಸನ್ನತಿ'ಯಿಂದ ಹಿಡಿದು, ದಕ್ಷಿಣ ಭಾಗದ ಮೈಸೂರು, ಸಮುದ್ರ ತೀರಕ್ಕೆ ಸಮೀಪದ ಬನವಾಸಿ ಹಾಗೂ ಬೆಳಗಾವಿ (ವಡಗಾಂವ ಮಾಧವಪೂರ) ಯಿಂದ ಹಿಡಿದುಕೊಂಡು ಬೆಂಗಳೂರಿಗೆ ಸಮೀಪದ 'ರಾಜಘಟ್ಟ'[5] ದವರೆಗೂ ''ಬೌದ್ಧಮಯ ಕರ್ನಾಟಕ'' ವನ್ನು ಕಾಣುತ್ತೇವೆ. ಕರ್ನಾಟಕದಲ್ಲಿ ದೊರೆತ ಶಾಸನಗಳಲ್ಲಿ 'ವಿಹಾರ' ಪದ ಬಳಕೆಯಾಗಿರುವುದನ್ನು ನೋಡುತ್ತೇವೆ. ಕದರಿಯ ಶಾಸನದಲ್ಲಿ ವಿಹಾರ, ಲೋಕೇಶ್ವರ ಇಂತಹ ಬೌದ್ಧ ಪಾರಿಭಾಷಿಕ ಪದಗಳು, ಶೃಂಗೇರಿಯಲ್ಲಿನ ಸಂಸ್ಕೃತದ ವಿವರಣೆಗಳನ್ನು ಹಾಗೂ ಬಳ್ಳಿಗಾವೆ ಶಾಸನಗಳಲ್ಲಿ 'ಜಯಂತಿ ಪ್ರಬೌದ್ಧ ವಿಹಾರ', 'ತಾರಾ' ದೇವಾಲಯಗಳಿರುವುದನ್ನು ತಾಳ್ತಜೆ ವಸಂತ ಕುಮಾರರವರು ಪ್ರಸ್ತಾಪಿಸಿದ್ದಾರೆ. (ಅದೇ ಪುಟ 3) ''ಸಿಂಹಳದ ಬೌದ್ಧ ಬ್ಕಿಕುಗಳು ಬನವಾಸಿ ಪ್ರಾಂತ್ಯದಲ್ಲಿ ಬೌದ್ಧಪ್ರಸಾರದಲ್ಲಿ ತೊಡಗಿದ್ದು ಸಿಂಹಳದ ದೊರೆ 'ದುತ್ತಗಾಮಣಿ' ಯ ನೇತೃತ್ವದಲ್ಲಿ ನಡೆದ ಸಮಾರಂಭವೊಂದಕ್ಕೆ ಬನವಾಸಿಯಿಂದ 84,000 ಮಂದಿ ಥೇರರು ಭಾಗವಹಿಸಿದ ವಿವರಗಳು''[6], 'ಮಹಾವಂಶ' ಗ್ರಂಥದಲ್ಲಿ ಸಿಗುತ್ತವೆ ಎಂದು ತಾಳ್ತಜೆ ದಾಖಲಿಸಿದ್ದಾರೆ. 84,000 ಸಾವಿರ ಥೇರರೆಂದರೆ, ಅವರು ಬೌದ್ಧ ಬಿಕ್ಕುಗಳೇ ಆಗಿದ್ದರು. ಇಲ್ಲಿಯವರೆಗೆ ಬೌದ್ಧ ಸಾಹಿತ್ಯದಲ್ಲಿ ಬಿಕ್ಕುಗಳಿಗೆ ಮಾತ್ರ 'ಥೇರ' ಎಂದು ಬಳಕೆಯಾಗ್ದಿನ್ನು ಕಾಣುತ್ತೇವೆ. ಹೀಗೆ 'ಬನವಾಸಿ ಪ್ರಾಂತ್ಯದಲ್ಲೇ' ಇಷ್ಟು ದೊಡ್ಡ ಸಂಖ್ಯೆಯ ಬಿಕ್ಕುಗಳಿದ್ದಾರೆಂದು ಉಲ್ಲೇಖಿಸಿದ್ದನ್ನು ನೋಡಿದರೆ ಇಲ್ಲಿದ್ದ ವಿಹಾರಗಳು ಎಷ್ಟಿರಬಹುದೆಂಬ ಅಂದಾಜು ನಮ್ಮ ಮುಂದೆ ಬರುತ್ತದೆ. ಹೀಗೆ ಸಾವಿರಾರು ಬೌದ್ಧ ಬಿಕ್ಕುಗಳು, ಅಸಂಖ್ಯಾತ ವಿಹಾರಗಳು ಈ ಕನ್ನಡದ ನೆಲದಲ್ಲೇ ಇದ್ದವೆಂಬುದೇ ಅತ್ಯಂತ ಮಹತ್ವದ ಮತ್ತು ಕುತೂಹಲಕಾರಿಯಾದ ಚಾರಿತ್ರಿಕ ಸತ್ಯವಾಗಿದೆ. ಕರ್ನಾಟಕದ 'ಬನವಾಸಿ'ಗೆ ಬಂದು ಬೌದ್ಧಧರ್ಮ ಪ್ರಸಾರ ಮಾಡಿದ, 60 ಸಾವಿರ ಜನರಿಗೆ ಬೌದ್ಧದೀಕ್ಷೆ ನೀಡಿದ 'ರಕ್ಷಿತ ಥೇರ' ಬಿಕ್ಕುವಿನ ಗೌರವಾರ್ಥವಾಗಿಯೇ ಕರ್ನಾಟಕದಲ್ಲಿ ಬೌದ್ಧ ಧರ್ಮ ಪುನರುಜ್ಜೀವನ ಕಾರ್ಯ ಮಾಡಿದ ಬಿ. ಬಸವಲಿಂಗಪ್ಪನವರು ಧಾರವಾಡದಲ್ಲಿ ದಲಿತ ಬಹುಜನ ವರ್ಗದ ವಿದ್ಯಾರ್ಥಿಗಳಿಗೆ ಪ್ರಾರಂಭಿಸಿದ ವಸತಿ ಶಾಲೆಗೆ 'ಬುದ್ಧರಕ್ಷಿತ ವಸತಿ ಪ್ರೌಢಶಾಲೆ' ಎಂದು ಹೆಸರಿಟ್ಟಿದ್ದನ್ನು ಕಾಣುತ್ತೇವೆ. ಹೀಗೆ ಚಾರಿತ್ರಿಕವಾಗಿ ಕರ್ನಾಟಕದಲ್ಲಿ ಬೌದ್ಧ ವಿಹಾರಗಳ ಬಗ್ಗೆ ವಿಫುಲವಾದ ಮಹತ್ವದ ದಾಖಲೆಗಳನ್ನು ನೋಡಬಹುದಾಗಿದೆ.

## ಅಖಿಲ ಭಾರತ ಮಟ್ಟದ ಪ್ರಥಮ ವಿಹಾರಗಳು :

ಆಧುನಿಕ ಕಾಲಘಟ್ಟದಲ್ಲಿ ಅಖಿಲ ಭಾರತ ಮಟ್ಟದಲ್ಲಿ ಕಲ್ಕತ್ತದಲ್ಲಿ ಅನಗಾರಿಕ ಧರ್ಮಪಾಲರು 1891 ರಲ್ಲಿ 'ಮಹಾಬೋಧಿ ಸೊಸೈಟಿ' ಯನ್ನು ಪ್ರಾರಂಭಿಸುವವರೆಗೆ ಸುಸಜ್ಜಿತವಾದ ಯಾವುದೇ ವಿಹಾರಗಳು, ಇಲ್ಲದಿರುವುದನ್ನು ಕಾಣುತ್ತೇವೆ. ಹಿಮಾಲಯದ ಪ್ರದೇಶಗಳಲ್ಲಿ ಬೌದ್ಧ ನೆಲೆಗಳು ಇದ್ದರೂ ಕೂಡ ಅವು ತಾಂತ್ರಿಕ ಬೌದ್ಧ ಪಂಥದ ಬೌದ್ಧ 'ದೇವಾಲಯಗಳ' ಸ್ವರೂಪದವು ಆಗಿವೆ. ಡಿ.ಸಿ. ಅಹಿರ್ ಅವರು ದಾಖಲಿಸಿದಂತೆ ಆಧುನಿಕ ಭಾರತದಲ್ಲಿ ನಿರ್ಮಿತಗೊಂಡ, ಬಿಕ್ಕು ಮಹಾವೀರರು 1902 ರಲ್ಲಿ ಸ್ಥಾಪಿಸಿದ ಕುಶಿನಗರ ವಿಹಾರವು ಪ್ರಥಮ ವಿಹಾರವಾಗಿದೆ"[7] ದಕ್ಷಿಣ ಭಾರತದಲ್ಲಿ ಶ್ರೀಲಂಕಾದ ಬೌದ್ಧ ಬಿಕ್ಕುಗಳ ಪ್ರಭಾವದಿಂದ ಮತ್ತು ಕರ್ನಲ್ ಆಲ್ಕಾಟ್ ಮದ್ರಾಸ್ ಥಿಯೋಸೊಫಿಕಲ್ ಸೊಸೈಟಿಯ ಮುಖ್ಯಸ್ಥ ಮತ್ತು ಬೌದ್ಧ ದೀಕ್ಷೆ ಪಡೆದುಕೊಂಡವರ ಸಹಾಯದಿಂದ ತಮಿಳುನಾಡಿದ ಬೌದ್ಧ ಪಂಡಿತ, ಐಯೋಥಿದಾಸ್ ಮದ್ರಾಸನ ರಾಯಲಪೇಟ್‌ದಲ್ಲಿ ಸ್ಥಾಪಿಸಿದ ವಿಹಾರವೂ ಕೂಡ 1900 ರಿಂದ 1902 ರ ಅವಧಿಯಲ್ಲಿ ಸ್ಥಾಪಿತವಾಗಿದ್ದನ್ನು ನೋಡುತ್ತೇವೆ. ಅಹಿರ್ ತಮ್ಮ ಅಧ್ಯಯನಗಳಲ್ಲಿ ದಕ್ಷಿಣ ಭಾರತದ ವಿಹಾರದ ಬಗ್ಗೆ ಪ್ರಸ್ತಾಪಿಸಿಲ್ಲದಿರುವುದನ್ನು ಕಾಣುತ್ತೇವೆ. ಅವರು ಪಟ್ಟಿ ಮಾಡಿದ ವಿಹಾರಗಳಲ್ಲಿ ಪ್ರಮುಖವಾಗಿ "1903 ರಲ್ಲಿ ಕಲ್ಕತ್ತದಲ್ಲಿ ಪ್ರಾರಂಭವಾದ ಧರ್ಮಾಂಕರ್ ವಿಹಾರ, 1920 ರಲ್ಲಿ ಅದೇ ಕಲ್ಕತ್ತದಲ್ಲಿ ಸ್ಥಾಪಿತವಾದ ಧರ್ಮರಾಜಿಕ ವಿಹಾರ, 1931 ರಲ್ಲಿ ಸಾರನಾಥದಲ್ಲಿ ಪ್ರಾರಂಭಗೊಂಡ ಮೂಲ ಗಂಧಕುಟಿ ವಿಹಾರ, 1931 ರಲ್ಲಿ ಮುಂಬೈನಲ್ಲಿ ಸ್ಥಾಪಿತವಾದ ಆನಂದವಿಹಾರ, ಮುಂದೆ 1937 ರಲ್ಲಿ ಬೌದ್ಧ ಪಂಡಿತ ಧರ್ಮಾನಂದ ಕೋಸಂಬಿ ಇವರು ಅದೇ ಮುಂಬೈನ ಪರೇಲ್‌ನಲ್ಲಿ ಬಡ ಕೂಲಿಕಾರರು ಮತ್ತು ಕಾರ್ಮಿಕರ ಆಧ್ಯಾತ್ಮಿಕ ಅಗತ್ಯಗಳನ್ನು ಪೂರೈಸಲಿಕ್ಕಾಗಿಯೇ 'ಬಹುಜನ ಬೌದ್ಧ ವಿಹಾರ' 1939 ರಲ್ಲಿ ದೆಹಲಿಯಲ್ಲಿ ಸ್ಥಾಪಿತವಾದ ಬೌದ್ಧವಿಹಾರ, 1946 ರಲ್ಲಿ ಅಗರ್ತಲಾದಲ್ಲಿ ಪ್ರಾರಂಭಗೊಂಡ ವೇಣುವನ ಬೌದ್ಧವಿಹಾರ, ಸ್ವಾತಂತ್ರ್ಯ ನಂತರ ನವದೆಹಲಿಯಲ್ಲಿ 1950 ರಲ್ಲಿ ನಿರ್ಮಾಣಗೊಂಡ 'ಅಶೋಕ ಮಿಷನ್' ವಿಹಾರ'[8], ಇವು ಪ್ರಮುಖವಾಗಿವೆ. ಅಖಿಲ ಭಾರತ ಮಟ್ಟದಲ್ಲಿ 1956 ರಲ್ಲಿ ಡಾ. ಅಂಬೇಡ್ಕರ್‌ರವರು ಬೌದ್ಧ ಧರ್ಮ ದೀಕ್ಷೆ ಪಡೆದ ನಂತರ ಬೌದ್ಧರ ಜನಸಂಖ್ಯೆ ಬೆಳೆದಂತೆ ವಿಹಾರಗಳೂ ಸಾವಿರಾರು ಸಂಖ್ಯೆಯಲ್ಲಿ ಬೆಳೆದಿವೆ. 'ಅತ್ಯಂತ ಹೆಚ್ಚು ವಿಹಾರಗಳು ನಾಗಪುರ'[9] ದಲ್ಲಿವೆ. ಇತ್ತೀಚಿಗೆ ಭಾರತದಾದ್ಯಂತ ಎಲ್ಲೆಲ್ಲಿ ದಲಿತರು, ಅಂಬೇಡ್ಕರ್ ಅನುಯಾಯಿಗಳು ಜಾಗೃತರಾಗಿದ್ದಾರೋ, ಶಿಕ್ಷಣದ ಮಟ್ಟವು ಹೆಚ್ಚಿದೆಯೋ ಅಂತಹ ಪ್ರದೇಶದ ಗ್ರಾಮಗಳಲ್ಲಿ, ಪಟ್ಟಣಗಳಲ್ಲಿ 'ಬೌದ್ಧವಿಹಾರಗಳ' ನಿರ್ಮಾಣ ಕಾರ್ಯ ಬರದಿಂದ ನಡೆದಿರುವುದನ್ನು ನೋಡುತ್ತೇವೆ. ಡಾ. ಅಂಬೇಡ್ಕರ್‌ರವರೇ, 1954 ರಲ್ಲಿ ಬರ್ಮಾದ ರಂಗೂನನಲ್ಲಿ ನಡೆದ ಅಂತರ ರಾಷ್ಟ್ರೀಯ ಬೌದ್ಧ ಸಮ್ಮೇಳನದಲ್ಲಿ ಭಾಗವಹಿಸಿದ ಸಂದರ್ಭದಲ್ಲಿ ಜಾಗತಿಕ ಬೌದ್ಧ ಧರ್ಮಿಯರ ಮುಂದೆ ತಮ್ಮ ಭಾರತದಲ್ಲಿ ಬೌದ್ಧ ಚಳವಳಿಯ ನೀಲನಕ್ಷೆಯನ್ನು ಮಂಡಿಸುತ್ತಾರೆ. ಭಾರತದಲ್ಲಿ ಬೌದ್ಧ ಧರ್ಮೀಯರು ಮತ್ತು ಬೌದ್ಧ ಧರ್ಮದ ಸಂಘ ಸಂಸ್ಥೆಗಳ ನಿರ್ಮಾಣದ ಅಗತ್ಯವನ್ನು ಪ್ರಸ್ತಾಪಿಸಿ "ದೊಡ್ಡ ವಿಹಾರಗಳನ್ನು ನಾಲ್ಕು ಮಹತ್ವದ ಪಟ್ಟಣಗಳಾದ 1) ಮದ್ರಾಸ್ 2) ಬಾಂಬೆ 3) ನಾಗಪುರ 4) ದೆಹಲಿ ಇಲ್ಲಿ ಸ್ಥಾಪಿಸಬೇಕು, ಅವು ಬೌದ್ಧ ಧರ್ಮ ಪ್ರಚಾರ ಕಾರ್ಯವನ್ನು ಬೃಹತ್ತಾದ ರೀತಿಯಲ್ಲಿ ಮಾಡಬೇಕು'[10] ಎಂದು ಹೇಳುತ್ತಾ 'ಮೈಸೂರು ರಾಜ್ಯದಲ್ಲಿ ಕೆ.ಜಿ.ಎಫ್. ನಲ್ಲಿ ಬೆಂಗಳೂರಿನ ಪ್ರೇಝರ್ ಟೌನ್, ಸೆಂಟ್ರಲ್ ಜೈಲ್‌ನ ಪಕ್ಕದಲ್ಲಿರುವ ಬೌದ್ಧ ಕೇಂದ್ರಗಳಿಗೆ ಭೇಟಿ ನೀಡಿ ಬೌದ್ಧರ ಸ್ಥಿತಿಗತಿಗಳನ್ನು ಗಮನಿಸಿದ್ದೇನೆ, ಮೂವತ್ತು-ನಲ್ವತ್ತು ವರ್ಷಗಳಿಂದ ದಕ್ಷಿಣ ಭಾರತದಲ್ಲಿ ಬೌದ್ಧ

ಧರ್ಮ ಪ್ರಚಲಿತದಲ್ಲಿದೆ'[11] ಎಂದು ಹೇಳುತ್ತಾರೆ. ಬೆಂಗಳೂರಿನಲ್ಲಿ ''ಮೈಸೂರು ರಾಜ್ಯದ ರಾಜ ಪ್ರಮುಖರಿಂದ ಪಡೆಯುವ 5 ಎಕರೆ ಪ್ರದೇಶದಲ್ಲಿ ದಕ್ಷಿಣ ಭಾರತದಲ್ಲಿ ಬೌದ್ಧ ಧರ್ಮ ಪ್ರಸಾರ ಮಾಡುವ ಉದ್ದೇಶದಿಂದಲೇ ಒಂದು ಬೌದ್ಧ ಧರ್ಮ ಕೇಂದ್ರ (Buddhist Religious Seminary) ಸ್ಥಾಪಿಸಿ ಆ ಮೂಲಕ ಬಿಕ್ಕುಗಳನ್ನು ಮತ್ತು ನಮ್ಮ ಧರ್ಮ ಪ್ರಚಾರಕರನ್ನು ತರಬೇತಿಗೊಳಿಸಬೇಕಾಗಿದೆ. ಈ ಭೂಮಿಯ ಕಾಗದಪತ್ರಗಳನ್ನು ಇನ್ನೂ ಮಾಡಿಸಬೇಕಾಗಿದೆ. ಈ ಭೂಮಿಯು ಅತ್ಯಂತ ಸುಂದರ ಪರಿಸರಲ್ಲಿದ್ದು ಬಹು ಮೌಲ್ಯವುಳ್ಳದ್ದಾಗಿದೆ. ಈ ಕುರಿತು ಮೈಸೂರು ಮಹಾರಾಜರ ಆಪ್ತ ಕಾರ್ಯದರ್ಶಿ ನನಗೆ ಕಳುಹಿಸಿದ ಪತ್ರವನ್ನು ಈ ಮನವಿಗೆ ಲಗತ್ತಿಸಿದ್ದೇನೆ''[12] ಎಂದು ಹೇಳುತ್ತಾ ಭಾರತದಲ್ಲಿನ ಇಂತಹ ಧರ್ಮ ಪ್ರಸಾರ ಕಾರ್ಯ, ವಿಹಾರ ನಿರ್ಮಾಣ ಕಾರ್ಯಗಳಿಗೆ ''ದಾನದ ರೂಪದಲ್ಲಿ ಸಹಾಯದ ಹಣವನ್ನು ಈ ಕಡೆ ತಿರುಗಿಸಬೇಕೆಂದು ಈ ಜವಾಬ್ದಾರಿ ಹೆಚ್ಚಿನದಾಗಿ, ಭಾರತ ಹೊರತುಪಡಿಸಿ ಉಳಿದ ಬೌದ್ಧ ರಾಷ್ಟ್ರಗಳು ಹೊರಬೇಕಾಗಿದೆ, ನನಗನ್ನಿಸಿದಂತೆ ಇಂತಹ ಕಾರ್ಯವನ್ನೂ 'ದಾನ'ವನ್ನು ಈ ಕಡೆ ಹರಿಸುವುದರಿಂದ ಸಾಧ್ಯ''[13] ಎಂದು ಅಭಿಪ್ರಾಯಪಡುತ್ತಾರೆ. ಡಾ. ಅಂಬೇಡ್ಕರ್‌ರವರು ಅಭಿಪ್ರಾಯಪಟ್ಟಂತೆ ಅವರ ಕನಸು ನನಸು ಮಾಡುವಲ್ಲಿ ಕರ್ನಾಟಕದ ದಲಿತ ಧುರೀಣ, ಬಿ. ಬಸಲಿಂಗಪ್ಪನವರು ಶ್ರಮಿಸಿದರು. ಅವರು 1980 ರ ದಶಕದಲ್ಲಿ ಈ ಐದು ಎಕರೆ ಭೂಮಿಯನ್ನು 'ಬುದ್ಧಭೂಮಿ' ಎಂದು ಹೆಸರಿಸಿ ಅಲ್ಲಿ ನಾಗಸೇನಾ ವಿದ್ಯಾಲಯವನ್ನು ಪ್ರಾರಂಭಿಸಿ, ಕರ್ನಾಟಕದಲ್ಲಿ ಬೌದ್ಧ ಧರ್ಮ ಪ್ರಸಾರಕ್ಕಾಗಿಯೇ 'ಕರ್ನಾಟಕ ಬುದ್ಧ ಧಮ್ಮ ಸಮಿತಿ' ಎಂಬ ಮಹತ್ವದ ಸಂಸ್ಥೆಯನ್ನು ಹುಟ್ಟುಹಾಕಿದ್ದನ್ನು ನೋಡುತ್ತೇವೆ. ಈ ಬಗ್ಗೆ ಅಧ್ಯಾಯ-7 ರಲ್ಲಿ ವಿವರವಾಗಿ ಚರ್ಚಿಸಲಾಗಿದೆ.

## 6.1. ಕರ್ನಾಟಕದ ಪ್ರಮುಖ ಬೌದ್ಧ ವಿಹಾರಗಳು :

ಬೌದ್ಧ ವಿಹಾರಗಳ ಬಗ್ಗೆ ಸ್ಥೂಲವಾದ ವಿಹಂಗಮ ನೋಟವನ್ನು ಮೇಲೆ ವಿವರಿಸಿದಂತೆ, ಡಾ. ಅಂಬೇಡ್ಕರ್‌ರವರೂ ಕರ್ನಾಟಕಕ್ಕೆ ಭೇಟಿ ನೀಡಿ ವಿಹಾರಗಳು ಕಾರ್ಯನಿರ್ವಹಿಸುತ್ತಿರುವ ಬಗ್ಗೆ ದಾಖಲಿಸಿರುವುದನ್ನು ನೋಡುತ್ತೇವೆ. ಇಲ್ಲಿಯವರೆಗಿನ ಕಾಲಘಟ್ಟದವರೆಗೂ ಅಲ್ಲಲ್ಲಿ ವಿಹಾರಗಳು ಪ್ರಾರಂಭವಾಗಿ ಬೌದ್ಧಧರ್ಮದ ಅಧ್ಯಯನ, ಪ್ರಸಾರ, ಬೌದ್ಧಶಿಕ್ಷಣ ಕ್ರಮದ ಅನುಷ್ಠಾನ, ಮುಂತಾದ ಧಾರ್ಮಿಕ, ಆಧ್ಯಾತ್ಮಿಕ ಕಾರ್ಯ ಚಟುವಟಿಕೆಗಳಲ್ಲಿ ವ್ಯಾಪಕವಾಗಿ ತೊಡಗಿಸಿಕೊಂಡಿರುವುದನ್ನು ನೋಡಬಹುದಾಗಿದೆ. ಅವುಗಳಲ್ಲಿ ಪ್ರಮುಖವಾದ ವಿಹಾರಗಳನ್ನು ಅಧ್ಯಯನದ ತಾತ್ವಿಕತೆಯನ್ನು ಮಹತ್ವವನ್ನು ಅರ್ಥೈಸುವಿಕೆಗೆ ಪೂರಕವಾಗಿ ಈ ಕೆಳಗಿನಂತೆ ಸ್ಥೂಲವಾಗಿ ವಿವರಿಸಲು ಪ್ರಯತ್ನಿಸಲಾಗಿದೆ.

### ಕೆ.ಜಿ.ಎಫ್. ಬೌದ್ಧ ವಿಹಾರಗಳು :

1907 ರಲ್ಲಿ ಮಾರಿಕುಪ್ಪಂನಲ್ಲಿ ಸ್ಥಾಪಿತವಾದ 'ದಕ್ಷಿಣ ಭಾರತ ಬೌದ್ಧ ಸಂಘದ ವಿಹಾರವು' (ನೋಡಿ ಅನುಬಂಧ-I ಚಿತ್ರ: 13-14) ಕರ್ನಾಟಕದಲ್ಲಿ ಆಧುನಿಕ ಕಾಲದಲ್ಲಿ ಪ್ರಾರಂಭವಾದ ಪ್ರಥಮ ವಿಹಾರವಾಗಿದೆ. ಮೊದಲು ಮದ್ರಾಸಿನಲ್ಲಿ 1902 ರಲ್ಲಿ ಪ್ರಾರಂಭವಾದ ಸಾಕ್ಯ ಬೌದ್ಧ ಸಂಘದ ಶಾಖೆಯಾಗಿಯೇ ಪ್ರಾರಂಭವಾದ ಈ ಬೌದ್ಧ ಸಂಘವು 1907 ರಲ್ಲಿ 'ವಿಹಾರ'ದ ಸ್ವರೂಪವನ್ನು ಪಡೆದು ಚಟುವಟಿಕೆಗಳು ಬಹಳ

ಪ್ರಮಾಣದಲ್ಲಿ ಪಡೆದು ಇಲ್ಲಿನ ಬೌದ್ಧ ವಕ್ತಾರರೇ ದಕ್ಷಿಣಭಾರತದ ಪ್ರಮುಖ ಕಡೆ ಮತ್ತು ಬರ್ಮಾದ ರಂಗೂನ, ದಕ್ಷಿಣಾ ಆಫ್ರಿಕಾದ ನಟಲ್‌ನಲ್ಲಿ ಬೌದ್ಧ ವಿಹಾರಗಳನ್ನು ಸ್ಥಾಪಿಸಿದ್ದರಿಂದ ಈ ಸಂಘವು ದಕ್ಷಿಣ ಭಾರತ ಬೌದ್ಧ ಸಂಘವಾಗಿ (South Indian Buddhist Association) ಕಾರ್ಯನಿರ್ವಹಿಸಿದ್ದನ್ನು ಕಾಣುತ್ತೇವೆ. (ನೋಡಿ ಅನುಬಂಧ-IV ಶಾಖೆಗಳು) ಮುಂದೆ ಇದೇ ಸಂಘವು 'ಭಾರತ ಬೌದ್ಧ ಸಂಘವಾಗಿ (The Buddhist Society of India) ಆಗಿ ಕಾರ್ಯನಿರ್ವಹಿಸುತ್ತಿರುವುದನ್ನು ಕಾಣುತ್ತೇವೆ. ಕೆ.ಜಿ.ಎಫ್. ನ ಈ ಬೌದ್ಧ ಸಂಘ ಮತ್ತು ವಿಹಾರದ ಪ್ರಮುಖ ಚಟುವಟಿಕೆಗಳನ್ನು ಈ ರೀತಿಯಾಗಿ ಪಟ್ಟಿ ಮಾಡಬಹುದು.[14]

1) ಭಾರತದಲ್ಲಿ ಬೌದ್ಧದ ಪ್ರಸಾರ

2) ಬೌದ್ಧ ಪ್ರಾರ್ಥನೆಗಾಗಿ ವಿಹಾರಗಳನ್ನು ಸ್ಥಾಪಿಸುವುದು.

3) ವೈಜ್ಞಾನಿಕ ವಿಷಯಗಳ ಶಿಕ್ಷಣಕ್ಕಾಗಿ ಶಾಲೆ ಕಾಲೇಜು ಪ್ರಾರಂಭಿಸುವುದು.

4) ಅನಾಥಾಲಯ, ಆಸ್ಪತ್ರೆ ಮತ್ತು ಪುನರ್ ವಸತಿ ಕೇಂದ್ರಗಳನ್ನು ಸ್ಥಾಪಿಸುವುದು.

5) ಬೌದ್ಧ ಧರ್ಮ ಪ್ರಸಾರಕ್ಕಾಗಿ ಬಿಕ್ಕುಗಳ ತರಬೇತಿ ಕೇಂದ್ರ ಪ್ರಾರಂಭಿಸುವುದು.

6) ಧರ್ಮಗಳ ತುಲನಾತ್ಮಕ ಅಧ್ಯಯನಕ್ಕೆ ಪ್ರೋತ್ಸಾಹಿಸುವುದು.

7) ಬೌದ್ದಸಾಹಿತ್ಯ ಪ್ರಕಟಿಸಿ ಸಾಮಾನ್ಯನ ಮಟ್ಟಕ್ಕೂ ಬೌದ್ಧಧರ್ಮ ಪರಿಚಯಿಸುವುದು.

8) ಭಾರತ ಮತ್ತು ಇತರ ರಾಷ್ಟ್ರಗಳಿಗೆ ಕೊಂಡಿಯಾಗಿ ಸಾಂಸ್ಕೃತಿಕ ಸಂಬಂಧ ಕಲ್ಪಿಸುವಂತಹ ಅಂತರ್‌ರಾಷ್ಟ್ರೀಯ ಭ್ರಾತೃತ್ವ ಬೆಳೆಸುವುದು.

9) ಮುದ್ರಣಾಲಯ ಸ್ಥಾಪಿಸಿ, ಪತ್ರಿಕೆಗಳನ್ನು ಪ್ರಾರಂಭಿಸಿ ಬೌದ್ಧಧಮ್ಮ ಪ್ರಚಾರ ಮಾಡುವುದು.

10) ಭಾರತದ ಬೌದ್ಧರನ್ನು ಒಂದು ಕಡೆ ಸೇರಿಸಲು ಆಗಾಗ ಸಮಾವೇಶ, ವಿಚಾರ ಸಂಕಿರಣಗಳನ್ನು ಏರ್ಪಡಿಸುವುದು ಆ ಮೂಲಕ ಧಮ್ಮದ ಅನುಯಾಯಿಗಳ ಸಂಪರ್ಕ ಗಟ್ಟಿಗೊಳಿಸುವುದು.

ಈ ಎಲ್ಲ ಕ್ಷೇತ್ರಗಳಲ್ಲಿ ಈ ಸಂಘ ಕೆಲಸ ಮಾಡಿರುವುದನ್ನು ದಾಖಲೆಗಳಿಂದ ತಿಳಿಯಬಹುದಾಗಿದೆ. ಮೊದಲಿನಿಂದಲೂ ಅಸ್ಪೃಶ್ಯರಲ್ಲಿ ಬೌದ್ಧಧರ್ಮ ಪ್ರಸಾರ ಮಾಡುತ್ತಾ ಶ್ರಮಿಸುತ್ತಾ ಬಂದ ಈ ಸಂಘವು 'ಡಾ. ಅಂಬೇಡ್ಕರ್‌ರವರ ಬರಹ ಮತ್ತು ಭಾಷಣ ಗಳನ್ನು' 'ಬುದ್ಧ ಮತ್ತು ಕಾರ್ಲ್‌ಮಾರ್ಕ್ಸ್', ಅಂಬೇಡ್ಕರ್ ನುಡಿದದ್ದು (Thus spoke Ambedkar) ಈ ಕೃತಿಗಳನ್ನು ತಮಿಳಿಗೆ ಅನುವಾದಿಸಿ ಪ್ರಕಟಿಸಿದೆ. ಸಾರ್ವಜನಿಕರಲ್ಲಿ ಬೌದ್ಧ ಧರ್ಮದ ಬಗ್ಗೆ ಆಸಕ್ತಿ ಮೂಡಿಸಿದೆ 1956 ರಲ್ಲಿ ಸಂಘದ ಎಲ್ಲಾ ಶಕ್ತಿಯನ್ನೂ ಬಳಸಿ ಮಣಿಮೇಗನ್ ಬರೆದ 'ಸಾಮ್ರಾಟ ಅಶೋಕ' ನಾಟಕವನ್ನು ಕೆ.ಜಿ.ಎಫ್., ಬೆಂಗಳೂರು, ವೆಲ್ಲೋರ್ ಮತ್ತು ಇತರ ಸ್ಥಳಗಳಲ್ಲಿ ಪ್ರದರ್ಶಿಸಲು ಶ್ರಮಿಸಲಾಗಿದೆ'[15] ಎಂದು ಪ್ರಸ್ತುತ ಅಧ್ಯಕ್ಷರಾದ ಐ. ಲೋಗನಾಥನ್ ದಾಖಲಿಸಿದ್ದಾರೆ.

**ಚಾಂಪಿಯನ್ ರೀಫ್ ಬೌದ್ಧ ವಿಹಾರ ಕೆ.ಜಿ.ಎಫ್.:**

ಕೆ.ಜಿ.ಎಫ್. ನ ಮಾರಿಕುಪ್ಪ ಪ್ರದೇಶದಲ್ಲಿ ಬೌದ್ಧ ಧರ್ಮಿಯರು ಬೆಳೆದಂತೆಲ್ಲ ಅದೇ ಪಟ್ಟಣದಲ್ಲಿ ಚಾಂಪಿಯನ್ ರೀಫ್ ಎಂಬಲ್ಲಿ 1915 ರಲ್ಲಿ ಮತ್ತೊಂದು ವಿಹಾರ ಪ್ರಾರಂಭವಾಗಿದ್ದನ್ನು ಕಾಣುತ್ತೇವೆ. 'ಈ ಭಾಗದವರಿಗೆ ಮಾರಿಕುಪ್ಪಂ ವಿಹಾರದ ಚಟುವಟಿಕೆಗಳಲ್ಲಿ ಸೂಕ್ತ ಭಾಗವಹಿಸುವಿಕೆ ಸಾಧ್ಯವಾಗದ ಕಾರಣದಿಂದ ಹಾಗೂ ಜಿ. ಅಪ್ಪಾದುರೈಯಾರ್ (ಮೊದಲು ರೋಮನ್ ಕ್ಯಾಥಲಿಕ್‌ರಾಗಿದ್ದವರು ನಂತರ ಬೌದ್ಧಧರ್ಮಕ್ಕೆ ಮತಾಂತರಗೊಂಡ ಬೌದ್ಧ ಪಂಡಿತರು) ಯವರು ಇಲ್ಲಿ ಹೆಚ್ಚಾಗಿ ಧರ್ಮ ಪ್ರವಚನಗಳನ್ನು ನಡೆಸಿದ್ದಾಗಿ, ಸುಮಾರು 200 ಜನ ಮಾರಿಕುಪ್ಪಂ ವಿಹಾರದ ಅನುಯಾಯಿಗಳು ಈ ಹೊಸ ವಿಹಾರಕ್ಕೆ ವರ್ಗಾಯಿತರಾದ ಬಗ್ಗೆ'[16] ತಿಳಿಯುತ್ತದೆ.

**ಬೆಂಗಳೂರು ಫ್ರೇಜರ್‌ಟೌನ್ ಬೌದ್ಧ ವಿಹಾರ:**

ಕೆ.ಜಿ.ಎಫ್. ನ ಬೌದ್ಧ ಚಟುವಟಿಕೆಗಳಿಂದ ಪ್ರಭಾವಿತರಾದ ಬೆಂಗಳೂರಿನಲ್ಲಿದ್ದ ರಸ್ತೆ ಮತ್ತು ಗಣಿಗಾರಿಕೆ ವೃತ್ತಿಯಲ್ಲಿದ್ದ ತಳವರ್ಗದ ಜನರು ಅಲಸೂರ ಕಂಟೋನ್‌ಮೆಂಟ್ ಪ್ರದೇಶದ ಫ್ರೇಜರ್ ಟೌನ್‌ನಲ್ಲಿ 1915 ರಲ್ಲಿ ಬೌದ್ಧವಿಹಾರವನ್ನು ಪ್ರಾರಂಭಿಸಿದರು. 'ದೊಡ್ಡಣ್ಣ ಚಟ್ಟಿ ಎಂಬುವವರು ನೀಡಿದ ಜಾಗೆಯಲ್ಲಿ'[17] 1918 ರಲ್ಲಿ ಬೌದ್ಧ ವಿಹಾರ ಕಟ್ಟಡ ನಿರ್ಮಾಣಗೊಂಡಿತು. ಇಲ್ಲಿನ ಬೌದ್ಧರು ಅದೇ ಸಂದರ್ಭದಲ್ಲಿ ಬೌದ್ಧರಿಗಾಗಿಯೇ ಪ್ರತ್ಯೇಕವಾದ 'ಸ್ಮಶಾನ' ಜಾಗೆಯನ್ನು ಪಡೆದುಕೊಂಡಿರುವುದು ಕಂಡು ಬಂದಿದೆ. ಬೌದ್ಧಪೂರ್ಣಿಮೆ 'ವೈಶಾಖ' ಆಚರಣೆ, ಪ್ರತಿ ರವಿವಾರ ಪ್ರಾರ್ಥನೆ, ವೈಶಾಖಿಯ ಆಚರಣೆಯಲ್ಲಿ ಅನ್ನದಾನ ಇಂತಹ ಕಾರ್ಯಕ್ರಮಗಳನ್ನು ಸಂಘಟಿಸಿದ್ದು ಕಂಡು ಬರುತ್ತದೆ. 1920 ರಲ್ಲಿ ದಕ್ಷಿಣ ಭಾರತ ಬೌದ್ಧ ಸಂಘದ ಎರಡನೇ ಸಾಮಾನ್ಯ ಸಮ್ಮೇಳನ ಜರುಗಿಸಿದ್ದು ಈ ಸಂಘದ ಸಂಘಟಣಾತ್ಮಕ ಶಕ್ತಿ ಮತ್ತು ಬೌದ್ಧರಲ್ಲಿನ ಕ್ರಿಯಾಶೀಲತೆಗೆ ಸಾಕ್ಷಿಯಾಗಿದೆ. 21 ನವ್ಹೆಂಬರ್ 1920 ರಂದು ಬೆಂಗಳೂರಿನ 'ಮಾಯೋ' ಹಾಲ್‌ನಲ್ಲಿ ನಡೆದ ಈ ಅಧಿವೇಶನ ಮಹತ್ವದ ವಿಷಯಗಳನ್ನು ಚರ್ಚಿಸಿದ್ದನ್ನು ಕಾಣುತ್ತೇವೆ. (ನೋಡಿ ; ಅನುಬಂಧ-VI) ಡಾ. ಅಂಬೇಡ್ಕರ್‌ರವರು ಈ ವಿಹಾರಕ್ಕೆ ಸಂದರ್ಶಿಸಿದ ಬಗ್ಗೆ, ಇಲ್ಲಿನ ಬೌದ್ಧರ ಸ್ಥಿತಿಗತಿ ನೋಡಿದ ಬಗ್ಗೆ ದಾಖಲಿಸಿದ್ದನ್ನು ಈಗಾಗಲೇ ವಿವರಿಸಲಾಗಿದೆ.

**ಹುಬ್ಬಳ್ಳಿ ಬೌದ್ಧ ವಿಹಾರ:**

ಕೋಲಾರದ ಕೆ.ಜಿ.ಎಫ್. ಬೆಂಗಳೂರಿನ ಬೌದ್ಧ ಚಟುವಟಿಕೆಗಳು ಮತ್ತು ತಮಿಳುನಾಡಿನ ಬೌದ್ಧ ಪಂಡಿತ ಅಯೋಥಿದಾಸ್ ಮತ್ತು ಇತರ ಬೌದ್ಧ ವಕ್ತಾರರ ಪ್ರಭಾವದಿಂದ 1924 ರಲ್ಲಿ ಹುಬ್ಬಳ್ಳಿಯ ಗೂಡ್‌ಶೆಡ್ ಪ್ರದೇಶದಲ್ಲಿ ಬೌದ್ಧವಿಹಾರ ಪ್ರಾರಂಭವಾಯಿತು. "ಈ ಸಂಘವನ್ನು ಶ್ರೀಲಂಕಾದ ಬೌದ್ಧ ಬಿಕ್ಕು ಸುಮತಿಪಾಲರು 1924 ರಲ್ಲಿ ಉದ್ಘಾಟಿಸಿದರು, ಈ ಸಂಘವು ಬೌದ್ಧ ಯುಜನತೆಯಲ್ಲಿ ಬೌದ್ಧ ಸಂಸ್ಕೃತಿಯನ್ನು ಮತ್ತು ಐಕ್ಯತೆಯನ್ನು ಬೆಳೆಸಲು ಒತ್ತು ನೀಡಿತು"[18] "1938 ರಲ್ಲಿ ಇಟಲಿಯ ಬೌದ್ಧ ಬಿಕ್ಕು ಲೋಕನಾಥರು ಯುಜನತೆಗಾಗಿ

'ಯಂಗ್‌ಮೆನ್ ಬುದ್ದಿಸ್ಟ್ ರೀಡಿಂಗ್ ರೂಮ್' ಉದ್ಘಾಟಿಸಿದರು''[19] ಈ ಲೋಕನಾಥ ಬಿಕ್ಕುಗಳೇ ಡಾ. ಅಂಬೇಡ್ಕರ್‌ರವರಿಗೆ ''ಬೌದ್ಧ ಧರ್ಮಕ್ಕೆ ಮತಾಂತರ ಹೊಂದಲು ಆಹ್ವಾನಿಸಿ ಪತ್ರ ಬರೆದಿದ್ದಾರೆ''[20] ಬಿಕ್ಕು ಎಸ್. ಪರಮಶಾಂತಿ ಇವರು ಇಲ್ಲಿ ನಿರ್ಮಿಸಿದ ವಿಹಾರದ ಕಟ್ಟಡ ನಿರ್ಮಾಣ ಕಾರ್ಯದಲ್ಲಿ ಶ್ರಮಿಸಿದ್ದಾಗಿ ವರದಿಗಳಿಂದ'[21] ತಿಳಿದುಬರುತ್ತದೆ. ಅದೇ ರೀತಿ 1967 ರಲ್ಲಿ ಪ್ರಸ್ತುತ ವಿಹಾರದ ಕಟ್ಟಡವನ್ನು ಪೂಜ್ಯ ದಲಾಯಿಲಾಮ ಅವರು, ಉದ್ಘಾಟಿಸಿದ್ದಾರೆ (ಅನುಬಂಧ-1, ಚಿತ್ರ 15, 16 ಮತ್ತು 17 ನೋಡಿ) ಈ ವಿಹಾರವು ಈ ಭಾಗದಲ್ಲಿ ಬೌದ್ಧಧಮ್ಮ ಪ್ರಸಾರಕ್ಕೆ ಪ್ರಯತ್ನಿಸಿರುವುದು ಕಂಡು ಬರುತ್ತದೆ. ಪ್ರತಿ ರವಿವಾರ ತಪ್ಪದೇ ಇಂದಿಗೂ ತಿಸರಣ ಪಂಚಶೀಲ ಪಠಣಗಳು ನಡೆಯುತ್ತವೆ. ಈ ಭಾಗದ ದಲಿತ ಚಳವಳಿಯ ಧುರೀಣರನ್ನು, ತಜ್ಞರನ್ನು ಆಗಾಗ ಆಮಂತ್ರಿಸಿ ಬೌದ್ಧ ಪೂರ್ಣಿಮೆ, ಧಮ್ಮ ಚಕ್ರಪ್ರವರ್ತನ ದಿನಾಚರಣೆ ಏರ್ಪಾಡಿಸಿ ಅನ್ನದಾನ ಏರ್ಪಡಿಸುವ ಪರಿಪಾಠ ಇಟ್ಟುಕೊಂಡಿರುವುದನ್ನು ಕಾಣುತ್ತೇವೆ. ಹಲವಾರು ಉದ್ದೇಶಿತ ಕಾಮಗಾರಿಗಳನ್ನು ಹಮ್ಮಿಕೊಂಡಿರುವದೂ ಸಹಿತ ಕಂಡು ಬರುತ್ತದೆ.

1) ಬೌದ್ಧ ಧ್ಯಾನ ತರಬೇತಿ ಕೇಂದ್ರ

2) ಉಚಿತ ವೈದ್ಯಕೀಯ ಸೇವಾ ಘಟಕ

3) ಅಂಬೇಡ್ಕರ್ ಸ್ಮಾರಕ ಭವನ ನಿರ್ಮಾಣ

4) ರಸ್ತೆಗೆ 'ಬುದ್ಧ ವಿಹಾರ ರಸ್ತೆ' ಎಂದು ನಾಮಕರಣ ಮಾಡುವುದು ಸೇರಿವೆ'[22]. ಬೌದ್ಧ ಕುಟುಂಬದ ಅಭಿವೃದ್ಧಿ ಮತ್ತು ಮಹಿಳೆಯರಲ್ಲಿ ಬೌದ್ಧ ಸಂಸ್ಕೃತಿಯ ಆಚಾರ ವಿಚಾರಗಳನ್ನು ಬೆಳೆಸುವ ಉದ್ದೇಶದಿಂದ 1957 ರಲ್ಲಿ ಬಿಕ್ಕು ಎಸ್. ಪರಮ ಶಾಂತಿಯವರು 'ಸುಜಾತ ಮಹಿಳಾ ಮಂಡಳ'[23] ಉದ್ಘಾಟಿಸಿರುವುದು ಮಹತ್ವದ ಅಂಶವಾಗಿದೆ.

### ಮಹಾ ಬೋಧಿ ಸೊಸೈಟಿಯ 'ವಿಶ್ವಶಾಂತಿ ಬೌದ್ಧ ವಿಹಾರ' ಬೆಂಗಳೂರು :

1956 ರಲ್ಲಿ ಪೂಜ್ಯ ಬಿಕ್ಕು ಆಚಾರ್ಯ ಬುದ್ಧರಕ್ಖಿತ ಮಹಾಥೇರರಿಂದ ಸ್ಥಾಪಿತವಾದ 'ಮಹಾಬೋಧಿ ಸೊಸೈಟಿ'ಯ ವಿಹಾರವು ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಪ್ರಾರಂಭವಾದ ಪ್ರಥಮ ವಿಹಾರವಾಗಿದೆ. ದಕ್ಷಿಣ ಭಾರತದಲ್ಲಿಯೇ ಇದು ದೊಡ್ಡದಾದ ಮತ್ತು ಪ್ರಮುಖವಾದ ಬೌದ್ಧ ಸಂಘಟನೆಯಾಗಿರುವುದನ್ನು ಅದರ ವ್ಯಾಪಕ ಚಟುವಟಿಕೆಗಳೇ ಸಾರಿ ಹೇಳುತ್ತವೆ. 'ಮಣಿಪುರ' ರಾಜ್ಯದಲ್ಲಿ ಜನಿಸಿದ ಆಚಾರ್ಯ ಬುದ್ಧರಕ್ಖಿತರು ನಾಲಂದಾ ವಿಶ್ವವಿದ್ಯಾಲಯದ ಪಾಲಿಸೂತ್ರಗಳ ಮಹೋಪಾಧ್ಯಾಯ (Professor) ಹುದ್ದೆಯನ್ನು ತ್ಯಜಿಸಿ ಬೌದ್ಧ ಧರ್ಮ ಪ್ರಸಾರ ಮತ್ತು ಬೌದ್ಧ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸಲು ಕೈಯಲ್ಲಿ ಒಂದು 'ಬೋಧಿವೃಕ್ಷದ ಕಸಿಯನ್ನು' ಹಿಡಿದು ಬೆಂಗಳೂರಿಗೆ ಬಂದರು'[24], ಎಂದು ಬಿಕ್ಕು ಸಂಘಸೇನ ವಿವರಿಸುತ್ತಾರೆ. ವಿನಯ ಪಿಟಕ, ಅಭಿಧಮ್ಮ ಪಿಟಕ ಸುತ್ತಪಿಟಕ, ಧಮ್ಮಪದ ಹೀಗೆ ಬೌದ್ಧಸಾಹಿತ್ಯ ಮೂಲಪಠ್ಯಗಳನ್ನು ಆಳವಾಗಿ ಅಧ್ಯಯನಮಾಡಿ ತ್ರಿಪಿಟಕ ಆಚಾರ್ಯರೆಂದೇ ಖ್ಯಾತಿ ಹೊಂದಿದ್ದಾರೆ. ಬೌದ್ಧ ವಿಹಾರ, ಬಿಕ್ಕು ತರಬೇತಿ ಶಾಖೆಗಳ ಜೊತೆಗೆ ಲೌಕಿಕ ಪ್ರಗತಿಗೆ ಪೂರಕವಾದ ಬೌದ್ಧ ತತ್ವಗಳನ್ನು ಆಧರಿಸಿದ. ಶಿಕ್ಷಣ ಸಂಸ್ಥೆಗಳನ್ನು ತೆರೆದು ಕರ್ನಾಟಕದಲ್ಲಿ ಬೌದ್ಧಧರ್ಮ

ಪುನರುಜ್ಜೀವನಕ್ಕೆ ಮಹತ್ವದ ಕೊಡುಗೆ ಸಲ್ಲಿಸಿದ್ದನ್ನು ಕಾಣುತ್ತೇವೆ. ಮಹಾಬೋಧಿ ಸೊಸೈಟಿಯು ಪ್ರಸ್ತುತ ಆಚಾರ್ಯ ಬುದ್ಧರಕ್ಖಿತರ ಸಮರ್ಥ ಮುಂದುವರಿಕೆಯಾಗಿ ಕಂಡುಬರುತ್ತಿರುವ ಬಿಕ್ಕು ಆನಂದ ಬಂತೇಜಿ ಮತ್ತು ಬಿಕ್ಕು ಸಂಘಸೇನಾ ಇವರ ಕ್ರಿಯಾಶೀಲತೆಯಿಂದ (ಅನುಬಂಧ-2 ಚಿತ್ರ : 21, 22, 59, 60, 61, 62 ನೋಡಿ) ಹಲವಾರು ಬೌದ್ಧ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಂಡಿದೆ. ಮಹಾಬೋಧಿ ಸೊಸೈಟಿ ಇಲ್ಲಿಯವರೆಗೆ ಹಮ್ಮಿಕೊಂಡ ಪ್ರಮುಖ ಕಾರ್ಯಚಟುವಟಿಕೆಗಳನ್ನು ಈ ರೀತಿ ನೋಡಬಹುದಾಗಿದೆ.

1. ಬೆಂಗಳೂರು, ಮೈಸೂರು, ಲದ್ದಾಕ್, ಅರುಣಾಚಲ ಪ್ರದೇಶಗಳಲ್ಲಿ ಸಂಘ ಸಂಸ್ಥೆಗಳನ್ನು, ವಿಹಾರಗಳನ್ನು ಸ್ಥಾಪಿಸಿ ಕಾರ್ಯನಿರ್ವಹಿಸುತ್ತಿದೆ. ಬೆಂಗಳೂರಿನ ವಿಹಾರವು ಬುದ್ಧ ಗಯಾ ಮಹಾವಿಹಾರದ ಮಾದರಿಯಲ್ಲಿ ನಿರ್ಮಿಸಲಾಗಿದೆ. ದಕ್ಷಿಣ ಭಾರತದಲ್ಲಿಯೇ ಅತೀ ದೊಡ್ಡ ವಿಹಾರವಾಗಿದೆ.

2. ಬೆಂಗಳೂರು, ಮೈಸೂರುಗಳಲ್ಲಿ ಲದ್ದಾಕ್ ಅರುಣಾಚಲ ಪ್ರದೇಶಗಳಲ್ಲಿ ಸವಸತಿ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿದೆ. ಆ ಮೂಲಕ ಬೌದ್ಧ ಬಿಕ್ಕುಗಳ ತರಬೇತಿ ಮತ್ತು ಔಪಚಾರಿಕ ಶಿಕ್ಷಣದ ಜೊತೆಗೆ ಬೌದ್ಧತತ್ವಗಳ, ಮೌಲ್ಯಗಳ, ನೀತಿ ಶಿಕ್ಷಣ ಪ್ರಸಾರ ಕಾರ್ಯದಲ್ಲಿ ತೊಡಗಿಸಿಕೊಂಡಿದೆ. ವಸತಿ ಶಾಲೆಗಳಲ್ಲಿ ಅನೇಕ ಅನಾಥ ಮಕ್ಕಳಿಗೂ ಗುಣಾತ್ಮಕ ಶಿಕ್ಷಣ ನೀಡುತ್ತದೆ. ಮೈಸೂರಿನಲ್ಲಿ ಸ್ವಿಝರ್‌ಲೆಂಡಿನ ಬೌದ್ಧ ಅನುಯಾಯಿಗಳಾದ ಮೋನಿಕಾ ತಾದ್ದಿ ಮತ್ತು ರೀತಾ ತಾದ್ದಿ ಇವರು 400 ಮಕ್ಕಳಿಗಾಗುವಷ್ಟು ಒಂದು ಸುಸಜ್ಜಿತವಾದ ವಿದ್ಯಾರ್ಥಿ ನಿಲಯವನ್ನು ಕಟ್ಟಿಸಿಕೊಟ್ಟಿದ್ದಾರೆ. (ಅನುಬಂಧ-1, ಚಿತ್ರ : 72 ನೋಡಿ) ಇದು ಅತ್ಯಂತ ವ್ಯವಸ್ಥಿತವಾದ ಮಾದರಿ ಎನ್ನಬಹುದಾದ ವಿದ್ಯಾರ್ಥಿನಿಲಯವಾಗಿದೆ. ಮಹಾಬೋಧಿ ಸೊಸೈಟಿಯ ಸಂಸ್ಥಾಪಕ ಅಧ್ಯಕ್ಷರಾದ ಪೂಜ್ಯ ಆಚಾರ್ಯ ಬುದ್ಧರಕ್ಖಿತ ಮಹಾಥೇರರು 'ಕನಿಷ್ಟ 100 ಬೌದ್ಧ ಬಿಕ್ಕುಗಳನ್ನು ತಯಾರಿಸುವುದು ಮತ್ತು ಕನಿಷ್ಟ 1000 ಬಡ ಮಕ್ಕಳಿಗೆ ಉಚಿತ ಶಿಕ್ಷಣ ನೀಡುವ ಗುರಿ ಹೊಂದಿರುವುದು'[25] ಅತ್ಯಂತ ಮಹತ್ವದ ಅಂಶವಾಗಿದೆ.

3. ಬೌದ್ಧ ಸಾಹಿತ್ಯವನ್ನು ವ್ಯಾಪಕವಾಗಿ ಕನ್ನಡದಲ್ಲಿ ಪ್ರಕಟಿಸಿದೆ. ಆದರೆ ಮುಖ್ಯವಾಗಿ ಪಾಲಿ ಭಾಷೆಯಲ್ಲಿದ್ದ ತ್ರಿಪಿಟಕಗಳನ್ನು 'ಬುದ್ಧವಚನ' ಟ್ರಸ್ಟ್‌ನಿಂದ ಕನ್ನಡಕ್ಕೆ ಭಾಷಾಂತರಿಸುವ ಮಹತ್ವದ ಕಾರ್ಯ ಮಾಡಿದೆ. ಅದರ ಜೊತೆಗೆ ಧಮ್ಮ ಆಂಗ್ಲ ಮಾಸಿಕ, ಕನ್ನಡದಲ್ಲಿ ಬುದ್ಧಧಮ್ಮ ಮಾಸಿಕಗಳನ್ನು ಪ್ರಕಟಿಸುತ್ತಾ ಬುದ್ಧನ ಉಪದೇಶಗಳನ್ನು, ಮೌಲಿಕ ಲೇಖನಗಳನ್ನು ಪ್ರಕಟಿಸಿ ಬೌದ್ಧಧರ್ಮದ ಪ್ರಸಾರ ಮಾಡುತ್ತಾ ಬಂದಿದೆ.

4. ಕರ್ನಾಟಕದಲ್ಲಿ ದಲಿತ ಸಮುದಾಯಗಳು ಬೌದ್ಧಧರ್ಮದ ಬಗ್ಗೆ ಆಸಕ್ತರಾಗುವಂತೆ ಅವರಿಗೆ ಮೊದಲಿನಿಂದಲೂ ಮಾರ್ಗದರ್ಶನ ಮಾಡುತ್ತಾ ಬಂದಿದೆ. ಇಲ್ಲಿನ ಬಿಕ್ಕುಗಳು ಕರ್ನಾಟಕದಲ್ಲಿ ದಲಿತ ಸಮುದಾಯಗಳು ಹಮ್ಮಿಕೊಳ್ಳುವ ಕಾರ್ಯಕ್ರಮಗಳಲ್ಲಿ, ಬೌದ್ಧ ಆಚರಣೆಗಳಲ್ಲಿ ಭಾಗವಹಿಸಿ ಮಾರ್ಗದರ್ಶನ ಮಾಡಿರುವುದನ್ನು ಕಾಣುತ್ತೇವೆ.

5. ದೈಹಿಕ ನ್ಯೂನ್ಯತೆಯುಳ್ಳವರಿಗಾಗಿ ಕೃತಕ ಕಾಲುಜೋಡಣೆಯ ಕೇಂದ್ರ, ಆರೋಗ್ಯ ಆಸ್ಪತ್ರೆ, ಸುಟ್ಟಗಾಯಗಳ ಆಸ್ಪತ್ರೆ ಪ್ರಾರಂಭಿಸಿ ಜನಸೇವೆ ಮಾಡುತ್ತಿದೆ.

6. ಪಾಲಿ ಅಧ್ಯಯನ ಹಾಗೂ ಬುದ್ಧಾಲಜಿ ಸಂಸ್ಥೆ ಪ್ರಾರಂಭಿಸಿ ಪಾಲಿ ಅಧ್ಯಯನಕ್ಕೆ ನೆರವಾಗುತ್ತಿದೆ.

7. ಕಾಲಕಾಲಕ್ಕೆ ವಿಚಾರ ಸಂಕಿರಣ, ಬೌದ್ಧ ಸಮಾವೇಶ, ಬೌದ್ಧ ಕವಿಗೋಷ್ಠಿಗಳನ್ನು ಸಂಘಟಿಸಿದೆ.

8. ಬೌದ್ಧ ಆಚರಣೆಗಳನ್ನು ಆದರ್ಶಪ್ರಾಯವಾಗಿ ಹಮ್ಮಿಕೊಳ್ಳುತ್ತಾ ಬಂದಿದೆ. ಪಬ್ಬಜ್ಜ ಸಮಣೇರ ದೀಕ್ಷಾ, ಧ್ಯಾನ ಶಿಖರಗಳನ್ನು ಕ್ರಮವಾಗಿ ಸಂಘಟಿಸುತ್ತಾ ಬಂದಿದೆ. ಮಹಾಬೋಧಿ ಸೊಸೈಟಿಯು 'ಧ್ಯಾನ' ಕ್ಕೆ ಹೆಚ್ಚು ಮಹತ್ವಕೊಟ್ಟು ವಿಪಶ್ಯನ ಧ್ಯಾನ ತರಬೇತಿ ಶಿಬಿರಗಳನ್ನು ಸಂಘಟಿಸಿ ಸಾವಿರಾರು ಜನರು ತಮ್ಮ ಜೀವನದಲ್ಲಿ ಔನತ್ಯ ಸಾಧಿಸಲು ಕಾರಣೀಭೂತವಾಗಿದೆ. ಇಂತಹ ಧ್ಯಾನ ಶಿಬಿರಗಳನ್ನು ಬೌದ್ಧ ಧ್ಯಾನ ಕ್ಷೇತ್ರದಲ್ಲಿ ತಜ್ಞರಾಗಿರುವ ದೇಶ ವಿದೇಶಗಳ ಬಿಕ್ಕುಗಳು, ಬೌದ್ಧ ಪಂಡಿತರನ್ನು ಆಮಂತ್ರಿಸಿ ಶಿಬಿರ ಸಂಘಟಿಸಿರುವುದನ್ನು ಕಾಣುತ್ತೇವೆ.

9. ಧಾರ್ಮಿಕ ಸಾಮರಸ್ಯ ಮತ್ತು ಅಂತರ್‌ರಾಷ್ಟ್ರೀಯ ಶಾಂತಿ ಚಿಂತನೆ ಬೆಳೆಸುವ ಉದ್ದೇಶದಿಂದಲೇ ಆಯಾ ಕ್ಷೇತ್ರದಲ್ಲಿನ ತಜ್ಞರನ್ನು ಆಮಂತ್ರಿಸಿ ವಿಚಾರ ಸಂಕಿರಣಗಳನ್ನು ಏರ್ಪಡಿಸಿದೆ. ಆ ಮೂಲಕ ಕನ್ನಡದ ಪ್ರಮುಖ ವಕ್ತಾರನ್ನು ಬೌದ್ಧ ಸಂವಾದಕ್ಕೆಳೆಸಿದೆ.

10. ಬೌದ್ಧ ಉಪಾಸಕ, ಉಪಾಸಕಿಯರ ಬಳಗಗಳನ್ನು ಪ್ರಾರಂಭಿಸಿದೆ. ಮೈಸೂರಿನಲ್ಲಿ ಮಹಾಬೋಧಿ ಮೈತ್ರಿ ಮಂಡಲ ಉಪಾಸಕರ ಬಳಗ ಪ್ರಾರಂಭಿಸಿ ಹಲವಾರು ಕಲ್ಯಾಣ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಮಾರ್ಗದರ್ಶನ ಮಾಡುತ್ತಿದೆ. ಪಬ್ಬಜ್ಜ ಸಮಣೇರ ದೀಕ್ಷಾ ಕಾರ್ಯಕ್ರಮಗಳು, ವಿಪಷ್ಯನ ಧ್ಯಾನ ಶಿಬಿರಗಳು, ಬೌದ್ಧಪೂರ್ಣಿಮೆ 'ಧಮ್ಮಪದ ಉತ್ಸವ' ಗಳನ್ನು ಅತ್ಯಂತ ಅರ್ಥಪೂರ್ಣವಾಗಿ ಆಚರಿಸುತ್ತಿದೆ. ವೇಸಾಕ ಉತ್ಸವವನ್ನು ಬೋಧಿ ಸಪ್ತಾಹವನ್ನಾಗಿ (Enlightenment week) ಆಚರಿಸುತ್ತಿರುವುದು ಮಹಾಬೋಧಿ ಸೊಸೈಟಿಯ ಆಳವಾದ ಬೌದ್ಧಪ್ರಜ್ಞೆಗೆ ಮತ್ತು ವೈಚಾರಿಕತೆಗೆ ಹಿಡಿದ ಕನ್ನಡಿಯಾಗಿದೆ. ಎಲ್ಲ ಧರ್ಮಿಯರ, ಎಲ್ಲ ಸಮುದಾಯಗಳ ಪಾಲ್ಗೊಳ್ಳುವಿಕೆ ಸಾಧ್ಯವಾಗುವಂತೆ ಅನುಲಕ್ಷಿಸಿ ವಿಶಿಷ್ಟವಾಗಿ, ಮಾದರಿಯಾಗಿ ಬೌದ್ಧ ಚಟುವಟಿಕೆಗಳನ್ನು ಸಂಘಟಿಸುತ್ತದೆ. ವಿವಿಧ ಧರ್ಮಗಳಲ್ಲಿ ಸಾಮರಸ್ಯ, ಅಂತರ್‌ರಾಷ್ಟ್ರೀಯ ಪ್ರಜ್ಞೆಯ ಕ್ಷೇತ್ರಗಳಲ್ಲಿ ಸಂವೇದನೆ ಬೆಳೆಸಲು ಪ್ರಯತ್ನಿಸುತ್ತಿದೆ.

1991 ರಲ್ಲಿ 'ಮಹಾಬೋಧಿ ಸೊಸೈಟಿಯ' ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ ಪ್ರಥಮ ಅಂತರ ರಾಷ್ಟ್ರೀಯ ಬೌದ್ಧ ಸಮ್ಮೇಳನ ಏರ್ಪಡಿಸಿ ದೇಶ ವಿದೇಶಗಳ ಬೌದ್ಧ ಬಿಕ್ಕುಗಳನ್ನು ಆಮಂತ್ರಿಸಿ

ಅ) ಅಂತರ್ ಧರ್ಮಿಯ ಸಾಮರಸ್ಯದ ಧನಾತ್ಮಕ ದೃಷ್ಟಿಕೋನ

ಬ) ಜೀವನದ ಚಲನಶೀಲತೆ ಮತ್ತು ಸಂಘಟನೆಯಾಗಿ ಧರ್ಮ

ಕ) ಸಮಾಜ ಸೇವೆಯ ಪರಿಕಲ್ಪನೆಗಳು

ಡ) ಜಾಗತಿಕ ಶಾಂತಿಗೆ ಬೌದ್ಧ ಧರ್ಮದ ಕೊಡುಗೆ

ಈ ಪ್ರಮುಖ ಕಲ್ಪನೆಗಳನ್ನು ಚರ್ಚಿಸಲಾಗಿದೆ. ತೈವಾನ್, ಜರ್ಮನಿ, ದಕ್ಷಿಣ ಕೊರಿಯ, ಥೈಲ್ಯಾಂಡ್, ಸಿಂಗಪೂರ, ಅಮೇರಿಕಾ, ಶ್ರೀಲಂಕಾ, ಟಿಬೆಟ್,ಸ್ಪೇನ್, ಫ್ರಾನ್ಸ್, ಹಾಲಂಡ್, ಬರ್ಮಾ, ಆಸ್ಟ್ರೇಲಿಯಾ, ಮಲೇಶಿಯಾ, ಇಂಡೋನೇಷ್ಯ ಮುಂತಾದ ದೇಶಗಳಿಂದ ಬೌದ್ಧ ಬಿಕ್ಕುಗಳು ಪಂಡಿತರನ್ನು ಆಮಂತ್ರಿಸಿ ಮಹತ್ವದ 'ಧಮ್ಮ ಸಂವಾದಗಳನ್ನು' ಏರ್ಪಡಿಸಿದೆ. ಇದೇ ಸಂದರ್ಭದಲ್ಲಿ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ಜನ್ಮ ಶತಮಾನೋತ್ಸವದ ಗೌರವಾರ್ಥ ಅಂಬೇಡ್ಕರ್‌ರವರು 'ಭಾರತದಲ್ಲಿ ಶಾಂತಿ ಮತ್ತು ಸಾಮರಸ್ಯಕ್ಕೆ ಬೌದ್ಧ ಧರ್ಮದ ಮೂಲಕ ಸಲ್ಲಿಸಿದ ಕೊಡುಗೆ' ಎಂಬ ವಿಷಯ ಕುರಿತು ಚಿಂತನ ಗೋಷ್ಠಿ ಏರ್ಪಡಿಸಿ ಅವರು ಭಾರತದಲ್ಲಿ ಬೌದ್ಧಧರ್ಮ ಪುನರುಜ್ಜೀವನಕ್ಕೆ ಮಾಡಿದ ಸೇವೆಯನ್ನು ಗೌರವಿಸಿ ಸ್ಮರಿಸಿರುವುದು. ಅತ್ಯಂತ ಪ್ರಮುಖ ಅಂಶವಾಗಿದೆ. ಹೀಗೆ ಬೆಂಗಳೂರಿನ ಮಹಾಬೋಧಿ ಸೊಸೈಟಿಯು ಕರ್ನಾಟಕದಲ್ಲಿ ಬೌದ್ಧಧರ್ಮ ಪುನರುಜ್ಜೀವನ, ಪ್ರಸಾರ ಮತ್ತು ಅಂತರಾಷ್ಟ್ರೀಯ ಬೌದ್ಧ ಸಮುದಾಯದೊಂದಿಗೆ ಕರ್ನಾಟಕದ ಬೌದ್ಧ ಸಮುದಾಯದ ಸಂಪರ್ಕ ಸಾಧಿಸುವಿಕೆಗೆ ನಿರಂತರ ಪ್ರಯತ್ನಿಸುತ್ತಿದೆ. ದಲಿತ ಮುಖಂಡರನ್ನು ಬುದ್ಧಿಜೀವಿಗಳನ್ನು ಸಾಹಿತಿಗಳನ್ನು ಬೌದ್ಧ ಉತ್ಸವ, ಬೌದ್ಧ ಕವಿಗೋಷ್ಠಿ ಬೌದ್ಧ ವಿಚಾರ ಸಂಕಿರಣಗಳಿಗೆ ಆಮಂತ್ರಿಸಿ ಅವರಲ್ಲಿ ಬೌದ್ಧ ಧರ್ಮದ ಬಗ್ಗೆ ಒಂದು ಅನುಭವದ ಚಿಂತನಾ ಪಾತಳಿ ನಿರ್ಮಾಣ ಮಾಡುವಲ್ಲಿ ಶ್ರಮಿಸುತ್ತಿದೆ. ದಲಿತ ಬಹುಜನ ಸಮುದಾಯಗಳನ್ನು ಬೌದ್ಧಧರ್ಮದೆಡೆಗೆ ಸೆಳೆದುಕೊಳ್ಳುವಲ್ಲಿ ಬೌದ್ಧ ಜೀವನ ಶೈಲಿ ರೂಢಿಸಿಕೊಂಡು ತಮ್ಮ ಬದುಕನ್ನು ಶ್ರೀಮಂತಗೊಳಿಸುವಲ್ಲಿ ನೀತಿಯುತ ಜೀವನ ನಡೆಸುವಂತೆ ಮಾಡುವಲ್ಲಿ ಶ್ರಮಿಸಿರುವುದು ಕಂಡು ಬರುತ್ತದೆ. ಹಿಂದುಳಿದ ಜಾತಿಗಳ ಜನರೂ ಕೂಡ ಮಹಾಬೋಧಿ ಸೊಸೈಟಿಯಲ್ಲಿ ಬೌದ್ಧ ಧರ್ಮದೀಕ್ಷೆ ಪಡೆದಿರುವುದನ್ನು ಕಾಣುತ್ತೇವೆ (ನೋಡಿ ಅನುಬಂಧ-V) ಹೀಗೆ ಕರ್ನಾಟಕದ ದಲಿತ -ಬಹುಜನ ಸಮುದಾಯಗಳನ್ನು ಬೌದ್ಧಧರ್ಮದೆಡೆಗೆ ಕರೆತರುವಲ್ಲಿನ ಮಹಾಬೋಧಿ ಸೊಸೈಟಿಯ ಪ್ರಯತ್ನಗಳು ಅನನ್ಯವಾಗಿವೆ. ಅಧ್ಯಾಯ 7 ರಲ್ಲಿ ಮಹಾಬೋಧಿ ಸೊಸೈಟಿಯ ಬೌದ್ಧ ಶಿಕ್ಷಣ ಕ್ರಮದ ಅನುಸರಣೆಯ ವಿವರಗಳನ್ನು ಪ್ರತ್ಯೇಕವಾಗಿ ವಿವರಿಸಲಾಗಿದೆ.

**ಜೇತವನ ಬೌದ್ಧವಿಹಾರ : ಕರ್ನಾಟಕ 'ಪ್ರಥಮ' ಗ್ರಾಮೀಣ ಬೌದ್ಧವಿಹಾರ :**

ಅಧ್ಯಾಯ -4 ರಲ್ಲಿ ಚರ್ಚಿಸಿದಂತೆ ಡಾ. ಅಂಬೇಡ್ಕರ್‌ರವರು 1956 ರಲ್ಲಿ ನಾಗಪುರದಲ್ಲಿ ಬೌದ್ಧಧರ್ಮ ಸ್ವೀಕಾರ ಮಾಡಿದ ಸಂದರ್ಭದಲ್ಲಿ ಕರ್ನಾಟಕದ ದಲಿತ ಸಮುದಾಯಗಳ ಜನತೆಯೂ ಅವರೊಂದಿಗೆ ಬೌದ್ಧ ಧಮ್ಮ ದೀಕ್ಷೆ ಪಡೆದಿರುವುದು ಕಂಡುಬಂದಿದೆ. ಈ ಮಹತ್ವದ ಚಾರಿತ್ರಿಕ ಘಟನೆಯಲ್ಲಿ ಮೋರ್ಖಂಡಿಯಂತ ಸಣ್ಣ ಗ್ರಾಮದ ದಲಿತರೂ ಹೆಮ್ಮೆಯಿಂದ ಭಾಗವಹಿಸಿರುವುದು ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ಪ್ರಮುಖವಾದ ಅಂಶವೇ ಆಗಿದೆ. ಇಲ್ಲಿನ 'ಮಾಸ್ತರಸಾಬ' ಎಂದೇ ಪ್ರಸಿದ್ಧಿ ಹೊಂದಿದ ತುಕಾರಾಮ ಸೋನ ಕಾಂಬಳೆ, ಡಾ. ದೀನಾನಾಥ ಸೋನ ಕಾಂಬಳೆ ಇವರು ನಾಗಪುರಕ್ಕೆ ಕಾಲ್ನಡಿಯಿಂದಲೇ ಪ್ರಯಾಣಿಸಿ ಡಾ. ಅಂಬೇಡ್ಕರ್‌ರವರೊಂದಿಗೆ ಬೌದ್ಧಧಮ್ಮ ದೀಕ್ಷೆ ಪಡೆದದ್ದು ಚಾರಿತ್ರಿಕ ಘಟನೆಯಾಗಿದೆ. ತುಕಾರಾಮ್ ಸೋನಕಾಂಬಳೆಯವರು ಆ ಸಂದರ್ಭವನ್ನು ಇನ್ನುವರೆಗೂ ನಿನ್ನೆ ಮೊನ್ನೆ ಜರುಗಿದ ಘಟನೆಯಂತೆ ಉತ್ಸಾಹದಿಂದ ಹೇಳಿಕೊಳ್ಳುತ್ತಾರೆ. ಡಾ. ದೀನಾನಾಥ ಸೋನಕಾಂಬಳೆ ತಮ್ಮ ಹೆಂಡತಿಯನ್ನು ಕರೆದುಕೊಂಡು ನಾಗಪುರಕ್ಕೆ ಹೋಗಿದ್ದು ತಿಳಿದುಬರುತ್ತದೆ.[26] ಆದರೆ ದೀಕ್ಷೆ ತೆಗೆದುಕೊಂಡು ಎಲ್ಲಿ ಹೋದರೋ ಮತ್ತೆ ಬರಲೇ ಇಲ್ಲ, ಕೇವಲ

ಅವರ ಪತ್ನಿ ಜೀಜಾಬಾಯಿ ಮರಳಿ ಬಂದರೆಂದು ಭಾವೋನ್ಮುಖರಾಗಿ ಹೇಳುತ್ತಾರೆ. ಅಂತಹ ಅತ್ಯಂತ ಪ್ರಭಾವಶಾಲಿಯಾದ ವ್ಯಕ್ತಿತ್ವ ಹೊಂದಿದ್ದ ಡಾ. ಅಂಬೇಡ್ಕರ್‌ರವರ ಕರೆಗೆ 5 ಲಕ್ಷ ಜನರು ಒಕ್ಕೊರಲಿನಿಂದ ಓಗೊಟ್ಟು ನಾಗಪೂರಕ್ಕೆ ಧಾವಿಸಿ ಹೋಗಿದ್ದು ಅವರು ಜಾತಿ ವ್ಯವಸ್ಥೆಯಲ್ಲಿ ಪಟ್ಟ ಅವಮಾನ, ಹಿಂಸೆಯ ಆಳ ಮತ್ತು ಹೊಸ ಧರ್ಮದ ಉಸಿರಾಟಕ್ಕೆ ಕಾತುರರಾಗಿದ್ದರೆಂಬ ಚಾರಿತ್ರಿಕ ಆಯಾಮ ನಮ್ಮೆದುರು ತಟ್ಟನೆ ನಿಲ್ಲದೇ ಇರಲಾರದು. ಇಂತಹ ಹಿನ್ನಲೆಯ ಮೋರ್ಖಂಡಿ ಬೌದ್ಧ ಸಮಾಜ ದಿನಾಂಕ : 14-05-1977 ರಂದು ಶಿಕ್ಷಣ ಮಂತ್ರಿಗಳಾಗಿದ್ದ ಶ್ರೀ ಮಲ್ಲಿಕಾರ್ಜುನ ಖರ್ಗೆಯವರಿಂದ ಜೇತವನ ಬೌದ್ಧವಿಹಾರಕ್ಕೆ ಶಿಲಾನ್ಯಾಸ ಮಾಡಿಸಿದೆ. 22.05.1978 ರಲ್ಲಿ ನಾಗಪೂರದ ಪೂಜ್ಯ ಬಿಕ್ಕು ಉಪಾಲಿ ಮಹಾಥೇರರು ಜೇತವನ ಬುದ್ಧ ವಿಹಾರದ ನೂತನ ಕಟ್ಟಡವನ್ನು ಉದ್ಘಾಟಿಸಿದ್ದಾರೆ. ಆ ಮೂಲಕ 'ಜೇತವನ ಬೌದ್ಧ ವಿಹಾರ' ಆಧುನಿಕ ಕರ್ನಾಟಕದಲ್ಲಿ 'ಪ್ರಥಮ ಗ್ರಾಮೀಣ ಬೌದ್ಧ ವಿಹಾರ' ವೆಂಬ ಖ್ಯಾತಿಗೆ ಪಾತ್ರವಾಗಿದೆ. (ಅನುಬಂಧ - 5 ರ ಪತ್ರಿಕಾ ವರದಿಗಳನ್ನು ನೋಡಿ).

ಜೇತವನ ಬುದ್ಧ ವಿಹಾರದ ಆವರಣದಲ್ಲಿ ಬಿಕ್ಕು ನಿವಾಸಗಳನ್ನು ನಿರ್ಮಿಸಿರುವುದು ಕಂಡು ಬರುತ್ತದೆ. ಬೌದ್ಧ ಪೂರ್ಣಿಮೆ, ಅಂಬೇಡ್ಕರ್ ಜಯಂತೋತ್ಸವ, ಸಮಣೇರ ದೀಕ್ಷಾ ಸಮಾರಂಭ, ಮುಂತಾದ ಆಚರಣೆಗಳನ್ನು ಹಮ್ಮಿಕೊಳ್ಳಲಾಗುತ್ತದೆ. 200 ದಲಿತ ಮನೆಗಳ ಎಲ್ಲರೂ ವಿವಾಹ, ನಾಮಕರಣ ಕೇಷಕಪಣ ವಿಧಿಗಳನ್ನು ವಿಹಾರದಲ್ಲಿಯೇ ನಡೆಸುತ್ತಿರುವುದು ತಿಳಿದು ಬರುತ್ತದೆ. ಬೌದ್ಧ ಯಾತ್ರಾ ಸ್ಥಳಗಳಿಗೂ ಆಗಾಗ ಸಾಮೂಹಿಕ ಪ್ರವಾಸ ಕಾರ್ಯಕ್ರಮಗಳನ್ನು ಇಲ್ಲಿ ಸಂಘಟಿಸಿರುವುದು ಕಂಡು ಬಿರುತ್ತದೆ. 'ಸಿದ್ದಾರ್ಥ ಗಾಯನ ಮಂಡಳಿ ಕೂಡ ಕ್ರಿಯಾಶೀಲವಾಗಿದ್ದು ಬುದ್ಧ, ಬುದ್ಧನ ಉಪದೇಶಗಳು, ಅಂಬೇಡ್ಕರ್, ಫುಲೆ ಇವರ ಕುರಿತು ಭಜನೆ, ಅಬಂಗಗಳನ್ನು ರಚಿಸಿ ಶುಶ್ರಾವ್ಯವಾಗಿ ಹಾಡುವುದು ಕಂಡು ಬಂದಿದೆ. 52 ವರ್ಷದ ಬಳಿರಾಮ್ 'ಮಹಾಡ ಕೆರೆ' ನೀರಿನ ಚಳವಳಿ ಕುರಿತು ಹಾಡುವ ಹಾಡು ಇಲ್ಲಿ ಉಲ್ಲೇಖನೀಯವಾಗಿದೆ.

''ಸೊಡ್ಡು ಹೊಡೆದ ಭೀಮ ನೀನು
ಮಹಾಡ ಕೆರೆಯ ನೀರು ಮುಟ್ಟಿದಿ
ಮೈಲಿಗೆಯಾಯ್ತು ಎನ್ನುವವರೆದೆಗೆ
ದಂಡವಾಗಿ ಏಟು ಕೊಟ್ಟಿ
ಬುದ್ಧನ ಹಾದಿ ನಮಗೆ ತೋರಿದಿ
ಬೋಧಿಸತ್ವ ಬಾಬಾ ಸಾಹೇಬನಾಗಿರುವಿ''.

ಎಂಬ ಭಜನಾ ಹಾಡು ಯಾವ ಕ್ರಾಂತಿ ಗೀತೆಗಿಂತಲೂ ಕಡಿಮೆ ಇಲ್ಲದ ಪ್ರಭಾವಶಾಲಿ ತನ್ಮಯತೆಯನ್ನು ಸೃಷ್ಟಿಸುತ್ತದೆ. ಇಂತಹ ಭಜನೆಗಳ ಮೂಲಕ ಬುದ್ಧ ಅಂಬೇಡ್ಕರ್ ಅವರನ್ನು ನೆನೆಯುವುದರ ಜೊತೆಗೆ ಮೂಢನಂಬಿಕೆಗಳಿಂದ ದಲಿತ ಬಂಧುಗಳು ಹೊರಬರುವ ಸಂದೇಶದ ವಿಷಯಗಳನ್ನು ಹೊಂದಿರುವುದು ವಿಶಿಷ್ಟವಾಗಿದೆ. ಹೀಗೆ ಒಂದು ಪೂರ್ಣ ಪ್ರಮಾಣದ ''ಗ್ರಾಮ ಬೌದ್ಧ ಸಮಾಜ'' ರೂಪುಗೊಂಡಿರುವುದು ಕಂಡು ಬರುತ್ತದೆ. ದುಶ್ಚಟಗಳಿಂದ ದೂರವಿರುವ ಇಲ್ಲಿನ ದಲಿತ ಸಮುದಾಯ ಶಿಕ್ಷಣಕ್ಕೆ ಹೆಚ್ಚಿನ ಆಧ್ಯತೆ

ಕೊಟ್ಟಿದ್ದರಿಂದ ಪ್ರತಿಯೊಂದು ಮನೆಯಲ್ಲಿ ಒಬ್ಬರು ಏನಾದರೊಂದು ಉದ್ಯೋಗದಲ್ಲಿರುವುದು ಕಂಡು ಬರುತ್ತದೆ. ಹೀಗೆ ಬೌದ್ಧ ರೀತಿಯ ಜೀವನ ಶೈಲಿ ರೂಪಿಸಿಕೊಂಡು ಆ ಭಾಗದಲ್ಲಿ ಉಳಿದ ಗ್ರಾಮಗಳಲ್ಲಿಯೂ ದಲಿತರು ಬೌದ್ಧ ಧರ್ಮದ ಕಡೆಗೆ ಆಕರ್ಷಿತರಾಗುವಂತೆ, ತಮ್ಮ ಸಾಂಸ್ಕೃತಿಕ ಬದುಕಿನ ವಿಧಾನದಿಂದ ಪ್ರಭಾವ ಬೀರಿರುವುದು ಕಂಡು ಬರುತ್ತದೆ. ಹೀಗೆ ಮೋರ್ಖಿರಿಂಡಿ ಗ್ರಾಮದ ದಲಿತ ಬೌದ್ಧ ಸಮಾಜ ಪರಿವರ್ತ ಶೀಲ ಬೌದ್ಧೀಯತೆಯೊಂದಿಗೆ ತನ್ನ ಅಭಿವೃದ್ಧಿ ಸಾಧಿಸುತ್ತಿದೆ.

**ಅನಾಥ ಪಿಂಡಿಕ ಬೌದ್ಧ ವಿಹಾರ, ಧರ್ಮಾಂಕರ ಮೌಂಟ್, ರೇಕುಳಗಿ ಮನ್ನಾಳಖೇಳಿ, ತಾ : ಹುಮನಾಬಾದ್ ಜಿ. ಬೀದರ್ :**

ಬರ್ಮಾದಲ್ಲಿ 'ವಿಪಷ್ಯನ ಧ್ಯಾನ' ತರಬೇತಿ ಪಡೆದು, ಉಪದಾನ ಪಡೆದು ಎರಡು ದಶಕಗಳವರೆಗೆ ಇಗಟಪುರಿ (ಮಹಾರಾಷ್ಟ್ರ) ಯಲ್ಲಿ ವಿಪಷ್ಯನ ದ್ಯಾನದ ತರಗತಿಗಳನ್ನು ನಡೆಸಿ ಅನುಭವ ಹೊಂದಿದ ಹಿರಿಯ ಬಿಕ್ಕು ಪೂಜ್ಯ ಮಹಾಕಷ್ಯಪ ಮಹಾಥೇರರು ಬೀದರ ಜಿಲ್ಲೆಯ ಮುನ್ನಾಳಖೇಳಿಯ ರೇಕುಳಗಿ ಧರ್ಮಾಂಕರ್ ಮೌಂಟ್‌ನಲ್ಲಿ ಸ್ಥಾಪಿಸಿದ 'ಅನಾಥ ಪಿಂಡಿಕ ಬೌದ್ಧ ವಿಹಾರವು' ಕರ್ನಾಟಕ 'ನಾಗಪೂರ ದೀಕ್ಷಾ ಭೂಮಿ' ಯಾಗಿ ಪರಿವರ್ತಿತವಾಗಿರುವುದನ್ನು ಕಾಣುತ್ತೇವೆ. ಕರ್ನಾಟಕ, ಮಹಾರಾಷ್ಟ್ರದ ಲಕ್ಷಾಂತರ ದಲಿತರು, ಪ್ರತಿವರ್ಷ ಧಮ್ಮ ಚಕ್ರ ಪ್ರವರ್ತನ ದಿನಾಚರಣೆಗೆ ಸೇರುವುದು ಕಂಡು ಬರುತ್ತದೆ. ಈ ಭಾಗದಲ್ಲಿ ಬೌದ್ಧ ಧರ್ಮ ಪ್ರಸಾರ, ದಲಿತರನ್ನು ಬೌದ್ಧ ಧಮ್ಮದೆಡೆಗೆ ಬರುವಲ್ಲಿ ಪ್ರಯತ್ನಿಸಿರುವುದು ಕಂಡು ಬಂದಿದೆ. 1992 ರಲ್ಲಿ ವಿಹಾರದ ಕಟ್ಟಡ ಕಾರ್ಯ ಮುಗಿದು 1995 ರಲ್ಲಿ ಉದ್ಘಾಟನೆಗೊಂಡಿರುತ್ತದೆ. ವಿಶಾಲವಾದ ಪ್ರಾರ್ಥನಾ ಮಂದಿರವಿದೆ. ಮಹಾಕಷ್ಯಪ ಬಂತೇಜಿ ಇವರು ಹೇಳುವಂತೆ ಇಲ್ಲಿ ಉನ್ನತ ಮಟ್ಟದ ಬೌದ್ಧ ಶಿಕ್ಷಣ ನೀಡುವ ಬೌದ್ಧ ವಿಶ್ವವಿದ್ಯಾಲಯವೊಂದನ್ನು ಪ್ರಾರಂಭಿಸುವ ಉದ್ದೇಶವಿದೆ. ಅದಕ್ಕೆ ಪೂರಕವಾಗಿ ಸರ್ಕಾರದ ಕೆಲವು ಯೋಜನೆಗಳಿಂದಲೂ ದೊಡ್ಡ ಪ್ರಮಾಣದ ನೆರವು ಪಡೆದು ದತ್ತಿದಾನಗಳ ನೆರವಿನಿಂದ ದ್ಯಾನ ಮಂದಿರ ಬಿಕ್ಕು ನಿವಾಸಿ ಮುಂತಾದ ಬೃಹತ್ ಕಟ್ಟಡಗಳನ್ನು ನಿರ್ಮಿಸಲಾಗಿದೆ. ಈ ಭಾಗದಲ್ಲಿ ಸೇವೆ ಸಲ್ಲಿಸಿ ದಲಿತ ಅಭಿವೃದ್ಧಿಗೆ ಕಾಳಜಿ ವಹಿಸಿದ ಮತ್ತು ಬೌದ್ಧ ಚಿಂತನೆಗಳ ಬಗ್ಗೆ ಆಸಕ್ತಿ ಹೊಂದಿದ ಹಿರಿಯ ಐ.ಎ.ಎಸ್. ಅಧಿಕಾರಿಗಳಾದ ಶ್ರೀ ಸಂಜೀವ್ ಕುಮಾರ, ಶ್ರೀ ಶಿವರಾಂ ಇವರ ನೆರವನ್ನು ಬಂತೇಜಿಯವರು ಸ್ಮರಿಸುತ್ತಾರೆ'[27]. ಇತ್ತೀಚೆಗೆ ಬೌದ್ಧ ಧರ್ಮ ಪರಿಷತ್‌ನ 10 ನೇ ಅಧಿವೇಶನವನ್ನು ಸಂಘಟಿಸಿ ದೇಶ ವಿದೇಶಗಳ ಬಿಕ್ಕುಗಳನ್ನು ಆಮಂತ್ರಿಸಿ ಬೌದ್ಧ ಸನ್ಯಾಸಿಗಳ ದಂಡೇ ಆಗಮಿಸಿದ್ದನ್ನು ಪತ್ರಿಕೆಗಳು ವರದಿ ಮಾಡಿರುತ್ತವೆ. (ಅನುಬಂಧ - 5, ಚಿತ್ರ : 13, 14 ನೋಡಿ).

**ಸಾರಿಪುತ್ರ ಬೌದ್ಧ ವಿಹಾರ, ಜಲನಗರ, ಬಿಜಾಪೂರ :**

ಬಿಜಾಪೂರ ನಗರದಲ್ಲಿ ಸಾರಿಪುತ್ರ ಬುದ್ಧ ವಿಹಾರದ ಕಟ್ಟಡದ ನಿರ್ಮಾಣ ಕಾರ್ಯ ನಡೆದಿದ್ದು ಮುಕ್ತಾಯ ಹಂತದಲ್ಲಿದೆ. ಆದರೆ ಇಲ್ಲಿ ಬೌದ್ಧ ಕಾರ್ಯಕ್ರಮಗಳು ಸಾಕಷ್ಟು ಸಂಖ್ಯೆಯಲ್ಲಿ ನಡೆದಿರುವುದು ಕಂಡು

ಬಂದಿದೆ. ಜಪಾನಿನ ಬೌದ್ಧ ಬಿಕ್ಕು ಝೆನ್ ಮಾಸ್ಟರ್ ಪೂಜ್ಯ ಶೋದೋ ಹರದಾರವರು 'ಒಂದು ಹನಿ' ಧ್ಯಾನಕೇಂದ್ರವನ್ನು ನಿರ್ಮಿಸಲು ಸಹಾಯ ಮಾಡಿದ್ದಾರೆ.

ಬಿಜಾಪೂರ ಜಿಲ್ಲೆಯಲ್ಲಿ ಅಂಬೇಡ್ಕರ್‌ರವರು ಪ್ರವಾಸ ಕೈಗೊಂಡು ಇಲ್ಲಿನ ದಲಿತ ಚಳವಳಿಗೆ ಮಹತ್ವದ ಪ್ರೇರಣೆ ಮತ್ತು ತಳಹದಿ ಒದಗಿಸಿದ್ದಾರೆ. ಹೀಗಾಗಿ ಇಲ್ಲಿನ ಬಿಜಾಪೂರ, ಬಿಜ್ಜರಗಿ ಹಾಗೂ ಇತರ ಭಾಗಗಳಲ್ಲಿ ಬೌದ್ಧ ಧರ್ಮಿಯರು ಕಂಡು ಬರುತ್ತಾರೆ. ರಮಾಯಿ ಸ್ಮೃತಿ ಬೌದ್ದ ವಿಹಾರ, ಬಿಜ್ಜರಗಿ, ತಾ : ಜಿಲ್ಲಾ: ಬಿಜಾಪೂರ ಮುಂತಾದ ಕಡೆ ಬೌದ್ಧ ಧರ್ಮಕ್ಕೆ ದಲಿತರು ಹೆಚ್ಚಿನ ಸಂಖ್ಯೆಯಲ್ಲಿ ಮತಾಂತರಗೊಂಡಿದ್ದಾರೆ. ಅಂಬೇಡ್ಕರ್‌ವರಿಂದಲೇ ನೇರವಾಗಿ ಪ್ರಭಾವಿತರಾದ ಇಲ್ಲಿನ ದಲಿತ ಸಮುದಾಯ 1960 ರ ದಶಕದಲ್ಲಿಯೇ ಬೌದ್ದ ಧರ್ಮಕ್ಕೆ ಮತಾಂತರ ಹೊಂದಲು ಅಭಿಲಾಷೆ ವ್ಯಕ್ತಪಡಿಸಿದ್ದನ್ನು ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ಪುತ್ರ ಯಶವಂತರಾವ್ ಅಂಬೇಡ್ಕರ್ ತಿಳಿಸುತ್ತಾರೆ. ಬೆಳಗಾವಿ ಜಿಲ್ಲೆಯ ಚಿಕ್ಕೋಡಿಯ ಡಾ. ಅಂಬೇಡ್ಕರ್ ಅನುಯಾಯಿ ಡಿ.ಎ. ಕಟ್ಟಿ 1967 ರಲ್ಲಿ 'ಮೈಸೂರು ರಾಜ್ಯದಲ್ಲಿ ಬೌದ್ಧ ಧರ್ಮದ ಬಗ್ಗೆ ಆಸಕ್ತಿ ಬೆಳೆದು ಬರುತ್ತಿದೆ. ನೂರಕ್ಕೆ ನೂರು ಪ್ರತಿಶತ ಆಸಕ್ತಿ ಇದೆ, ಬಿಜಾಪೂರ ಮತ್ತು ಬೆಳಗಾವಿಯಲ್ಲಿ ಸಾಕಷ್ಟು ಜನ ಬೌದ್ದ ಧರ್ಮಕ್ಕೆ ಮತಾಂತರಗೊಂಡಿದ್ದಾರೆ. ಆದರೆ, ಬಿಜಾಪೂರದಲ್ಲಿ ಸ್ವಲ್ಪ ಅಪಾಯದ ವಾತಾವರಣ ಇದೆ. ಅಲ್ಲಿ ಸವರ್ಣೀಯರ ಪ್ರತಿರೋಧ ಅಥವಾ ಹಿಂಸೆ ನಡೆಯುವ ಹೆದರಿಕೆ ಇದೆ. ಅದೇ ಕಾಲಕ್ಕೆ ಹೆಚ್ಚಿನ ಸಂಖ್ಯೆಯ ಬೌದ್ಧ ಬಿಕ್ಕುಗಳ ಅವಶ್ಯಕತೆ ಮೈಸೂರು ರಾಜ್ಯದಲ್ಲಿ ಇದೆ'[28] ಎಂದು ಅಭಿಪ್ರಾಯ ಪಡುತ್ತಾರೆ. ಮುಂದೆ ಇಲ್ಲಿ 'ಬುದ್ಧ ವಿಹಾರ ನಿರ್ಮಾಣ ಸಮಿತಿಯು' ಹುಟ್ಟಿಕೊಂಡು 15,000 ಜನರನ್ನು ಬೌದ್ಧ ಧರ್ಮಕ್ಕೆ ಮತಾಂತರಿಸಿವುದು ತಿಳಿದುಬರುತ್ತದೆ.'[29] ಸರ್ಕಾರದಿಂದ ಒಂದೂವರೆ ಎಕರೆ ಭೂಮಿಯನ್ನು ಖರೀದಿಸಿ ವಿಹಾರ ನಿರ್ಮಿಸುವ ವಿವರಗಳನ್ನು ನೋಡುತ್ತೇವೆ.

**ಸುಬೋಧಿ ಬುದ್ಧವಿಹಾರ, ನೇರಲಿ, ತಾ : ಹುಕ್ಕೇರಿ, ಜಿಲ್ಲಾ : ಬೆಳಗಾವಿ :**

ಯಕ್ಸಂಬಾದಂತೆಯೇ ಡಾ. ಅಂಬೇಡ್ಕರ್‌ವರಿಂದ ನೇರವಾಗಿ ಅವರ ಭಾಷಣಗಳಿಂದ, ವಿಚಾರಗಳಿಂದ ಪ್ರಭಾವಿತರಾದ ನೇರಲಿ ದಲಿತ ಸಮುದಾಯ ಬೌದ್ಧಧರ್ಮದ ಕಡೆಗೆ ಆಸಕ್ತವಾಗಿರುವುದು ಕಂಡು ಬಂದಿದೆ. ಹಿಂದೂ ಧರ್ಮದ, ಮೇಲ್ವರ್ಗದ ಶೋಷಣೆಯಿಂದ ಬಿಡುಗಡೆ ಹೊಂದಲು ಬೌದ್ದ ಧರ್ಮಕ್ಕೆ ಮತಾಂತರ ಹೊಂದಿರುವುದಾಗಿ 5.6.2001 ರಲ್ಲಿ ಅಸ್ತಿತ್ವಕ್ಕೆ ಬಂದ ನಿವೃತ್ತ ಶಿಕ್ಷಕ ಬಿ.ಬಿ. ಹೊಸಮನಿ ಇವರು ದಾಖಲಿಸುತ್ತಾರೆ. (2004 ರಲ್ಲಿ ಕಳುಹಿಸಿದ ಸಂದರ್ಶನ ನಮೂನೆಯಲ್ಲಿ ದಾಖಲಿಸಿದ ವಿವರಗಳು) ಬುದ್ಧನ ತತ್ವಗಳನ್ನು ನಮ್ಮ ಜೀವನದಲ್ಲಿ ಅಳವಡಿಸಿಕೊಂಡು ಬೌದ್ಧ ಸಂಸ್ಕೃತಿಯನ್ನು ಹೊಂದಿ, ಬೌದ್ಧ ಧಮ್ಮದ ಪ್ರಚಾರ ಮಾಡುವುದು. ಈ ವಿಹಾರದ ಉದ್ದೇಶವಾಗಿದೆ. ಬುದ್ಧ ಪೂರ್ಣಿಮೆ, ಧಮ್ಮ ಚಕ್ರ ಪ್ರವರ್ತನ ಡಾ. ಅಂಬೇಡ್ಕರ್‌ರವರ ಜಯಂತಿ ಉತ್ಸವಗಳನ್ನು ತುಂಬಾ ವ್ಯವಸ್ಥಿತವಾಗಿ ಆಚರಿಸುವ ಜೊತೆಗೆ, ಪ್ರತಿದಿನ ಮುಂಜಾನೆ ಮತ್ತು ಸಾಯಂಕಾಲ 7 ಗಂಟೆಗೆ ವಿಹಾರದಲ್ಲಿ "ಸಾಮೂಹಿಕ ಪ್ರಾರ್ಥನೆ" ಮಾಡುವುದು ಕಂಡು ಬರುತ್ತದೆ. ಈ ವಿಹಾರವನ್ನು ಬೆಂಗಳೂರಿನ ಮಹಾಬೋಧಿ ಸೊಸೈಟಿಯ ಪೂಜ್ಯ ಬಿಕ್ಕು ಆನಂದ ಬಂತೇಜಿಯವರು ಉದ್ಘಾಟಿಸಿದ್ದಾರೆ. ಆರಾಧನ ಸ್ಕೀಮಿನಲ್ಲಿ ಕರ್ನಾಟಕ ಸರ್ಕಾರದಿಂದ 1 ಲಕ್ಷ

ರೂಪಾಯಿಗಳ ಅನುದಾನವನ್ನು ಈ ವಿಹಾರದ ನಿರ್ಮಾಣ ಕಾರ್ಯಕ್ಕೆ ಪಡೆಯಲಾಗಿದೆ. ದಲಿತ ಬೌದ್ಧರು ಸಾಂಸ್ಕೃತಿಕವಾಗಿ ಧಾರ್ಮಿಕವಾಗಿ ಜಾಗೃತರಾಗಲು ಎದುರಾಗುವ ಹಲವಾರು ಸಮಸ್ಯೆಗಳನ್ನು ಪರಿಹರಿಸಿ ಅವರಿಗೆ ಬೆಂಬಲ ನೀಡುವ ಅಭೀಪ್ಸೆಯನ್ನು ಈ ವಿಹಾರದ ಸಂಘಟಕರು ಹೊಂದಿದ್ದು, ಕನ್ನಡದಲ್ಲಿ ಬೌದ್ಧ ಧರ್ಮದ ಸಾಹಿತ್ಯ ಅಭಿವೃದ್ಧಿಯಾಗಬೇಕು. ಧರ್ಮ ಪ್ರಸಾರ ಪಡಿಸಲು ಸಾಕಷ್ಟು ಸಂಖ್ಯೆಯಲ್ಲಿ ಬಿಕ್ಕುಗಳು ಹೆಚ್ಚಾಗಬೇಕು ಎಂಬ ಆಶಯ ಹೊಂದಿರುವುದು ಮಹತ್ವದ್ದಾಗಿದೆ.

ಹೀಗೆ ಕರ್ನಾಟಕದಾದ್ಯಂತ ಬೌದ್ಧ ವಿಹಾರಗಳು ಬೆಳೆದು ಬರುತ್ತಿರುವುದನ್ನು ಕಾಣುತ್ತೇವೆ. ಹುಬ್ಬಳ್ಳಿಯ ಸಿದ್ಧರಾಮೇಶ್ವರ ಕಾಲಿನಿಯಲ್ಲಿನ ವಿಶ್ವ ಶಾಂತಿ ಬುದ್ಧವಿಹಾರ, ನೆರೆ ಕ್ಯಾತನಹಳ್ಳಿ, ಧಾರವಾಡದ ಹತ್ತಿರದ ಕಳಸನಕೊಪ್ಪ ಧಾರವಾಡ ಡಾ. ಅಂಬೇಡ್ಕರ್ ಸಮಾಜ ಪರಿವರ್ತನ ಸಂಸ್ಥೆಯಿಂದ ಮುಗದ ಹತ್ತಿರ ಸ್ಥಾಪಿಸಲು ಉದ್ದೇಶಿಸಿರುವ ಬೌದ್ಧ ವಿಹಾರ, ಮಡಿಕೇರಿ, ಬೆಂಗಳೂರಿನ ಪ್ರೇಜರ್ ಜೌನ್ ಗುಲ್ಬರ್ಗದ ಆನಂದ ಬುದ್ಧವಿಹಾರ, ಬೀದರ ನಗರದಲ್ಲಿನ ತಳಘಾಟ್ ಪ್ರದೇಶದಲ್ಲಿನ ಬುದ್ಧ ವಿಹಾರ, ಬೆಳಗಾವಿ ನಗರದಲ್ಲಿ ಪ್ರಾರಂಭಿಸಲು ಉದ್ದೇಶಿಸಿರುವ ಬೌದ್ಧ ವಿಹಾರಗಳ ಸ್ಥಾಪನೆಯಿಂದ ದಲಿತರು ಸ್ಪಷ್ಟವಾಗಿ ಬೌದ್ಧ ಧರ್ಮವನ್ನು ತಮ್ಮ ಸಾಂಸ್ಕೃತಿಕ ವಿಮೋಚನೆಯ ಸಾಧನವನ್ನಾಗಿ ಕಂಡುಕೊಳ್ಳುವ ಜೊತೆಗೆ ತಮ್ಮ ಧಾರ್ಮಿಕ, ಸಾಂಸ್ಕೃತಿಕ ಐಡೆಂಟಿಟಿಯಾಗಿ ಗುರುತಿಸಿಕೊಂಡಿರುವುದು ಮಹತ್ವದಾಗಿದೆ. ವಿಹಾರಗಳನ್ನು ಸ್ಥಾಪಿಸಿಕೊಳ್ಳುವ ಆ ಮೂಲಕ ಹಿಂದೂ ಆಚರಣೆಗಳನ್ನು ತ್ಯಜಿಸಿ ಬೌದ್ಧ ಧಮ್ಮ ದೀಕ್ಷೆ ಪಡೆದು ಬೌದ್ಧ ಧಮ್ಮದ ಪ್ರಸಾರಕ್ಕೂ ಬದ್ಧರಾಗಿರುವ ಲಕ್ಷಾಂತರ ಜನರನ್ನು ಕರ್ನಾಟಕದಲ್ಲಿ ಕಾಣುತ್ತೇವೆ. ಅಧ್ಯಾಯ 3, 4 ರಲ್ಲಿ ವಿವರಿಸಿದ ಚಾರಿತ್ರಿಕ ಘಟ್ಟಗಳ ಹಿನ್ನೆಲೆ ಮತ್ತು ಪ್ರಭಾವಗಳಿಂದ ಇಂತಹ ಬೆಳವಣಿಗೆಗಳು ಕಂಡು ಬಂದಿದೆ. ಆಧುನಿಕ ಕಾಲದಲ್ಲಿ ವಿಹಾರಗಳ ಹುಟ್ಟು, ಬೆಳವಣಿಗೆ, ದಲಿತರ ಸಾಂಸ್ಕೃತಿಕ ಕೇಂದ್ರಗಳಾಗಿ ಅವು ಯಾವ ರೀತಿ ಕಾರ್ಯನಿರ್ವಹಿಸುತ್ತಿವೆ ಎಂಬ ಬಗ್ಗೆ ಪ್ರತ್ಯೇಕವಾಗಿ, ವ್ಯಾಪಕವಾಗಿ ಅಧ್ಯಯನಗಳ ನಡೆಯಬೇಕಾದ ಅವಶ್ಯಕತೆಯೂ ಇರುವುದನ್ನು ನಾವು ಪರಿಗಣಿಸಬೇಕಾಗುತ್ತದೆ.

### 6.2. ಕರ್ನಾಟಕದ ಬೌದ್ಧರ ಪ್ರಮುಖ ಆಚರಣೆಗಳು :

ಪ್ರಾರಂಭದಲ್ಲಿ ದಲಿತ ಬೌದ್ಧರು ಅಂಬೇಡ್ಕರ್‌ರವರ ಜಯಂತ್ಯೋತ್ಸವ (ಏಪ್ರೀಲ್-14) ಮಹಾ ಪರಿನಿಬ್ಬಾಣ (ಡಿಸೆಂಬರ್-6), ಧಮ್ಮ ಚಕ್ರ ಪ್ರವರ್ತನ ದಿನಾಚರಣೆ (ಅಕ್ಟೋಬರ್-14), ಬೌದ್ಧ ಪೂರ್ಣಿಮೆ (ವೈಶಾಖಿ) ಆಚರಣೆ ಮಾಡುತ್ತಿದ್ದರು. ಆಚರಣೆಗಳ ಸಂದರ್ಭಗಳಲ್ಲಿ ಹೆಚ್ಚೆಂದರೆ ಅಂಬೇಡ್ಕರ್‌ರವರ ಮತ್ತು ಬುದ್ಧನ ಭಾವಚಿತ್ರಗಳನ್ನು ಪ್ರತಿಷ್ಠಾಪಿಸಿ ಹೂವಿನ ಹಾರ, ಪುಷ್ಪಗಳಿಂದ ಗೌರವ ಸಲ್ಲಿಸಿ ಮೇಣದ ಬತ್ತಿ ಉರಿಸುತ್ತಿದ್ದರು. ಬೌದ್ಧ ಧಮ್ಮದ ಬಗ್ಗೆ ತಿಳಿದುಕೊಂಡವರಿದ್ದರೆ ತ್ರಿಸರಣ, ಬುದ್ಧವಂದನೆ ನಡೆಯುತ್ತಿತ್ತು. ಇತ್ತೀಚೆಗೆ ಅಂಬೇಡ್ಕರ್‌ರವರ ಬರೆಹಗಳು, ವಿಚಾರಗಳು ಎಲ್ಲಾ ದಲಿತರಿಗೆ ತಲುಪುತ್ತಿದ್ದು ಸರ್ಕಾರವೇ ಕನ್ನಡದಲ್ಲಿ ಅಂಬೇಡ್ಕರ್‌ರವರ ಬರೆಹ ಮತ್ತು ಭಾಷಣಗಳನ್ನು ಅನುವಾದಿಸಿ ಪ್ರಕಟಿಸಿದ್ದರಿಂದ ಹಲವಾರು ವಿಷಯಗಳು ಬೆಳಕಿಗೆ ಬರುತ್ತಿವೆ. ಕನ್ನಡ ಭಾಷೆಯಲ್ಲಿಯೂ ಬೌದ್ಧ ಸಾಹಿತ್ಯ ಸೃಷ್ಟಿಯಾಗಿದೆ. ಬೌದ್ಧ ವಿಹಾರಗಳು, ಬೌದ್ಧ ಬಿಕ್ಕುಗಳು ಧ್ಯಾನ, ಧಮ್ಮದೀಕ್ಷೆ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿರುವುದರಿಂದ ಬೌದ್ಧ ಆಚರಣೆಗಳು

ವಿಫಲವಾಗಿ ಕಂಡು ಬರುತ್ತಿವೆ. (ಅನುಬಂಧ - 1 ರ ಚಿತ್ರಗಳ ಬಗ್ಗೆ ಗಮನಿಸಿಸಬಹುದಾಗಿದೆ) ಹಿರಿಯ ಬೌದ್ಧ ಉಪಾಸಕರು ಕರಪತ್ರ ಪುಸ್ತಕಗಳ ಮೂಲಕ ಬೌದ್ಧ ಆಚರಣೆಗಳ ಮಹತ್ವ ಪ್ರಸಾರ ಮಾಡುತ್ತಿದ್ದಾರೆ.

ಬಿಜಾಪೂರ, ಎಕ್ಸಂಬಾ ಇತ್ಯಾದಿ ಕಡೆ ಬೌದ್ಧ ಉಪಾಸಕರು ಶಿಬಿರಗಳನ್ನು ಏರ್ಪಡಿಸಿ, ಬೌದ್ಧ ಧರ್ಮ ದೀಕ್ಷಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದಾರೆ. ಹಲವಾರು ಸಾರ್ವಜನಿಕ ಕಾರ್ಯಕ್ರಮಗಳನ್ನು, ಸಭೆಗಳನ್ನು ಏರ್ಪಡಿಸಿ ಬೌದ್ಧ ಧಮ್ಮದ ಬಗ್ಗೆ ಅಂಬೇಡ್ಕರ್‌ರವರ ಚಳವಳಿಯ ಬಗ್ಗೆ ವಿವರವಾದ ಮಾಹಿತಿ ಪ್ರಸಾರ ಮಾಡುತ್ತಿದ್ದಾರೆ.

ಬೆಂಗಳೂರಿನ ಮಹಾಬೋಧಿ ಸೊಸೈಟಿಯು ಬೌದ್ಧ ಆಚರಣೆಗಳ ಕೈಪಿಡಿಗಳನ್ನು , ಕೈಪಿಡಿಯನ್ನು ಮೊತ್ತ ಮೊದಲಬಾರಿಗೆ ಪ್ರಕಟಿಸಿ ಕರ್ನಾಟಕದ ಮೂಲೆ ಮೂಲೆಗೂ ಅಂತಹ ಕೈಪಿಡಿಗಳು ದಲಿತ ಬೌದ್ಧರಿಗೆ ದೊರಕುವಂತೆ ಮಾಡಿದೆ. ಇಂದು ಅಲ್ಲಿನ ಪ್ರಮುಖ ಬಿಕ್ಕುಗಳಾದ ಪೂಜ್ಯ ಆನಂದ ಬಂತೇಜಿಯವರು ಕನ್ನಡದಲ್ಲಿ ಬೌದ್ಧ ಸಾಹಿತ್ಯ ಪ್ರಸಾರಕ್ಕೆ ಹೆಚ್ಚಿನ ಆದ್ಯತೆ ಮತ್ತು ಕಾಳಜಿ ವಹಿಸಿರುವುದು ಕಂಡು ಬರುತ್ತದೆ.

ಈ ಹಿನ್ನೆಲೆಯಲ್ಲಿ ಮಹಾಬೋಧಿ ಸೊಸೈಟಿಯ ಆಚಾರ್ಯ ಬುದ್ಧರಕ್ಷಿತ ಬಂತೇಜಿಯವರು ರಚಿಸಿ ಪ್ರಕಟಿಸಿದ The Buddhist Manual for Everyday Practice'[30] ಮಹತ್ವದ ಕೈಪಿಡಿಯಾಗಿದೆ. ಕನ್ನಡದಲ್ಲಿ ಪ್ರಸಿದ್ಧ ಬೌದ್ಧ ಸಾಹಿತಿಗಳಾದ ವೈ.ಬಿ. ನಂದನ ಅವರು (ಅನುಬಂಧ-1, ಚಿತ್ರ : 63, 64 ಗಮನಿಸಿ) ಹಲವಾರು ಮಹತ್ವದ ಬೌದ್ಧ ಗ್ರಂಥಗಳನ್ನು ರಚಿಸಿದ್ದಾರೆ. ಅವರು ಕರ್ನಾಟಕದ ಬೌದ್ಧರ ಉಪಯೋಗಕ್ಕೆ ರಚಿಸಿದ 'ಬೌದ್ಧ ಜೀವನ' ಹೊತ್ತಿಗೆ ಅತ್ಯಂತ ಸರಳವಾದ ವಿಪುಲ ಮಾಹಿತಿಗಳನ್ನು ಒಳಗೊಂಡ ಬೌದ್ಧ ಆಚರಣೆಗಳ ಮಾರ್ಗದರ್ಶಿಕೆಯಾಗಿದೆ. ಇದೇ ಕೈಪಿಡಿಯನ್ನು ಕರ್ನಾಟಕದಾದ್ಯಂತ ಬಳಸಲಾಗಿದೆ. ಇದರ ವಿಸ್ತೃತ ಆವೃತ್ತಿ 'ಬೌದ್ಧ ನಿತ್ಯಾಚರಣೆಗಳು'[31] (ಮಾರ್ಚ್ - 2000) ಎಂಬ ಶೀರ್ಷಿಕೆಯಲ್ಲಿ ಪುನರ್ ಮುದ್ರಣಗೊಂಡಿದೆ. ತದನಂತರ ಹತ್ತು ಸಾವಿರಗಳಿಗಿಂತಲೂ ಹೆಚ್ಚು ಪ್ರತಿಗಳು ಮುಗಿದು ಹೋಗಿ ಇತ್ತೀಚೆಗೆ ಮತ್ತೇ 'ಬೌದ್ಧ ಆಚರಣೆಗಳು'[32] ಎಂಬ ಶೀರ್ಷಿಕೆಯಲ್ಲಿ ತುಂಬಾ ಆಕರ್ಷಕವಾಗಿ ಹೊರಬಂದಿದೆ. ಪ್ರತಿದಿನ ಬೌದ್ಧ ಪೂಜಾ ಮತ್ತು ಸಂಸ್ಕಾರ ವಿಧಿಗಳ ಕೈಪಿಡಿಯಲ್ಲಿ ಬೌದ್ಧರ ಆಚರಣೆಗಳನ್ನು ಮೂಲ ಪಾಲಿ ಪಠ್ಯದೊಂದಿಗೆ ಕನ್ನಡದಲ್ಲಿ ಸರಳಾನುವಾದ ಮಾಡಲಾಗಿದೆ. ಬೌದ್ಧರ ಯಾತ್ರಾ ಸ್ಥಳಗಳನ್ನು ಸಚಿತ್ರ ರೂಪದಲ್ಲಿ ಶ್ರೀ ನಂದನ ಅವರು ಪರಿಚಯಿಸಿದ್ದಾರೆ.

ಜಪಾನ ಬಿಕ್ಕುಗಳಿಂದ ಪ್ರಭಾವಿತರಾದ ಬಿಜಾಪೂರದ ಉಪಾಸಕರನೇಕರು ಬೌದ್ಧ ಆಚರಣೆಗಳ ಜೊತೆಗೆ ಅನೇಕ ಸೂತ್ರಗಳನ್ನು ಪಠಿಸುತ್ತಾರೆ. 'ಝೆನ್' ಬೌದ್ಧ ಪರಂಪರೆಯ ಅನುಸರಣೆಯನ್ನು ಇಲ್ಲಿ ಕಾಣುತ್ತೇವೆ. ಬಿಜಾಪೂರದ ಜಲ ನಗರದಲ್ಲಿ ಸ್ಥಾಪಿತವಾದ 'ಸಾರಿ ಪುತ್ರ ಬೌದ್ಧ ವಿಹಾರ'ದ ಪಕ್ಕದಲ್ಲಿ ಜಪಾನ್ ಬಿಕ್ಕುಗಳ ನೆರವಿನಿಂದ ಸ್ಥಾಪಿತವಾದ One Drop Meditation Centre ಕೂಡ (ಅನುಬಂಧ-1, ಚಿತ್ರ 41, 42 ಗಮನಿಸಿ) ಝೆನ್ ಮಾದರಿಯ ಬೌದ್ಧ ಧರ್ಮದ ಆಚರಣೆಗಳಿಗೆ ಪ್ರಭಾವಿತವಾಗಿರುವುದನ್ನು ಕಾಣುತ್ತೇವೆ.

ಮಹಾರಾಷ್ಟ್ರದ ದಲಿತ ಬೌದ್ಧರು ಬೌದ್ಧ ಆಚರಣೆಗಳಲ್ಲಿ ಒಂದು ತಲೆಮಾರು ಮುಂದೆ ಹೋಗಿದ್ದಾರೆ. ಹಿಂದೂ ಸಂಪ್ರದಾಯ ವಿಧಿ, ಹಬ್ಬ ಹರಿದಿನಗಳನ್ನು ಸಂಪೂರ್ಣವಾಗಿ ತ್ಯಜಿಸಿ 'ಬೌದ್ಧ ಜೀವನ' ನಡೆಸುತ್ತಿದ್ದಾರೆ. ಅಂಬೇಡ್ಕರ್‌ರವರು 1956 ರಲ್ಲಿ ಅಕ್ಟೋಬರ್ 14, ನಾಗಪೂರ ದೀಕ್ಷಾ ಭೂಮಿಯಲ್ಲಿ ಬೋಧಿಸಿದ 22 ಸೂತ್ರಗಳು ಮಹಾರಾಷ್ಟ್ರದ ದಲಿತ ಬೌದ್ಧರಿಗೆ ಬೌದ್ಧ ಜೀವನದ ಮೂಲ ಆಕರಗಳಾಗಿವೆ. ಡಾ. ಅಂಬೇಡ್ಕರ್‌ರವರು ತಮ್ಮ ಎರಡು ದಶಕಗಳ ಅನ್ವೇಷಣೆ, ಬೌದ್ಧ ಸಾಹಿತ್ಯದ ಅಧ್ಯಯನ, ಬೌದ್ಧ ಜೀವನದ ಭವಿಷ್ಯವನ್ನು ಗಮನದಲ್ಲಿರಿಸಿಕೊಂಡು '22 ಬೌದ್ಧ ಪ್ರತಿಜ್ಞಾ' ವಿಧಿಗಳನ್ನು ರಚಿಸಿದರು. ಈ ಸೂತ್ರಗಳು ಸಂಪೂರ್ಣವಾಗಿ 'ದೈವ' ನಿರಾಕರಣೆಯ ತಿರುಳನ್ನು ಹೊಂದಿವೆ. ಬೌದ್ಧ ಧರ್ಮಕ್ಕೆ ಮತಾಂತರವಾಗುವ ಸಂದರ್ಭದಲ್ಲಿ ತ್ರಿಸರಣ, ಪಂಚಶೀಲಗಳೊಂದಿಗೆ ಡಾ. ಅಂಬೇಡ್ಕರ್‌ರವರು ರಚಿಸಿದ ಈ 22 ಪ್ರತಿಜ್ಞಾ ವಿಧಿಗಳನ್ನು ಹೊಸದಾಗಿ 'ಧಮ್ಮ ದೀಕ್ಷೆ' ಪಡೆದುಕೊಂಡವರಿಗೆ ಬೋಧಿಸಲಾಗುತ್ತದೆ. ದಲಿತ ಬೌದ್ಧರ ಮದುವೆ ಸಮಾರಂಭಗಳಲ್ಲಿ ನವ ವಧುವರರಿಗೆ ಈ ಪ್ರತಿಜ್ಞೆಗಳನ್ನು ಹಿರಿಯ ಬೌದ್ಧ ಉಪಾಸಕರು ಬೋಧಿಸುತ್ತಾರೆ. ವರನು ಬೌದ್ಧಮಯ ಜೀವನಕ್ಕೆ ಪರಿಚಿತನಿದ್ದು ವಧುವು ಬೌದ್ಧ ಜೀವನಕ್ಕೆ ಒಪ್ಪಿಕೊಳ್ಳುತ್ತಿರುವ ಕುರುಹಾಗಿ ಈ 22 ಪ್ರತಿಜ್ಞೆಗಳನ್ನು ಬೋಧಿಸಲಾಗುತ್ತಿದೆ. ಈ 22 ಪ್ರತಿಜ್ಞೆಗಳನ್ನು ಜೀವನ ಪರ್ಯಂತರ ಪರಿಪಾಲಿಸಲು ಪ್ರತಿಜ್ಞೆಯನ್ನು ಬೋಧಿಸಲಾಗುತ್ತದೆ.

ಯಕ್ಸಂಬಾ (ತಾ : ಚಿಕ್ಕೋಡಿ, ಜಿಲ್ಲಾ: ಬೆಳಗಾವಿ) ಬೌದ್ಧ ವಿಹಾರದ ಹಿರಿಯ ಉಪಾಸಕರು ಈ 22 ಪ್ರತಿಜ್ಞೆಗಳನ್ನು ದೊಡ್ಡ ಅಕ್ಷರಗಳಲ್ಲಿ ಮುದ್ರಿಸಿ ಅದಕ್ಕೆ ಚೌಕಟ್ಟು ಹಾಕಿಸಿ ಮದುವೆಯ ಸಂದರ್ಭದಲ್ಲಿ ಉಡುಗೊರೆಯ ರೂಪದಲ್ಲಿ 'ಬುದ್ಧ ಧಮ್ಮ ಸಮಿತಿ' ಯಕ್ಸಂಬಾದವರ ವತಿಯಿಂದ ನವ ವಧುವರರಿಗೆ ನೀಡುತ್ತಾರೆ. ಯಕ್ಸಂಬಾ ಬೌದ್ಧ ಉಪಾಸಕರು ಬೌದ್ಧ ರೀತಿಯಲ್ಲಿ ಮದುವೆ ಕಾರ್ಯಕ್ರಮ ನಡೆಸಿ ಧಾರವಾಡದಲ್ಲಿ 22 ಸೂತ್ರಗಳ ಭಾವಚಿತ್ರವನ್ನು ಉಡುಗೊರೆಯಾಗಿ ನೀಡುವುದನ್ನು ಪರಿಪಾಠವಾಗಿಸಿಕೊಂಡಿದ್ದಾರೆ. (ಅನುಬಂಧ - 1 ರಲ್ಲಿನ ಚಿತ್ರ 47, 48 ಗಮನಿಸಿ)

## ಡಾ. ಅಂಬೇಡ್ಕರ್‌ರವರು ರೂಪಿಸಿದ 22 ಬೌದ್ಧ ಪ್ರತಿಜ್ಞೆಗಳು'[33]

| ಪಾಲಿ ಪಠ್ಯ | | ಕನ್ನಡ ಅನುವಾದ |
|---|---|---|
| 1. 'ಬ್ರಹ್ಮ ವಿಷ್ಣು ಮಹೇಶ್ವರಂ, ಈಸ್ಸರಾಂಪಿ ನತ್ವ ಪೂಜಭಾವನಾದಿ ನ ಕರೋಮಿ', | : | ನಾನು ಹಿಂದೂ ದೇವತೆಗಳಾದ ಬ್ರಹ್ಮ ವಿಷ್ಣು ಮಹೇಶ್ವರ ಇವರನ್ನು ನಂಬುವುದಿಲ್ಲ ಮತ್ತು ಅವರನ್ನು ಪೂಜಿಸುವುದಿಲ್ಲ. |
| 2. ರಾಮಾಚ, ಕೃಷ್ಣಾಚ ಇಸ್ಸರಂತಿ ನತ್ವ ಪೂಜ ಭಾವನಾದಿ ನ ಕರೋಮಿ. | : | ನಾನು ಹಿಂದೂ ದೇವತೆಗಳಾದ ರಾಮ ಮತ್ತು ಕೃಷ್ಣ ಇವರನ್ನು ತಿರಸ್ಕರಿಸುತ್ತೇನೆ ಮತ್ತು ಅವರನ್ನು ಪೂಜಿಸುವುದಿಲ್ಲ. |

| | | |
|---|---|---|
| 3. 'ಗೌರಿ ಗಣಪತಿ ಹಿಂದೂ ಧಮ್ಮಿಕಾನಂ ದೇವಿ, ದೇವಿತಾನಂ ಪೂಜ್ಯ ಭಾವನಾದಿ ನ ಕರೋಮಿ'. | : | ನಾನು ಹಿಂದೂ ದೇವತೆಗಳಾದ ಗೌರಿ, ಗಣಪತಿ ಮತ್ತು ಇನ್ನಿತರ ದೇವಾನು ದೇವತೆಗಳನ್ನು ನಂಬುವುದಿಲ್ಲ ಮತ್ತು ಪೂಜಿಸುವುದಿಲ್ಲ. |
| 4. 'ಕದಾಪಿ ಈಸ್ಸರೇನ ಅವತಾರೋ ಗಹಿತೋತಿ ವಿಸ್ಸಸಂ ನ ಕರೋಮಿ, | : | ನಾನು ದೇವರು ಹಲವಾರು ಅವತಾರಗಳಲ್ಲಿ ಕಾಣಿಸಿಕೊಳ್ಳುತ್ತಾನೆಂಬುದನ್ನು ನಂಬುವುದಿಲ್ಲ. |
| 5. 'ಭಗವಾ ಸಮ್ಮ ಸಂಬುದ್ಧೋ ವಿಷ್ಣುಸ್ಸಾ ಅವತಾರೋಪಿ ವಿಸ್ಸಸಂ ನ ಕರೋಮಿ' ಏತಾದಿಸಂ ಪಚರಂ ಉಮ್ಮತ ಕರಾಚ ಅಸಚ್ಚಂ. | : | ನಾನು ಅರ್ಹಂತರಾದ, ಪೂರ್ಣ ಜ್ಞಾನೋದಯ ಪಡೆದ 'ಬುದ್ಧ' ರನ್ನು ವಿಷ್ಣುವಿನ ಅವತಾರವೆಂದು ಪರಿಗಣಿಸುವುದಿಲ್ಲ. ಅಂತಹ ಪ್ರಚಾರವನ್ನು ನಾನು ಉಗ್ರವಾಗಿ ಖಂಡಿಸುತ್ತೇನೆ ಮತ್ತು ಅದೊಂದು ಕಿಡಿಕೇಡಿ ಕೃತ್ಯವೆಂದು ಪರಿಗಣಿಸುತ್ತೇನೆ. |
| 6. ಸದ್ಧಾಚ ಪಿಂಡನಾಮಚ ನ ಕರೋಮಿ. | : | ನಾನು ನಮ್ಮ ವಂಶಜರಿಗೆ, ನಮ್ಮ ಹಿರಿಯರಿಗೆ ಶ್ರಾದ್ಧವನ್ನಾಗಲೀ ಮತ್ತು ಪಿಂಡ ದಾನವನ್ನಾಗಲೀ ಮಾಡುವುದಿಲ್ಲ. |
| 7. ಕಾನಿಸಿಪಿ ಮಂಗಲ ಕಮ್ಮಾನಿ ಬ್ರಾಹ್ಮಣೇ ನ ಕರೋಮಿ | : | ಬ್ರಾಹ್ಮಣ ಪುರೋಹಿತರಿಂದ ನಡೆಸುವ ಯಾವುದೇ ಮಂಗಲ ಕಾರ್ಯಗಳನ್ನು ಮಾಡಿಸುವುದಿಲ್ಲ. |
| 8. ಬುದ್ಧಾಗಮವಿರೋಧಿ ಕಿನಸಪಿ ಆಚರಣಮ ನ ಕರೋಮಿ, | : | ನಾನು ಬುದ್ಧ ಧಮ್ಮ ವಿರೋಧಿಯಾಗಿರುವ ಯಾವುದೇ ಆಚರಣೆ ಕೈಗೊಳ್ಳುವುದಿಲ್ಲ. |
| 9. ಸಬ್ಬೇಸಂ ಮನುಸ್ಸಾಸನಂ ಅಸಮನಾತಾಂಚ ಹೀನಕಾರಕಾಂಚ, ಹಿಂದೂ ಧಮ್ಮಂ ಚಜಿತ್ವ ಬುದ್ಧೋ ಪಾದಿತ್ತಂ 'ಬಹುಜನ ಹಿತಾಯ, ಬಹುಜನ ಸುಖಾಯ', ತಿಸರಣಂ ಅನುಗಮನಂ ಕರೋಮಿ, | : | ಹಿಂದೂ ಧರ್ಮ ತ್ಯಜಿಸಿದ ನಾನು, ಎಲ್ಲ ಮನುಷ್ಯರನ್ನು ಉಚ್ಚ ನೀಚ ಎಂದು ಪ್ರತ್ಯೇಕಿಸದೇ ಎಲ್ಲರನ್ನೂ ಸಮಾನವಾಗಿ ಕಾಣುತ್ತೇನೆ. ಬುದ್ಧ ಧಮ್ಮ ಮತ್ತು ಸಂಘ ಈ ಮೂರಕ್ಕೂ ಶರಣಾಗುತ್ತಿದ್ದೇನೆ. 'ಸರ್ವರ ಕಲ್ಯಾಣ, ಸರ್ವರ ಸುಖಕ್ಕಾಗಿ' ಅವುಗಳಲ್ಲಿ ನಡೆದುಕೊಳ್ಳುತ್ತೇನೆ. |
| 10. 'ಇದನಿಂ ಮಮ ಪುನಬ್ಬವೋತಿ ವಿಸಸ್ಸಂ ಕರೋಮಿ, | : | ನಾನು ಈಗ ಮತ್ತೊಮ್ಮೆ ಹುಟ್ಟಿದ್ದೇನೆ ಮತ್ತು ಬೌದ್ಧನಾಗಿದ್ದೇನೆ ಎಂದು ವಿಶ್ವಾಸ ಪಡುತ್ತೇನೆ. |

| | | |
|---|---|---|
| 11. 'ಅಹಂ ಪತಿನ್ನಂ ಕರೋಮಿ, ಅಜ್ಜತೊ ಪದುತ್ತಾಯ ಬುದ್ಧ ಧಮ್ಮಂ ಆಚರೇಮಿ | : | ನಾನು ಇಂದಿನಿಂದ ಬುದ್ಧ ಧಮ್ಮದಂತೆ ನಡೆದುಕೊಳ್ಳಲು ಪ್ರತಿಜ್ಞೆ ಮಾಡುತ್ತಿದ್ದೇನೆ. |
| 12. ಸಬ್ಬಭೂತೆ ಸುಮ್ಮೇತ್ತಂ ಕರೋಮಿ ಚ ಪಾಲಯೇಮಿ ಚ'<br>ಪಾನಾಪಿಪಾತ ವೇರಮಣೀ ಸಿಕ್ಖಾಪದಂ ಸಮಾದಿಯಾಮಿ | : | ನಾನು ಎಲ್ಲರನ್ನೂ ಪ್ರೀತಿಸುತ್ತೇನೆ ಮತ್ತು ಎಲ್ಲರೂ ಹಾಗೆ ಇರಲು ಅಪೇಕ್ಷಿಸುತ್ತೇನೆ.<br>ನಾನು ಯಾವ ಜೀವಿಗಳಿಗೂ ಹಾನಿಯುಂಟು ಮಾಡಲು ಬಯಸುವುದಿಲ್ಲ. |
| 13. ಅದಿನ್ನಾದಾನ ವೇರಮಣೆ | : | ನಾನು ಕೊಡದೇ ಇರುವುದನ್ನು ಸ್ವೀಕರಿಸಬೇಕೆಂದು ಬಯಸುವುದಿಲ್ಲ. |
| 14. ಕಾಮೇಸು ಮಿಚ್ಚಾಚಾರ ವೇರಮಣೆ | : | ನಾನು ಇಂದ್ರೀಯ ಸುಖಗಳಲ್ಲಿಯೇ ಇರಲು ಬಯಸುವುದಿಲ್ಲ. |
| 15. ಮುಸಾವಾದ ವೇರಮಣೆ | : | ನಾನು ಅಹಿತಕಾರಿಯಾದ ಮಾತನ್ನು ಆಡುವುದಿಲ್ಲ. |
| 16. 'ಸುರಾಮೇರಯ ಮಜ್ಜಪ ಮದಟ್ಠಾನಾ ವೇರಮಣೆ' | : | ನಾನು ಮತ್ತು ಭರಿಸುವ, ಮತಿಹೀನಗೊಳಿಸುವ ಮಾದಕ ದ್ರವ್ಯಗಳನ್ನು ಸ್ವೀಕರಿಸುವುದಿಲ್ಲ. |
| 17. 'ಸಬ್ಬೆ ಮನುಸ್ಸ ಸಮಾನತಿ ವಿಸ್ಸಸಂ ಕರೋಮಿ, | : | ನಾನು ಎಲ್ಲ ಮನುಷ್ಯರು ಸಮಾನರು ಎಂದು ನಂಬುತ್ತೇನೆ. |
| 18. 'ಸಮಾನತಾ ಥಪನತ್ತಾಯ ವ್ಯಾಯಾಮಂ ಕರೋಮಿ' | : | ನಾನು ಸಮಾನತೆಯ ಪ್ರತಿಷ್ಠಾಪನೆಗಾಗಿ ಯಾವಾಗಲೂ ಪ್ರಯತ್ನ ಶೀಲನಾಗಿರುತ್ತೇನೆ. |
| 19. ಬುದ್ಧ ಧಮ್ಮಾದಾರ ಪನ್ನ ಶೀಲ ಕರುಣ ಗುಣಾನುಸರೇಣ ಜೀವಿತಂ ಯಾಪೇತಂ ವಯೇಮಿ' | : | ಬುದ್ಧ ಧಮ್ಮದ ಮೂಲ ತತ್ವಗಳಾದ ಜ್ಞಾನ (ಪ್ರಜ್ಞೆ), ಸನ್ನಡತೆ (ಶೀಲ) ಮತ್ತು ದಯೆ (ಕರುಣ) ಗಳನ್ನು ನನ್ನ ಜೀವನದಲ್ಲಿ ಅನುಸರಿಸುತ್ತೇನೆ. |
| 20. 'ಭಗವತೋ ಸಮ್ಮಾಸಂಬುದ್ದಸ್ಸ ಅಟ್ಠಾಂಗಿಕಂ ಮಗ್ಗಂ ಸಮಾದಿಯಾಮಿ' | : | ನಾನು ಬುದ್ಧನ ಅಷ್ಟಾಂಗ ಮಾರ್ಗಗಳ ತತ್ವಗಳನ್ನು ಅನುಸರಿಸುತ್ತೇನೆ. |

| | |
|---|---|
| 21. ಬುದ್ಧೋಪದಿತ್ತಾಯೋ, ದಸಪರಮಿತಾಯೋ ಪರಿಪಾಲಯೇಮಿ. | : ನಾನು ಬುದ್ಧನು ಬೋಧಿಸಿದ ದಶಾಜ್ಞೆಗಳಾದ 1) ದಾನ, 2) ನೀತಿ, 3) ತ್ಯಾಗ, 4) ಸಹನೆ, 5) ಸತ್ಯ, 6) ಬದ್ಧತೆ, 7) ಸಮಭಾವ, 8) ಕರುಣೆ, 9) ಅಪರಿಮಿತ ಪ್ರೀತಿ, 10) ಧನ್ಯತೆಯ ಆನಂದ ಇವುಗಳನ್ನು ಪ್ರಜ್ಞೆಯಿಂದ ಪರಿಪಾಲಿಸುತ್ತೇನೆ. |
| 22. 'ಬುದ್ಧ ಧಮ್ಮೋ, ಪರಮೋ ಸದ್ಧಮ್ಮೋತಿ ಮಾನ್ನೇಮಿ' | : ಬುದ್ಧ ಧಮ್ಮವೇ ಅತ್ಯಂತ 'ಪರಮಶ್ರೇಷ್ಠ ಮಾರ್ಗವೆಂದು' ನಾನು ನಂಬುತ್ತೇನೆ. |

ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ರಚಿಸಿದ ಈ 22 ಬೌದ್ಧ ಪ್ರತಿಜ್ಞೆಗಳಲ್ಲಿ 1 ರಿಂದ 11 ರ ವರೆಗಿನ ಎಲ್ಲಾ ಪ್ರತಿಜ್ಞೆಗಳು ಹಿಂದೂ ಧರ್ಮದ ನಿರಾಕರಣೆ ಮತ್ತು ದೇವರಲ್ಲಿ ನಂಬಿಕೆಗಳನ್ನು ತ್ಯಜಿಸಲು ಕರೆ ನೀಡುತ್ತವೆ. 12 ರಿಂದ 16 ರ ವರೆಗಿನ 5 ಪ್ರತಿಜ್ಞೆಗಳು ಪಂಚಶೀಲ ತತ್ವಗಳನ್ನು ಆಧರಿಸಿ ರೂಪಿಸಿದ ಬೌದ್ಧ ಅನುಯಾಯಿಗಳು ಪಾಲಿಸಬೇಕಾದ ನಿಯಮಗಳನ್ನು ಕುರಿತು ಹೇಳುತ್ತೇವೆ. 16 ರಿಂದ 22 ರ ವರೆಗಿನ ಪ್ರತಿಜ್ಞೆಗಳು ಬೌದ್ಧ ಧಮ್ಮ ದೀಕ್ಷೆ ತೆಗೆದುಕೊಂಡು ಬೌದ್ಧ ಮತಾವಲಂಬಿಗಳು ಅನುಸರಿಸಬೇಕಾದ ನೀತಿ ನಿಯಮಗಳನ್ನು ಸೂಚಿಸುತ್ತವೆ. ಬೌದ್ಧನಾದವನು ವೈಚಾರಿಕತೆಗೆ ಬದ್ಧನಾಗಿರಬೇಕಾಗಿರುವುದನ್ನು ತಿಳಿಸುತ್ತವೆ. ಅದೇ ರೀತಿ ಬೌದ್ಧನಾದವನು ಸಮಾನತೆ, ವಿಶ್ವ ಭ್ರಾತೃತ್ವ, ವಿಶ್ವಶಾಂತಿ ಹಿನ್ನಲೆಯಲ್ಲಿ ಬೌದ್ಧ ಧಮ್ಮ ಪ್ರಸಾರ ಕಾರ್ಯದಲ್ಲಿ ಪ್ರಯತ್ನ ಶೀಲನಾಗಿರಬೇಕೆಂಬುದನ್ನು ಸೂಚಿಸುತ್ತವೆ.

ಈಗಾಗಲೇ ಹೇಳಿದಂತೆ ಮಹಾರಾಷ್ಟ್ರದ ದಲಿತ ಬೌದ್ಧರು ಸಾಂಪ್ರದಾಯಿಕ ಬೌದ್ಧ ಧಮ್ಮಕ್ಕೆ ವಿಭಿನ್ನವಾದ ರೀತಿಯ ಅಂಬೇಡ್ಕರ್ ಬೌದ್ಧ ಧಮ್ಮ'[34] ವನ್ನೇ ಪರಿಪಾಲಿಸುತ್ತಿರುವುದು ಕಂಡು ಬರುತ್ತದೆ. ಈ ಪ್ರಕ್ರಿಯೆಯನ್ನು ಪುಣೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಪಾಶ್ಚಾತ್ಯ ಬೌದ್ಧ ಪರಂಪರೆಯ (Western Buddhist Order) ತ್ರೈಲೋಖ್ಯ ಬೌದ್ಧ ಮಹಾಸಂಘ (ಸಹಾಯ ಗಣ)[35] ವೂ ಸಹಿತ ಬೆಂಬಲಿಸಿರುವುದು ಕಂಡು ಬರುತ್ತದೆ. ಅಂಬೇಡ್ಕರ್‌ರವರು ಪ್ರತಿಪಾದಿಸಿದ ಪ್ರಗತಿಪರ ಸರಳವಾದ ಬೌದ್ಧ ಧಮ್ಮವನ್ನು ಅನುಸರಿಸಲು ಇದು ಎಡೆ ಮಾಡಿಕೊಟ್ಟಿದೆ. ನಾಗಪೂರ, ಮರಾಠವಾಡಾ, ಔರಂಗಾಬಾದ್ ಗ್ರಾಮೀಣ ಪ್ರದೇಶಗಳಲ್ಲೂ ಇದರ ದಟ್ಟ ಪ್ರಭಾವವನ್ನು ಕಾಣಬಹುದಾಗಿದೆ. ಕರ್ನಾಟಕದ ಬೆಳಗಾವಿ, ಹುಬ್ಬಳ್ಳಿ, ಧಾರವಾಡ, ಬಿಜಾಪೂರ, ಗುಲ್ಬರ್ಗಾ, ಬೀದರ್ ಮುಂತಾದ ಪ್ರದೇಶಗಳಲ್ಲಿನ ದಲಿತರೂ ಮಹಾರಾಷ್ಟ್ರದ ಇಂತಹ ಪಾಶ್ಚತ್ಯ ಬೌದ್ಧ ಸಂಘಟನೆಗಳ ಜೊತೆಗೆ ಸಂಪರ್ಕದಲ್ಲಿದ್ದು, ಬೌದ್ಧ ಬಿಕ್ಕುಗಳ ಪ್ರಭಾವದಲ್ಲಿ ಇರುವುದು ಕೂಡ ಕಂಡು ಬರುತ್ತದೆ. ಒಂದು ಮಹತ್ವದ ಅವಲೋಕನವೆಂದರೆ ಎಲ್ಲೆಲ್ಲಿ ಅಂಬೇಡ್ಕರ್‌ರವರ ಬರವಣಿಗೆಗಳ, ವಿಚಾರಗಳ ಪ್ರಭಾವ ದಲಿತ ಸಮುದಾಯದ ಮೇಲೆ ಆಗಿದೆಯೋ ಅವರೆಲ್ಲರೂ ಅಂಬೇಕ್ಕರ್‌ರವರು ಪ್ರತಿಪಾದಿಸಿದ ಬೌದ್ಧ ಧರ್ಮ ಮಾದರಿಯನ್ನು ಪರಿಪಾಲಿಸುತ್ತಿರುವುದು ಕಂಡು ಬರುತ್ತದೆ. ಮಹಾರಾಷ್ಟ್ರದಲ್ಲಿ ಇಂದು ಬೌದ್ಧ ಸಾಹಿತ್ಯ ಪರಿಷತ್ತು, ಬೌದ್ಧ ಸಾಂಸ್ಕೃತಿಕ ಸಂಘಟನೆಗಳೇ ಹಲವಾರು ಸಂಖ್ಯೆಯಲ್ಲಿ ತಲೆ ಎತ್ತಿವೆ. ದಲಿತ ಬೌದ್ಧ

ಸಾಹಿತಿಗಳದೇ ಒಂದು ಪ್ರಬಲ ಸಂಘಟನೆ ಇರುವುದನ್ನು ಕಾಣುತ್ತೇವೆ. ಹಾಗೂ ದಲಿತ ವರ್ಗದಿಂದ ಹೆಚ್ಚಿನ ಸಂಖ್ಯೆಯಲ್ಲಿ ಬೌದ್ಧ ಬಿಕ್ಕುಗಳಾಗಿರುತ್ತಿರುವುದು ಕಂಡು ಬಂದಿದೆ.

ಕರ್ನಾಟಕದಲ್ಲಿಯೂ ಅಂತಹ ಪ್ರಯತ್ನಗಳು ಇತ್ತೀಚೆಗೆ ನಡೆದಿವೆ. 'ಬುದ್ಧ ಬರಲಿ, ನಮ್ಮ ಮನ-ಮನೆಗೆ' ಕಾರ್ಯಕ್ರಮ[36] ಗದಗನಲ್ಲಿ ಬೌದ್ಧ ಸಾಂಸ್ಕೃತಿಕ ವೇದಿಕೆಯು ಪ್ರಾರಂಭಿಸಿರುವುದನ್ನು ನೋಡಬಹುದಾಗಿದೆ. ಬೀದರ್, ಗುಲ್ಬರ್ಗಾ ಭಾಗಗಳಲ್ಲಿ ಹುಣ್ಣಿಮೆ ದಿನಗಳಲ್ಲಿ ಬೌದ್ಧ ಧಮ್ಮದ ಕುರಿತು ಮನೆ ಮನೆಯಲ್ಲಿ 'ಬುದ್ಧ ಬೆಳಕು' ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದನ್ನು ನೋಡಬಹುದಾಗಿದೆ. ದಲಿತ ಸಾಹಿತ್ಯ ಪರಿಷತ್ತು, ಮತಾಂತರ ಕುರಿತು ವಿಚಾರ ಸಂಕಿರಣ ಹಮ್ಮಿಕೊಳ್ಳಲಾಗಿದೆ. ಅದರಲ್ಲಿ ಕರ್ನಾಟಕ ಸರ್ಕಾರದ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದ ಹಿರಿಯ ಸಾಹಿತಿ ಶಾಂತರಸರು ಹಾಗೂ ಔಪಚಾರಿಕವಾಗಿ ಬೌದ್ಧರಾಗದೇ ಇದ್ದರೂ ಬೌದ್ಧ ಪ್ರಜ್ಞೆಯುಲ್ಲಿರುವ ಕನ್ನಡ ಸಾಹಿತಿಗಳು ಸಹಿತ ಭಾಗವಹಿಸಿರುವುದನ್ನು ಗಮನಿಸಿದರೆ, ಬೌದ್ಧ ಧರ್ಮದ ಬಗ್ಗೆ ಬುದ್ಧನ ತತ್ವಗಳ ಬಗ್ಗೆ ಕನ್ನಡ ಸಾಹಿತಿಗಳಿಗೆ ಇರುವ ಒಲವನ್ನು ತೋರಿಸುತ್ತದೆ.

ಅಂಬೇಡ್ಕರ್‌ರವರು ಆಚರಣೆಗೆ ಹೆಚ್ಚಿನ ಮಹತ್ವ ನೀಡಿರುವುದಿಲ್ಲ ಎಂಬುದನ್ನು ನಾವು ಗಮನಿಸುತ್ತೇವೆ. ಆದರೆ, ಅವರು ರಚಿಸಿದ 'ಬೌದ್ಧ ಪೂಜಾ ಪಾಠ' ದ ಕಿರು ಕೈಪಿಡಿಯ ಕೊನೆಯಲ್ಲಿ 'ಓಂ ಮಣಿ ಪದ್ಮಮೇ ಹ್ಞಂ!' ಎಂಬ ಜಪವನ್ನು ದಾಖಲಿಸುವ ಉದ್ದೇಶ ಸಾವಿರಾರು ವರ್ಷಗಳಿಂದ ಹಿಂದೂ ಧರ್ಮದ ಅರ್ಥಹೀನ ಆಚರಣೆಗಳಲ್ಲಿ ತಮ್ಮನ್ನು ಕಳೆದುಕೊಂಡಿರುವ ದಲಿತರು, ಇಂತಹ ಪರ್ಯಾಯ ಆಚರಣೆಗಳನ್ನು ಪ್ರಜ್ಞೆಯ ನೆಲೆಯಲ್ಲಿ ಆಚರಿಸುವುದರಿಂದ ಅವುಗಳನ್ನು ಬಿಡಬೇಕೆನ್ನುವ ತಾತ್ಕಾಲಿಕ ಪರ್ಯಾಯವಾಗಿ, ಸಾಧನವಾಗಿ ಒಪ್ಪಿಕೊಳ್ಳಲೇಬೇಕಾದ ಸಂದಿಗ್ದತೆಯನ್ನು ಸೂಚಿಸುತ್ತದೆ. ಅಂಬೇಡ್ಕರ್‌ರವರು ಆಯ್ಕೆ ಮಾಡಿದ ಮೂಲ ಬೌದ್ಧ ಪಾಲಿ ಸೂತ್ರಗಳಲ್ಲಿ ಮೂಢ ಆಚರಣೆಗಳು ಹೊಂದಿದ ಅಂಶಗಳು ಯಾವುದೂ ಇರಲ್ಲಿವೆನ್ನುವುದೇ ಇಲ್ಲಿ ಮುಖ್ಯವಾಗುತ್ತದೆ. ಬುದ್ಧ ಧಮ್ಮ ಮತ್ತು ಸಂಘಗಳ ಕುರಿತು ವಿಶ್ವ ಶಾಂತಿ, ಸಮ್ಯಕ್ ನಡುವಳಿಕೆಗಳ ಕುರಿತು ಸೂಕ್ತ ಸಂಕ್ಷಿಪ್ತ ಆಚರಣೆಗಳನ್ನು ಪುರಸ್ಕರಿಸುವುದರ ಸಂಕೇತವಾಗಿ ಕಾಣುತ್ತವೆ.

ಕರ್ನಾಟಕದ ಎಲ್ಲಾ ವಿಹಾರಗಳಲ್ಲಿ ಇಂತಹ ಆಚರಣೆಗಳನ್ನು ಆಚರಿಸುವುದನ್ನು ನೋಡುತ್ತೇವೆ. ಹಾಗೆಯೇ ಇಲ್ಲಿ ವಿವರಿಸಿದ ಸೂತ್ರಗಳನ್ನು ಕರ್ನಾಟಕ ದಲಿತ ಬೌದ್ಧರು ಹಲವಾರು ಕಾರ್ಯಕ್ರಮಗಳಲ್ಲಿ ಅಂದರೆ ಅಂಬೇಡ್ಕರ್‌ರವರ ಜಯಂತಿ, ಬೌದ್ಧ ಪೂರ್ಣಿಮೆ, ಧಮ್ಮ ಚಕ್ರ ಪ್ರವರ್ತನ ದಿನಾಚರಣೆ, ಮದುವೆ ನಾಮಕರಣ, ಗ್ರಹ ಪ್ರವೇಶ ಮುಂತಾದ ಸಂದರ್ಭಗಳಲ್ಲಿ ಹೇಳುವುದನ್ನು ನೋಡುತ್ತೇವೆ. ಬಳಕೆಯಲ್ಲಿರುವ ಕೆಲವು ಸುತ್ತಗಳ, ಪಾಲಿಭಾಷೆಯಲ್ಲಿನ ಪದ್ಯಗಳನ್ನು ಅವುಗಳ ಅನುವಾದದೊಂದಿಗೆ ನಾವಿಲ್ಲಿ ಗಮನಿಸಬಹುದಾಗಿದೆ. ಪ್ರಸ್ತುತ ಅಧ್ಯಯನದ ಆಶಯಗಳ ಹಿನ್ನಲೆಯಲ್ಲಿ ಅವುಗಳಲ್ಲಿನ ಕೆಲವು ಆಯ್ದ ಭಾಗಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**1. ತ್ರಿಸರಣ :**

| ಪಾಲಿ ಪಠ್ಯ | | ಕನ್ನಡ ಅನುವಾದ |
|---|---|---|
| ಬುದ್ಧಂ ಸರಣಂ ಗಚ್ಛಾಮಿ | : | ನಾನು ಬುದ್ಧನಿಗೆ ಶರಣು ಹೋಗುತ್ತೇನೆ. |
| ಧಮ್ಮಂ ಸರಣಂ ಗಚ್ಛಾಮಿ | | ನಾನು ಧಮ್ಮಕ್ಕೆ ಶರಣು ಹೋಗುತ್ತೇನೆ. |
| ಸಂಘಂ ಸರಣಂ ಗಚ್ಛಾಮಿ | | ನಾನು ಸಂಘಕ್ಕೆ ಶರಣು ಹೋಗುತ್ತೇನೆ. |
| ದುತಿಯಂ ಪಿ ಬುದ್ಧಂ ಸರಣಂ ಗಚ್ಛಾಮಿ | : | ಎರಡನೇ ಸಲವೂ ನಾನು ಬುದ್ಧನಿಗೆ ಶರಣು ಹೋಗುತ್ತೇನೆ. |
| ದುತಿಯಂ ಪಿ ಧಮ್ಮಂ ಸರಣಂ ಗಚ್ಛಾಮಿ | | ಎರಡನೇ ಸಲವೂ ನಾನು ಧರ್ಮಕ್ಕೆ ಶರಣು ಹೋಗುತ್ತೇನೆ. |
| ದುತಿಯಂ ಪಿ ಸಂಘಂ ಸರಣಂ ಗಚ್ಛಾಮಿ | | ಎರಡನೇ ಸಲವೂ ನಾನು ಸಂಘಕ್ಕೆ ಶರಣು ಹೋಗುತ್ತೇನೆ. |
| ತತಿಯಂ ಪಿ ಬುದ್ಧಂ ಸರಣಂ ಗಚ್ಛಾಮಿ | : | ಮೂರನೇ ಸಲವೂ ನಾನು ಬುದ್ಧನಿಗೆ ಶರಣು ಹೋಗುತ್ತೇನೆ. |
| ತತಿಯಂ ಪಿ ಧಮ್ಮಂ ಸರಣಂ ಗಚ್ಛಾಮಿ | | ಮೂರನೇ ಸಲವೂ ನಾನು ಧರ್ಮಕ್ಕೆ ಶರಣು ಹೋಗುತ್ತೇನೆ. |
| ತತಿಯಂ ಪಿ ಸಂಘಂ ಸರಣಂ ಗಚ್ಛಾಮಿ | | ಮೂರನೇ ಸಲವೂ ನಾನು ಸಂಘಕ್ಕೆ ಶರಣು ಹೋಗುತ್ತೇನೆ. |

ತ್ರಿಸರಣವನ್ನು ಧಮ್ಮ ದೀಕ್ಷೆ, ಬುದ್ಧ ವಂದನೆ, ವಿಶೇಷ ಕಾರ್ಯಕ್ರಮಗಳು ಹೀಗೆ ಸಾಮಾನ್ಯವಾಗಿ ಎಲ್ಲಾ ಸಂದರ್ಭಗಳಲ್ಲಿಯೂ ಹೇಳಿ ಮುಂದೆ ಸಂಬಂಧಿಸಿದ ವಿಧಿಗಳನ್ನು ಅದರ ಪಾಠಗಳನ್ನು ಹೇಳುವ ರೂಢಿ ಇರುತ್ತದೆ.

**2) ಪಂಚ ಶೀಲಗಳು :**

| | ಪಾಲಿ ಪಠ್ಯ | | ಕನ್ನಡ ಅನುವಾದ |
|---|---|---|---|
| 1. | ಪಾಣಾತಿಪಾತಾ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ. | : | ನಾನು ಪ್ರಾಣಹತ್ಯೆ ಮಾಡುವುದರಿಂದ ವಿತರನಾಗುವ ಶಿಕ್ಷಾಪದವನ್ನು ಕೈಗೊಳ್ಳುತ್ತೇನೆ. |
| 2. | ಅದಿನ್ನಾದಾನಾ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ. | : | ನಾನು ಕಳ್ಳತನ ಮಾಡುವುದರಿಂದ ವಿತರನಾಗುವ ಶಿಕ್ಷಾಪದವನ್ನು ಕೈಗೊಳ್ಳುತ್ತೇನೆ. |
| 3. | ಕಾಮೇಸು ಮಿಚ್ಛಾಚಾರಾ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ | : | ನಾನು ಕಾಮಗಳಲ್ಲಿ ಮಿಥ್ಯಾಚಾರ (ವ್ಯಭಿಚಾರ) ದಿಂದ ವಿತರನಾಗುವ ಶಿಕ್ಷಾಪದವನ್ನು ಕೈಗೊಳ್ಳುತ್ತೇನೆ. |
| 4. | ಮುಸಾವಾದಾ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ. | : | ನಾನು ಸುಳ್ಳು ಹೇಳುವುದರಿಂದ ವಿತರನಾಗುವ ಶಿಕ್ಷಾಪದವನ್ನು ಕೈಗೊಳ್ಳುತ್ತೇನೆ. |

| | | |
|---|---|---|
| 5. | ಸುರಾಮೇರಯ ಮಜ್ಜ ಪಮಾದಟ್ಠಾನಾ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ. | : ಸುರೆ, ಹೆಂಡ ಮುಂತಾದ ಮಾದಕ ಪದಾರ್ಥಗಳಿಂದಾಗಿ ಪ್ರಮತ್ತನಾಗುವುದರಿಂದ ವಿರತನಾಗುವ ಶಿಕ್ಷಾ ಪದವನ್ನು ಕೈಗೊಳ್ಳುತ್ತೇನೆ. |

### 3) ಅಷ್ಟ ಶೀಲಗಳು (ಅಷ್ಟಾಂಗ ಮಾರ್ಗಗಳು) :

| | ಪಾಲಿ ಪಠ್ಯ | ಕನ್ನಡ ಅನುವಾದ |
|---|---|---|
| 1. | ಪಾಣಾತಿಪಾತಾ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ. | : ನಾನು ಪ್ರಾಣ ಹತ್ಯೆ ಮಾಡುವುದರಿಂದ ವಿತರನಾಗುವ ಶಿಕ್ಷಾ ಪದವನ್ನು ಕೈಗೊಳ್ಳುತ್ತೇನೆ. |
| 2. | ಅದಿನ್ನಾದಾನಾ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ. | : ನಾನು ಕಳ್ಳತನ ಮಾಡುವುದರಿಂದ ವಿತರನಾಗುವ ಶಿಕ್ಷಾ ಪದವನ್ನು ಕೈಗೊಳ್ಳುತ್ತೇನೆ. |
| 3. | ಅಬ್ರಹ್ಮಚರಿಯಾ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ | : ಅಬ್ರಹ್ಮಚರ್ಯೆಯಿಂದ ವಿತರನಾಗುವ ಶಿಕ್ಷಾ ಪದವನ್ನು ಕೈಗೊಳ್ಳುತ್ತೇನೆ. |
| 4. | ಮುಸಾವಾದಾ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ. | : ನಾನು ಸುಳ್ಳು ಹೇಳುವುದರಿಂದ ವಿತರನಾಗುವ ಶಿಕ್ಷಾ ಪದವನ್ನು ಕೈಗೊಳ್ಳುತ್ತೇನೆ. |
| 5. | ಸುರಾಮೇರಯ ಮಜ್ಜ ಪಮಾದಟ್ಠಾನಾ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ. | : ಸುರೆ, ಹೆಂಡ ಮುಂತಾದ ಮಾದಕ ಪದಾರ್ಥಗಳಿಂದಾಗಿ ಪ್ರಮತ್ತನಾಗುವುದರಿಂದ ವಿರತನಾಗುವ ಶಿಕ್ಷಾ ಪದವನ್ನು ಕೈಗೊಳ್ಳುತ್ತೇನೆ. |
| 6. | ವಿಕಾಲಭೋಜನಾ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ. | : ಅಕಾಲ ಭೋಜನದಿಂದ ವಿತರನಾಗುವ ಶಿಕ್ಷಾ ಪದವನ್ನು ಕೈಗೊಳ್ಳುತ್ತೇನೆ. |
| 7. | ನಚ್ಚ - ಗೀತ - ವಾದಿತ - ವಿಸೂಕದಸ್ಸನ - ಮಾಲಾಗಂಧ - ವಿಲೇಪನ - ಧಾರಣ ಮಣ್ಡನ - ವಿಭೂಸನಟ್ಠಾನಾ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ. | : ನೃತ್ಯ - ಗೀತೆ - ವಾದ್ಯ ಉತ್ಸವ ಪ್ರದರ್ಶನಗಳನ್ನು ನೋಡುವುದರಿಂದ, ಮಾಲಾ - ಗಂಧ - ಲೇಪನ - ಸೌಂದರ್ಯ ವರ್ಧಕ ಮತ್ತು ಅಲಂಕಾರಿಕ ವಸ್ತುಗಳನ್ನು ಧರಿಸುವುದರಿಂದ ವಿರತನಾಗುವ ಶಿಕ್ಷಾ ಪದವನ್ನು ಕೈಗೊಳ್ಳುತ್ತೇನೆ. |
| 8. | ಉಚ್ಚಾಸಯನ - ಮಹಾ ಸಯನ ವೇರಮಣೀ ಸಿಕ್ಖಾಪದಂ ಸಮಾಧಿಯಾಮಿ | : ಉನ್ನತವಾದ ಮತ್ತು ವಿಲಾಸಕರವಾದ ಆಸನಗಳನ್ನು ಉಪಯೋಗಿಸುವುದರಿಂದ ವಿರತನಾಗುವ ಶಿಕ್ಷಾ ಪದವನ್ನು ಕೈಗೊಳ್ಳುತ್ತೇನೆ. |

## 4) ಬುದ್ಧ ವಂದನ :

| | ಪಾಲಿ ಪಠ್ಯ | | ಕನ್ನಡ ಅನುವಾದ |
|---|---|---|---|
| 1. | ಇತಿ ಪಿ ಸೋ ಭಗವಾ ಅರಹಂ ಸಮ್ಮಾ ಸಂಬುದ್ಧೋ ವಿಜ್ಜಾ ಚರಣ ಸಂಪನ್ನೋ ಸುಗತೋ ಲೋಕವಿದೂ ಅನುತ್ತರೋ ಪುರಿಸ ಧಮ್ಮಸಾರಥೀ ಸತ್ಥಾ ದೇವಮನುಸ್ಸಾನಂ ಬುದ್ಧೋ ಭಗವಾ'ತಿ ನಮೋ ತಸ್ಸ ಸಮ್ಮಾಸಂಬುದ್ಧಸ್ಸ! | : | ಭಗವಂತರು ಇಂತಿರುವರು : ಅರ್ಹಂತರೂ, ಸಮ್ಯಕ್ ಸಂಬುದ್ಧರೂ, ವಿದ್ಯಾಚರಣ ಸಂಪನ್ನರೂ, ಸುಗತರೂ, ಲೋಕಜ್ಞಾನಿಗಳೂ, ವ್ಯಕ್ತಿಗಳನ್ನು ಪಳಗಿಸುವ ಅಸಮಾನ ಮಾರ್ಗದರ್ಶಿಗಳೂ, ದೇವತೆಗಳಿಗೆ ಹಾಗೂ ಮಾನವರಿಗೆ ಗುರು ಬುದ್ಧರು ಆ ಸಮ್ಯಕ್ ಸಂಬುದ್ಧರಿಗೆ ನಮನಗಳು. |
| 2. | ಯೇಚ ಬುದ್ಧಾ ಅತೀತಾ ಚ ಯೇಚ ಬುದ್ಧಾ ಅನಾಗತಾ, ಪಚ್ಚುಪ್ಪನ್ನಾಚಯೇ ಬುದ್ಧಾ ಅಹಂ ವನ್ದಾಮಿ ಸಬ್ಬದಾ. | : | ಹಿಂದೆ ಬಂದು ಹೋದ ಬುದ್ಧರೆಲ್ಲರಿಗೂ, ಮುಂದೆಬರಲಿರುವ ಬುದ್ಧರೆಲ್ಲರಿಗೂ ಮತ್ತು ವರ್ತಮಾನದಲ್ಲಿರುವ ಬುದ್ಧರೆಲ್ಲರಿಗೂ, ನಾನು ಯಾವಾಗಲೂ ನಮಸ್ಕರಿಸುತ್ತೇನೆ. |
| 3. | ನತ್ಥಿಮೇ ಸರಣಂ ಅಞ್ಞಂ ಬುದ್ಧೋಮೆ ಸರಣಂ ವರಂ, ಏತೇನ ಸಚ್ಚ ವಜ್ಜೇನ ಹೋತು ಮೇ ಜಯಮಙ್ಗಳಂ | : | ಬೇರೆಲ್ಲೂ ನನಗೆ ರಕ್ಷಣೆಯಿಲ್ಲ; ಬುದ್ಧರು ನನ್ನ ಶ್ರೇಷ್ಠ ರಕ್ಷಕರು. ಈ ಸತ್ಯ ವಚನದಿಂದ ನನಗೆ ಜಯಮಂಗಳವಾಗಲಿ. |
| 4. | ಉತ್ತಮಙ್ಗೇನ ವನ್ದೇ' ಹಂ ಪಾದಪಂಸು ವರುತ್ತಮಂ, ಬುದ್ಧೇ ಯೋ ಖಲಿತೋ ದೋಸೋ ಬುದ್ಧೋ ಖಮತು ತಂ ಮಮಂ | : | ಅವರ ಪವಿತ್ರ ಪಾದಧೂಳಿಯನ್ನು ನನ್ನ ಶಿರಸ್ಸಿನಿಂದ ನಾನು ವಂದಿಸುತ್ತೇನೆ. ನಾನೇನಾದರೂ ಬುದ್ಧರಲ್ಲಿ ಎಸಗಿದ ತಪ್ಪಿದ್ದರೆ ಬುದ್ಧರು ನನ್ನನ್ನು ಕ್ಷಮಿಸಲಿ. |
| 5. | ಬುದ್ಧಂ ಯಾವ ನಿಬ್ಬಾಣ ಪರಿಯಂತಂ ಸರಣಂ ಗಚ್ಛಾಮಿ | : | ನಾನು ನಿಬ್ಬಾಣ ಸಾಧಿಸುವವರೆಗೂ ಬುದ್ಧರಲ್ಲಿ ಶರಣು ಹೋಗುತ್ತೇನೆ. |

## 5) ಧಮ್ಮ ವಂದನ :

| | ಪಾಲಿ ಪಠ್ಯ | | ಕನ್ನಡ ಅನುವಾದ |
|---|---|---|---|
| 1. | ಸ್ವಾಕ್ಖಾತೋ ಭಗವತಾ ಧಮ್ಮೋ, ಸನ್ದಿಟ್ಠಿಕೋ ಅಕಾಲಿಕೋ ಏಹಿಪಸ್ಸಿಕೊ ಓಪನಯಿಕೋ ಪಚ್ಚತ್ತಂ ವೇದಿತಬ್ಬೋ | : | ಭಗವಂತರಿಂದ ಸಂಬೋಧಿತವಾದ ಧರ್ಮವು ಸಮ್ಯಕ್ ದೃಷ್ಟಿಯುಳ್ಳದ್ದು ತತ್‌ಕ್ಷಣವೇ ಫಲವನ್ನು ತರುವಂಥಾದ್ದು 'ಬಂದು ನೋಡಿ' ಎಂದು |

| | | |
|---|---|---|
| | ವಿಞ್ಞೂಹೀ'ತಿ. ನಮೋ ತಸ್ಸ ನಿಯಾನಿಕಸ್ಸ ಧಮ್ಮಸ್ಸ! | ಆಹ್ವಾನಿಸುವಂಥಾದ್ದು ಊರ್ಧ್ವಮುಖವಾಗಿ ನಡೆಸುವಂಥಾದ್ದು ಜ್ಞಾನಿಯಾದ ಪ್ರತಿಯೊಬ್ಬನೂ ತಾನೇ ತಿಳಿದುಕೊಳ್ಳುವಂಥಾದ್ದು, ನಿರ್ವಾಣದೆಡೆಗೆ ನಡೆಸುವ ಆ ಧಮ್ಮಕ್ಕೆ ನಮನಗಳು. |
| 2. | ಯೇ ಚ ಧಮ್ಮಾ ಅತೀಚಾ ಚ, ಯೇಚ ಧಮ್ಮಾ ಅನಾಗತಾ, ಪಚ್ಚುಪ್ಪನ್ನಾಚಯೇ ಧಮ್ಮಾ ಅಹಂ ವನ್ದಾಮಿ ಸಬ್ಬದಾ : | ಹಿಂದೆ ಬಂದು ಹೋದ ಧರ್ಮಗಳಿಗೂ ಮುಂದೆ ಬರಲಿರುವ ಧರ್ಮಗಳಿಗೂ, ಪ್ರಕೃತದಲ್ಲಿರುವ ಧರ್ಮಗಳಿಗೂ ನಾನು ಯಾವಾಗಲೂ ನಮಸ್ಕರಿಸುತ್ತೇನೆ. |
| 3. | ನತ್ಥಿ ಮೆ ಸರಣಂ ಅಞ್ಞಂ ಧಮ್ಮೋ ಮೇ ಸರಣಂ ವರಂ, ಏತೇನ ಸಚ್ಚ ವಜ್ಜೇನ ಹೋತು ಮೆ ಜಯಮಂಗಳಂ : | ಬೇರೆಲ್ಲೂ ನನ್ನ ರಕ್ಷಣೆಯಿಲ್ಲ; ಧರ್ಮವು ನನ್ನ ಶ್ರೇಷ್ಠ ರಕ್ಷಣೆ. ಈ ಸತ್ಯ ವಚನದಿಂದ ನನಗೆ ಜಯ ಮಂಗಳವಾಗಲಿ. |
| 4. | ಉತ್ತಮಙ್ಗೇನ ವನ್ದೇ' ಹಂ ಧಮ್ಮಂ ಚ ತಿವಿಧಂ ವರಂ, ಧಮ್ಮೇ ಯೋ ಖಲಿತೋ ದೋಸೋ ಧಮ್ಮೋ ಖಮತು ತಂ ಮಮಂ : | ತ್ರಿವಿಧವಾದ ಹಾಗೂ ಶ್ರೇಷ್ಠವಾದ ಧರ್ಮವನ್ನು ನಾನು ಶಿರಸ್ಸಿನಿಂದ ವಂದಿಸುತ್ತೇನೆ. ನಾನೇನಾದರೂ ಧರ್ಮಕ್ಕೆ ಅಪಚಾರವೆನ್ನಸಗಿದ್ದರೆ ಧರ್ಮವು ನನ್ನನ್ನು ಕ್ಷಮಿಸಲಿ ! |
| 5. | ಧಮ್ಮಂ ಯಾವ ನಿಬ್ಬಾಣ ಪರಿಯಂತಂ ಸರಣಂ ಗಚ್ಛಾಮಿ : | ನಿಬ್ಬಾಣ ಪಡೆಯುವವರೆಗು ಧರ್ಮಕ್ಕೆ ಶರಣು ಹೋಗುತ್ತೇನೆ. |

## 6) ಸಂಘ ವಂದನ :

| | ಪಾಲಿ ಪಠ್ಯ | ಕನ್ನಡ ಅನುವಾದ |
|---|---|---|
| 1. | ಸೂಪಟಿಪನ್ನೋ ಭಗವತೋ ಸಾವಕ ಸಂಘೋ, ಉಜೂ ಪಟಿಪನ್ನೋ ಭಗವತೋ ಸಾವಕಸಂಘೋ, ಞಾಯಪಟಿಪನ್ನೋ ಭಗವತೋ ಸಾವಕ ಸಂಘೋ, ಸಾಮೀಚಿ ಪಟಿಪನ್ನೋ ಭಗವತೋ ಸಾವಕ ಸಂಘೋ, ಯದಿದಂ ಚತ್ತಾರಿ ಪುರಿಸ ಯುಗಾನಿ ಅಟ್ಠಪುರಿಸ ಪುಗ್ಗಲಾ ಏಸ ಭಗವತೋ ಸಾವಕಸಂಘೋ, ಆಹುಣೆಯ್ಯೋ ಪಾಹುಣೆಯ್ಯೋ ದಕ್ಖಿಣೆಯ್ಯೊ ಅಞ್ಜಲಿ ಕರಣೀಯೋ ಅನುತ್ತರಂ ಪುಞ್ಞಕ್ಖೆತ್ತಂ : | ಸುಚಾರಿತ್ರದಿಂದ ಕೂಡಿದುದು ಭಗವಂತರ ಶ್ರಾವಕ ಸಂಘ. ಋಜು ಚಾರಿತ್ರದಿಂದ ಕೂಡಿದುದು ಭಗವಂತರ ಶ್ರಾವಕ ಸಂಘ. ನ್ಯಾಯದಿಂದ ಕೂಡಿದುದು ಭಗವಂತರ ಶ್ರಾವಕ ಸಂಘ, ಸ್ವಾಮಿ ಚಾರಿತ್ರದಿಂದ ಕೂಡಿದುದು ಭಗವಂತರ ಶ್ರಾವಕ ಸಂಘ, ಭಗವಂತರ ಈ ಶ್ರಾವಕ ಸಂಘವು ಯಾವುವೆಂದರೆ : ನಾಲ್ಕು ವ್ಯಕ್ತಿ ಯುಗ್ಮಗಳು ಮತ್ತು ಎಂಟು ವ್ಯಕ್ತಿಗಳಿಂದ ಕೂಡಿದ ಸಂಘ ತ್ಯಾಗಕ್ಕೆ ಅರ್ಹವಾದುದು. ಸತ್ಕಾರಕ್ಕೆ ಅರ್ಹವಾದುದು. |

| | | | |
|---|---|---|---|
| | ಲೋಕಸ್ಸಾ'ತಿ. ನಮೋ ತಸ್ಸ ಅಟ್ಠ ಅರಿಯ ಪುಗ್ಗಲಾ ಮಹಾ ಸಂಘಸ್ಸ! | | ದಾನಕ್ಕೆ ಅರ್ಹವಾದುದು, ನಮಸ್ಕಾರಕ್ಕೆ ಅರ್ಹವಾದುದು. ಲೋಕದಲ್ಲಿ ಅಸಮಾನವಾದ ಒಂದು ಪುಣ್ಯಕ್ಷೇತ್ರ. ಎಂಟು ಅರಿಯ ವ್ಯಕ್ತಿಗಳಿಂದ ಕೂಡಿದ ಆ ಮಹಾ ಸಂಘಕ್ಕೆ ನಮನಗಳು. |
| 2. | ಯೇ ಚ ಸಂಘ ಅತೀತಾಚ, ಯೇ ಚ ಸಂಘಾ ಅನಾಗತ, ಪಚ್ಚುಪ್ಪನ್ನಾಚಯೇ ಸಂಘಾ, ಅಹಂ ವನ್ದಾಮಿ ಸಬ್ಬದಾ | : | ಹಿಂದೆ ಬಂದು ಹೋದ ಸಂಘಗಳಿಗೂ, ಮುಂದೆ ಬರಲಿರುವ ಸಂಘಗಳಿಗೂ, ಪ್ರಕೃತದ ಸಂಘಗಳಿಗೂ ನಾನು ಯಾವಾಗಲೂ ನಮಸ್ಕರಿಸುತ್ತೇನೆ. |
| 3. | ನತ್ಥಿಮೇ ಸರಣಂ ಅಞ್ಞಂ, ಸಂಘೋಮೇ ಸರಣಂ ವರಂ, ಏತೇನ ಸಚ್ಚ ವಜ್ಜೇನ ಹೋತು ಮೇ ಜಯಮಂಗಳಂ | : | ಬೇರೆಲ್ಲೂ ನನಗೆ ರಕ್ಷಣೆ ಇಲ್ಲ, ಸಂಘವೇ ನನ್ನ ರಕ್ಷಣೆ ಈ ಸತ್ಯ ವಚನದಿಂದ ನನಗೆ ಜಯಮಂಗಳವಾಗಲಿ! |
| 4. | ಉತ್ತಮಙ್ಗೇನವನ್ದೇಹಂ ಸಂಘಂಚ ತಿವಿಧೋತ್ತಮಂ, ಸಂಘೇಯೋ ಖಲಿತೋ ದೋಸೋ ಸಂಘೋ ಖಮತು ತಂ ಮಮಂ | : | ತ್ರಿವಿಧದಲ್ಲಿ ಉತ್ತಮವಾಗಿರುವ ಸಂಘವನ್ನು ನಾನು ಶಿರಸ್ಸಿನಿಂದ ವಂದಿಸುತ್ತೇನೆ. ನಾನೇನಾದರೂ ಸಂಘಕ್ಕೆ ಅಪಚಾರವನ್ನೆಸಗಿದ್ದರೆ ಸಂಘವು ನನ್ನನ್ನು ಕ್ಷಮಿಸಲಿ! |
| 5. | ಸಂಘಂ ಯಾವ ನಿಬ್ಬಾಣ ಪರಿಯನ್ತಂ ಸರಣಂ ಗಚ್ಛಾಮಿ | : | ನಿಬ್ಬಾಣ ಪಡೆಯುವವರೆಗೂ ಸಂಘಕ್ಕೆ ಶರಣು ಹೋಗುತ್ತೇನೆ. |

7) **ಸರ್ವ ಮಂಗಳ ಗಾಥಾ :**

| | ಪಾಲಿ ಪಠ್ಯ | | ಕನ್ನಡ ಅನುವಾದ |
|---|---|---|---|
| 1. | ಏತ್ತಾವತಾ ಚ ಅಮ್ಹೇಹಿ ಸಮ್ಭತ ಪುಞ್ಞಸಮ್ಪದಂ | : | ನಮ್ಮಿಂದ ಈ ರೀತಿ ಕೂಡಿಸಲ್ಪಟ್ಟ ಪುಣ್ಯ ಸಂಪದವನ್ನು ಎಲ್ಲ ಸಂಪತ್ತಿನ ಸಿದ್ಧಿಗಾಗಿ ಎಲ್ಲ ಜೀವಿಗಳೂ ಹಂಚಿಕೊಳ್ಳಲಿ. (ಈ ಪರಿಕಲ್ಪನೆಯು ಶರಣರ 'ದಾಸೋಹ' ಪರಿಕಲ್ಪನೆಯನ್ನು ನಮ್ಮ ಸ್ಮರಣೆಗೆ ತರುತ್ತದೆ. |

## 8) ಧಮ್ಮ ಪಾಲನ ಗಾಥಾ :

| ಪಾಲಿ ಪಠ್ಯ | | ಕನ್ನಡ ಅನುವಾದ |
|---|---|---|
| ಸಬ್ಬ ಪಾಪಸ್ಸ ಅಕರಣಂ, ಕುಸಲಸ್ಸ ಉಪ ಸಂಪದಾ।<br>ಸಚಿತ್ತ ಪರಿಯೋದಪನಂ, ಏತಂ ಬುದ್ಧಾನು ಸಾಸನಂ ॥<br>ಧಮ್ಮಂ ಚರೆ ಸುಚರಿತಂ, ನತಂ ದುಚರಿತಂ ಚರೆ।<br>ಧಮ್ಮಚಾರಿ ಸುಖಂ ಸೇತಿ ಅಸ್ಮಿಲೋಕೆ ಮರವ ಹಿ ಚ ॥ | : | ಸರ್ವ ಪಾಪಕಾರ್ಯ ಮಾಡದಿರುವುದು, ಕುಶಲವಾದುದನ್ನೇ ಸಂಪಾದಿಸುವುದು, ಚಿತ್ತ ಪರಿಶುದ್ಧ ಹೊಂದುವುದು, ಇದೇ ಬುದ್ಧರ ಶಾಸನ. ಸುಚರಿತ್ರೆಯನ್ನು ಹೊಂದಿ ಧಮ್ಮದಲ್ಲಿ ನಡೆಯಿರಿ. ದುಷ್ಟ ಚರಿತ್ರೆಯುಳ್ಳವರಾಗಿ ನಡೆಯಬೇಡಿರಿ. ಕಾರಣ ದಮ್ಮವನ್ನು ಆಚರಿಸುವರು ಸುಖವನ್ನೇ ಪಡೆಯುತ್ತಾರೆ. ಅದರಿಂದ ಲೋಕಕ್ಕೂ ಹಿತವಾಗುತ್ತದೆ. |

## 9) ರಥನ ಸುತ್ತ :

| ಪಾಲಿ ಪಠ್ಯ | | ಕನ್ನಡ ಅನುವಾದ |
|---|---|---|
| 1. ಯಾನೀಧ ಭೂತಾನಿ ಸಮಾಗತಾನಿ<br>ಭುಮಾಮನಿ ವಾ ಯಾನಿ ವಾ ಅನ್ತಲಿಕ್ಖೇ<br>ಸಬ್ಬೇವ ಭೂತಾ ಸುಮನಾ ಬವನ್ತು<br>ಅಥೋ ಪಿ ಸಕ್ಕಚ್ಚ ಸುಣನ್ತು ಭಾಸಿತಂ। | : | ಇಲ್ಲಿ ಯಾವ ಭೂತ ಗಣಗಳು ನೆರೆದಿವೆಯೋ, ಭೂಮಿಯಲ್ಲಾಗಲೀ ಅಥವಾ ಅಂತರಿಕ್ಷದಲ್ಲಿಯಾಗಲೀ ಇರುವ ಎಲ್ಲ ಭೂತಗಳೂ ನಿರ್ಮಲ ಚಿತ್ತರಾಗಲಿ ಮತ್ತು ಹೇಳಿದುದನ್ನು ಮನಸ್ಸಿಟ್ಟು ಕೇಳಲಿ. |
| 2. ತಸ್ಮಾಹಿ ಭೂತಾ ನಿಸಾಮೇಥ ಸಬ್ಬೇ<br>ಮೆತ್ತಂ ಕರೋಥ ಮಾನುಸಿಯಾ ಪಜಾಯ,<br>ದಿವಾ ಚ ರತ್ತೋ ಚ ಹರನ್ತಿಯೋ ಬಲಿಂ<br>ತಸ್ಮಾ ಹಿ ನೆ ರಕ್ಖಥ ಅಪ್ಪಮತ್ತಾ। | | ಎಲ್ಲೆ ಭೂತಗಣಗಳೇ, ಎಲ್ಲರೂ ಸರಿಯಾಗಿ ಕೇಳಿರಿ. ಮಾನವನು ನಿಮಗೆ ಹಗಲು ಮತ್ತು ರಾತ್ರಿಗಳಲ್ಲಿ ಬಲಿಯನ್ನು ಅರ್ಪಿಸುವುದರಿಂದ ಅವರ ಬಗ್ಗೆ ನಿಕಾರ ಮೈತ್ರಿಯನ್ನು ತೋರಿಸಿ ಮತ್ತು ಜಾಗರೂಕತೆಯಿಂದ ಅವರನ್ನು ಕಾಪಾಡಿ.* |

---

* 1 ರಿಂದ 9 ರ ವರೆಗೆ ಪ್ರಸ್ತಾಪಿಸಿದ ಆಚರಣೆಗಳ ಪಾಲಿಪಠ್ಯದ ಕನ್ನಡಾನುವಾದವನ್ನು ಶ್ರೀ ವೈ.ಬಿ. ನಂದನ ಇವರ "ಬೌದ್ಧ ಆಚರಣೆ" ಎಂಬ ಹೊತ್ತಿಗೆಯಿಂದ ಬಳಸಿಕೊಳ್ಳಲಾಗಿದೆ.

**10) ಜಪ :**

| ಪಾಲಿ ಪಠ್ಯ | | ಕನ್ನಡ ಅನುವಾದ |
|---|---|---|
| ಓಂ ಮಣಿ ಪದ್ಮಮೇ ಹ್ಞಂ! | : | ತಾವರೆಯಲ್ಲಿ ರತ್ನವರಳಲಿ ಅದಕ್ಕೆ ಜಯವಾಗಲಿ. |

ಇದು 'ಅಪಾಯದಿಂದ ಪಾರು ಮಾಡುವ ರಕ್ಷಕನಾಗಿ ಉದಿಸಿದ 'ಅವಲೋಕಿತ' ರ ಕುರಿತಾದ ಒಂದು ಪ್ರಾರ್ಥನೆ. ಈ ಮಂತ್ರದ ಪುನರಪಿ ಉಚ್ಚರಣೆಯಿಂದ ಅಪಾಯಗಳಿಂದ ರಕ್ಷಣೆ ದೊರೆಯುತ್ತದೆ ಎಂಬ ವಾಡಿಕೆ. ಈ ಮಂತ್ರವನ್ನು 'ಮಹಾಯಾನ' ಬೌದ್ಧ ಪಂಥದಲ್ಲಿ ವಿಫುಲವಾಗಿ ಬಳಸುತ್ತಾರೆ. ಈ ಪ್ರಾಥನಾ ಮಂತ್ರವನ್ನು ಶಿಲೆಗಳ ಮೇಲೆ ಪ್ರಾರ್ಥನಾ ಚಕ್ರಗಳ ಮೇಲೆ, ಧ್ಯಾನ ಮಣಿಗಳ ಮೇಲೆ, ಸ್ತೂಪಗಳ ಗೋಡೆಗಳ ಮೇಲೆ, ಕೆತ್ತಿಸಿರುವುದನ್ನು ಕಾಣಬಹುದಾಗಿದೆ'[37]

ಇಲ್ಲಿ ತಾವರೆಯಲ್ಲಿ ರತ್ನವರಳಲಿ ಎಂದರೆ, 'ಭೌತಿಕವಾಗಿ ರತ್ನವಲ್ಲ'. 'ಧಮ್ಮದ ಆಚರಣೆಯಿಂದ ಶ್ರೇಷ್ಠತೆಯು ಅರಳಲಿ' ಎಂಬುದು. ಇಲ್ಲಿ 'ತಾವರೆ' ಒಳ್ಳೆಯ ಮನಸ್ಸಿಗೆ ಹೋಲಿಕೆಯಾಗಿದೆ. ಅಂದರೆ 'ಒಳ್ಳೇಯ ಮನಸ್ಸಿನಲ್ಲಿನ ಶ್ರೇಷ್ಠತೆಗಳಿಗೆ ಜಯವಾಗಲಿ' ಎಂಬ ಅರ್ಥ ಬರುತ್ತದೆ. ಬೌದ್ಧ ನಂಬಿಕೆಗಳಿಗೆ ಸಂಬಂಧಿಸಿದಂತೆ 'ಗೌತಮನ ಶಾಸನದಲ್ಲಿ ದೃಢ ಮನಸ್ಕರಾಗಿ ತಮ್ಮನ್ನು ತಾವು ನಿಯೋಜಿಸಿಕೊಂಡಿರುತ್ತಾರೋ ಅವರು ಅಮೃತತ್ವದಲ್ಲಿ ಮುಳುಗಿ ಪಡೆಯಬೇಕಾದುದನ್ನು ಪಡೆದವರಾಗಿರುತ್ತಾರೆ.' ಅವರು ಪರಮೋಚ್ಚವಾದ ಶಾಂತಿಯನ್ನು ಅನುಭವಿಸುತ್ತಾರೆ. ಇದು ಸಂಘದಲ್ಲಿನ ಶ್ರೇಷ್ಠ ರತ್ನ[38] ಎಂದು ವಿವರಿಸಲಾಗಿದೆ.

ಬಿಜಾಪುರ ಜಿಲ್ಲೆಯ ಬಿಜ್ಜರಗಿಯ 'ರಮಾಯಿ ಸ್ಮೃತಿ ಬೌದ್ಧ ವಿಹಾರ' ದಲ್ಲಿ ಸೊಗೇಂಜಿ ಸೂತ್ರಗಳನ್ನು[39] (Sogenji Sutras) ಹೇಳುವ ಪರಿಪಾಠವಿದೆ. ಈ ಕೈಪಿಡಿಯಲ್ಲಿ 48 ಕ್ಕಿಂತ ಹೆಚ್ಚು ಸೂತ್ರಗಳಿವೆ. ಇವುಗಳಲ್ಲಿ ಕೆಲವನ್ನು ಸಂದರ್ಭಾನುಸಾರವಾಗಿ ಹೇಳುವುದಾಗಿ ಉಪಾಸಕ ಶ್ರೀ ಶಂಕರ ಅವರು ತಿಳಿಸುತ್ತಾರೆ. ಇಲ್ಲಿನ ದಲಿತ ಬೌದ್ಧ ಉಪಾಸಕರು 'ಝೆನ್' ಪರಂಪರೆಯ ಬೌದ್ಧ ಬಿಕ್ಕುಗಳ ಸಂಪರ್ಕಕ್ಕೆ ಬಂದಿರುವುದು ಕಂಡು ಬರುತ್ತದೆ. ಬಿಜಾಪುರ ನಗರದಲ್ಲಿರುವ ಸಾರಿಪುತ್ರ ಬೌದ್ಧ ವಿಹಾರದ ಪಕ್ಕದಲ್ಲಿರುವ 'ಒಂದು ಹನಿ ಧ್ಯಾನ ಕೇಂದ್ರ' (One Drop Meditation Centre) ವನ್ನು ಝೆನ್ ಬೌದ್ಧ ತಜ್ಞರಾದ ಜಪಾನಿನ ಒರೆಯಾಮ ನಗರದ ಬೋಧಿಶೆನ್ ಕೈ ಸೊಗೇಂಜಿ ಬೌದ್ಧ ವಿಹಾರದ ಝೆನ್ ಮಾಸ್ಟರ್ ಬಿಕ್ಕು ಶೋದೊ ಹರದಾರವರು 24-08-2003 ರಂದು ಉದ್ಘಾಟಿಸಿದ್ದಾರೆ.

ಝೆನ್ ಬೌದ್ಧ ಆಧ್ಯಾತ್ಮಿಕ ಸಿದ್ಧಾಂತದ ಪ್ರಕಾರ ಪ್ರಜ್ಞೆ (Self) ಮತ್ತು ಬುದ್ಧತ್ವ (Englightenedhood) ಎರಡೂ ಒಂದೇ. 'ಬುದ್ಧನ ಮನಸ್ಸೇ ನಮ್ಮ ಮನಸ್ಸು' ನಾವು ಮಲಗುವುದು, ಎಚ್ಚರಾಗುವುದು, ಊಟ ಮಾಡುವುದು, ಕೆಲಸ ಮಾಡುವುದು ಪ್ರಜ್ಞೆಯಿಂದಲೇ ಅದು ಬುದ್ಧನೇ ಆಗಿರುತ್ತದೆ. ಆದ್ದರಿಂದ ಈ ಸೂತ್ರಗಳ ಉಚ್ಚರಣೆಯ ಫಲ ಇನ್ನು ಮುಂದುವರೆದು ವಿವರಿಸುವುದಾದರೆ ನಮ್ಮ ಕಿವಿಗಳು,

ಬಾಯಿ, ಧ್ವನಿ, ಮನಸ್ಸು ಒಂದೇ ಆಗಿ ನೆಲೆಗೊಳ್ಳುವಂತೆ ಮಾಡುತ್ತವೆ. ಅಂತರಪ್ರಜ್ಞೆಯು ವಿಶ್ವಪ್ರಜ್ಞೆಯೊಂದಿಗೆ ಸಮಾಧಿಸ್ಥವಾಗುತ್ತದೆ[40].

ಅಧ್ಯಯನಕಾರನು ಕ್ಷೇತ್ರ ಕಾರ್ಯ ಮಾಡಿದ ಸಂದರ್ಭದಲ್ಲಿ ಹಾಗೂ ಅಂಚೆ ಮೂಲಕ ಸಂದರ್ಶಿಸಿದ ಬೌದ್ಧ ವಿಹಾರ, ಸಂಘ ಸಂಸ್ಥೆಗಳು, ಉಪಾಸಕ - ಉಪಾಸಕಿಯರು ಅನುಸರಿಸುತ್ತಿರುವ ಬೌದ್ಧ ಆಚರಣೆಗಳನ್ನು ಸ್ವಲ್ಪದರಲ್ಲಿ ವಿಶ್ಲೇಷಿಸಿವುದು ಅಗತ್ಯವಿದೆ. ಹಾಗೆ ವಿಶ್ಲೇಷಣೆ ಮಾಡುವಾಗ ನಾವು ಹಲವಾರು ಸೂಕ್ಷ್ಮ ಗೆರೆಗಳನ್ನು ಗಮನಿಸಬೇಕಾಗುತ್ತದೆ. ಈಗಾಗಲೇ ಹೇಳಿದಂತೆ

1. ಉತ್ತರ ಕರ್ನಾಟಕದ ದಲಿತ ಬೌದ್ಧರು, ವಿಹಾರಗಳು, ಸಾಮಾನ್ಯವಾಗಿ ಮಹಾರಾಷ್ಟ್ರ ಮಾದರಿಯ ಡಾ. ಅಂಬೇಡ್ಕರ್‌ರವರು ಪ್ರತಿಪಾದಿಸಿದ ಸಂಕ್ಷಿಪ್ತ ಬೌದ್ಧ ಆಚರಣೆಗಳ ಪ್ರಭಾವ ಎದ್ದು ಕಾಣುತ್ತದೆ.

2. ದಕ್ಷಿಣ ಕರ್ನಾಟಕದಲ್ಲಿ ಮಹಾಬೋಧಿ ಸೊಸೈಟಿಯ ಮಹಾಯಾನ ಪರಂಪರೆಯ ಥೇರಾವಾದ ಆಚರಣೆಗಳ ಪ್ರಭಾವ ಕಂಡುಬರುತ್ತದೆ.

ಆದಾಗ್ಯೂ ಸಹ ಕರ್ನಾಟಕದ ಎಲ್ಲಾ ವಿಹಾರಗಳಲ್ಲಿ ಬೌದ್ಧರಲ್ಲಿ ಅಂಬೇಡ್ಕರ್‌ರವರ ಬೌದ್ಧ ಧರ್ಮದ ಕುರಿತ ಪರಿಕಲ್ಪನೆಗಳ, ತಾತ್ವಿಕ ದರ್ಶನಗಳ, ಆಚರಣಾತ್ಮಕ ಪ್ರಭಾವವನ್ನು ಬೌದ್ಧೀಯತೆಯ ತಳಹದಿಯನ್ನು ಕಾಣುತ್ತೇವೆ. ಕರ್ನಾಟಕದ ಯಾವ ಬಿಕ್ಕುಗಳು ಅಂಬೇಡ್ಕರ್‌ರವರು ಪ್ರತಿಪಾದಿಸಿದ ವಿಚಾರಗಳಲ್ಲಿ ಯಾವುದೇ ಭಿನ್ನವಾದ ಅಭಿಪ್ರಾಯ ಹೊಂದಿರುವುದಿಲ್ಲ. ಮಹಾಬೋಧಿ ಸೊಸೈಟಿಯ ಬಗ್ಗೆ ದಲಿತ ಮುಖಂಡರುಗಳಲ್ಲಿ ಕೆಲವು ವಿಷಯಗಳ ಬಗ್ಗೆ ಭಿನ್ನ ಭಿನ್ನನೆಲೆಯ ಅನಿಸಿಕೆಗಳಿದ್ದರೂ ಸಹಿತ ಅವು ಅಷ್ಟೊಂದು ಮಹತ್ವಪಡೆದವುಗಳಾಗಿರುವದಿಲ್ಲ. ಕಾರ್ಯನೀತಿಯಲ್ಲಿ, ಅನುಷ್ಠಾನ ಮಾರ್ಗದಲ್ಲಿ, ನಾವು ಏಕಮುಖಿಯಾದ ಸ್ವರೂಪವನ್ನು ಕಾಣಲು ಎಲ್ಲಿಯೂ ಸಾಧ್ಯವಾಗುವದಿಲ್ಲ. ಸಣ್ಣ ಸ್ವರೂಪದ ತಾತ್ವಿಕ ಭಿನ್ನಾಭಿಪ್ರಾಯಗಳು ಇವೆಯಾದರೂ ಕರ್ನಾಟಕದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನ ಮತ್ತು ದಲಿತರ ಅಭಿವೃದ್ಧಿಯ ಬಗ್ಗೆ ವಿಮೋಚನೆಯ ಬಗ್ಗೆ ಒಂದೇ ತೆರನಾದ ಕಾಳಜಿಗಳನ್ನು ಕಾಣಬಹುದಾಗಿದೆ. ಡಾ. ಅಂಬೇಡ್ಕರ್‌ರವರೇ ಸಾಂಪ್ರದಾಯಿಕ ಬೌದ್ಧ ಬಿಕ್ಕುಗಳ ಬಗ್ಗೆ ತಮ್ಮ ಕಠಿಣ ನಿಲುವುಗಳನ್ನು 'ಬುದ್ಧ ಮತ್ತು ಅವನ ಧಮ್ಮ' ಕೃತಿಯ ಮುನ್ನುಡಿಯಲ್ಲಿ ದಾಖಲಿಸಿದ್ದಾರೆ. ಆದರೆ ಕರ್ನಾಟಕದಲ್ಲಿರುವ ಎಲ್ಲ ವಿಹಾರಗಳು ಬೌದ್ಧ ಬಿಕ್ಕುಗಳು ದಲಿತ ಪರವಾದ ಕಾರ್ಯಚಟುವಟಿಕೆಗಳೊಂದಿಗೆ ಬೌದ್ಧ ಧಮ್ಮ ಪ್ರಸಾರ ಕಾರ್ಯದಲ್ಲಿ ನಿರತರಾಗಿರುವುದನ್ನು ಕಾಣುತ್ತೇವೆ. ಹೀಗಾಗಿ ಆಚರಣೆಗಳ ಸಂದರ್ಭಗಳಲ್ಲಿ ಭಿನ್ನಾಭಿಪ್ರಾಯಗಳು ಕಂಡು ಬಾರದೇ ಇರುವುದು ಬೌದ್ಧ ಧರ್ಮದ ಸಮನ್ವಯ ಮನೋಭೂಮಿಕೆಗೆ, ಶಕ್ತಿಗೆ ಹಿಡಿದ ಕನ್ನಡಿಯಾಗಿದೆ ಎಂದು ಹೇಳಬಹುದು. ಬುದ್ಧ ಧಮ್ಮ ಮತ್ತು ಸಂಘದ ಮುಂದೆ ಎಲ್ಲರು ಸಮಾನರು ಎಂಬುದು ಆಚರಣಾತ್ಮಕ ನೆಲೆಯಲ್ಲೂ ಕರ್ನಾಟಕದ ಬೌದ್ಧರಲ್ಲಿ ಕಂಡು ಬರುತ್ತಿದೆ.

ಮಹಾಬೋಧಿ ಸೊಸೈಟಿಯು ಕರ್ನಾಟಕದ ದಲಿತ ಬೌದ್ಧರ ಆಚರಣೆಗಳಿಗೆ ಮೊದಲಿನಿಂದಲೂ ಮಾರ್ಗದರ್ಶಕ ಕೇಂದ್ರವಾಗಿ ಕಾರ್ಯ ನಿರ್ವಹಿಸಿದೆ. ಕನ್ನಡದಲ್ಲಿ ಬೌದ್ಧ ಸಾಹಿತ್ಯ, ಬೌದ್ಧ ಸಾಂಸ್ಕೃತಿಕ

ಪರಿಕರಗಳನ್ನು ತಯಾರಿಸಿ ವಿತರಿಸುವಲ್ಲಿ ಪ್ರಮುಖ ಪಾತ್ರ ವಹಿಸಿದೆ. ಆಚಾರ್ಯ ಬುದ್ಧರಕ್ಷಿತರು ದಲಿತ ವರ್ಗದಿಂದ ಬಂದ ಬೌದ್ಧ ಬಿಕ್ಕುಗಳಿಗೆ ಮಹಾಬೋಧಿ ಸೊಸೈಟಿಯನ್ನು ಮುನ್ನಡೆಸಿಕೊಂಡು ಹೋಗುವ ಅವಕಾಶ ಕಲ್ಪಿಸಿದ್ದು ಕರ್ನಾಟಕದ ಬೌದ್ಧ ಚರಿತ್ರೆಯಲ್ಲಿ ಮಹತ್ವದ ಘಟನೆಯಾಗುತ್ತದೆ. ಸಹಜವಾಗಿಯೇ ಕರ್ನಾಟಕದ ದಲಿತ ಬೌದ್ಧರು ವಿಶೇಷವಾಗಿ ಹುಬ್ಬಳ್ಳಿ, ಧಾರವಾಡ, ಬೆಳಗಾವಿ, ಮೈಸೂರು, ಕೊಳ್ಳೆಗಾಲ, ಬೀದರ ಇತ್ಯಾದಿ ಭಾಗದ ಬೌದ್ಧರು ಮಹಾಬೋಧಿ ಸೊಸೈಟಿಯ ಸಂಪರ್ಕದಲ್ಲಿದ್ದಾರೆ. ಈ ಹಿನ್ನೆಲೆಯಲ್ಲಿ ಬಿಕ್ಕು ಆನಂದರವರ ಪ್ರಗತಿಪರ ಚಟುವಟಿಕೆಗಳನ್ನು ವ್ಯಾಪಕವಾಗಿ ಮೆಚ್ಚುವುದನ್ನು ಕಾಣುತ್ತೇವೆ. ಯಾರೇ ಬರಲಿ ಅವರಿಗೆ ಧಮ್ಮ ಮಾರ್ಗದರ್ಶನ ನೀಡಿ ಅವರ ವೈಯಕ್ತಿಕ ಜೀವನದ ಸಮಸ್ಯೆಗಳಿಗೆ ಪರಿಹಾರಗಳನ್ನು ಸೂಚಿಸಿ, ಸ್ಪಂದಿಸುವಲ್ಲಿ ಪೂಜ್ಯ ಬಿಕ್ಕು ಆನಂದರವರು ಕ್ರೀಯಾಶೀಲರಾಗಿದ್ದಾರೆ (ಅನುಬಂಧ-1 ಚಿತ್ರ : 22 ಗಮನಿಸಿ). ದಲಿತ ಬೌದ್ಧರ ಆಚರಣೆಗಳಿಗೆ, ಉತ್ಸವಗಳಿಗೆ, ಸದಾ ಕಾಲ ಮಾರ್ಗದರ್ಶನ ಮಾಡುತ್ತಿದ್ದಾರೆ.

ಹುಬ್ಬಳ್ಳಿಯಲ್ಲಿ 1924 ರಲ್ಲಿ ಪ್ರಾರಂಭವಾದ ಹುಬ್ಬಳ್ಳಿ ಬೌದ್ಧ ವಿಹಾರ ಈ ಮೊದಲೇ ವಿವರಿಸಿದಂತೆ ತಮಿಳುನಾಡಿನ ಬೌದ್ಧ ಚಳುವಳಿಯ ಮೂಲಕ ಪ್ರಭಾವಿತವಾಗಿರುವುದನ್ನು ಕಾಣುತ್ತೇವೆ. ಬೌದ್ಧ ಪೂರ್ಣಿಮೆ ಧಮ್ಮ ಚಕ್ರ ಪ್ರವರ್ತನ ದಿನಾಚರಣೆಗಳನ್ನು ಕಳೆದ ಎರಡು ದಶಕಗಳಿಂದ ಹುಬ್ಬಳ್ಳಿ ಧಾರವಾಡದ ದಲಿತರು ಬೌದ್ಧ ಧರ್ಮದ ಬಗ್ಗೆ ಆಸಕ್ತರಾಗುವಂತೆ ಮಾಡಿದ ಕಾರ್ಯವನ್ನು ಹುಬ್ಬಳ್ಳಿ ಬೌದ್ಧ ಸಮುದಾಯ ಮಾಡಿರುವುದನ್ನು ಅಲ್ಲಗಳೆಯಲಾಗದು. ದಲಿತ ವರ್ಗದ ಧುರೀಣರು, ಸಮಾಜ ಸೇವಾ ಕಾರ್ಯಕತ್ರರು, ಸಾಹಿತಿಗಳು, ಅಧಿಕಾರಿಗಳನ್ನು ಬೌದ್ಧ ವಿಹಾರಕ್ಕೆ ಆಮಂತ್ರಿಸಿ ಹಲವಾರು ಬೌದ್ಧ ಆಚರಣೆಗಳನ್ನು ಸಂಘಟಿಸಿ ಮಹತ್ವದ ವಿಷಯಗಳ ಬಗ್ಗೆ ಚಿಂತನ ಮಂಥನ ಕಾರ್ಯಕ್ರಮಗಳನ್ನು ಏರ್ಪಡಿಸಿರುವುದು ಮಹತ್ವದ ಸಂಗತಿಯಾಗಿದೆ. ಇಲ್ಲಿ ಬಿಕ್ಕುಗಳು ಖಾಯಂ ಆಗಿ ನೆಲೆಸಿಲ್ಲವಾದರೂ ಬೌದ್ಧ ಉಪಾಸಕರೇ ಬೌದ್ಧ ಆಚರಣೆಗಳನ್ನು ನಡೆಸಿಕೊಂಡು ಬಂದಿರುತ್ತಾರೆ. ಆದರೆ ಆಗಾಗ ಬರುವ ಬೌದ್ಧ ಬಿಕ್ಕುಗಳಿಗೆ ವಾಸಕ್ಕಾಗಿ ಈ ವಿಹಾರ ಮೊದಲಿನಿಂದಲೂ ತನ್ನ ಸೇವೆ ಸಲ್ಲಿಸುತ್ತಾ ಬಂದಿರುವುದನ್ನು ಕಾಣುತ್ತೇವೆ. ಇಲ್ಲಿನ ಬೌದ್ಧ ಉಪಾಸಕರು ಡಾ. ಅಂಬೇಡ್ಕರ್‌ರವರ ವಿಚಾರಗಳಿಂದಲೂ ಪ್ರಭಾವಿತರಾಗಿದ್ದು ಯಾವುದೇ ಗೊಂದಲದ ನಿಲುವುಗಳನ್ನು ಹೊಂದಿರುವದಿಲ್ಲ. ವಿಹಾರ ಸ್ಥಾಪನೆಯ ಸಂದರ್ಭದಲ್ಲಿ ಪ್ರಶಸ್ತವಾದ ಸ್ಥಳ ಈಗ ಜನವಸತಿಯ ದಟ್ಟನೆಯಿಂದ ಅದರ ಸಹಜ ಸೌಂದರ್ಯಕ್ಕೆ ತೊಂದರೆಯಾಗಿರುವುದನ್ನು ಕಾಣುತ್ತೇವೆ. ಆದಾಗ್ಯೂ ಇಲ್ಲಿನ ಉಪಾಸಕರು - ಉಪಾಸಕಿಯರು ಬೌದ್ಧ ಆಚರಣೆಗಳನ್ನು ಕ್ರಮವಾಗಿ ನೆರವೇರಿಸುತ್ತಾ ಪ್ರಗತಿಪರ ಬೌದ್ಧ ಸಮಾಜವಾಗಿ ಹುಬ್ಬಳ್ಳಿ ನಗರದಲ್ಲಿ ಗುರುತಿಸಿಕೊಂಡಿದ್ದಾರೆ.

ಬೀದರ ಜಿಲ್ಲೆಯ ಮನ್ನಾಳ ಖೇಳಿ 'ರೇಕುಳಗಿ ಮೌಂಟ' ನಲ್ಲಿರುವ ಅನಂತ ಪಿಂಡಿಕ ಬೌದ್ಧ ವಿಹಾರ ಗುಲ್ಬರ್ಗಾ, ಬೀದರ ಮುಂತಾದ ಭಾಗಗಳ ದಲಿತ ಬೌದ್ಧರಿಗೆ ಒಂದು ಆಕರ್ಷಕ ಬೌದ್ಧ ಕೇಂದ್ರವಾಗಿ ಪರಿಣಮಿಸಿದೆ. ಇಲ್ಲಿ ಪೂಜ್ಯ ಬಿಕ್ಕು ಮಹಾ ಕಷ್ಯಪ ಮಹಾಥೇರೊ ಅವರು ಈ ಭಾಗದ ಬೌದ್ಧ ಚಳುವಳಿಗೆ ಹೆಚ್ಚಿನ ಕೊಡುಗೆ ಸಲ್ಲಿಸಿದ್ದಾರೆ. ಇಲ್ಲಿಯೂ ಸಹ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ವಿಚಾರಗಳ ಪ್ರಭಾವವನ್ನು ಕಾಣುತ್ತೇವೆ. ಇಲ್ಲಿ ಬೌದ್ಧ ಆಚರಣೆಗಳನ್ನು ಕ್ರಮವಾಗಿ ನಡೆಸಿಕೊಂಡು ಬರಲಾಗಿದೆ. ನಾಮಕರಣ, ಸಾಮೂಹಿಕ ವಿವಾಹ, ದೀಕ್ಷಾ ಕಾರ್ಯಕ್ರಮಗಳನ್ನು ಸಂಘಟಿಸುತ್ತಾ ಬರಲಾಗಿದೆ. ಪ್ರತಿವರ್ಷ ಅಕ್ಟೋಬರ್

ತಿಂಗಳಲ್ಲಿ ನಡೆಯುವ ಧಮ್ಮ ಚಕ್ರ ಪ್ರವರ್ತನ ಉತ್ಸವದಲ್ಲಿ ಒಂದು ಲಕ್ಷಕ್ಕಿಂತ ಹೆಚ್ಚು ಬೌದ್ಧರು ಇಲ್ಲಿ ನೆರೆಯುವುದನ್ನು ನೋಡಿದರೆ ಈ ವಿಹಾರದ ಬೌದ್ಧ ಕಾರ್ಯ ಚಟುವಟಿಕೆಗಳಿಗೆ ಇರುವ ಮಹತ್ವವನ್ನು ಸೂಚಿಸುತ್ತದೆ. ಇಲ್ಲಿ ದೊಡ್ಡ ದೊಡ್ಡ ಪ್ರಾರ್ಥನಾ ಮಂದಿರಗಳನ್ನು ನಿರ್ಮಿಸಲಾಗಿದ್ದು ಬೌದ್ಧ ಬಿಕ್ಕುಗಳ ತರಬೇತಿ ಕೇಂದ್ರ ಹಾಗೂ ಬೌದ್ಧ ವಿಶ್ವವಿದ್ಯಾಲಯವೊಂದನ್ನು ಪ್ರಾರಂಭಿಸುವ ಉದ್ದೇಶ ಹೊಂದಿರುವುದಾಗಿ ಇಲ್ಲಿನ ಹಿರಿಯ ಬಿಕ್ಕುಗಳಾದ ಪೂಜ್ಯ ಮಹಾಕಷ್ಯಪ ಮಹಾಥೇರೊರವರು ತಿಳಿಸುತ್ತಾರೆ.

## ಧಮ್ಮ ಪದ ಉತ್ಸವ :

ಕರ್ನಾಟಕದಲ್ಲಿ ಧಮ್ಮಪದ ಉತ್ಸವವನ್ನು ಮಹಾಬೋಧಿ ಸೊಸೈಟಿಯು 1998 ರಿಂದ ಆಚರಿಸಿಕೊಂಡು ಬರುತ್ತಿದೆ. ಈ ಉತ್ಸವವನ್ನು ಕೆಲವೊಮ್ಮೆ ಹಿರಿಯ ಬಿಕ್ಕುಗಳ ಜನ್ಮ ದಿನಾಚರಣೆಯ ಜೊತೆಗೆ ಆಚರಿಸುವ ಪರಿಪಾಠವಿದೆ.

12.3.1998 ರಂದು ಮಹಾಬೋಧಿ ಸೊಸೈಟಿಯು 'ಧಮ್ಮಪದ ಮತ್ತು ದಿನನಿತ್ಯ ಜೀವನ' ಎಂಬ ವಿಷಯದ ಮೇಲೆ ಗೋಷ್ಠಿಯನ್ನು ಏರ್ಪಡಿಸಿದೆ. ಈ ಗೋಷ್ಠಿಯಲ್ಲಿ ಆಗಮಿಸಿದ ಉಪಾಸಕ, ಉಪಾಸಕಿಯರು ತಾವೇ ತಮಗೆ ಇಷ್ಟವಾದ ಧಮ್ಮಪದ ಆಧಾರಿತ ಪರಿಕಲ್ಪನೆಗಳ ಬಗ್ಗೆ ಮಾತನಾಡುವ ಅವಕಾಶ ಕಲ್ಪಿಸಲಾಗಿತ್ತು. 9 ಗಂಟೆಗೆ ಬೋಧಿವೃಕ್ಷ ಮತ್ತು ಸ್ತೂಪಕ್ಕೆ ವಂದನೆ, ಬುದ್ಧ ವಂದನೆ, ಪಂಚಶೀಲ ಪಠಣದ ನಂತರ ಆಚಾರ್ಯ ಬುದ್ದರಕ್ಖಿತರಿಂದ 'ಧಮ್ಮ ಪದ ಮತ್ತು ನಿತ್ಯಜೀವನ' ಕುರಿತು ಪ್ರವಚನ ನಡೆಸಲಾಗಿದೆ. 2000 ನೇ ಸಾಲಿನಲ್ಲಿ 'ಕರ್ನಾಟಕ ಬೌದ್ಧ ಸಮಾವೇಶ' ವನ್ನು ಹಮ್ಮಿಕೊಂಡು ಡಾ. ಶಿವರಾಮ ಕಾರಂತರ 'ಕಿಸಾಗೋತಮಿ' ಕನ್ನಡ ನಾಟಕವನ್ನು ಹಿರಿಯ ಬೌದ್ಧ ಉಪಾಸಕರಾದ ಡಾ. ಬಿ.ವಿ. ರಾಜಾರಾಂ ಅವರ ನಿರ್ದೇಶನದಲ್ಲಿ ಕಲಾ ಗಂಗೋತ್ರಿ ತಂಡದವರು ಪ್ರದರ್ಶಿಸಿದ್ದಾರೆ. ಈ ಸಂದರ್ಭದಲ್ಲಿ ಹೊರಡಿಸಿದ 'ಧಮ್ಮ ಪದ ಉತ್ಸವ'[41] ಕರಪತ್ರದ ವಿಷಯವು ಉಲ್ಲೇಖನೀಯವಾಗಿದೆ.

'2500 ವರ್ಷಗಳ ಹಿಂದೆ ರಾಜಕುಮಾರ ಸಿದ್ಧಾರ್ಥ,ಸಾಧನೆ ಮಾಡಿ ಭಗವಾನ್ ಬುದ್ಧರಾದರು. ತಮ್ಮ 35 ನೇ ವಯಸ್ಸಿನಿಂದ 80 ನೇ ವಯಸ್ಸಿನವರೆಗೂ 45 ವರ್ಷಗಳ ಪರ್ಯಂತರ ಕಾಲು ನಡಿಗೆಯಲ್ಲಿ ನಡೆಯುತ್ತಾ ಧಮ್ಮವನ್ನು ಜನತೆಗೆ ತಿಳಿಸಿದರು. ಲಕ್ಷ ಲಕ್ಷ ಜನ, ಬುದ್ಧರಿಗೆ ಧರ್ಮಕ್ಕೆ ಮತ್ತು ಸಂಘಕ್ಕೆ ಶರಣು ಬಂದರು.

ಧಮ್ಮವನ್ನು ತಿಳಿಸುತ್ತಾ ನಡೆದ ಬುದ್ಧರ ಹೆಜ್ಜೆಗಳು ಧಮ್ಮ ಪದವಾದವು, ತಿಳಿಸಿದ ಧಮ್ಮ 'ಧಮ್ಮಪದ' ವಾಯಿತು. ಧಮ್ಮವನ್ನು ತಿಳಿಸುತ್ತಾ ಜಗತ್ತಿನಾದ್ಯಂತ ಧಮ್ಮದೂತರು ತೆರಳಿದರು. ಹೀಗೆ ಧರ್ಮದಲ್ಲಿ ನಡೆದು, ಧಮ್ಮವನ್ನು ನುಡಿದು, ಧಮ್ಮದೂತರಾಗಿ ಅಂದಿನಿಂದ ಇಂದಿನವರೆಗೆ ಬುದ್ಧಧಮ್ಮವನ್ನು ಜನರ ನೆಮ್ಮದಿಗೆ, ಕಲ್ಯಾಣಕ್ಕೆ ಸಹಾಯ ಮಾಡುತ್ತಾ ಬಂದಿದೆ. ಸಾಮ್ರಾಟ ಅಶೋಕ ತಾನು ಬುದ್ಧಧರ್ಮಕ್ಕೆ ಶರಣು ಬಂದವನಾಗಿ ಇಂದಿಗೂ ಎಲ್ಲರ ಮನದಲ್ಲಿ ಶಾಶ್ವತವಾಗಿ ಉಳಿದಿದ್ದಾನೆ. ಆತನ ಮಕ್ಕಳು ರಾಜಕುಮಾರ ಮಹೇಂದ್ರ, ಮತ್ತು ರಾಜಕುಮಾರಿ ಸಂಘಮಿತ್ರರನ್ನು ಧಮ್ಮಧೂತರನ್ನಾಗಿಸಿ ನೇಮಿಸಿದನು. ಭಾರತದಾದ್ಯಂತ 84,000 ಸ್ತೂಪಗಳನ್ನು ನಿರ್ಮಿಸಿ, ಧಮ್ಮ ಜೀವನವನ್ನು ನಡೆಸಿ, ಪ್ರಕೃತಿ ಪ್ರೀತಿ, ಪ್ರಾಣಿದಯೆ, ಜೀವದಯೆಗಳನ್ನು ಪ್ರಚಾರಿಸಿ ಎಲ್ಲರ ಪ್ರೀತಿ ಮಿತ್ರನಾಗಿ ಅಮರನಾದನು.

ಇಂತಹ ಕೆಲಸ ಈಗ ಆಗಬೇಕಿದೆ. ನಮ್ಮ ಪ್ರದುಷ್ಟವಾದ ಮನಸ್ಸನ್ನು ಪ್ರಸನ್ನ ಮನಸ್ಸನ್ನಾಗಿ ಮಾಡುವ ಕಾಲ ಕೂಡಿಬಂದಿದೆ. ಅಸಹನೆ, ಅಸೂಯೆ, ಅಹಂಕಾರ, ಅಶಾಂತಿ, ಇವುಗಳನ್ನು ನಮ್ಮ ಮನಸ್ಸಿನಿಂದ ದೂರೀಕರಿಸಿ ಸಹನೆ, ಸಹಕಾರ, ಸೌಹಾರ್ದತೆ, ಶಾಂತಿಗಳನ್ನು ನೆಲೆ ನಿಲ್ಲಿಸಬೇಕಾಗಿದೆ. ಭಗವಾನರ ಮಾತು ನೀನು ಸರಿಯಾಗು ಜಗತ್ತನ್ನು ಸರಿ ಮಾಡುವ ಗೊಡವೆ ನಿನಗೆ ಬೇಡ, ನಿನ್ನಂತೆ ಪ್ರತಿಯೊಬ್ಬರು ತಾವೇ ಸರಿಯಾದರೆ ಇಡೀ ಜಗತ್ತೇ ಸರಿಯಾಗುವುದು ಇದನ್ನು ತಿಳಿ' ಎಂದರು.

ಈ ದೆಸೆಯಲ್ಲಿ ನಾವು ಕಾರ್ಯಕರ್ತರಾಗಿ ದುಡಿಯಬೇಕಿದೆ. ಕರ್ನಾಟಕದ ಮೂಲೆಮೂಲೆಗೂ ಬುದ್ಧರ ಪ್ರೀತಿ ಮೈತ್ರಿ, ಕರುಣೆಯ ಬೆಳಕನ್ನು ಹರಡಬೇಕಿದೆ. ನಾವುಗಳು ಧಮ್ಮದೂತರಾಗಬೇಕಿದೆ. ಕರ್ನಾಟಕ ಬೌದ್ಧ ಸಭೆಯನ್ನು ನಿರ್ಮಾಣ ಮಾಡಬೇಕಿದೆ. ಜಿಲ್ಲೆ, ತಾಲೂಕು, ಊರುಗಳಲ್ಲಿ ಬುದ್ಧರನ್ನು ಅರಿತು ನಡೆವ 'ಬೆಳಕಿನ ಕುಟೀರ' ಗಳನ್ನು ನಿರ್ಮಿಸಬೇಕಿದೆ. ಇದು ಪ್ರೀತಿ ಮೈತ್ರಿಯಿಂದ ಆಗುವ ಕೆಲಸ. ಬುದ್ದರು ತೋರಿದ ಅಪಾರ ಕರುಣೆ, ಸಹಾನುಭೂತಿ ನಮಗೆ ಈಗ ಬೆಳಕು ತೋರಬೇಕು. ಈ ಕಾರ್ಯದಲ್ಲಿ ನಮ್ಮನ್ನು ನಾವು ತೊಡಗಿಸಿಕೊಳ್ಳೋಣ ಬನ್ನಿ ನಿಮ್ಮ ಸಲಹೆ, ಸಹಕಾರವನ್ನು ನಾವು ಸ್ವಾಗತಿಸುತ್ತೇವೆ. ಬಂಧು ಮಿತ್ರರೊಂದಿಗೆ ಬಂದು ಈ ಸಮಾವೇಶದಲ್ಲಿ ನಿಮ್ಮ ವಿಚಾರಗಳನ್ನು ಹಂಚಿಕೊಳ್ಳಿ'[42]. ಈ ರೀತಿಯ ವಿಚಾರಗಳು ಬಿಂಬಿತವಾಗಿ 'ಧಮ್ಮ ಪದ ಉತ್ಸವ ಚಿಂತನ ಪದ ಉತ್ಸವವಾಗಿ' ಪರಿವರ್ತಿತವಾಗಿ ಹಳ್ಳಿ ಹಳ್ಳಿಗಳಲ್ಲಿ ಬುದ್ಧನ ಬೋಧನೆಗಳ 'ಬೆಳಕಿನ ಕುಟೀರಗಳನ್ನು' ನಿರ್ಮಿಸುವ ಆ ಮೂಲಕ ಜನತೆಯ ಬದುಕಿಗೆ ನೆರವು ನೀಡುವ ಕರೆಯನ್ನು ಕಾಣಬಹುದಾಗಿದೆ.

**ಸಮಣೇರ ದೀಕ್ಷಾ ಕಾರ್ಯಕ್ರಮ :**

ಸಮಣೇರ ಪಬ್ಬಜ ದೀಕ್ಷೆ ಸಂಸ್ಕಾರವನ್ನು ಬೌದ್ದ ಸಂಪ್ರದಾಯದಲ್ಲಿ 7 ರಿಂದ 12 ವರ್ಷದಲ್ಲಿದ್ದಾಗ ನೆರವೇರಿಸುತ್ತಾರೆಯಾದರೂ, ಇತ್ತೀಚೆಗೆ ದಲಿತ ಬೌದ್ದರು ಸಂಘಟನೆಗಳು ಯುವಕ ಯವತಿಯರಿಗೆ ಬೌದ್ದ ಉಪಾಸಕ ಉಪಾಸಕಿಯರಿಗೆ, ಆಸಕ್ತಿಯಿಂದ ಬಂದವರಿಗೆ ಸಮಣೇರ ದೀಕ್ಷೆ ನೀಡುತ್ತಾರೆ. ಬೌದ್ಧ ರೀತಿಯಲ್ಲಿ ಬಿಕ್ಕುಗಳು ಧರಿಸುವ ಉಡುಪನ್ನು ನೀಡಲಾಗುತ್ತದೆ. ಬೌದ್ಧ ಬಿಕ್ಕುಗಳು ಈ ದೀಕ್ಷೆಯನ್ನು ನೆರವೇರಿಸುತ್ತಾರೆ ನಿದಿಪಡಿಸಿದ ದಿನದಂದು ಸಮಣೇರ ದೀಕ್ಷೆ ತೆಗೆದುಕೊಳ್ಳುವವರು ಕೇಶಮಂಡನ ಮಾಡಿಸಿ, ಸ್ನಾನ ಮಾಡಿ ಬಿಕ್ಕುಗಳ ಸಮ್ಮುಖದಲ್ಲಿ ಬರುವರು. ಹೊಸ ಬಿಳಿ ಪಂಚೆಯನ್ನು ಧರಿಸಿ ಮಂಡೆಯೂರಿ ಬಿಕ್ಕುಗಳ ಮುಂದೆ ವಂದಿಸಿ ಕುಳಿತುಕೊಳ್ಳುವುದು. ಬೌದ್ದ ಬಿಕ್ಕುಗಳ ಮುಂದೆ ಈ ರೀತಿ ಪ್ರಾರ್ಥಿಸುವರು. ಇದಕ್ಕೆ 'ಖಮಾಪನ' (ಕ್ಷಮಾಪನ) ಎನ್ನುವರು.

''ಓಕಾಸ ದ್ವಾರತ್ತಯೇನ ಕತಂ ಸುಬ್ಬಂ
ಅಪರಾಧಂ ಖಮತ ಮೆ ಬಂತೆ
ದ್ವಿತಿಯಂಪಿ
ಓಕಾಸ ದ್ವಾರಪ್ತಯೇನ ಕತಂ ಸುಬ್ಬಂ
ಅಪರಾಧಂ ಖಮತ ಮೆ ಬಂತೆ
ತತಿಯಂಪಿ
ಓಕಾಸ ದ್ವಾರಪ್ತಯೇನ ಕತಂ ಸುಬ್ಬಂ'',
ಅಪರಾಧಂ ಖಮತಮೆ ಬಂತೆ''

ಅಂದರೆ ಪೂಜ್ಯ ಬಂತೇಜಿಯವರೇ, ಕಾಯಾ, ವಾಚಾ, ಮನಸ್ಸಿನಿಂದ ಆಗಿದ್ದ ಅಪರಾಧಗಳನ್ನು ಕ್ಷಮಿಸಿ ನನಗೆ ತ್ರಿಸರಣ, ಅಷ್ಟಶೀಲ ಧಮ್ಮವನ್ನು ಅನುಗ್ರಹಿಸಿ ಸಮಣೇರನನ್ನಾಗಿ ಮಾಡಿ ಅನುಕಂಪವನ್ನು ತೋರಿಸಿರಿ ಬಂತೆ'[43] ಎಂಬ ಮನವಿಯ ಅರ್ಥವಾಗಿದೆ, ಹೀಗೆ ಹೇಳಿದ ನಂತರ ಅವರಿಗೆ ಬಿಕ್ಕುಗಳು ಕಾವಿ ಬಣ್ಣದ ಚೀವರ'[44] ವನ್ನು ಬಿಕ್ಷಪಾತ್ರೆಯನ್ನು , ನೀರು ಸೋಸಿ ಕುಡಿಯಲು ಬಿಳಿ ಬಟ್ಟೆಯನ್ನು ಕೊಡುವರು. ಸಮಣೇರ ದೀಕ್ಷೆ ತೆಗೆದುಕೊಂಡವರು ಒಂದು ವಾರದಿಂದ ನಾಲ್ಕು ವಾರಗಳವರೆಗೆ ಬಿಕ್ಕುಗಳ ಹಾಗೆ ಶಿಬಿರದಲ್ಲಿ ವಾಸಿಸುತ್ತಾರೆ. ಸಾಮಾನ್ಯವಾಗಿ ಈ ದೀಕ್ಷೆ ಪಡೆದವರು ಕರ್ನಾಟಕದಲ್ಲಿ 10 ದಿನಗಳವರೆಗೆ ಸಮಣೇರರಾಗಿ ದೀಕ್ಷೆ ಪಾಲಿಸುವುದನ್ನು ಗಮನಿಸಬಹುದಾಗಿದೆ. ಈ ಸಮಯದಲ್ಲಿ ಧಮ್ಮ ಪ್ರಚಾರ, ಧಮ್ಮ ಚರ್ಚೆ, ಬೌದ್ಧ ಬಿಕ್ಕುಗಳಿಂದ ಧಮ್ಮ ಶ್ರವಣ, ಮನನ, ಬಿಕ್ಷಾಟನೆ ಮಾಡಿಯೇ ಊಟ ಮಾಡುವ ಬಗ್ಗೆ ಉಡುಪನ್ನು ನಿರ್ವಹಿಸುವ ಬಗ್ಗೆ ಸಮಣೇರ ಉಪಾಸಕರು ಸಾಧನೆ ಮಾಡುತ್ತಾರೆ. 'ಬೌದ್ಧ ರಾಷ್ಟ್ರಗಳಲ್ಲಿಯಾದರೂ ಸಮಣೇರ ಹೊಂದಿದ ದಿನದಂದು ಸಾಮಣೇರನಿಗೆ ಆನೆಯ ಮೇಲೆ ಕೂಡಿಸಿ ಮೆರವಣಿಗೆಯನ್ನು ನಗರ-ಪಟ್ಟಣದ ರಾಜಮಾರ್ಗದಲ್ಲಿ ಮಂಗಳ ವಾದ್ಯಗಳೊಂದಿಗೆ ಹೋಗಿ ಬರುವರು. ಉಪಾಸಕರು ಸಾಮಣೇರರನ್ನು ತಮ್ಮ ಮನೆಗಳಿಗೆ ಆಮಂತ್ರಿಸಿ ಭೋಜನದಾನ ಮಾಡುವರು. ಹೀಗೆ ಗೌರವ ಆದರಗಳನ್ನು ಮಗುವಿಗೆ ಎಳೆವಯಸ್ಸಿನಲ್ಲಿ ತೋರುತ್ತಿದ್ದಂತೆ ಆಧ್ಯಾತ್ಮಿಕ ಜೀವನದಲ್ಲಿಯೂ ಅಥವಾ ಲೌಕಿಕ ಜೀವನದಲ್ಲಿಯೂ ನಾಯಕರಾಗಲು ಪ್ರಯತ್ನಿಸುತ್ತಾನೆ'[45] ಎಂದು ವೈ.ಬಿ. ನಂದನ ಅವರು ವಿವರಣೆ ನೀಡುತ್ತಾರೆ.

ಬೆಳಗಾವಿ ಜಿಲ್ಲೆಯಲ್ಲಿ ಧಮ್ಮ ಪ್ರಸಾರ ಕಾರ್ಯ ಮಾಡುತ್ತಿರುವ 'ಭೀಮಸೇನಾ' ಸಂಘಟನೆಯು 'ಸಮಣೇರ ದೀಕ್ಷಾ' ಕಾರ್ಯಕ್ರಮ ಹಮ್ಮಿಕೊಂಡು ಆ ಮೂಲಕ ಬೌದ್ಧ ಧರ್ಮ ಪುನರುಜ್ಜೀವನಕ್ಕೆ ಪ್ರಯತ್ನಿಸಿರುವುದು ಕಂಡು ಬರುತ್ತದೆ (ಅನುಬಂಧ-1, ಚಿತ್ರ: 71 ನೋಡಿ). ಈ ಸಂದರ್ಭದಲ್ಲಿ ಅಧ್ಯಯನಕಾರನಲ್ಲಿ ಉಪಸ್ಥಿತರಿದ್ದು, ಹಲವಾರು ಮಹತ್ವದ ಅಂಶಗಳನ್ನು ಗಮನಿಸದ್ದಾನೆ. 'ಪ್ರಬುದ್ಧ ಭಾರತ' ದ ಪರಿಕಲ್ಪನೆ ಹೊಂದಿರುವ ಶ್ರೀ ಲಕ್ಷ್ಮಣ ವೈ. ಲಖೋಳೆ ವಕೀಲರು ತಮ್ಮ ಸಹವರ್ತಿಗಳೊಂದಿಗೆ ಕಳೆದ ವರ್ಷ 'ಸಾಮಣೇರ ದೀಕ್ಷೆ' ಕಾರ್ಯಕ್ರಮ ಸಂಘಟಿಸಿದ್ದ ಸಂದರ್ಭದಲ್ಲಿ ಹತ್ತು ದಿನಗಳವರೆಗೆ ಚೀವರ ಧರಿಸಿದ್ದರು. ಈ ಸಂದರ್ಭದಲ್ಲಿ ಈ ಮೊದಲು ವಿವರಿಸಿದ ರೀತಿಯಲ್ಲಿ ಈ ಶಿಬಿರ ನಡೆಯಿತು. ಧಮ್ಮ ಪ್ರಸಾರ ಮಾಡುವ ಸಂದರ್ಭದಲ್ಲಿ ಸಾರ್ವಜನಿಕರು ಇವರನ್ನು ಆಶ್ಚರ್ಯದಿಂದ ನೋಡಿದ್ದು ಉಂಟು. ಶ್ರೀಲಂಕಾದ ಬೌದ್ಧ ಬಿಕ್ಕುಗಳಾದ ಪೂಜ್ಯ ಬದಂತ ನವಪಾಲ ಬಂತೇಜಿಯವರು 'ಸಾಮಣೇರ ದೀಕ್ಷೆ' ಯನ್ನು ನೀಡಿದರು. ಬಿಕ್ಕುಗಳು ಈ ಐದು ಜನರಿಗೆ ಹೊಸ ಹೆಸರುಗಳನ್ನು ನೀಡಿದ್ದು ಕಂಡು ಬಂದಿತು.

1. ಲಕ್ಷ್ಮಣ ವೈ. ಲಖೋಳೆ - ಬಂತೆ ಸಾರಿಪುತ್ರ
2. ವಸಂತ ಅಂಬೇಡ್ಕರ್ (ಸರ್ವದೆ) ಬಂತೆ ಸಂಘಬೋಧಿ
3. ರಾಜರತ್ನ ಸಾಮ್ರಾಟ - ಬಂತೆ ಸುಮೇಧಬೋಧಿ
4. ಸುನೀಲದತ್ತ ಮಾಳಗೆ - ಬಂತೆ ದೀಪಂಕರ

ಹಾಗೂ ಇತರರು

ಹತ್ತು ದಿನಗಳ ಕೊನೆಯಲ್ಲಿ ಇವರು ಮತ್ತೆ ಚೀವರನ್ನು ಕಳಚಿ ಬೌದ್ದ ಬಿಕ್ಕುಗಳ ಸಮ್ಮುಖದಲ್ಲಿ ಉಪಾಸಕರ ಬಿಳಿ ವಸ್ತ್ರಧರಿಸಿ ತಮ್ಮ ತಮ್ಮ ಮನೆಗೆ ತೆರಳಿದರು. ಇದೊಂದು 'ಅದ್ಭುತವಾದ ಅನುಭವವೆಂದು' ಈ ಕುರಿತಾದ ತಮ್ಮ ಅನುಭವ ಹಂಚಿಕೊಳ್ಳುತ್ತಾ 'ಬುದ್ದ ಧಮ್ಮ ಪ್ರಚಾರ' ಕ್ಕೆ ಸಮಣೇರ ದೀಕ್ಷಾ ಕಾರ್ಯಕ್ರಮ ಮಹತ್ವದ್ದಾಗಿದೆ. ನಮ್ಮಲ್ಲಿ ಧಮ್ಮದ ಬಗ್ಗೆ ಹೆಮ್ಮೆ ಮೂಡಿಸಿ, ಧಮ್ಮದ ಸಲುವಾಗಿ ಹೆಚ್ಚಿನ ರೀತಿಯಲ್ಲಿ ದುಡಿಯಲು ಪ್ರೇರಣೆ ನೀಡಿದೆ ಎಂದು ಅನುಭವ ಹಂಚಿಕೊಂಡರು. ಇಂತಹ 'ಸಮಣೇರ ದೀಕ್ಷಾ' ಕಾರ್ಯಕ್ರಮವನ್ನು ಹೆಚ್ಚಿನ ಸಂಖ್ಯೆಯಲ್ಲಿ ದಲಿತ ಯುವಕರಿಗೆ ಬೇರೆ ಬೇರೆ ಊರುಗಳಲ್ಲಿ ಮಾಡುವ ಉದ್ದೇಶ ಹೊಂದಿರುವುದಾಗಿ ತಿಳಿಸಿದರು.

ಬಿಜಾಪೂರದ 'ಒಂದು ಹನಿ ಝೆನ್ ಧ್ಯಾನ ಕೇಂದ್ರ' (One Drop Meditation Centre) ಆಗಾಗ ದಲಿತ ಬೌದ್ದರಿಗಾಗಿ, ಆಸಕ್ತರಿಗಾಗಿ ಧ್ಯಾನದ ತರಬೇತಿ ಶಿಬಿರಗಳನ್ನು ಏರ್ಪಡಿಸುತ್ತಿದೆ. ಸಾಮಾನ್ಯವಾಗಿ ಜಪಾನ ದೇಶದ ಬೌದ್ದ ಬಿಕ್ಕುಗಳು ನಡೆಸಿಕೊಡುತ್ತದೆ.

ಅಂತರ್‌ರಾಷ್ಟ್ರೀಯ ಬೌದ್ಧ ಯುವ ಸಂಘಟನೆ ವಿಜಾಪೂರ ಇವರು ರಮಾಯಿ ಸ್ಮೃತಿ ಬೌದ್ಧ ವಿಹಾರ, ಬಿಜ್ಜರಗಿ ಇಲ್ಲಿನ ಸುಂದರ ಬಯಲು ನಿಸರ್ಗದಲ್ಲಿ 'ಝೆನ್ ದ್ಯಾನ' ಶಿಬಿರನ್ನು ಬದಂತ ಬೋಧಿ ಧರ್ಮ (ಜಪಾನ) ಇವರು 5 ದಿನಗಳವರೆಗೆ ನಡೆಸಿಕೊಟ್ಟಿದ್ದಾರೆ. 2001[46] ರಲ್ಲಿ ನಡೆಸಿದ ಶಿಬಿರದ ವೇಳಾಪಟ್ಟಿ ಈ ಕೆಳಗಿನಂತಿದೆ.

**ಬೆಳಗ್ಗೆ:** **3-30 ಕ್ಕೆ ವ್ಯಾಯಾಮ**

**3-30 ರಿಂದ 4 ರವರೆಗೆ ದ್ಯಾನ ತರಬೇತಿಗೆ ಸಿದ್ಧತೆ**

**4 ರಿಂದ 4-30 ಪ್ರಾರ್ಥನೆ (ಜಪಾನ ಮತ್ತು ಪಾಲಿ ಭಾಷೆಯಲ್ಲಿ)**

**4-30 ರಿಂದ 6-30 ದ್ಯಾನ (25 ನಿಮಿಷಗಳ) ಒಂದು ಕಾಲಾವಧಿ, ಎರಡು ಕಾಲವಧಿ ನಂತರ ನಡೆಯುತ್ತ ಧ್ಯಾನ ಮಾಡುವುದು.**

**6-30 ರಿಂದ 7-00 ವಿಶ್ರಾಂತಿ**

**7 ರಿಂದ 7-30 ಉಪಹಾರ**

**7-30 ರಿಂದ 8-30 ಸ್ವಚ್ಛತೆ**

**8-30 ರಿಂದ 11-00 ಧ್ಯಾನ** (Zazen)

**11 ರಿಂದ 12 ಊಟ**

**ಮಧ್ಯಾಹ್ನ :** **12 ರಿಂದ 1 ಗಂಟೆ ವಿಶ್ರಾಂತಿ**

**1 ಗಂಟೆಯಿಂದ 2 ಧ್ಯಾನದ ಬಗ್ಗೆ ಚರ್ಚೆ ಹಾಗೂ ಸಲಹೆಗಳು**

**2 ರಿಂದ 3 ಗಂಟೆ ಧ್ಯಾನ** (Zazen)

**3 ಗಂಟೆಯಿಂದ 4 ವ್ಯಾಯಾಮ (ಚೀನಾ ಪದ್ಧತಿಯಲ್ಲಿ) ಈ ಅವಧಿಯಲ್ಲಿ ಒಮ್ಮೊಮ್ಮೆ ಧಮ್ಮಪಾದದ ಉಪನ್ಯಾಸ ಇರುತ್ತದೆ.**

**4 ರಿಂದ 4-30 ಊಟ (ಮಿತಿಯಾಗಿ)**

**4-30 ರಿಂದ 5-00 ವಿಶ್ರಾಂತಿ**

**ಸಾಯಂಕಾಲ :** 5-00 ರಿಂದ 8-30 ಧ್ಯಾನ ಮತ್ತು ಮುಖಾಮುಖಿ ಸಂದರ್ಶನ (ವೈಯಕ್ತಿಕ)

**ರಾತ್ರಿ :** 9 ಗಂಟೆಗೆ ಮಲಗುವುದು.

**ವಿಶೇಷ ಸೂಚನೆಗಳು :**

1) ಶಿಬಿರಾರ್ಥಿಗಳು ಯಾವುದೇ ಪರಿಸ್ಥಿತಿಯಲ್ಲಿ ಮಾತನಾಡಬಾರದು.

2) ಧೂಮ್ರಪಾನ ಸಿಗರೇಟ, ತಂಬಾಕು ನಿಷೇಧಿಸಲಾಗಿದೆ.

3) ಯಾವುದೇ ಕಾರಣಕ್ಕೂ ಪರವಾನಿಗೆ ಇಲ್ಲದೆ ಶಿಬಿರ ಬಿಟ್ಟು ಹೋಗುವ ಹಾಗಿಲ್ಲ.

ಈ ಧ್ಯಾನ ಶಿಬಿರದ ವೇಳಾ ಪಟ್ಟಿಯನ್ನು ಗಮನಿಸಲಾಗಿ ಇದು ಬಿಕ್ಕುಗಳು ತಾವು ದೈನಂದಿನ ಜೀವನದಲ್ಲಿ ಅನುಸರಿಸುವ ವೇಳಾ ಪಟ್ಟಿಯಂತೆ ಅನ್ನಿಸುತ್ತದೆ. ಇಲ್ಲಿ ರಾತ್ರಿಯ ಊಟದ ಸಮಯ ಸಾಯಂಕಾಲ 4 ರಿಂದ 4-30 ಗಂಟೆಗೆ ಮುಗಿದು ಹೋಗುತ್ತದೆ. ಅಂದರೆ ಸೂರ್ಯಾಸ್ತದ ನಂತರ ಬೌದ್ಧ ಬಿಕ್ಕುಗಳು ಏನನ್ನು ಸ್ವೀಕರಿಸುವುದಿಲ್ಲ. ಹಾಗೇ ಮಾಡಿದರೆ ಅದು 'ಅಕಾಲ ಭೋಜನ' ವಾಗುತ್ತದೆ. ಅದೇ ಪದ್ದತಿಯನ್ನು ಇಲ್ಲಿ ಅನ್ವಯಿಸಿರುವುದು ಕಂಡು ಬರುತ್ತದೆ.

ಅಂಬೇಡ್ಕರ್‌ರವರು ಈ ಮೊದಲೇ ಹೇಳಿದಂತೆ ಬೌದ್ಧಧಮ್ಮದ ಆಚರಣಾತ್ಮಕ ಆಯಾಮಕ್ಕೆ ಹೆಚ್ಚು ಮಹತ್ವ ಕೊಟ್ಟವರಲ್ಲ ಯಾಕೆಂದರೆ ಹಿಂದೂ ಧರ್ಮದ ಕ್ರೂರ, ಪುರೋಹಿತಷಾಹಿಗೊಡ್ಡು ಆಚರಣೆಗಳ ಆಚರಣೆಯಿಂದ ಉದ್ಭವಿಸುವ ಅಸಮಾನತೆ ಅವರ ಕಟು ವಿಮರ್ಶೆಗೆ ಕಾರಣವಾಗಿದ್ದವು. ಆದ್ದರಿಂದ ಅವರು ಬೌದ್ಧ ಧರ್ಮ ಆಚರಣೆಗಳಿಗೆ ಅತೀ ಕಡಿಮೆ ಮಹತ್ವ ಕೊಟ್ಟರು.ಇದೇ ಅಂಶವನ್ನು ಜಪಾನ್ ಮತ್ತು ಭಾರತದ ಬೌದ್ಧ ಧರ್ಮಗಳ ತುಲನಾತ್ಮಕ ಅಧ್ಯಯನ ಮಾಡಿದ ತಿಮೊಥಿ ಪಿಟ್ಜರಾಡ್ಜ್ ಅವರು ಪುಷ್ಟೀಕರಿಸುತ್ತಾರೆ. 'ಅಂಬೇಡ್ಕರ್‌ರವರು ಕಡಿಮೆ ಪ್ರಮಾಣದ ಬೌದ್ಧ ಆಚರಣೆಗಳಿಗೆ ಒಲವು ಹೊಂದಿದ್ದರು. ವಿಶೇಷವಾಗಿ ನಾಮಕರಣ, ವಿವಾಹ, ಅಂತಿಮ ಸಂಸ್ಕಾರ ಮರಣಾ ನಂತರ (ದಾಹ ಧಮ್ಮ) ಹೊಂದಿದ ಸಂದರ್ಭದಲ್ಲಿ ಕೈಗೊಳ್ಳಬೇಕಾದ ಬೌದ್ಧ ವಿಧಿಗಳ ಬಗ್ಗೆ ಒಲವು ಹೊಂದಿದ್ದರು.'[47] ಅವರು ರಚಿಸಿದ ಸಾವಿರಕ್ಕಿಂತ ಹೆಚ್ಚು ಪುಟಗಳ ಬೌದ್ಧ ಸಾಹಿತ್ಯದಲ್ಲಿ ಕೇವಲ 20-30 ಪುಟಗಳನ್ನು ಅವರು ಆಚರಣೆಗಳ ಬಗ್ಗೆ ಬರೆದಿರುತ್ತಾರೆ. ಅವರು 1956 ಫೆಬ್ರುವರಿ ತಿಂಗಳಲ್ಲಿ ರಚಿಸಿದ ಬೌದ್ಧ ಪೂಜಾ ಪಾಠ[48] (Budha Pooja Path) ಈ ಹಿನ್ನೆಲೆಯಲ್ಲಿ ನಮ್ಮ ಗಮನವನ್ನು ಸೆಳೆಯುತ್ತದೆ. ಅಂಬೇಡ್ಕರ್‌ರವರು ತಾವು ಬೌದ್ಧ ಧರ್ಮಕ್ಕೆ ಮತಾಂತರ ಹೊಂದುವ ಪೂರ್ವದಲ್ಲಿಯೇ 6 ತಿಂಗಳಿಗೂ ಮೊದಲೇ, ಬೌದ್ಧರ ನಿತ್ಯ ಬದುಕಿನಲ್ಲಿ ಉಪಯೋಗಿಸಲ್ಪಡುವ ಪಾಲಿ ಪಠ್ಯಗಳನ್ನು ಸ್ವತಃ ಅಂಬೇಡ್ಕರ್‌ರವರಿಗೆ ಭಾಷಾಂತರಿಸಿ ದಲಿತರು ಬೌದ್ಧ ಧರ್ಮಕ್ಕೆ ಮತಾಂತರವಾದ ನಂತರ ಸಾಮಾನ್ಯ ಉಪಾಸಕ ಉಪಾಸಕಿಯರ ದೈನಂದಿನ ಜೀವನದಲ್ಲಿ ಆಧ್ಯಾತ್ಮಿಕ ಸಾಧನೆಗೆ ನೆರವಾಗುತ್ತದೆಯೆಂಬ ಕಾರಣಕ್ಕಾಗಿ ಸಂಕ್ಷಿಪ್ತ ಬೌದ್ಧ ಆಚರಣೆಗಳ 'ಬೌದ್ಧ ಪೂಜಾ ಪಾಠ' ಎಂಬ ಕೈಪಿಡಿಯನ್ನು ರಚಿಸಿರುವುದು ತಿಳಿದು ಬರುತ್ತದೆ. ಈ ಚಿಕ್ಕ ಹೊತ್ತಿಗೆಗೆ ಬರೆದ ಪ್ರಸ್ತಾವನೆಯಲ್ಲಿ

ಅಂಬೇಡ್ಕರ್‌ರವರು ಸ್ಥಾಪಿಸಿದ 'ಭಾರತೀಯ ಬೌದ್ಧ ಜನ ಸಮಿತಿ'ಯು ಪ್ರಕಟಿಸಿದೆ ಎಂದು ತಿಳಿದು ಬರುತ್ತದೆ. ಈ 'ಬೌದ್ಧ ಪೂಜಾ ಪಾಠ ಕೈಪಿಡಿ' ಯಲ್ಲಿ 1) ತಿಸರಣ 2) ಪಂಚಶೀಲ 3) ಬುದ್ಧವಂದನ 4) ಧಮ್ಮ ವಂದನ 5) ಸಂಘ ವಂದನೆ 6) ಪೂಜಾವಿಧಿ 7) ಸರ್ವ ಮಂಗಳ ಗಾಥಾ (ಸಬ್ಬಸುಖಿ ಗಾಥಾ) 8) ಧಮ್ಮಪಾಲನ ಗಾಥಾ 9) ರತನ ಸುತ್ತ 10) ಜಪ'[49] ಇವು ಮಾತ್ರ ಇರುತ್ತವೆ. ಬೌದ್ಧ ಪೂಜಾಪಾಠ ಕೈಪಿಡಿಯಲ್ಲಿ ಆಯ್ಕೆ ಮಾಡಿಕೊಂಡ ಈ ಶೀರ್ಷಿಕೆಗಳು ತಿಮೊಥಿ ಫಿಟರ್‌ಝುರಾಲ್ಡ್ (1997) ಅಭಿಪ್ರಾಯಪಟ್ಟಂತೆ, ಕೇವಲ ಆಧ್ಯಾತ್ಮಿಕ ಸಾಧನೆಗೆ ಸಾಧನ ಮಾತ್ರಗಳಾಗಿ ಕಂಡು ಬರುತ್ತವೆ.

## ಧಮ್ಮಾಚಾರಿಗಳು :

ಅಂಬೇಡ್ಕರ್‌ರವರು ಪ್ರತಿಪಾದಿಸಿದ ಬುದ್ಧ ಧಮ್ಮದ ನಿಯಮಗಳು ಆಚರಣಾತ್ಮಕವಾಗಿ ಸರಳವಾಗಿರುವುದಕ್ಕೆ 'ಧಮ್ಮಾಚಾರಿಗಳ' ಪರಂಪರೆ ಮಹತ್ವವನ್ನು ಪಡೆದುಕೊಳ್ಳುತ್ತದೆ. 1956 ಅಕ್ಟೋಬರ್, 14 ರಂದು ನಾಗಪೂರದಲ್ಲಿ ಬೌದ್ಧಧರ್ಮದ ಸ್ವೀಕರಿಸಿದ ಸಂದರ್ಭದಲ್ಲಿ ಭಾರತದ 5 ಕೋಟಿ ದಲಿತರು ಬೌದ್ಧರಾಗುವ ಕಾಲ ದೂರವಿಲ್ಲವೆಂದು ಭವಿಷ್ಯ ನುಡಿದಿದ್ದರು.[50] ಕೇವಲ ಒಂದೇ ಕರೆಗೆ 5 ಲಕ್ಷ ದಲಿತರು ತಮ್ಮೊಂದಿಗೆ ಬೌದ್ಧ ಧಮ್ಮ ಸ್ವೀಕಾರ ಮಾಡಿದ್ದು ಅಂಬೇಡ್ಕರ್‌ರವರಲ್ಲಿ ಅತೀವ ಭರವಸೆಯನ್ನು ಮೂಡಿಸಿದ್ದರ ದ್ಯೋತಕವೆಂಬಂತೆ ಈ ಭವಿಷ್ಯವಾಣಿ ಅವರಿಂದ ಮೂಡಿ ಬಂದಿದೆ. ಹಾಗೆ ಬೃಹತ್ ಸಂಖ್ಯೆಯಲ್ಲಿ ಬೆಳೆಯುವ ಬೌದ್ಧ ಸಮುದಾಯಕ್ಕೆ ಮಾರ್ಗದರ್ಶನ ಮಾಡಲು ಸಾವಿರಾರು ಸಂಖ್ಯೆಯ ಬಿಕ್ಕುಗಳ ಅವಶ್ಯಕತೆಯನ್ನು 1952 ರಲ್ಲಿಯೇ ಮನಗಂಡು ಬೆಂಗಳೂರಿನಲ್ಲಿ 'ಬಿಕ್ಕು ತರಬೇತಿ ಶಾಲೆ'[51] ಯನ್ನು ತೆರೆಯಲು ಅಪೇಕ್ಷಿಸಿದ್ದನ್ನು ಗಮನಿಸಿದ್ದೇವೆ. ಆದರೆ ದುರದೃಷ್ಟವಶಾತ್ ಮತಾಂತರದ ಕೆಲವೇ ದಿನಗಳಲ್ಲಿ ಅವರು ಕಾಲವಶರಾಗಿದ್ದರಿಂದ ಈ ಮಹಾನ್ ಕಾರ್ಯಕ್ಕೆ ಹಿನ್ನೆಡೆಯಾಗಿದ್ದು ಕಂಡುಬರುತ್ತದೆ.

ಆದರೆ ಮಹಾರಾಷ್ಟ್ರದಲ್ಲಿ ನವ ಬೌದ್ಧರಿಗೆ ಮಾರ್ಗದರ್ಶನ ಮಾಡಲು, ಬೌದ್ಧ ಧಮ್ಮದ ಆಚರಣೆಗಳನ್ನು ನಡೆಸಲು ಉಂಟಾದ ಕೊರತೆಯನ್ನು ನೀಗಿಸುವ ಉದ್ದೇಶದಿಂದ ಪುಣೆಯ ತ್ರೈಲೋಕ್ಯ ಬೌದ್ಧ ಮಹಾ ಸಂಘ (ಸಹಾಯಕ ಗಣ) ವು ಡಾ. ಅಂಬೇಡ್ಕರ್‌ರವರ ಮತ್ತು ಸಂಘರಕ್ಷಿತ ಇಬ್ಬರು ಆಧ್ಯಾತ್ಮಿಕ ನಾಯಕರ ಮಾದರಿಯನ್ನು ರೂಪಿಸಿಗೊಂಡಿದೆ. ಪೂಜ್ಯ ಮಹಾಸ್ಥವಿರ ಸಂಘರಕ್ಷಿತರ ಬಂತೇಜಿಯವರು (ಅನುಬಂಧ-1 ಚಿತ್ರ : 25, 26 ನೋಡಿ) ಅಂಬೇಡ್ಕರ್‌ರವರನ್ನು ಹಲವಾರು ಬಾರಿ ಭೇಟಿ ಮಾಡಿ ಚರ್ಚಿಸಿದವರು. ಹಾಗೂ ಅಂಬೇಡ್ಕರ್‌ರವರ ನಂತರದಲ್ಲಿ (ಮರಣಾನಂತರ) ಸಂಘರಕ್ಷಿತರೇ ಮಹಾರಾಷ್ಟ್ರದಲ್ಲಿ ಹಲವಾರು ಮತಾಂತರ ಕಾರ್ಯಕ್ರಮಗಳನ್ನು ನಡೆಸಿದರು. ನಂತರ ಇಂಗ್ಲೆಂಡಿಗೆ ತೆರಳಿದರು. ಇವರ ಪ್ರೇರಣೆಯಿಂದಲೇ ಇಂದಿನ ತ್ರೈಲೋಖ್ಯ ಬೌದ್ಧ ಮಹಾಸಂಘ (ಸಹಾಯಕ ಗಣ) ಬೌದ್ಧ ಚಳವಳಿ ಪ್ರಚಲಿತದಲ್ಲಿದೆ. 1970 ರ ದಶಕದಲ್ಲಿ ಆಚಾರ್ಯ ಸಂಘರಕ್ಷಿತರಿಂದ ಕಳುಹಿಸಲ್ಪಟ್ಟ ಇಬ್ಬರು 'ಧಮ್ಮಾಚಾರಿ' ಗಳು ಪುಣೆಯನ್ನು ಕೇಂದ್ರವಾಗಿರಿಸಿಕೊಂಡು ಬೌದ್ಧ ಧಮ್ಮ ಪ್ರಚಾರ, ಬೌದ್ಧ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಿದರು. ಈ ಸಂಘಟನೆಯು ಬೌದ್ಧಧರ್ಮವು 'ವ್ಯಕ್ತಿಯಲ್ಲಿ ನೀತಿಯನ್ನು ಅರಳಿಸಿ ಅವನನ್ನು ಸ್ವತಂತ್ರ ಸ್ವಾಯತ್ತ ಶಕ್ತಿಯನ್ನಾಗಿಸಿ, ಆ ಮೂಲಕ ಆತ ಸಾಮಾಜಿಕ ನ್ಯಾಯಕ್ಕೆ ಶ್ರಮಿಸಲು ಪ್ರೇರೇಪಿಸಬೇಕು[54] ಎಂಬ ಅಂಬೇಡ್ಕರ್‌ರವರ ಸಿದ್ಧಾಂತಕ್ಕೆ ಪೂರಕವಾದ ರೀತಿಯಲ್ಲಿ

ಬದ್ದವಾಗಿ ಕಾರ್ಯನಿರ್ವಹಿಸುತ್ತಿದೆ. ಈ ಸಂಘಟನೆಯ ಧಮ್ಮಾಚಾರಿಗಳು 'ಧಮ್ಮಕ್ರಾಂತಿ' ಯ ಮೂಲಕ ಪ್ರಜಾಪ್ರಭುತ್ವದ ಸಮಾಜವನ್ನು (Democratic Society) ಸ್ಥಾಪಿಸಲು ಬದ್ಧರಾಗಿರುವದನ್ನು ಕಾಣಬಹುದಾಗಿದೆ. ತ್ರೈಲೋಕ್ಯ ಬೌದ್ಧ ಮಹಾಸಂಘ ಸಹಾಯಕ ಗಣ (TBMSG) ವು ಅಂಬೇಡ್ಕರ್‌ರವರು ಗ್ರಹಿಸಿದ ವಿಮೋಚನಾ ಸ್ವರೂಪದ ಬೌದ್ಧ ಧಮ್ಮವನ್ನು ಕ್ರಾಂತಿಕಾರಿ ಸ್ವರೂಪದಲ್ಲಿ ಸ್ವೀಕರಿಸಿದೆ. ಈ ಸಂಘವು ಧಮ್ಮ (ಬೋಧನೆ ಅಥವಾ ವಿಮೋಚನೆಯ ಮಾರ್ಗ) ನಿರ್ವಾಣ (ಪರಿವರ್ತನೆ- Transcendental) ಕರುಣೆ (Compassion), ಬೋಧಿಸತ್ವ (Enlightened being) ಮೋಕ್ಷ ('ವಿಮೋಚನೆ' liberation) ಧಮ್ಮಕ್ರಾಂತಿ (Dhamma Revolution)[54] ಈ ಪದಗಳನ್ನು ವಿಫುಲವಾಗಿ ಬಳಸುತ್ತದೆ. ಅಂಬೇಡ್ಕರ್‌ರವರ ವಿಚಾರಧಾರೆಯಿಂದ ಪ್ರಭಾವಿತರಾದ ದಲಿತರು ಈ ಪಂಥವನ್ನು ಹೆಚ್ಚಾಗಿ ಅನುಸರಿಸುತ್ತಿದ್ದು, ಈ ಸಂಘಟನೆಯ ಚಟುವಟಿಕೆಗಳಿಗೆ ಬೆಂಬಲ ಸೂಚಿಸಿದ್ದಾರೆ. 'ಸಹಾಯಕ ಗಣ'ದ ಸದಸ್ಯರಾಗಿ ಸೇರಿಕೊಂಡು ಯಾರಾದರೂ ಹಂತ ಹಂತವಾಗಿ 'ಧಮ್ಮಾಚಾರಿ' ಗಳಾಗಿ ಬುದ್ಧ ಧಮ್ಮವನ್ನು ಮುನ್ನಡೆಸಬಹುದಾದ ಮಾದರಿಯನ್ನು ಈ ಸಂಘದಲ್ಲಿ ಕಾಣುತ್ತೇವೆ (ಅನುಬಂಧ-1 ಚಿತ್ರ : 26 ರಲ್ಲಿ ಧಮ್ಮಾಚಾರಿಗಳಿಗೆ ದೀಕ್ಷೆ ನೀಡಿರುವುದನ್ನು ಕಾಣಬಹುದು) 'ಧಮ್ಮಾಚಾರಿಗಳನ್ನು ಬೌದ್ಧ ಬಿಕ್ಕುವಿನ ಸಮಾನವಾಗಿ ಕಾಣುವ',[55] ಪರಿಪಾಠವೂ ಈ ರೀತಿಯ ಮಾದರಿಯಲ್ಲಿ ಕಾಣುತ್ತೇವೆ. ಆದರೆ ಧಮ್ಮಾಚಾರಿಗಳು ಮದುವೆಯಾಗಬಹುದೆಂಬ ಬಗ್ಗೆ ಭಿನ್ನಾಭಿಪ್ರಾಯಗಳಿರುವುದನ್ನು ಕಾಣುತ್ತೇವೆ.

ತ್ರೈಲೋಖ್ಯ ಬೌದ್ಧ ಮಹಾಸಂಘ ಸಹಾಯಕ ಗಣವು ಹೊರಡಿಸುವ 'ಬುದ್ಧಯಾನ' ತ್ರೈಮಾಸಿಕ ಪತ್ರಿಕೆಯು ಈ ಸಂಘಟನೆಯ ಮುಖವಾಣಿ ಪತ್ರಿಕೆಯಾಗಿದೆ. ಈ ಪತ್ರಿಕೆಯ ಸಂಚಿಕೆಗಳನ್ನು ತೆರೆದು ನೋಡಿದರೆ, ಈ ಸಂಘಟನೆ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ಬೌದ್ಧ ಧರ್ಮ ಚಳವಳಿಗೆ ಎಷ್ಟೊಂದು ಹಿರಿದಾದ ಮಹತ್ವವನ್ನು ಕೊಟ್ಟಿದೆಯೆಂಬುದು ಗಮನ ಸೆಳೆಯುತ್ತದೆ. ಈ ಸಂಘಟನೆಯ ಬಿಕ್ಕು ಗಣ, ಸಹಾಯಕಗಣದ ಧಮ್ಮಾಚಾರಿಗಳು, ಧಮ್ಮ ಸೇವಕರು, ಧಮ್ಮ ಮಿತ್ರರು ಡಾ. ಅಂಬೇಡ್ಕರ್‌ರವರ ಬೌದ್ಧ ಮತಾಂತರದಿಂದ ಘಾಡವಾಗಿ ಪ್ರಭಾವಿತರಾಗಿ, ಉಚ್ಚ ಪ್ರೇರಣೆ ಪಡೆದವರಾಗಿ ಬೌದ್ಧ ಧರ್ಮ ಆಚರಣೆ, ಪ್ರಸಾರಕ್ಕೆ ತಮ್ಮನ್ನೇ ತಾವು ಅರ್ಪಿಸಿಕೊಂಡಿದ್ದಾರೆ. ಇತ್ತೀಚೆಗೆ ದಲಿತ ಯುವಕರೂ ಧಮ್ಮಾಚಾರಿಗಳಾಗಿ ದೀಕ್ಷೆ ಪಡೆದ ವಿವರಗಳನ್ನು 'ಬುದ್ಧಯಾನ' ತ್ರೈಮಾಸಿಕ ಪ್ರಕಟಿಸಿದೆ. 16, ಮಾರ್ಚ್ 1997 ರಂದು ನಾಗಪೂರ ಧಮ್ಮಾಚಾರಿ ಮಂಜು ಕೇತು (ವಿನೋದ ಕಮಲರತ್ನ ನಾಗಪೂರ) ಧಮ್ಮಾಚಾರಿ ಆರ್ಯಕೇತು (ರಣಜಿತ ಅರ್ಥದರ್ಶಿ, ನಾಗಪೂರ) ಧಮ್ಮಾಚಾರಿ ಧಮ್ಮದೀಪ (ಪ್ರವೀಣ ನಾಗವೀರ - ಅಹಮದಾಬಾದ್) (ಅನುಬಂಧ-1, ಚಿತ್ರ: 25, 26 ನೋಡಿ) ಈ ಬೌದ್ಧ ಉಪಾಸಕರು ಧಮ್ಮಾಚಾರಿಗಳಾಗಿ 'ಅಷ್ಟಕೋನ ಮಹಾವಿಹಾರದ ಹಿರಿಯ ಧಮ್ಮಾಚಾರಿಗಳಾದ ಅನಾಗರಿಕ ಸುಭೂತಿ'[56] (ಅನುಬಂಧ -1, ಚಿತ್ರ : 26, ಎಡಭಾಗ ನೋಡಿ) ಇವರಿಂದ 'ಧಮ್ಮಾಚಾರಿ ದೀಕ್ಷೆಯನ್ನು ಪಡೆದಿರುವುದನ್ನು ಕಾಣುತ್ತೇವೆ. ಈ ಧಮ್ಮಚಾರಿಗಳು, ಧಮ್ಮಮಿತ್ರರಿಗೆ ಉಪಾಸಕರಿಗೆ ಬೌದ್ಧ ಧಮ್ಮ ದೀಕ್ಷೆ ನೀಡುವ ಅರ್ಹತೆ, ಪಡೆದಿರುತ್ತಾರೆ. ಕರ್ನಾಟಕದ ಅನೇಕ ದಲಿತರು, ದಲಿತ ವಿದ್ಯಾರ್ಥಿ ಧುರೀಣರು ಬೌದ್ಧ ಉಪಾಸಕರು ಈ ಸಂಘಟನೆಯ ಸಂಪರ್ಕದಲ್ಲಿದ್ದಾರೆ. ನಾಗಪೂರ ದೀಕ್ಷಾ ಭೂಮಿಗೆ ಹೋಗುವ ಎಲ್ಲ ದಲಿತರು 'ತ್ರೈಲೋಖ್ಯ ಬೌದ್ಧ ಮಹಾಸಂಘ ಸಹಾಯಕ ಗಣ ಏರ್ಪಡಿಸುವ ದೀಕ್ಷಾ

ಕಾರ್ಯಕ್ರಮದಲ್ಲಿ ಬೌದ್ಧಧರ್ಮ ದೀಕ್ಷೆ ಪಡೆದು ಬರುತ್ತಾರೆ. ಆ ಸಂದರ್ಭದಲ್ಲಿ (ಧರ್ಮಚಕ್ರ ಪ್ರವರ್ತನ ದಿನಾಚರಣೆ) ಹಲವಾರು ಕಾರ್ಯಕ್ರಮಗಳನ್ನು ಈ ಸಂಘಟನೆ ಹಮ್ಮಿಕೊಂಡಿರುತ್ತದೆ.

'ಬುದ್ಧಗಯಾ' ವಿಮೋಚನಾ ಆಂದೋಲನದ ನಾಯಕತ್ವ ವಹಿಸಿದ ಜಪಾನಿನ ಬಿಕ್ಕು ಸುರಾಯಿ ಸಸಾಯಿಯವರು ಈ ಹಿನ್ನೆಲೆಯಲ್ಲಿ ಮಹಾರಾಷ್ಟ್ರದಲ್ಲಿ ದಲಿತ ಬೌದ್ಧರಿಗೆ ವಿಶೇಷ ಪ್ರೇರಣೆ, ಮಾರ್ಗದರ್ಶನ ಮಾಡುತ್ತಿದ್ದಾರೆ. ಪ್ರತಿವರ್ಷ ನಾಗಪುರ ದೀಕ್ಷಾ ಭೂಮಿಯಲ್ಲಿ ಮತಾಂತರ ಕಾರ್ಯಕ್ರಮದ ನೇತೃತ್ವ ವಹಿಸಿಕೊಂಡಿರುತ್ತಾರೆ. ದಲಿತ ಬೌದ್ಧರ ಕಾರ್ಯಚಟುವಟಿಕೆಗಳಿಗೆ ಈ ಹಿರಿಯ ಬಿಕ್ಕುಗಳು ಉತ್ತಮ ಮಾರ್ಗದರ್ಶನ, ಬೆಂಬಲ ನೀಡುತ್ತಿರುವುದನ್ನು ಕಾಣಬಹುದಾಗಿದೆ.

ಮಹಾರಾಷ್ಟ್ರದಲ್ಲಿ ಇಂದು ಸಿಂಹಳ ಮೂಲದ (ತರಬೇತಿ ಹೊಂದಿದ) ಬಿಕ್ಕುಗಳಿದ್ದರೆ, ಜಪಾನ್ ಬರ್ಮಾ ಮುಂತಾದ ದಕ್ಷಿಣ ಏಷ್ಯಾ ದೇಶಗಳ ಬಿಕ್ಕುಗಳು ಅಲ್ಲಲ್ಲಿ ಬೌದ್ಧವಿಹಾರಗಳನ್ನು, ಬೌದ್ಧ ಸಾಂಸ್ಕೃತಿಕ, ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸಿ ಅವರದೇ ಆದ ರೀತಿಯಲ್ಲಿ ಬೌದ್ಧಧರ್ಮದ ಪ್ರಸಾರ, ದಲಿತರ ಅಭಿವೃದ್ಧಿ ಸಾಮಾಜಿಕ ನ್ಯಾಯಕ್ಕಾಗಿ ಹಗಲಿರುಳು ಶ್ರಮಿಸುತ್ತಿದ್ದಾರೆ. ಇದರೊಟ್ಟಿಗೆ ಆಗಲೇ ಹೇಳಿದಂತೆ ದಲಿತರಲ್ಲೇ ಎರಡನೇ ತಲೆಮಾರಿನ ಮುಂದುವರೆದ (elite) ಬೌದ್ಧರು ಹಲವಾರು ರೀತಿಯಲ್ಲಿ ಬೌದ್ಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದಾರೆ. ಅಂತರ್‌ರಾಷ್ಟ್ರೀಯ ಮಟ್ಟದ ಬೌದ್ಧ ವಿಚಾರ ಸಂಕಿರಣಗಳನ್ನು, ಕಾರ್ಯಕ್ರಮಗಳನ್ನು ಸಂಘಟಿಸುತ್ತಿದ್ದಾರೆ. ಇಂತಹ ಕಾರ್ಯಕ್ರಮಗಳಲ್ಲಿ ಕರ್ನಾಟಕ ದಲಿತ ಬುದ್ಧಿ ಜೀವಿಗಳೂ, ವಿಶ್ವವಿದ್ಯಾಲಯದ ಪ್ರಾಧ್ಯಾಪಕರೂ ಆಗಾಗ ಭಾಗವಹಿಸಿರುವುದನ್ನು ನೋಡುತ್ತೇವೆ.

## ಗ್ರಾಮ ಬೌದ್ಧ ಧಮ್ಮ :

ಹಳ್ಳಿಗಳಲ್ಲಿ ಬಂಗಾಳಿ ಕಟ್ಟೆಗಳು, ಬೋಧಿವೃಕ್ಷ ಬೆಳೆಸುವುದು, ಬೌದ್ಧ ಪರಂಪರೆಯ ಕುರುಹುಗಳಾಗಿವೆ. ಇವುಗಳು ಊರ ಹೊರಗೆ ಇರುವುದನ್ನು ನೋಡುತ್ತೇವೆ. ಕಾಲಕ್ರಮೇಣ, ಮದುವೆಯಲ್ಲಿ ಹಬ್ಬ ಹರಿದಿನಗಳಲ್ಲಿ ವಿವಾಹ, ಬಾಣಂತ ಮುಂತಾದ ಸಂದರ್ಭಗಳಲ್ಲಿ ಬಳಸುವ ಅರಿಸಿನ ಲೇಪನ ಕಾರ್ಯ ಬೌದ್ಧ ಧಮ್ಮದ ಪಳೆಯುಳಿಕೆಯ ರೂಢಿಗಳೇ ಆಗಿವೆ ಎಂಬುದನ್ನು ಹಲವಾರು ಬೌದ್ಧ ವಕ್ತಾರರು ಅಭಿಪ್ರಾಯ ಪಡುತ್ತಾರೆ.

ಹಳ್ಳಿಗಳ ದೇವಸ್ಥಾನದ ಮುಂದೆ ಕಂಡು ಬರುವ ಪಾದಗಟ್ಟೆಗಳು ಬುದ್ಧನ ಪಾದಗಳನ್ನೇ ನಮಗೆ ನೆನಪಿಸುತ್ತವೆ. ಹಾಗೆ ಬುದ್ಧನ ಪಾದಗಟ್ಟೆಗಳನ್ನು ಪ್ರತಿಯೊಂದು ವಿಹಾರ, ಸ್ತೂಪ, ಚೈತ್ಯಗಳ ಸಮೀಪ ಇಟ್ಟಿರುವುದನ್ನು ಕಾಣುತ್ತೇವೆ. (ಉದಾ : ಸನ್ನತಿ ಉತ್ಖನನದಲ್ಲಿ ಕೇವಲ ಬುದ್ಧನ ಪಾದಗಳೇ ಇರುವ ಪಾದಗಟ್ಟೆಗಳು ಕಂಡು ಬಂದಿವೆ.) ಈಗಲೂ ಕೂಡ ದಲಿತರ ವಿವಾಹಗಳು ಎಕ್ಕೆಯ ಎಲೆಗಳನ್ನು ತಂದು ಪೂಜಿಸುವುದರಿಂದಲೇ ಪ್ರಾರಂಭವಾಗುವುದು. ಬೋಧಿವೃಕ್ಷಗಳು (ಅಶ್ವತ್ಥ ವೃಕ್ಷಗಳು) ಇಲ್ಲದ್ದರಿಂದ ಅದನ್ನು ಹೋಲುವ ಎಕ್ಕೆ ಎಲೆಗಳನ್ನು ತೆಗೆದುಕೊಂಡು ಬರುವುದನ್ನು ಕಾಣುತ್ತೇವೆ. 'ಪುರೋಹಿತರು ಬೋಧಿವೃಕ್ಷಕ್ಕೆ ಅವಮಾನ ಮಾಡುವ ಉದ್ದೇಶದಿಂದ ವೃಕ್ಷಗಳಲ್ಲಿ ದೆವ್ವಭೂತಗಳು ಇವೆ ಎಂದು ಸುಳ್ಳು ಸೃಷ್ಟಿಸಿದರು'.[57]

ಆದ್ದರಿಂದ ಗ್ರಾಮೀಣ ಪ್ರದೇಶದಲ್ಲಿ ಕ್ರಮೇಣ ಇವುಗಳನ್ನು ಕಡಿದು ಹಾಕಲಾಯಿತು. ಸ್ತೂಪ ಚೈತ್ಯದ ಗುಮ್ಮಟಗಳನ್ನೇ ಮೇಲಿನ ಭಾಗದ ಭಿತ್ತಿಗಳನ್ನು ಕಡಿದು ಹಾಕಿ ಅನ್ಯ ಧರ್ಮೀಯರು ತಮ್ಮ ಧಾರ್ಮಿಕ ಕಟ್ಟಡಗಳನ್ನಾಗಿ ಮಾಡಿ ಪರಿವರ್ತಿಸಿಕೊಂಡಿರುವುದನ್ನು ಕಾಲಗತಿಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಂಡು ಬರುವುದನ್ನು ಕಾಣುತ್ತೇವೆ. ಸಂಪ್ರದಾಯದಲ್ಲಿ ಹಡ್ಡಲಿಗ ಹಿಡಿದು ಬಿಕ್ಷೆ ಬೇಡುವುದು ಹಳದಿ ಸೀರೆ, ಧರಿಸುವುದು ಹಳದಿ ಅರಿಸಿನವನ್ನು ಹಣೆ ಮೇಲೆ ಹಚ್ಚಿಕೊಳ್ಳುವುದು, ಇವೆಲ್ಲ ಬೌದ್ಧ ಬಿಕ್ಕುಣಿಯರ ಪಳೆಯುಳ್ಳಿಕೆಗಳಾಗಿವೆ'[58]. ಎಂದು ದಲಿತ ಬೌದ್ಧ ವಕ್ತಾರರು ಪ್ರತಿಪಾದಿಸುತ್ತಾರೆ.

ಈ ಎಲ್ಲ ಪ್ರಜ್ಞೆಗಳ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಒಂದು ವಿನೂತನ 'ಬೌದ್ಧ ಪುನರುಜ್ಜೀವನ ಚಳವಳಿ ಪ್ರಾರಂಭವಾಗಿದೆ'. 1997 ರಲ್ಲಿ ಬೌದ್ಧ ಧಮ್ಮವನ್ನು ಗ್ರಾಮೀಣ ಪ್ರದೇಶಕ್ಕೆ ಕೊಂಡೊಯ್ಯುವ ಪ್ರಯತ್ನವಾಗಿ 'ಬುದ್ಧ ಬರಲಿ ನಮ್ಮ ಊರಿಗೆ' ಎನ್ನುವ ಕಾರ್ಯಕ್ರಮ ಹಮ್ಮಿಕೊಂಡು ಬುದ್ಧನ ತತ್ವಗಳನ್ನು ಅಂಬೇಡ್ಕರ್‌ರವರ ವಿಚಾರಗಳ ಪ್ರಚಾರ ನಡೆದಿದೆ. 'ಬುದ್ಧ ಬರಲಿ ನಮ್ಮ ಊರಿಗೆ' ಎಂಬ ಕಿರುಹೊತ್ತಿಗೆಯಲ್ಲಿ ಮೈಸೂರಿನ ಕೆ.ಎಂ. ಶಂಕರಪ್ಪನವರು.

'ಬುದ್ಧನ ಮೌಲ್ಯಗಳು 'ಮತ್ತೆ' ಹಳ್ಳಿಗಾಡಿನಲ್ಲಿ ನಡೆದಾಡಬೇಕಾಗಿದೆ. ಈ ದಿಕ್ಕಿನಲ್ಲಿ ಒಂದು ಹೆಜ್ಜೆ 'ಬುದ್ಧ ಬರಲಿ ನಮ್ಮ ಊರಿಗೆ' ಎಂಬ ಪುಸ್ತಕ,'[59] ಎಂದು ಬರೆಯುವಲ್ಲಿ 'ಮತ್ತೆ' ಎಂಬ ಪದ ಅಸಂಖ್ಯಾತ ದಲಿತರ ಚಿಂತಕರ ಅಭಿಪ್ರಾಯವನ್ನು ಬಿಂಬಿಸುವ ಪದವಾಗಿದೆ. 'ನಾವೆಲ್ಲ ಬೌದ್ಧರಾಗಿದ್ದೆವು, 'ಮತ್ತೆ' ನಾವು ಅದನ್ನು ಅನುಸರಿಸಬೇಕಾಗಿದೆ ಎನ್ನುವ 'ಸಾಂಘಿಕ' ಧ್ವನಿಯನ್ನು ಬಿಂಬಿಸುತ್ತದೆ. ಈ ಕಾರ್ಯಕ್ರಮದಿಂದ ಪ್ರೇರಿತವಾದ ಅಸಂಖ್ಯಾತ ಬೌದ್ಧ ಯುವಕ ಯುವತಿಯರು ಇಂದು ನಾಗಪೂರದ 'ದೀಕ್ಷಾಭೂಮಿ', ಮುಂಬೈನ 'ಚೈತ್ಯಭೂಮಿ' ಗೆ ಹೋಗಿ ಅಲ್ಲಿಂದ ಪ್ರೇರಿತರಾಗಿ ಬೌದ್ಧ ಧಮ್ಮ ದೀಕ್ಷೆ ಪಡೆದುಕೊಳ್ಳುತ್ತಲಿದ್ದಾರೆ.

ಇಂದು ದಲಿತ ಬೌದ್ಧರಲ್ಲಿ ಒಟ್ಟಾರೆ ದಲಿತರಲ್ಲಿ ಅಂಬೇಡ್ಕರ್ ಅನುಯಾಯಿಗಳಲ್ಲಿ ಬೌದ್ಧ ಪ್ರಜ್ಞೆಗೆ ಹೆಚ್ಚಿನ ಇಂಬು ಪಡೆದಿರುವುದನ್ನು ಕಾಣುತ್ತೇವೆ. ವೈಚಾರಿಕತೆಯೇ ಅವರ ವಿಚಾರಗಳಲ್ಲಿ ಪ್ರಧಾನವಾಗಿ ಕಾಣುತ್ತದೆ. ಇನ್ನೂ ಗ್ರಾಮೀಣ ಪ್ರದೇಶದಲ್ಲಿಯೂ ಕೂಡ ಹೊಲಗೇರಿ, ಮಾದರಕೇರಿಗಳ ಬದಲಾಗಿ ಭೀಮನಗರ, ಅಂಬೇಡ್ಕರ್ ಕಾಲನಿ, ಅಂಬೇಡ್ಕರ್ ನಗರ, ಬಸವ ನಗರ, ಸಿದ್ದಾರ್ಥ ಕಾಲಿನಿ ಎಂದು ನಾಮಾಂತರಗೊಂಡಿವೆ. ಒಂದು ಸಣ್ಣ ಗ್ರಾಮದಲ್ಲಿ ಅಂಬೇಡ್ಕರ್ ಜಯಂತಿ ಏರ್ಪಡಿಸಿದರೂ ಅಂಬೇಡ್ಕರ್ ಭಾವಚಿತ್ರದೊಂದಿಗೆ ಬುದ್ಧನ ಭಾವಚಿತ್ರವನ್ನು ಇಟ್ಟು ಗೌರವಿಸುವುದನ್ನು ನೋಡುತ್ತೇವೆ. ಮೊದಲು ಹಿಂದೂ ಪ್ರಾರ್ಥನೆ, ಸ್ತುತಿ ಗೀತೆಯೊಂದಿಗೆ ಪ್ರಾರಂಭವಾಗುತ್ತಿದ್ದ ದಲಿತರ ಕಾರ್ಯಕ್ರಮಗಳು, ಅಂಬೇಡ್ಕರ್ ಜಯಂತಿ ಕಾರ್ಯಕ್ರಮಗಳು ತ್ರಿಸರಣ, ಬುದ್ಧವಂದನೆ, ನಾಡಗೀತೆಗಳಿಂದ ಪ್ರಾರಂಭವಾಗುತ್ತವೆ. ಹಲವಾರು ಕಡೆ ಬೌದ್ಧ ಧ್ವಜವನ್ನು ಆರೋಹಣ ಮಾಡಿಯೇ ಕಾರ್ಯಕ್ರಮ ಪ್ರಾರಂಭಿಸುತ್ತಾರೆ. (ಅನುಬಂಧ-1 ರಲ್ಲಿ, ಚಿತ್ರ : 1 ಗಮನಿಸಿ) ಸಮೀಪದಲ್ಲಿ ಬೌದ್ಧ ಬಿಕ್ಕುಗಳು ಉಪಲಬ್ದವಾದರೆ ಅವರ ನೇತೃತ್ವದಲ್ಲಿಯೇ ಈ ಕಾರ್ಯಕ್ರಮಗಳು ನಡೆಯುವುದನ್ನು ಕಾಣುತ್ತೇವೆ. (ಅನುಬಂಧ - 1, ಚಿತ್ರ 53, 54 ನೋಡಿ)

ಬೌದ್ಧ ಆಚರಣೆಗಳು ವ್ಯಾಪಕವಾಗಿ ದಲಿತರಲ್ಲಿ ಕಂಡು ಬರದೇ ಇರುವುದಕ್ಕೆ ಹಲವಾರು ಕಾರಣಗಳಿವೆ. ಅಂಬೇಡ್ಕರ್‌ರವರು ಮತಾಂತರ ಹೊಂದಿದ ನಂತರ ಕೆಲವೇ ದಿನಗಳವರೆಗೆ ಬದುಕಿದರು. ಅವರ ಮರಣಾನಂತರ ಉಳಿದ ಮುಖಂಡರು ಅಖಿಲ ಭಾರತ ಮಟ್ಟದಲ್ಲಿ ಅಂತಹ ಪ್ರಯತ್ನಗಳನ್ನು ಮಾಡದೇ ಇರುವುದರಿಂದ ಈ ರೀತಿ ಕಂಡು ಬರುತ್ತದೆ. ಪ್ರಸಿದ್ಧ ದಲಿತ ಸಾಹಿತಿ 'ಹಕೀಕತ್ ಅಣೀ ಜಟಾಯುವಿನ ಕಾದಂಬರಿಕಾರ ಕೇಶವ ಮೇಶ್ರಾಮ' ಅವರು ರಾಘವೇಂದ್ರ ಪಾಟೀಲರಿಗೆ ನೀಡಿದ ಸಂದರ್ಶನವನ್ನು ಡಾ. ಅರವಿಂದ ಮಾಲಗತ್ತಿ 'ಆಯುಷ್ಮಾನ್ ಕೇಶವ ಮೇಶ್ರಾಮರೊಂದಿಗೆ' ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದ್ದಾರೆ. ಹಿಂದೂ ಪದ್ಧತಿಯಂತೆ ಶ್ರೀ / ಶ್ರೀಮತಿಗೆ ಪರ್ಯಾವಾಗಿ ಬೌದ್ಧ ರೀತಿಯಲ್ಲಿ ವ್ಯಕ್ತಿಗಳನ್ನು ಸಂಬೋಧಿಸುವಾಗ 'ಆಯುಷ್ಮಾನ್' ಪದ ಬಳಸಲಾಗುತ್ತದೆ. ಮೇಶ್ರಾಮು ಅವರ ಪೌರಾಣಿಕ ಕಲ್ಪನೆ ಬಳಕೆಯ ಬಗ್ಗೆ ರಾಘವೇಂದ್ರ ಪಾಟೀಲರು 'ಬುದ್ದಿಸ್ಟ್ ತತ್ವದ ಹಿನ್ನಲೆಯಲ್ಲಿ ಇಂಥ ಪುರಾಣ ಸೃಷ್ಟಿ ಕ್ರಿಯೆಯನ್ನು ನಾವು ದಲಿತ ಸಾಹಿತ್ಯದಲ್ಲಿ ಕಾಣುತ್ತಿಲ್ಲವಲ್ಲ' ಎಂಬ ಪ್ರಶ್ನೆಗೆ,

ಕೇಶವ ಮೇಶ್ರಾಮ 'ನೀವು ಕೇಳುತ್ತಿರುವುದು ತುಂಬ ಸರಿ, ನೋಡಿ ಬಾಬಾಸಾಹೇಬ ಅಂಬೇಡ್ಕರ್‌ರವರು ಬೌದ್ಧ ಧರ್ಮ ಸ್ವೀಕಾರ ಮಾಡಿದ ಮೇಲೆ ಅದಕ್ಕೆ ಸಂಬಂಧಪಟ್ಟ ಬದಲಾವಣೆಗಳನ್ನು ಜನತೆಯ ಜೀವನದಲ್ಲಿ ಅಳವಡಿಸಲು ಅವರಿಗೆ ಸಮಯಲೇ ಸಿಗಲಿಲ್ಲ. ತುಂಬ ಸ್ವಲ್ಪ ಕಾಲದಲ್ಲಿಯೇ ಅವರು ನಿರ್ವಾಣ ಹೊಂದಿದರು. ಅಂಬೇಡ್ಕರ್‌ರವರ ನಂತರದ ನೇತಾರರು ಅವರು ಅಪೂರ್ಣವಾಗಿ ಬಿಟ್ಟುಹೋದ ಈ ಕಾರ್ಯವನ್ನೂ ಪೂರ್ಣಗೊಳಿಸಬೇಕಾಗಿತ್ತು. ಜನತೆಗೆ ಧರ್ಮ ಅಂದರೇನು ? ಬೌದ್ಧ ಧರ್ಮ ಏನು ಹೇಳುತ್ತಾರೆ ? ಅದು ಹಿಂದೂ ಧರ್ಮದಿಂದ ಹೇಗೆ ಭಿನ್ನವಾಗಿದೆ ? ಈ ಎಲ್ಲ ಹಿಂದೂ ಧರ್ಮದಿಂದ ಹೇಗೆ ಭಿನ್ನವಾಗಿದೆ ? ಈ ಎಲ್ಲ ಅಂಶಗಳನ್ನು ವಿವರಿಸಬೇಕಾಗಿತ್ತು. ಆದರೆ ಇಂಥ ಕೆಲಸ ನಡೆಯಲಿಲ್ಲ' ಎಂದು ಅಭಿಪ್ರಾಯ ಪಡುತ್ತಾರೆ. ಬೌದ್ಧ ಆಚರಣೆಗಳ ಆಯಾಮದ ಕುರಿತು, ಅವರು ಮುಂದುವರೆದು ಹೇಳುತ್ತಾ, 'ಬದುಕಿನ ತೀವ್ರತೆಯನ್ನು ಅನುಭವಿಸಲು ಮನುಷ್ಯನಿಗೆ ಉತ್ಸವ, ಸಮಾರಂಭಗಳು ಬೇಕು, ಇಂಥವು ಜೀವನದ Outlets, ನಾನು ಬರೀ ಥಿಯರಿ ಹೇಳುತ್ತಿಲ್ಲ. ನೇರವಾಗಿ ನನ್ನ ಜನರನ್ನು ನೋಡಿ ಈ ಮಾತು ಹೇಳುತ್ತಿದ್ದೇನೆ. ಈ ಪರಿವರ್ತನೆಯ ಸಂದರ್ಭಲ್ಲಿ ಜನಕ್ಕೆ ಉತ್ಸವ - ಆಚರಣೆ ಈ ಮುಂತಾದ ಜೀವನದ Outlets ಗಳು ದೊರೆಯಲಿಲ್ಲ. ಇದರಿಂದ ಅವರು ಒಂದು ರೀತಿಯ ಮಾನಸಿಕ ಗೊಂದಲದಲ್ಲಿ ಸಿಕ್ಕಿ ಹಾಕಿಕೊಂಡಿದ್ದಾರೆ.... ಇದರಿಂದ ಅವರ ಜೀವನ ವಿಧಾನದಲ್ಲಿ ಸಹಜ ಹೊರದಾರಿಗಳು ಅಳವಡದೇ ಒಂದು ರೀತಿಯ ಕುಸಿತ ಉಂಟಾಗಿದೆ' ಎಂದು ಅಂಬೇಡ್ಕರ್‌ರವರ ಮತಾಂತರ ಆಂದೋಲನ ನಂತರದ ಸ್ಥಿತಿಗತಿಯ ಬಗ್ಗೆ ಅವಲೋಕನ ನೀಡಿದ್ದಾರೆ. ರಾಘವೇಂದ್ರ ಪಾಟೀಲರು ಕೇಳಿದ 'ಈ ಸಮಸ್ಯೆಗಳ ಪರಿಹಾರದ ಬಗ್ಗೆ ಯೋಚಿಸಿದ್ದೀರಾ ? ಎಂಬ ಪ್ರಶ್ನೆಗೆ ಕೇಶವ್ ಮೇಶ್ರಾಮ್ ಪ್ರಯತ್ನಗಳು ನಡೆದಿವೆ. . . . ನಾವು ಬಹುತೇಕ ಶಿಕ್ಷಿತ ದಲಿತರು ಈ ಬಗ್ಗೆ ಯೋಚಿಸುತ್ತಿದ್ದೇವೆ. ನಮ್ಮ ಬದುಕಿನ ವಿಧಾನಗಳಲ್ಲಿ ಉಂಟಾಗಿರುವ ಪರಿವರ್ತನಗಳೇನು? ಎನ್ನುವ ಬಗ್ಗೆ ತೀವ್ರ ವಿಚಾರ ಏರ್ಪಡುತ್ತಿದೆ. ಬಾಬಾಸಾಹೇಬ ಅಂಬೇಡ್ಕರ್‌ರವರ ಚಿಂತನೆ ಮತ್ತು ಕ್ರಿಯಾಶೀಲತೆಯಿಂದಲೇ ನಮ್ಮ ಬದುಕಿನ ವಿಧಾನದಲ್ಲಿ ಮಾರ್ಪಾಡುಗಳಾಗಿವೆ ಎಂಬುದನ್ನು ನಾವು ಅರಿತಿದ್ದೇವೆ. ಅಂತೆಯೇ ಅವರ ಆದರ್ಶಗಳನ್ನು ಇನ್ನಷ್ಟು ವ್ಯಾಪಕವಾಗಿ ನಮ್ಮ ಮುಂದಿನ ಪೀಳಿಗೆಗೆ ಕೊಂಡೊಯ್ಯಲು ನಾವು ಕೆಲಸ ಮಾಡಬೇಕಾಗಿದೆ. ಈ ದಿಕ್ಕಿನಲ್ಲಿ ನಮ್ಮ ಅನೇಕ ಸಂಸ್ಥೆಗಳು ಮತ್ತು ಶಾಲೆಗಳು ಕೆಲಸ ಮಾಡುತ್ತಿವೆ. ಪುಸ್ತಕಗಳ

ಪ್ರಕಟಣೆಯ ಮೂಲಕ ಅವರ ಚಿಂತನೆಗಳ ಪ್ರಸಾರ ನಡೆದಿದೆ. ಇದಲ್ಲದೇ ಬಿಕ್ಕುಗಳು ಇಂದು ಹಳ್ಳಿಯಿಂದ ಹಳ್ಳಿಗೆ ಹೋಗಿ ಬೌದ್ಧ ಧರ್ಮ ಚಿಂತನೆಗಳನ್ನು ತತ್ವಗಳನ್ನು ಪ್ರಚಾರ ಮಾಡುತ್ತಿದ್ದಾರೆ.

ಇಡೀ ಜೀವನ ವ್ಯವಹಾರಗಳನ್ನು ಯಾವ ತರಹ ಬದಲಿಸಿಕೊಳ್ಳುವ ಪ್ರಯತ್ನಗಳು ನಡೆದಿವೆ. ಅಂದರೆ, ನೋಡಿ ಈಗ ಶ್ರೀ ಪಾಟೀಲ ಎಂದು ಹೇಳುವ ಬರಲು 'ಆಯುಷ್ಮಾನ್' ಪಾಟೀಲ ಎಂತಲೂ ಈಗ 'ಆಶೀರ್ವಾದಗಳು' ಎಂದು ಹೇಳುವ ಬದಲು 'ಮಂಗಲವಾಗಲಿ' ಎಂದು ಹೇಳುವ ವಿಧಾನಗಳನ್ನು ಬೆಳೆಸಿಕೊಳ್ಳುತ್ತಿದ್ದೇವೆ. ಲಕ್ಷ್ಮೀ, ರಾಮ ಆಶೀರ್ವಾದ ಈ ಮುಂತಾದ ಎಲ್ಲಿ ಹಿಂದೂ ಧರ್ಮದ ಕಲ್ಪನೆಗಳನ್ನು ಕಳಚಿ ಹಾಕಿಕೊಳ್ಳುವ ಪ್ರಯತ್ನಗಳು ನಡೆದಿವೆ. ಇಂಥ ಒಂದು ಸಮಗ್ರ ಪ್ರಕ್ರಿಯೆ ಆರಂಭವಾಗಿದೆ. ಬಹುಶಃ ಇನ್ನೊಂದು ದಶಕದಲ್ಲಿ ಈ ನಿಟ್ಟಿನಲ್ಲಿ ಗುಣಾತ್ಮಕ ಸಾಧನೆ ಸಾಧ್ಯವಾಗಬಹುದೆಂದು ಭಾವಿಸುತ್ತೇವೆ.

ರಾಘವೇಂದ್ರ ಪಾಟೀಲ: ಬೌದ್ಧ ಸಂಸ್ಕೃತಿಯ ಯಾವುದಾದರೂ ವಿಶೇಷ ಆಚರಣೆಗಳನ್ನು ಅಳವಡಿಸಿಕೊಂಡಿದ್ದೀರಾ ?

ಕೇಶವ ಮೇಶ್ರಾಮ್ : ವಿಜಯ ದಶಮಿ (ದಸರಾ) ಉತ್ಸವದ ಆಚರಣೆ, (ಧಮ್ಮ ಚಕ್ರ ಪ್ರವರ್ತನ), ಇದನ್ನು ಬಿಟ್ಟರೆ ಬುದ್ಧ ಜಯಂತಿ, ಅಂಬೇಡ್ಕರ್ ಜಯಂತಿ ಉತ್ಸವಗಳನ್ನು ಆಚರಿಸಲಾಗುತ್ತಿದೆ. ಇವಲ್ಲದೇ ನಮ್ಮ ನಾಯಕರ ನಾಸಿಕ ಪ್ರದೇಶದ ದಾದಾಸಾಹೇಬ ಗಾಯಕವಾಡ, ನಾಗಪೂರ ಪ್ರದೇಶದ ಖೊಬ್ರಗಡ ಇವರು ಅಂಬೇಡ್ಕರ್‌ರವರ ಅತ್ಯಂತ ನಿಷ್ಠ ಅನುಯಾಯಿಗಳು, ಇವರ ಜಯಂತಿ, ನಿರ್ವಾಣ ದಿನಗಳನ್ನು ಉತ್ಸವಗಳಾಗಿ ಆಚರಿಸಲಾಗುತ್ತಿದೆ. ಇವುಗಳಲ್ಲದೇ ಅನೇಕ ವ್ಯಾಖ್ಯಾನ ಮಾಲೆ, ಸಮಾವೇಶಗಳನ್ನು ಏರ್ಪಡಿಸಲಾಗುತ್ತಿದೆ. ಇವುಗಳಲ್ಲದೇ ಅನೇಕ ವ್ಯಾಖ್ಯಾನ ಮಾಲೆ, ಸಮಾವೇಶಗಳನ್ನು ಏರ್ಪಡಿಸಲಾಗುತ್ತಿದೆ. ಮೇಧಾವಿಗಳು ಈ ಸಮಾವೇಶಗಳಲ್ಲಿ ಪ್ರವಚನ ನೀಡುತ್ತಾರೆ. ಈ ರೀತಿಯಾಗಿ ಕೆಲವು ಆಚರಣೆಗಳನ್ನು ಬೆಳೆಸಿಕೊಳ್ಳುವ ಪ್ರಯತ್ನಗಳು ನಡೆದಿವೆ'[61].

ಮಹಾರಾಷ್ಟ್ರದಲ್ಲಿ ಬಂದಂತೆ ದಲಿತ ಬೌದ್ಧರಿಗೆ, ಬೌದ್ಧ ಧಮ್ಮ ಆಚಾರ, ವಿಚಾರ ಪ್ರಸರಣ ಮಾಡಲು ಇಲ್ಲಿಯೂ 'ಬೌದ್ಧ ಸಾಹಿತ್ಯ ಹಾಗೂ ಸಾಂಸ್ಕೃತಿಕ ಸಂಘಟನೆಗಳ ಅವಶ್ಯಕವಿದೆ.ಈನಿಟ್ಟಿನಲ್ಲಿ ಅನೇಕ ದಲಿತ ಬರಹಗಾರರು ಆ ರೀತಿಯ ಪಾಂಡಿತ್ಯ ಹೊಂದಿದವರಾಗಿರುತ್ತಾರೆ. ಕರ್ನಾಟಕದಲ್ಲಿ ಅಲ್ಲಲ್ಲಿ ಇತ್ತೀಚೆಗೆ ಇಂತಹ ಪ್ರಯತ್ನಗಳು ಪ್ರಾರಂಭವಾಗಿರುವುದನ್ನು ಕಾಣುತ್ತೇವೆ. ಮಹಾರಾಷ್ಟ್ರದ ಬೌದ್ಧ ಸಾಹಿತ್ಯ ಪರಿಷತ್, ಬೌದ್ಧ ಧರ್ಮ, ಸಾಂಸ್ಕೃತಿಕ ಮಂಚ್‌ಗಳಂತೆ ಕರ್ನಾಟಕದಲ್ಲಿಯೂ ಬೌದ್ಧ ಸಾಹಿತ್ಯ-ಸಾಂಸ್ಕೃತಿಕ, ಸಂಘ-ಸಂಸ್ಥೆಗಳು ಪ್ರಾರಂಭಗೊಂಡು ದಲಿತ-ಬಹುಜನರಲ್ಲಿ ಬೌದ್ಧ ಪ್ರಜ್ಞೆ, ಮೌಢ್ಯರಹಿತ ಸರಳ ಬೌದ್ಧ ಆಚರಣೆ ಉತ್ಸವಗಳನ್ನು ಹಮ್ಮಿಕೊಳ್ಳುತ್ತಿರುವುದನ್ನು ಕಾಣುತ್ತೇವೆ. ಈ ಸಂಘ ಸಂಸ್ಥೆಗಳ ವಿವರಗಳನ್ನು ಅಧ್ಯಾಯ 7 ರಲ್ಲಿ ಪ್ರತ್ಯೇಕವಾಗಿ ವಿವರಿಸಲು ಪ್ರಯತ್ನಿಸಲಾಗಿದೆ.



## ಸಂದರ್ಭಸೂಚಿ ಹಾಗೂ ಟಿಪ್ಪಣಿಗಳು


1. Mookerji Radha kumud, 1940 : Ancient Indian Education, Vol. 2, Cosmo Publications, New Delhi, 1999, p.434-439.
2. ಅದೇ : ಪುಟ ; 444.
3. ಅದೇ : ಅದೇ ಪುಟ
4. Geiger Wilhelm, 1912 : The Mahavamsa (The Greater Chronicle of Ceylon, Translated from Germany to English), Asian Educational Services, New Delhi, 1993, p.84.
5. ನಾಗರಾಜ ಎಂ.ಜಿ., ಕೃಷ್ಣಮೂರ್ತಿ ಪಿ.ವಿ., 2004 : ಇತಿಹಾಸ ದರ್ಶನ, ಸಂಪುಟ ; 19, ಕರ್ನಾಟಕ ಇತಿಹಾಸ ಅಕಾದೆಮಿ (ರಿ), ಬೆಂಗಳೂರು, ಪುಟ : 5-6, 28-31.
6. ತಾಳ್ತಜೆ ವಸಂತಕುಮಾರ, 1988 : ಕರ್ನಾಟಕದಲ್ಲಿ ಬೌದ್ಧಸಂಸ್ಕೃತಿ ವಿನಯ ಪ್ರಕಾಶನ, ಬೆಂಗಳೂರು, ಪುಟ ; 3.
7. Ahir D.C., 1998 : Buddhism 50 years of Independence 1947-97, Status, Growth and Development, B.R. Publishing Corporation, New Delhi, p-179.
8. ಅದೇ : ಪುಟ ; 179.
9. ಅದೇ : ಅದೇ ಪುಟ ;
10. Hari Narake and Others(ed) : Dr. Babasaheb Ambedkar writings and speeches, Vol. 17, Part three, Govt. of Maharashtra, Mumbai, 2003, p-510-511.
11. ಅದೇ : ಪುಟ ; 511-512
12. ಅದೇ : ಪುಟ ; 512
13. ಅದೇ : ಅದೇ ಪುಟ.


14. ಅಧ್ಯಯನಕಾರನು ಕೆ.ಜಿ.ಎಫ್. ನ ಮಾರಿಕುಪ್ಪ ಪ್ರದೇಶದಲ್ಲಿ ಕ್ಷೇತ್ರ ಕಾರ್ಯಮಾಡಿ 'ಭಾರತ ಬೌದ್ಧ ಸಂಘದ' (ರಿ) ಅಧ್ಯಕ್ಷರಾದ ಶ್ರೀ ಐ. ಲೋಗನಾಥನ್ ಮತ್ತು ಇತರರನ್ನು ಸಂದರ್ಶಿಸಿ ಸಂಗ್ರಹಿಸಿದ ಮಾಹಿತಿ ಆಧರಿಸಿದೆ.

15. Loganathan I., 1993 : 'Revival of Buddhism in South India in the 19th Century', in K.N. Kadam (ed) B.R.Ambedkar : The Emancipator of the oppressed Popular Prakashan Bombay, p.10.

16. Aloysius G., 1998 : Religion as Emancipatory Identity, A Buddhist movement among the Tamils under colonialism New Age International Pvt., Ltd., Bangalore, P.83-84.

17. ಅದೇ : ಪುಟ ; 86.

18. Loganathan I, 1993 : ಪೂರ್ವೋಕ್ತ ಪುಟ : 11

19. ಅದೇ : ಪುಟ ;

20. Aloysius G., 1998 : ಪೂರ್ವೋಕ್ತ ಪುಟ : 102

21. Report of the Hubli Buddhist Association for the year 2002-2003.

22. Report of the Hubli Buddhist Association for the year 1997.

23. ಅದೇ : ಪುಟ ; 2

24. Ven. Sanghasena, 2001 : "Ven. Acharya, Buddharakkhita" in Amita, Mahabodhi Residential School Information Letter No. 2, Bangalore, P.3.

25. ಅದೇ : ಅದೇ ಪುಟ.

26. ಅಧ್ಯಯನಕಾರನು ನವ್ಹೆಂಬರ್ 2001 ರಲ್ಲಿ ಈ ಭಾಗದಲ್ಲಿ ಕ್ಷೇತ್ರ ಕಾರ್ಯ ಕೈಗೊಂಡಾಗ ಸಂದರ್ಶನ ನೀಡಿ ಬೌದ್ಧ ಉಪಾಸಕರಿಂದ ಸಂಗ್ರಹಿಸಿದ ಮಾಹಿತಿಯಿಂದ.

27. 2001 ರಲ್ಲಿ ಅಧ್ಯಯನಕಾರನು ಬೀದರ ಜಿಲ್ಲೆಯ ಹುಮನಾಬಾದ್ ತಾಲೂಕಿನ ರೇಕುಳಗಿ ಧಮ್ಮಾಂಕರ್ ಮೌಂಟ್‌ನಲ್ಲಿನ ಅನಾಥ ಪಿಂಡಿಕ ವಿಹಾರಕ್ಕೆ ಸಂದರ್ಶಿಸಿ ಹಿರಿಯ ಬಿಕ್ಕುಗಳಾದ ಪೂಜ್ಯ ಮಹಾಕಷ್ಯಪ್ ಮಹಾಥೇರ ಅವರನ್ನು ಸಂದರ್ಶನ ಮಾಡಿ ಸಂಗ್ರಹಿಸಿದ ಮಾಹಿತಿಗಳು.

28. Wilkinson T.S. & Thomas M.M. (ed), 1972 : Ambedkar and the Neo-Buddhist Movement: The Christian Literature Society, Madras, p.110.

29. ಅಧ್ಯಯನಕಾರನು 2001 ಮತ್ತು 2004 ರಲ್ಲಿ ಬಿಜಾಪೂರ ಭಾಗದಲ್ಲಿ ಕ್ಷೇತ್ರ ಕಾರ್ಯ ಮಾಡಿ ಇಲ್ಲಿನ ಬೌದ್ಧ ವಿಹಾರಗಳಿಗೆ ಸಂದರ್ಶನ ನೀಡಿ ಸಂಗ್ರಹಿಸಿದ ಮಾಹಿತಿಗಳಿಂದ.

30. Acharya Buddhaakkhita, 1986 : Buddhist Manual for Everyday Practice Buddha Vachana Trust, Bangalore.

31. ನಂದನ ವೈ. ಬಿ., 2000 : ಬೌದ್ಧ ನಿತ್ಯಾಚರಣೆಗಳು, ಬುದ್ಧ ವಚನ ಟ್ರಸ್ಟ್ ಮಹಾಬೋಧಿ ಸೊಸೈಟಿ, ಬೆಂಗಳೂರು.

32. ನಂದನ ವೈ. ಬಿ., 2003 : ಬೌದ್ಧ ಆಚರಣೆಗಳು, ಮಹಾಬೋಧಿ ಸೊಸೈಟಿ., ಬೆಂಗಳೂರು.

33. Naik C.D., 2004 : Ambedkar's Perspective on Buddhism and other Religions, Kalpaz Publications, Delhi, p.322-323.

34. Timothy Fitzgerald, 1997 : 'Ambedkar Buddhism in Maharashtra', in Contributions to Indian Sociology (N. S) 31, 2, Sage Publications, New Delhi, p.229.

35. ಅದೇ : ಪುಟ ; 228.

36. ಬೌದ್ಧ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘ, ಗದಗ ಇವರು ಶ್ರೀ ಮೂಡ್ನಾಕೂಡು ಚಿನ್ನಸ್ವಾಮಿಯವರ ನೇತೃತ್ವದಲ್ಲಿ ಇಂತಹ ಕಾರ್ಯಕ್ರಮಗಳನ್ನು ನಡೆಸುತ್ತಿರುವ ಬಗ್ಗೆ ಸಂಘದ ಸಂಘಟಕರಾದ ಡಾ. ಅರ್ಜುನ ಗೊಳಸಂಗಿ ಇವರು ಕಳುಹಿಸಿದ ಕರ ಪತ್ರ ಮತ್ತು ಸಂದರ್ಶನಾವಳಿಯಲ್ಲಿನ ಮಾಹಿತಿಯಿಂದ.

37. www.buddhanet.net / e-learning.

38. ಅದೇ : ಪುಟ ; 33.

39. ರಮಾಯಿಸ್ಮೃತಿ ಬೌದ್ಧ ವಿಹಾರ ಬಿಜ್ಜರಗಿ, ತಾ : ಬಿಜಾಪೂರ ಇಲ್ಲಿನ ಬೌದ್ಧಪೂಜಾ ಪಾಠದ ಕೈಪಿಡಿ. Sogenji Sutras, January 1995 ಯಿಂದ.

40. ಜಪಾನಿನ ಓರಿಯಾಮಾ ನಗರದ ಬೋಧಶೇನ್ ಸೊಗೇಂಜಿ ಬೌದ್ಧ ವಿಹಾರ ಇವರ ಧಮ್ಮದಾನದಿಂದ ನಿರ್ಮಿಸಿದ ಈ ಧ್ಯಾನ ಕೇಂದ್ರವನ್ನು ಝೆನ್‌ಮಾಸ್ಟರ ಶೋದೋ ಹರದಾ ಇವರು ದಿನಾಂಕ: 24-08-2003 ರಂದು ಉದ್ಘಾಟಿಸಿದ್ದಾರೆ.

41. ಮಹಾಬೋಧಿ ಸೊಸೈಟಿ ಬೆಂಗಳೂರು, ಇವರು ಅಧ್ಯಯನಕಾರನಿಗೆ ಕಳುಹಿಸಿದ ಆಮಂತ್ರಣ ಪತ್ರಗಳಲ್ಲಿನ ಮಾಹಿತಿಗಳು.

42. ಅದೇ : ಪುಟ ; 2.

43. ನಂದನ ವೈ.ಬಿ., 2003 : ಅದೇ, ಪುಟ ; 56.

44. 'ಚೀವರ' ಎಂದರೆ ಬೌದ್ಧ ಬಿಕ್ಕುಗಳಾಗಿ ದೀಕ್ಷೆಪಡೆಯುತ್ತಾರೋ ಅವರಿಗೆ ಹಿರಿಯ ಬಿಕ್ಕುಗಳ ನೀಡುವ 'ಬಿಕ್ಕುಗಳ ಉಡುಪಿಗೆ' ಚೀವರ ಎಂದು ಹೇಳುವರು. ಚೀವರವನ್ನು ತಾತ್ಕಾಲಿಕವಾಗಿ ಬೌದ್ಧ ಉಪಾಸಕರು, ಸಮಣೇರ ದೀಕ್ಷೆ ಪಡೆದ ಸಂದರ್ಭದಲ್ಲಿ ಧರಿಸುತ್ತಾರೆ.

45. ನಂದನ ವೈ.ಬಿ., 2003 : ಅದೇ, ಪುಟ ; 57.

46. ರಮಾಯಿಸ್ಮೃತಿ ಬೌದ್ಧ ವಿಹಾರ ಬಿಜ್ಜರಗಿ ಇಲ್ಲಿನ ಕಡತಗಳಿಂದ 2001.

47. Timothy Fitzgerald, 1997 : ಅದೇ ; ಪುಟ ;236.

48. Vasant Moon (ed), 1998 : Dr. Babasaheb Ambedkar writings and speeches, Grammer and Dictionary of Pali language, and iii) Bouddha Pooja Path, Vol.16, Education Department Govt. of Maharashtra 1998, Mumbai. P.

49. 'ಓಂ ಮಣಿ ಪದ್ಮ ಮೇ ಹ್ಲುಂ!' ಇದರ ಅರ್ಥ : 'ತಾವರೆಯಲ್ಲಿ ರತ್ನವರಳಲಿ, ಅದಕ್ಕೆ ಜಯವಾಗಲಿ' ಅಂದರೆ 'ಬುದ್ಧತ್ವ' ತಾವರೆಯಲ್ಲಿ ರತ್ನದಂತೆ ಅರಳಲಿ ಎನ್ನುವುದನ್ನು ಸೂಚಿಸುತ್ತದೆ. ಈ ಮಂಗಲಕಾರಿ ಸೂತ್ರವನ್ನು ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ತಾವು ರಚಿಸಿದ 'ಬೌದ್ಧ ಪೂಜಾ ಪಾಠ' ದ ಕೈಪಿಡಿಯ ಕೊನೆಗೆ ಉದ್ಧರಣೆ ಮಾಡಿ, ಕೃತಿ ಸಮಾಪ್ತಗೊಳಿಸಿದ್ದಾರೆ.

50. 'ಪ್ರಬುದ್ಧ ಭಾರತ' 1956 : ಡಾ. ಬಾಬಾಸಾಹೇಬ ಅಂಬೇಡ್ಕರ್ ಬೌದ್ಧ ದೀಕ್ಷಾ ವಿಶೇಷ ಸಂಚಿಕೆ ಪುಟ ; 30 (ತೀಸ್)

51. Hari Narake & Others (ed), 2003: ಅದೇ ; ಪುಟ ; 512.

52. Timothy Fitzgerald, 1997 : ಪೂರ್ವೋಕ್ತ ಪುಟ ; 232.

53. ಅದೇ : ಪುಟ ; 233.

54. ಅದೇ : ಅದೇ ಪುಟ ;

55. ಅದೇ : ಪುಟ ; 232.

56. 'ಧಮ್ಮಾಚಾರಿ ಲೋಕಮಿತ್ರ, 1997 : 'ಸಹಾಯಕ ಜಗತ್' ಬುದ್ಧಯಾನ (ತ್ರೈಲೋಖ್ಯ ಬೌದ್ಧ ಮಹಾಸಂಘ ಸಹಾಯಕ ಗಣ, TBMSG, Pune ಈ ಸಂಘಟನೆಯ ಮುಖವಾಣಿ ಮಾಸಿಕ ಪತ್ರಿಕೆ, (ಮರಾಠಿ)

57. ವಸಂತ ಮೂಳಸಾವಳಗಿ, 1996 : ಹಿರಿಯ ನ್ಯಾಯಾಧೀಶರು, ಹುಬ್ಬಳ್ಳಿಯಲ್ಲಿ ಡಾ. ಅಂಬೇಡ್ಕರ್‌ರವರ ಜಯಂತ್ಯೋತ್ಸವ ಕಾರ್ಯಕ್ರಮದಲ್ಲಿ ಮಾಡಿದ ಭಾಷಣದ ಆಯ್ದ ಭಾಗಗಳಿಂದ.

58. ಜಕ್ಕಪ್ಪನವರ. ಎಫ್. ಹೆಚ್., 2005 : ಬೌದ್ಧ ಪೂರ್ಣಿಮೆಯ ಸಂದರ್ಭದಲ್ಲಿ 'ಬೌದ್ಧ ಸಂಸ್ಕೃತಿ ಸರಣಿ ಉಪನ್ಯಾಸ ಮಾಲೆ' ಹುಬ್ಬಳ್ಳಿಯಲ್ಲಿ ಮಾಡಿದ ಉಪನ್ಯಾಸದ ಆಯ್ದ ಭಾಗದಿಂದ.

59. ಶಂಕರಪ್ಪ ಕೆ.ಎಂ., 1999 : 'ಬುದ್ಧ ಬರಲಿ ನಮ್ಮ ಊರಿಗೆ' ಕರ್ನಾಟಕ ದಲಿತ ಸಂಘರ್ಷ ಸಮಿತಿ, ಮೈಸೂರು ಶಾಖೆ, ಹೊದಿಕೆ ಪುಟದಲ್ಲಿ.

60. ಅರವಿಂದ ಮಾಲಗತ್ತಿ, 2002 : ದಲಿತ ಮಾರ್ಗ ಆಕರ ಗ್ರಂಥ ಮಾಲೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ ; 483.

61. ಅದೇ : ಪುಟ ; 484-485.





## ಅಧ್ಯಾಯ-7

# ಬೌದ್ಧ ಪಂಥೀಯ ಶಿಕ್ಷಣ ಕ್ರಮ, ಸಂಘ ಸಂಸ್ಥೆಗಳು ಮತ್ತು ವಕ್ತಾರರು

7.1. ಬೌದ್ಧ ಶೈಕ್ಷಣಿಕ ತತ್ವಶಾಸ್ತ್ರ: ಜಾನ್ ಡ್ಯೂಯಿ, ಅಂಬೇಡ್ಕರ್‌ರವರ ಶೈಕ್ಷಣಿಕ ಪರಿಕಲ್ಪನೆಗಳು.

7.2. ಪ್ರಮುಖ ಬೌದ್ಧ ಸಂಘ ಸಂಸ್ಥೆಗಳು, ಬೌದ್ಧ ವಕ್ತಾರರು ಮತ್ತು ಕರ್ನಾಟಕದಲ್ಲಿ ಬೌದ್ಧ ಧರ್ಮ ಪುನರುಜ್ಜೀವನಕ್ಕೆ ಅವರು ಸಲ್ಲಿಸಿದ ಕೊಡುಗೆಗಳು.

ಅಧ್ಯಾಯ - 7

# ಬೌದ್ಧಪಂಥೀಯ ಶಿಕ್ಷಣ ಕ್ರಮ, ಸಂಘ ಸಂಸ್ಥೆಗಳು ಮತ್ತು ವಿಕಾರರು

## 7.1 ಬೌದ್ಧ ಶೈಕ್ಷಣಿಕ ತತ್ವಶಾಸ್ತ್ರ: ಜಾನ್ ಡ್ಯೂಯಿ, ಅಂಬೇಡ್ಕರ್‌ರವರ ಶೈಕ್ಷಣಿಕ ಪರಿಕಲ್ಪನೆಗಳು : (ದಲಿತರ ವಿಮೋಚನೆ ಮತ್ತು ಅಭಿವೃದ್ಧಿಯ ಹಿನ್ನೆಲೆಯಲ್ಲಿ)

ಇಂದು ಜಗತ್ತಿನಾದ್ಯಂತ ಪ್ರತಿಪಾದಿಸುತ್ತಿರುವ 'ಮಗುವಿನ' ಆಂತರಿಕ ಶಕ್ತಿ ಸಾಮರ್ಥ್ಯಗಳ ವಿಕಸನಕ್ಕೆ ಕಾರಣವಾಗುವ 'ಆನಂದದಾಯಕ ಕಲಿಕೆ' (Joyful Learning) ಯ ತತ್ವಗಳಿಗೆ ಬೌದ್ಧಶಿಕ್ಷಣ ತತ್ವಶಾಸ್ತ್ರದ ನೆಲೆಗಳೇ ಆಧಾರವಾಗಿರುವುದನ್ನು ನಾನು ಕಾಣುತ್ತೇವೆ. ವ್ಯಕ್ತಿಯಲ್ಲಿ 'ಆನಂದದ ಸ್ಥಿತಿ' ಯಾವಾಗ ಸಾಧ್ಯ? ಯಾವಾಗ ಆತನು ತನ್ನ ಮತ್ತು ತನ್ನ ಸುತ್ತಲಿನ ಪರಿಸರದ ಜೊತೆಗೆ 'ಸಮನ್ವಯ' ಸಾಧನೆ ಮಾಡಿದಾಗ ಮಾತ್ರ ಅದು ಸಾಧ್ಯ. ಇಲ್ಲಿಯವರೆಗೆ ಕೇವಲ ಉರು ಹೊಡೆದು ಯಾಂತ್ರಿಕವಾಗಿ ಪುನರುಚ್ಚರಿಸುವ ಶೈಕ್ಷಣಿಕ ವಿಧಾನ ಪಾಲಿಸುತ್ತ ಬಂದಿದ್ದರಿಂದಲೇ ಭಾರತದಲ್ಲಿ ಇಂದು ನಿರುದ್ಯೋಗ ಸಮಸ್ಯೆ, ಸಾಮಜಿಕ ಪಿಡುಗಗಳು ಬೆಳೆಯಲಿಕ್ಕೆ ಕಾರಣವಾಗಿದ್ದನ್ನು ನಾವು ಕಾಣುತ್ತೇವೆ. ಕೇವಲ ಸೀಮಿತ ಪರಿಕಲ್ಪನೆಗಳಲ್ಲಿ 'ವ್ಯಕ್ತಿಯ ಬೌದ್ಧಿಕ ವಿಕಾಸ' ವನ್ನು, ಮೋಕ್ಷ ಸಾಧನೆಯನ್ನು ಗ್ರಹಿಸಿದ ವೈಧಿಕ ಶಿಕ್ಷಣ ಕ್ರಮಕ್ಕಿಂತಲೂ 'ಪ್ರಜ್ಞೆಯ ವಿಮೋಚನೆಗೆ' ಬೌದ್ಧಪಂಥೀಯ ಶಿಕ್ಷಣ ಕಾರಣವಾಗುವುದನ್ನು ನೋಡುತ್ತೇವೆ. ಬುದ್ದನು ಬೋಧಿಸಿದ ಪಂಚಶೀಲ, ಅಷ್ಟಾಂಗ ಮಾರ್ಗಗಳು ಮನುಷ್ಯನನ್ನು ಮಧ್ಯಮ ಮಾರ್ಗಕ್ಕೆ ಒಗ್ಗಿಕೊಳ್ಳುವುದನ್ನು ಕಲಿಸುತ್ತವೆ. 'ಮಧ್ಯಮ ಮಾರ್ಗ'ವೇ ಇಂದು ದಾರಿ ತಪ್ಪಿದ ಭಾರತದ ಅಭಿವೃದ್ಧಿ ಪಥಕ್ಕೆ ಸರಿಯಾದ ದಿಶೆಯನ್ನು ಕೊಡಬಲ್ಲ ಸಾಧ್ಯತೆಯ ಹಿನ್ನಲೆಯಲ್ಲಿಯೇ ನಾವು ಬೌದ್ಧ ಶೈಕ್ಷಣಿಕ ದರ್ಶನವನ್ನು ಗ್ರಹಿಸಬೇಕಾಗಿದೆ. ಬೌದ್ಧ ಶೈಕ್ಷಣಿಕ ತತ್ವಗಳು ಮುಖ್ಯವಾಗಿ ಎಂಟು ಬುನಾದಿಗಳ ಮೇಲೆ ರೂಪಿತವಾಗಿರುವಂತದ್ದು.

1) ಸಮ್ಮಾ ದಿತ್ತಿ - ಸರಿಯಾದ ದೃಷ್ಟಿಕೋನ
2) ಸಮ್ಮಾ ಸಂಕಲ್ಪ - ಸರಿಯಾದ ಉದ್ದೇಶಗಳು
3) ಸಮ್ಮಾ ವಾಚಾ - ಸರಿಯಾದ ಮಾತು
4) ಸಮ್ಮಾ ಕಮಂತ - ಸರಿಯಾದ ನಡತೆ
5) ಸಮ್ಮಾ ಅಜೀತ - ಸರಿಯಾದ ಜೀವನಶೈಲಿ
6) ಸಮ್ಮಾ ವ್ಯಾಯಾಮ - ಸರಿಯಾದ ಪ್ರಯತ್ನ
7) ಸಮ್ಮಾ ಸತಿ - ಸರಿಯಾದ ಮನಸ್ಸು
8) ಸಮ್ಮಾ ಸಮಾಧಿ - ಸರಿಯಾದ ಧ್ಯಾನ'.[1]

ಸಾಮಾನ್ಯ ವ್ಯಕ್ತಿಯಿಂದ ಹಿಡಿದು ಬಿಕ್ಕುವಿನವರೆಗೂ ಇವೇ ನಿಯಮಗಳ ಆಧಾರದ ಮೇಲೆ ಶಿಕ್ಷಣ ನೀಡಲು ಒತ್ತು ಕೊಡಲಾಗಿದೆ. ಈ ಮಾರ್ಗ 'ವ್ಯಕ್ತಿ' ಮತ್ತು ಬೌದ್ಧ 'ಸನ್ಯಾಸಿ' ಇವರಿಬ್ಬರನ್ನು ಒಂದೇ ಪಾತಳಿಯಲ್ಲಿ ಪ್ರಜ್ಞಾ ವಿಮೋಚನೆ ಮಾಡಲು ಶಕ್ಯವಾಗುತ್ತದೆ ಎಂಬುದು ಇಲ್ಲಿನ ತಾತ್ವಿಕ ಬುನಾದಿಯಾಗಿದೆ. ಅದೇ

'ನಿರ್ವಾಣ ಸ್ಥಿತಿ' ಎಂದೂ ಹಲವಾರು ತಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಬಾಪಟ (1971), ಟಿ.ಎಸ್. ವಿಲ್ಕಿನ್‌ಸನ್, ಥಾಮಸ್ (1972), ಜಯಶ್ರೀ ಗೋಖಲೆ (1986), ಗೇಲ್ ಓಂ ವೆಡ್ತ(1990) ಅಲೋಸಿಯಸ್ ಜಿ. (1998), ಮೀರಾ ನಂದಾ (2000).

ಬುದ್ಧನ ನಂತರದಲ್ಲಿ ಬೃಹತ್ತಾದ ರೀತಿಯಲ್ಲಿ ನಿರ್ಮಾಣವಾದ ವಿಹಾರಗಳು, ಬೌದ್ಧ ಶೈಕ್ಷಣಿಕ ಕೇಂದ್ರಗಳು ಭಾರತದ ಶೈಕ್ಷಣಿಕ ಚರಿತ್ರೆಯಲ್ಲಿ ಮಹತ್ವದ ಸಾಧನೆ ಮಾಡಿದ್ದನ್ನು ನೋಡುತ್ತೇವೆ. ಚೈನಾದ ಯಾತ್ರಿಕರು ಈ ಬಗ್ಗೆ ಮಹತ್ವದ ವಿವರಗಳನ್ನು ದಾಖಲಿಸಿದ್ದಾರೆ ಪಾಹಿಯಾನನು ಕ್ರಿ.ಶ. 5 ನೇ ಶತಮಾನದಲ್ಲಿ ಭಾರತಕ್ಕೆ ಭೇಟಿ ನೀಡಿ 'ಸತತ 15 ವರ್ಷಗಳ ಪರ್ಯಂತರ ಭಾರತದ ಸುಮಾರು 30 ಪ್ರಾಂತ್ಯಗಳಲ್ಲಿ ಪ್ರವಾಸ ಕೈಕೊಂಡು[2] ಇಲ್ಲಿ ಅಸ್ತಿತ್ವದಲ್ಲಿದ್ದ ಅನೇಕ ಬೌದ್ಧ ವಿಹಾರಗಳಿಗೆ, ಸಂಘಾರಾಮಗಳಿಗೆ ವಿಶ್ವವಿದ್ಯಾಲಯಗಳಿಗೆ ಭೇಟಿ ನೀಡಿ ಬೌದ್ಧಪಂಥೀಯ ಶಿಕ್ಷಣದ ಮಹತ್ವದ ಬಗ್ಗೆ ಮಾರ್ಮಿಕ ಚಿತ್ರಣಗಳನ್ನು ನೀಡಿದ್ದಾನೆ. ಆತನು ಪಾಟಲಿಪುತ್ರ, ಶ್ರಾವಸ್ತಿ ರಾಜಗೀರ, ವೈಶಾಲಿ, ಗಯಾ, ಕುಶಿ ನಗರ, ಕನ್ಯಾಕುಬ್ಜ ಸಾಂಕಶ್ಯ, ಕಾಶಿ, ತಾಮ್ರಲಿಪ್ತಿ ಪುರುಷಪುರ, ಚಂಪಾಗಳನ್ನು[3] ಉಲ್ಲೇಖಿಸುತ್ತಾನೆ. ಈ ಬೌದ್ಧ ಶಿಕ್ಷಣ ಕೇಂದ್ರಗಳಲ್ಲಿ ಕಲಿಸುತ್ತಿದ್ದ ವಿಷಯಗಳು, ಪಠ್ಯಕ್ರಮ, ಬೋಧನಾ ವಿಧಾನ, ಶೈಕ್ಷಣಿಕ ಸಂಘಟನೆ ಮುಂತಾದ ವಿವರಗಳನ್ನು ದಾಖಲಿಸಿದ್ದಾನೆ. 7 ನೇ ಶತಮಾನದಲ್ಲಿ ಭಾರತಕ್ಕೆ ಆಗಮಿಸಿದ ಮತ್ತೊಬ್ಬ ಚೈನಾಯಾತ್ರಿಕ ಹ್ಯೂಯೆನ್‌ತ್ಸಾಂಗ್‌ನ ವಿವರಣೆಗಳಂತೂ ಭಾರತದ ಶೈಕ್ಷಣಿಕ ಚರಿತ್ರೆಗೆ ಆತ ಸಲ್ಲಿಸಿದ ಮಹತ್ವದ ಕೊಡುಗೆಗಳೆಂದೇ ಹೇಳಿದರೆ ಅತಿಶಯೋಕ್ತಿಯಾಗಲಾರದು. ಆತ ಸಾಮಾನ್ಯವಾಗಿ ಭಾರತದ ಎಲ್ಲಾ ಭಾಗದಲ್ಲೂ ಪ್ರವಾಸ ಕೈಗೊಂಡು ಅಪಾರ ಬೌದ್ಧ ಜ್ಞಾನ ಸಂಪಾದಿಸಿ ಅನೇಕ ವರ್ಷಗಳವರೆಗೆ ನಾಲಂದಾ ಬೌದ್ಧ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕನಾಗಿಯೂ ಕಾರ್ಯನಿರ್ವಹಿಸಿದನು. ಅಲ್ಲಿಯೇ ಸಂಶೋಧನಾ ಅಧ್ಯಯನ ಮಾಡಿ ''ಧಮ್ಮಾಚಾರ್ಯ'' (Doctor of Religion) ಎಂಬ ಉನ್ನತ ಪದವಿ ಪಡೆದು ನಾಲಂದಾ ವಿಶ್ವವಿದ್ಯಾಲಯದ 'ಕುಲಪತಿ' ಸ್ಥಾನಕ್ಕೂ ನೇಮಕಗೊಂಡನು.[4] ಆತನ ತನ್ನ ಪ್ರವಾಸಿ ಕಥನಗಳಲ್ಲಿ 'ಗಾಂಧಾರ, ಕನ್ಯಾಕುಬ್ಜ ಶ್ರಾವಸ್ತಿ ತಕ್ಷಶಿಲಾ, ವಾರಣಾಸಿ, ಸಾರನಾಥ, ನಲಂದಾ, ಕಪಿಲವಸ್ತು ಮುಂಗ್ಯರ್ ಅನಂಥರ್, ಉದಯಾನ್, ಮಥುರಾ, ಅಯೋಧ್ಯಾ, ವೈಶಾಲಿ, ಬೊಲೋರ್, ನಬಸವಾನ್, ಥಾಣೇಶ್ವರ, ಮಗಧ, ಮಹಾಬೋಧಿ ವಿಹಾರ (ಗಯಾ) ವಿಸೋಕ್, ಚಂಭುಕ್ತಿ ಮತಿಪುರ, ಕಪಿಸ, ಕಾಶ್ಮೀರ, ಸ್ರುಶ್ನಾನ್, ತಿಲೋಸಿಕ ವಿಹಾರ, ಗಜ, ಪುಷ್ಕರಾಮ, ಲುಂಪ, ಚೋಳ (ದಕ್ಷಿಣ ಭಾರತ), ಭೆಜವಾಡಾ (ದಕ್ಷಿಣ ಭಾರತ), ವಲ್ಲಭಿ, ಕಾಂಚೀಪುರ, ಕೊಂಕಣ, ಮಾಳ್ವ ಬರೂಚ್, ಮಹಾರಾಷ್ಟ್ರದ ಇತರ ಬೌದ್ಧ ಕೇಂದ್ರಗಳ[4]ನ್ನು ಭೇಟಿಮಾಡಿ ವಿವರಗಳನ್ನು ದಾಖಲಿಸಿದ್ದಾನೆ. ಈತನ ಪ್ರವಾಸಿ ಕಥನಗಳ ವಿವರಗಳನ್ನು ಬೌದ್ಧ ಶಿಕ್ಷಣ ಚರಿತ್ರಕಾರ ರಾಧಾ ಕುಮುದ ಮುಖರ್ಜಿ (1940) ಯವರು ಹ್ಯೂಯೆನ್‌ತ್ಸಾಂಗ್‌ನ ಪ್ರವಾಸ ವಿವರಗಳು 'ಒಂದು ರೀತಿಯಲ್ಲಿ ಆ ಸಂದರ್ಭದ ಭಾರತದ ಗ್ಯಾಝೆಟಿಯರ್' ಎಂದು ಬಣ್ಣಿಸಿದ್ದಾರೆ.

ಹ್ಯೂಯೆನ್‌ತ್ಸಾಂಗ್‌ನ ನಂತರ ಕ್ರಿ.ಶ. 672 ರಲ್ಲಿ ಅಂದರೆ ಹ್ಯೂಯೆನ್‌ತ್ಸಾಂಗ್ ಮರಳಿದ (ಕ್ರಿ.ಶ. 645) ಕೆಲವೇ ವರ್ಷಗಳಲ್ಲಿ ಭಾರತಕ್ಕೆ ಆಗಮಿಸಿದ ಮತ್ತೊಬ್ಬ ಚೈನಾ ಯಾತ್ರಿಕ ಇ-ತ್ಸಿಂಗ್‌ನ ಪ್ರವಾಸಿ ದಾಖಲೆಗಳು ಹ್ಯೂಯೆನ್‌ತ್ಸಾಂಗ್‌ನ ವಿವರಣೆಗಳಿಗೆ ಸಾಕ್ಷಿಯೊದಗಿಸುವ ರೀತಿಯ ವಿವರಣೆಗಳನ್ನು ಒಳಗೊಂಡಿವೆ. ಅವನ ಪ್ರವಾಸದ ಉದ್ದೇಶ ಕೇವಲ ಬೌದ್ಧ ತತ್ವಶಾಸ್ತ್ರದ ವಿಷಯ ಸಂಗ್ರಹವಾಗಿರದೆ, ಇಲ್ಲಿ ಪ್ರಚಲಿತವಿದ್ದ ವಿನಯಸುತ್ತ

ನಿಯಮಗಳ ಸರಿಯಾದ ಪಾಠಗಳನ್ನು ತೆಗೆದುಕೊಂಡು ಹೋಗಿ ಚೈನಾದಲ್ಲಿ ಪ್ರಚಲಿತವಿದ್ದ ತಪ್ಪು ಗ್ರಹಿಕೆಗಳನ್ನು ಸರಿಪಡಿಸುವುದಾಗಿತ್ತು. ಆತನು ಪ್ರವಾಸ ಮಾಡಿದ ಕಾಲಘಟ್ಟದಲ್ಲಿ ಆಗಲೇ ಬ್ರಾಹ್ಮಣವಾದ ಬೌದ್ಧ ಧರ್ಮದ ಪ್ರಖರತೆಯನ್ನು ಕುಂದಿಸುವ ಪ್ರಯತ್ನ ಮಾಡುತ್ತಿತ್ತು ಎಂಬುದು ಕಂಡುಬರುತ್ತದೆ. ಇತ್ಸಿಂಗನೂ ಸಹಿತ ಬೌದ್ಧಶಿಕ್ಷಣ ಕೇಂದ್ರಗಳಲ್ಲಿ ಪ್ರಾಥಮಿಕ ಶಿಕ್ಷಣ, ಉನ್ನತ ಶಿಕ್ಷಣ, ವಿಶೇಷ ಶಿಕ್ಷಣ, ಬಿಕ್ಕುಗಳ ಶಿಕ್ಷಣ ಮತ್ತು ತರಬೇತಿ, ನಿತ್ಯಾಚರಣೆಗಳು, ಜಾತ್ಯತೀತ ಶಿಕ್ಷಣ, ಗ್ರಂಥಾಲಯಗಳು, ಭಾರತ-ಚೈನಾ ಬಿಕ್ಕುಗಳ ಸಾಂಸ್ಕೃತಿಕ ವಿನಿಮಯ, ಮುಂತಾದ ಮಹತ್ವದ ವಿವರಣೆಗಳನ್ನು ದಾಖಲಿಸಿದ್ದಾನೆ. ಹೀಗೆ ಬೌದ್ಧ ಯಾತ್ರಿಕರು ಬೌದ್ಧ ಶಿಕ್ಷಣ ಕೇಂದ್ರಗಳಿಗೆ ಸಂದರ್ಶನ ನೀಡಿ ಬೌದ್ಧ ಶಿಕ್ಷಣ ಪದ್ಧತಿಯ ಮಹತ್ವವನ್ನು ಚಿತ್ರಿಸಿದ್ದಾರೆ. ಈ ಚಾರಿತ್ರಿಕ ಪ್ರಜ್ಞೆ ಮುಂದೆ ಭಾರತದಲ್ಲಿ ಆಧುನಿಕ ಕಾಲ ಘಟ್ಟದಲ್ಲಿಯೂ ಪ್ರಾಯೋಗಿಕ ಆಯಾಮ ಪಡೆದುಕೊಂಡಿರುವುದನ್ನು ಕಾಣುತ್ತೇವೆ.

ಎಲ್ಲ ವರ್ಗಗಳ ಜನತೆ ಮುಕ್ತವಾಗಿ ಶಿಕ್ಷಣ ಪಡೆಯಲು ಸಾಧ್ಯವಾದದ್ದು ಬೌದ್ಧ ಶಿಕ್ಷಣ ವ್ಯವಸ್ಥೆಯ ಪ್ರಮುಖ ವೈಶಿಷ್ಟ್ಯವಾಗಿದೆ. ಮೊಟ್ಟ ಮೊದಲಬಾರಿಗೆ ಶಿಕ್ಷಣ ಸಾರ್ವತ್ರಿಕರಣಗೊಂಡು ಎಲ್ಲರೂ ಶಿಕ್ಷಣ ಪಡೆಯುವ (Mass Education) ಸಂದರ್ಭ ನಿರ್ಮಾಣವಾಯಿತು. ವಿಹಾರಗಳಲ್ಲಿ ಬೌದ್ಧ ಬಿಕ್ಕುಗಳಾಗುವ ವಿದ್ಯಾರ್ಥಿಗಳಿಗಲ್ಲದೇ ದೀಕ್ಷೆ ಪಡೆಯದ ಇತರ ಎಲ್ಲಾ ವರ್ಗದ ಮಕ್ಕಳಿಗೂ ಪ್ರವೇಶವಿತ್ತು. ವಿಹಾರ ರಚನೆಯೇ ಆ ರೀತಿಯಾಗಿತ್ತು. ಯಾವ ಕಡೆಯಿಂದಲಾದರೂ ಪ್ರವೇಶಿಸುವ ವಿಹಾರದ ವಾಸ್ತುಶಿಲ್ಪದ ಕಲ್ಪನೆ ಬೌದ್ಧ ಶಿಕ್ಷಣ ಪದ್ಧತಿಯು ಎಷ್ಟು ಮುಕ್ತವಾಗಿತ್ತು ಎಂಬುದನ್ನು ಸೂಚಿಸುತ್ತದೆ. ವೈಚಾರಿಕತೆ, ವೈಜ್ಞಾನಿಕ ಮನೋಭಾವನೆ, ಎಲ್ಲ ಧರ್ಮೀಯರನ್ನು ಸಮಾನವಾಗಿ ನೋಡುವ ಜಾತ್ಯಾತೀತ ಭಾವನೆ, ಲೌಕಿಕ ಪ್ರಗತಿ, ಪ್ರಾಯೋಗಿಕ ಜೀವನಕ್ಕೆ ಬೇಕಾದ ಜ್ಞಾನ ಕೌಶಲ್ಯಗಳನ್ನು ಬೆಳೆಸಲು ಬೌದ್ಧ ಶಿಕ್ಷಣ ಪದ್ಧತಿ ಆದ್ಯತೆ ಕೊಟ್ಟಿತು. 'ಬೌದ್ಧ ವಿಹಾರಗಳಿಗೆ ಕೊಡುವ ದತ್ತಿದಾನಗಳ ಲೆಕ್ಕಪತ್ರ ಇಡುವ, ಅವುಗಳನ್ನು ವಿದ್ಯಾರ್ಥಿಗಳೇ ನಿರ್ವಹಿಸುವ,[7] ಪರಿಕಲ್ಪನೆ ಬೌದ್ಧ 'ಸಂಘ' ಕಲ್ಪನೆಯಲ್ಲಿನ 'ಪಾರದರ್ಶಕತೆ' ಮತ್ತು ಪ್ರಜಾಸತ್ತಾತ್ಮಕ ವ್ಯವಹಾರಿಕ ಕೌಶಲ್ಯಗಳ ವರ್ಧನೆಗೆ ಬೌದ್ಧಶಿಕ್ಷಣ ಸಂಸ್ಥೆಗಳು ನೀಡಿದ ಮಹತ್ವವನ್ನು ಸೂಚಿಸುತ್ತದೆ. ಇಂದಿನ ಹಲವಾರು ಮಠಗಳು, ಧಾರ್ಮಿಕ ಸಂಸ್ಥೆಗಳು ಸಾರ್ವಜನಿಕರಿಂದ ವಸೂಲು ಮಾಡುವ ದತ್ತಿದಾನದ ವಿವರಗಳು ಮುಖ್ಯಸ್ಥರನ್ನು ಹೊರತುಪಡಿಸಿ ಉಳಿದವರಿಗೆ ಗೊತ್ತಾಗದೇ ಇರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಬೌದ್ಧ ಶಿಕ್ಷಣ ಪದ್ಧತಿ ಮತ್ತು ಸಂಘಟನೆಯ ಮಹತ್ವವನ್ನು ಅರ್ಥೈಸಬೇಕಾಗುತ್ತದೆ.

**ಔದ್ಯೋಗಿಕ ಶಿಕ್ಷಣ :**

ಬೌದ್ಧ ಶಿಕ್ಷಣ ಕ್ರಮದಲ್ಲಿ ಔದ್ಯೋಗಿಕ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ಕೊಟ್ಟದ್ದನ್ನು ಕಾಣುತ್ತೇವೆ. 'ಬೌದ್ಧ ಬಿಕ್ಕುಗಳು ನೂಲುವುದು, ನೇಯುವುದು, ಹೆಣಿಕೆ, ಮುಂತಾದ[8] ಔದ್ಯೋಗಿಕ, ವೃತ್ತಿಮೂಲ ಕೌಶಲ್ಯಗಳನ್ನು ಸಂಪಾದಿಸಬೇಕಾಗಿತ್ತು. ಇವುಗಳ ಜೊತೆಗೆ 'ಸ್ವಾವಲಂಬಿ ಜೀವನ ಶೈಲಿಗೆ' ಅಗತ್ಯವಾದ ವಸ್ತುಗಳ ಸ್ವಚ್ಛತೆ, ಅಲಂಕಾರ, ಕಟ್ಟಡಗಳ ನಿರ್ಮಾಣ, ಮುಂತಾದ ಕರಕುಶಲತೆಗಳನ್ನು ಸಂಪಾದಿಸಬೇಕಾಗಿತ್ತು. ಬಿಕ್ಕುಗಳಿಗೇನೆ ಈ ರೀತಿಯ ಶಿಕ್ಷಣ, ತರಬೇತಿ ನೀಡಿದ್ದನ್ನು ನೋಡಿದರೆ ಸಾಮಾನ್ಯ ಜನತೆಯ ಮಕ್ಕಳಿಗೂ ಜೀವನ ಕೌಶಲ್ಯ

(Life Skills) ಗಳ ಬೆಳವಣಿಗೆಗೆ ಈ ಶೈಕ್ಷಣಿಕ ವ್ಯವಸ್ಥೆ ತಾತ್ವಿಕ ದರ್ಶನಗಳನ್ನು ಹೊಂದಿತ್ತು ಎಂಬುದನ್ನು ಗಮನಿಸಬಹುದಾಗಿದೆ. ಹೀಗೆ ಬೌದ್ಧ ಶಿಕ್ಷಣ ಕ್ರಮದಲ್ಲಿ 'ಪ್ರಜ್ಞೆ'ಯ ವಿಮೋಚನೆಯ ಜೊತೆಗೆ 'ವ್ಯಕ್ತಿ' ತನ್ನ ಅಭಿವೃದ್ಧಿ ತಾನೇ ಸಾಧಿಸಿಕೊಳ್ಳಲು ಪ್ರಾಯೋಗಿಕ ತರಬೇತಿಗೂ ಮಹತ್ವ ಕೊಟ್ಟಿರುವುದನ್ನು ಕಾಣುತ್ತೇವೆ.

## ಬೌದ್ಧ ಶಿಕ್ಷಣ ಕ್ರಮದ ಪ್ರಾಯೋಗಿಕ ಅನುಷ್ಠಾನ:

ಬೌದ್ಧ ಶಿಕ್ಷಣ ಕ್ರಮದ ಪ್ರಾಯೋಗಿಕ ಅನುಷ್ಠಾನದಲ್ಲಿ ಭಾರತದಲ್ಲಿ ಕರ್ನಾಟಕದ 'ಮಹಾಬೋಧಿ ಸೊಸೈಟಿ'ಯು ಉತ್ತಮ ಪ್ರಯತ್ನ ಮಾಡುತ್ತಿರುವುದು ಕಂಡು ಬಂದಿದೆ. ಮಹಾಬೋಧಿ ಸೊಸೈಟಿಯು ಬೌದ್ಧ ರೀತಿಯ ಶಿಕ್ಷಣ ತತ್ವಾಚರಣೆಯ ಪ್ರೇರಣೆಯನ್ನು ಪೂಜ್ಯ ಬಿಕ್ಕು ಅನಗಾರಿಕ ಧರ್ಮಾಪಾಲ ಅವರಿಂದ ಪಡೆದಿದೆ. ಬೋಧಿವೃಕ್ಷದ ಕಸಿಯೊಂದನ್ನು ಹಿಡಿದು ಬೆಂಗಳೂರಿಗೆ ಬಂದ ಭಿಕ್ಕು ಆಚಾರ್ಯ ಬುದ್ಧರಕ್ಷಿತರು[9] 1956 ರಲ್ಲಿ ಬೆಂಗಳೂರಿನಲ್ಲಿ ಮಹಾಬೋಧಿ ಸೋಸೈಟಿಯನ್ನು ಪ್ರಾರಂಭಿಸಿದರು. ಅದರೊಂದಿಗೆ ಬೌದ್ಧ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಲು ಪ್ರಯತ್ನ ಪ್ರಾರಂಭಿಸಿದರು. ಪೂಜ್ಯ ಅನಗಾರಿಕ ಧರ್ಮಪಾಲರು ಶ್ರೀಲಂಕಾದಲ್ಲಿ ಅನೇಕ ಬೌದ್ಧ ಶಿಕ್ಷಣ ಸಂಸ್ಥೆಗಳ ಪ್ರಗತಿಗೆ, ಕೃಷಿ ಶಿಕ್ಷಣ, ಔದ್ಯೋಗಿಕ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದರು. ಅದೇ ರೀತಿ ಇಂದು ಆಚಾರ್ಯ ಬುದ್ಧ ರಕ್ಷಿತರ ಮಾರ್ಗದರ್ಶನದಲ್ಲಿ ಪೂಜ್ಯ ಭಿಕ್ಕು ಆನಂದ ಬಂತೇಜಿ ಮತ್ತು ಪೂಜ್ಯ ಭಿಕ್ಕು ಸಂಘಸೇನ ಅವರು ಬೆಂಗಳೂರು, ಮೈಸೂರು ಮತ್ತು ಲೇಹ ಲದ್ದಾಕ್ ಪ್ರದೇಶಗಳಲ್ಲಿ ಬೌದ್ಧಪಂಥೀಯ ಶೈಕ್ಷಣಿಕ ತತ್ವಗಳನ್ನು ಆಧರಿಸಿ ಮಗುವಿನ ಸರ್ವತೋಮುಖ ಬೆಳವಣಿಗೆಯನ್ನು ಸಾಧಿಸುವ ಬೌದ್ಧ ಶೈಕ್ಷಣಿಕ ಕ್ರಮವನ್ನು ಅನುಸರಿಸುತ್ತಿದ್ದಾರೆ. (ಅನುಬಂಧ -1 ರ ಚಿತ್ರ : 51, 60, 61, 62 ಗಳನ್ನು ನೋಡಿರಿ).

ಪ್ರಕೃತಿ ಸಹಜವಾದ ಪರಿಸರದಲ್ಲಿ, ನಿರ್ಭೀತ ವಾತಾವರಣದಲ್ಲಿ ಮಕ್ಕಳ ಮನಸ್ಸು ಅರಳುವ ಸಂತಸ ಕಲಿಕೆ (Joy of Learning) ಸಾಧಿಸುವ ಪ್ರಯತ್ನಗಳನ್ನು ಕಾಣುತ್ತೇವೆ. ಮಹಾಬೋಧಿ ಸೊಸೈಟಿಯು ನಡೆಸುವ ಶಾಲೆಗಳಲ್ಲಿ 'ವಾರ್ಷಿಕ ಚಟುವಟಿಕೆಗಳ ಪಟ್ಟಿಯಲ್ಲಿ'[10]

1) ಹಿರೋಸಿಮಾ / ನಾಗಾಸಾಕಿ ದಿನ
2) ರಾಷ್ಟ್ರೀಯ ಮಿತ್ರತ್ವ ದಿನ
3) ವಿಶ್ವವನ್ಯ ಜೀವಿ ಕಲ್ಯಾಣ ದಿನ
4) ವಿಶ್ವಪರಿಸರ ದಿನಾಚರಣೆ
5) ವಿಶ್ವಶಾಂತಿ ದಿನಾಚರಣೆ
6) ಮಾನವ ಹಕ್ಕುಗಳ ದಿನಾಚರಣೆ
7) ರಾಷ್ಟ್ರೀಯ ಕ್ರೀಡಾ ದಿನ
8) ಹುತಾತ್ಮರ ದಿನ[11]

ಹೀಗೆ ಮಹತ್ವದ ಆಚರಣೆಗಳನ್ನು ಏರ್ಪಡಿಸಿ ಈ ವಿಷಯಗಳಲ್ಲಿ ಬುದ್ಧ ಬೋಧಿಸಿದ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ತತ್ವಗಳ ಆಧಾರ ಮೇಲೆ ಪ್ರೀತಿ, ಕರುಣೆ, ಪ್ರಜ್ಞೆಯ ಸಂವೇದನೆಗಳನ್ನು ಪ್ರಾಥಮಿಕ ಹಂತದಲ್ಲಿಯೇ ಬೆಳೆಸಲು ಪ್ರಯತ್ನಿಸಿರುತ್ತಿರುವುದನ್ನು ಕಾಣುತ್ತೇವೆ. ಇವುಗಳ ಜೊತೆಗೆ

1) ನಗುವಿನ ಸಪ್ತಾಹ (Smile week)
2) ಹಂಚಿಕೆಯ ಸಪ್ತಾಹ (Sharing week)
3) ಕರುಣಾ ಸಪ್ತಾಹ (Compassion week)
4) ತಾಳ್ಮೆಯ ಸಪ್ತಾಹ (Patience week)
5) ಸ್ವಚ್ಛತಾ ಸಪ್ತಾಹ (Hygine week)
6) ಗ್ರಂಥಾಲಯ ಸಪ್ತಾಹ (Library week)
7) ಗೌರವಿಸುವ ಸಪ್ತಾಹ (Reverence week)
8) ಸಹಾಯ ಸಪ್ತಾಹ (Help week)
9) ಸೃಜನಶೀಲತೆಯ ಸಪ್ತಾಹ (Creativity week)
10) ಪರಿಸರ ಸಪ್ತಾಹ (Environment week)

ಇಂತಹ ಮಹತ್ವದ ಆಯಾಮಗಳ ಕುರಿತು ಸಪ್ತಾಹಗಳನ್ನು ಆಚರಿಸಿ ಮಕ್ಕಳಲ್ಲಿ ಉತ್ತಮ ಮಾನವೀಯ ಮೌಲ್ಯಗಳನ್ನು ಬೆಳೆಸಿ ಶ್ರೇಷ್ಠ ಮಾನವರನ್ನಾಗಿಸುವ ಬೌದ್ಧ ರೀತಿಯ ಶಿಕ್ಷಣಾಚರಣೆ ಕಂಡು ಬರುತ್ತದೆ.

ಮಹಾಬೋಧಿ ಶಾಲೆಗಳು, ಪ್ರತಿದಿನ ಮುಂಜಾನೆ 10 ನಿಮಿಷಗಳ ಧ್ಯಾನದೊಂದಿಗೆ ಪ್ರಾರಂಭಗೊಳ್ಳುತ್ತವೆ. ಧ್ಯಾನ ಹೇಗೆ ಮಾಡಬೇಕೆಂಬುದನ್ನು 10 ದಿವಸಗಳ ಶಿಬಿರ ನಡೆಸಿ ಕಲಿಸಿಕೊಟ್ಟು ಪ್ರತಿದಿನದ ಅನುಸರಣೆಗೆ ನೆರವು ನೀಡಲಾಗುತ್ತದೆ. ಮಹಾಬೋಧಿ ಶಾಲೆಗಳ ಅಭಿವೃದ್ಧಿಗೆ ಶ್ರಮಿಸುತ್ತಿರುವ ಪೂಜ್ಯ ಆನಂದ ಬಂತೇಜಿಯವರು ಅಲ್ಲಿನ ಮಕ್ಕಳ ಬಗ್ಗೆ ವೈಯಕ್ತಿಕ ಕಾಳಜಿ ವಹಿಸುತ್ತಿರುವುದನ್ನು ಕಾಣುತ್ತೇವೆ. ಅವರು ಮಕ್ಕಳ ಶಿಕ್ಷಣ ಕುರಿತು 'ಬಡ ಮಕ್ಕಳಿಗೆ, ಗುಣಾತ್ಮಕ ಶಿಕ್ಷಣ ಕೊಡುವುದಕ್ಕಿಂತ ಹೆಚ್ಚಿನ ಉಡುಗೊರೆ (gift) ಯನ್ನೇನು ಕೊಡಲು ಸಾಧ್ಯ ? ನಾವು ಅವರ ಸರ್ವತೋಮುಖ (Holistic) ಮತ್ತು ಸಮಗ್ರ (Comprehensive) ಅಭಿವೃದ್ಧಿಗೆ ಪೂರಕವಾದ ಪಠ್ಯಕ್ರಮ ರೂಪಿಸಿದ್ದೇವೆ. ಅದು ಶೈಕ್ಷಣಿಕ, ಆಧ್ಯಾತ್ಮಿಕ, ಪರಿಸರಾತ್ಮಕ ಮತ್ತು ಸಾಮಾಜಿಕ ಶಿಕ್ಷಣವನ್ನು ಒಳಗೊಂಡಿದೆ. ನಮ್ಮ ಉದ್ದೇಶ ಮಕ್ಕಳು ತಮ್ಮ ಜೀವನದಲ್ಲಿ ನಿಜವಾದ ಆನಂದ ಮತ್ತು ಯಶಸ್ಸಿನ ಕಡೆಗೆ ಒಂದು ಸುಂದರಯಾತ್ರೆ ಕೈಗೊಳ್ಳುವಂತಾಗಬೇಕೆಂಬುದು. ಬುದ್ಧನ ಜೀವನ ಮತ್ತು ಬೋಧನೆಗಳಿಂದ ಪ್ರೇರಣೆ ಮತ್ತು ಮಾರ್ಗದರ್ಶನ ಪಡೆದುಕೊಂಡು ಇಂತಹ ಸುಂದರ ಯಾತ್ರೆ ಕೈಗೊಳ್ಳಬೇಕು. ಈ ನಿಟ್ಟಿನ ನಮ್ಮ ಪ್ರಯತ್ನದಲ್ಲಿ ಈಗಾಗಲೇ ನಮಗೆ ಉತ್ತಮ ಫಲಗಳು ಕಾಣಿಸಿಕೊಂಡಿವೆ'[12] ಎಂದು ಅಭಿಮಾನದಿಂದ ಹೇಳುತ್ತಾರೆ. ಈ ಶಾಲೆಗಳಲ್ಲಿ ಪ್ರತಿ ಶನಿವಾರ ಶಿಕ್ಷಕ, ಶಿಕ್ಷಕಿಯರಿಗಾಗಿಯೇ 'ಧ್ಯಾನದ ಲಘು ತರಬೇತಿ' ಶಿಬಿರಗಳಲ್ಲಿ ಹಮ್ಮಿಕೊಂಡು ಅವರ ವೈಯಕ್ತಿಕ ಜೀವನಕ್ಕೂ ವಿಶೇಷ ತಜ್ಞರಿಂದ ತರಬೇತಿ

ಏರ್ಪಡಿಸಿರುವುದು ಕಂಡು ಬರುತ್ತದೆ. ಹೀಗೆ ಕರ್ನಾಟಕದಲ್ಲಿ ಬೌದ್ಧ ಪರಂಪರೆಯ ಶಿಕ್ಷಣ ಸಂಸ್ಥೆಗಳು ಅನೇಕ ಆಶಕ್ತರ ಮಕ್ಕಳಿಗೆ, ಅನಾಥ ಮಕ್ಕಳಿಗೆ ಸಮಾಜದಲ್ಲಿ ಶಿಕ್ಷಣ ವಂಚಿತ ಮಕ್ಕಳಿಗೆ ಬೌದ್ಧ ರೀತಿಯ ಶಿಕ್ಷಣ ಕ್ರಮದಲ್ಲಿ ತರಬೇತಿ ನೀಡಿ, ಉತ್ತಮ ನಾಗರೀಕರನ್ನು ತಯಾರು ಮಾಡುವಲ್ಲಿ ಪ್ರಯತ್ನಿಶೀಲರಾಗಿರುವುದನ್ನು ಕಾಣುತ್ತೇವೆ. ಈ ಪ್ರಯತ್ನಗಳು ಕರ್ನಾಟಕದ ಬೌದ್ಧರ ಶಿಕ್ಷಣದ ಮೇಲೂ ಆಗುತ್ತಿರುವುದನ್ನು ಗಮನಿಸಬಹುದಾಗಿದೆ. ಮಹಾಭೋಧಿ ಸೊಸೈಟಿಯ ಸಂಪರ್ಕದಲ್ಲಿದ್ದ ದಲಿತರು ಒಂದಿಲ್ಲೊಂದು ರೀತಿಯಲ್ಲಿ ಈ ಪ್ರಯತ್ನಗಳಿಂದ ಪ್ರಭಾವಿತರಾಗಿರುವುದನ್ನು ಅಲ್ಲಗಳೆಯಲಾಗದು.

## ಜಾನ್‌ಡ್ಯೂಯಿ ಮತ್ತು ಡಾ. ಅಂಬೇಡ್ಕರ್‌ರವರ ಪರಿಕಲ್ಪನೆಗಳು :

ಡಾ. ಅಂಬೇಡ್ಕರ್‌ರವರು ಐದಾರು ವರ್ಷಗಳ ಕಾಲ ಅಮೇರಿಕಾ ಮತ್ತು ಯುರೋಪಗಳಲ್ಲಿ ಉನ್ನತ ಶಿಕ್ಷಣ ಪಡೆಯುವ ಸಂದರ್ಭದಲ್ಲಿ ಜಗತ್ತಿನ ಶ್ರೇಷ್ಠ ಶಿಕ್ಷಣ ತಜ್ಞ ಜಾನ್‌ಡ್ಯೂಯಿಯವರ ಉಪನ್ಯಾಸ, ವಿಚಾರಗಳಿಂದ ಪ್ರೇರಿತರಾಗಿ ವೈಜ್ಞಾನಿಕ, ವೈಚಾರಿಕ ತಳಹದಿಯ 'ಪ್ರಯೋಜನವಾದೀ' ಶಿಕ್ಷಣ ತತ್ವವನ್ನು ಪ್ರತಿಪಾದಿಸುತ್ತಾರೆ. ಅವರು 1913 ರಲ್ಲಿ ನ್ಯೂಯಾರ್ಕ್‌ನಿಂದ ಅವರ ತಂದೆಯ ಸ್ನೇಹಿತರೊಬ್ಬರಿಗೆ ಬರೆದ ಪತ್ರದಲ್ಲಿ 'ತಂದೆತಾಯಿಗಳು 'ಮಗು'ವಿಗೆ ಕೇವಲ ಜನ್ಮ ನೀಡುತ್ತಾರೆ, ಆದರೆ 'ಹಣೆಬರಹ' ಬದಲಾಯಿಸಲಾರರು ಎಂಬ ಸಿದ್ಧಾಂತ ಬಿಟ್ಟುಬಿಡಬೇಕು. ಅವರು ಅವರ ಮಕ್ಕಳಿಗೆ ಜನ್ಮ ನೀಡುವದಷ್ಟೇ ಅಲ್ಲ, ಶಿಕ್ಷಣ ನೀಡಿದರೆ ಖಂಡಿತವಾಗಿಯೂ ಅವರ 'ಹಣೆಬರಹ' (Karma) ವೂ ಬದಲಾಗುತ್ತದೆ. ಇಂದು ಬಾಲಕರ ಶಿಕ್ಷಣವಷ್ಟೇ ಅಲ್ಲ ಅದರೊಂದಿಗೆ ಬಾಲಕಿಯರ ಶಿಕ್ಷಣವೂ ಜೊತೆ ಜೊತೆಯಾಗಿಯೇ ನಡೆಯುವುದು ಅಗತ್ಯವಾಗಿದೆ'[13] ಎಂದು ಹೇಳುತ್ತಾರೆ. ಅಂಬೇಡ್ಕರ್‌ರವರು ಶಿಕ್ಷಣವು 'ವ್ಯಕ್ತಿಯಲ್ಲಿ ಮನೋವೈಜ್ಞಾನಿಕ ಕ್ರಾಂತಿಯನ್ನು ತರಬಲ್ಲ ಅಸ್ತ್ರವಾಗಿದೆ'[14] ಎಂದು ಬಲವಾಗಿ ನಂಬಿದ್ದರಿಂದಲೇ ಮುಂಬೈ, ಔರಂಗಾಬಾದ್, ನಾಸಿಕ, ನಾಂದೇಡ, ಪರೇಲ್ ಧಾರವಾಡ ಮುಂತಾದ ಪ್ರದೇಶಗಳಲ್ಲಿ ಶಾಲೆ-ಕಾಲೇಜುಗಳನ್ನು, ವಿದ್ಯಾರ್ಥಿ ನಿಲಯಗಳನ್ನು ತೆರೆದರು. ಶಿಕ್ಷಣವು ದಲಿತರ ಸಾಂಸ್ಕೃತಿಕ ವಿಮೋಚನೆಯಲ್ಲಿ ಮಹತ್ವದ ಪಾತ್ರ ವಹಿಸುತ್ತದೆ ಎಂಬ ಸ್ಪಷ್ಟ ನಂಬಿಕೆ ಅವರದ್ದಾಗಿತ್ತು. ಜಾನ್‌ಡ್ಯೂಯಿ ಹೇಳುವಂತೆ 'ಶಿಕ್ಷಣ ಜಗತ್ತನ್ನು ಅರಿತುಕೊಳ್ಳಲಿಕ್ಕಷ್ಟೇ ಅಷ್ಟೇ ಸಾಧನವಾಗಬಾರದು, ಅದನ್ನು ಪರಿವರ್ತನೆ ಮಾಡಲೂ ನೆರವಾಗಬೇಕು, ಶಿಕ್ಷಣ ವ್ಯಕ್ತಿಯಲ್ಲಿ ಸ್ವಾವಲಂಬನೆ, ಸ್ವ-ಸಹಾಯ (Self-help) ಸಾಮರ್ಥ್ಯ ಬೆಳೆಸಬೇಕು[15] ಎಂಬ ಶೈಕ್ಷಣಿಕ ದೃಷ್ಟಿಕೋನದ ಹಿನ್ನೆಲೆಯಲ್ಲಿಯೇ ಅಂಬೇಡ್ಕರ್‌ರವರು ಬೌದ್ಧಧರ್ಮದ ಶೈಕ್ಷಣಿಕ ತತ್ವಗಳ ಕಡೆಗೆ ಆಕರ್ಷಿತರಾದರು. 'ಜಾತಿ ವಿನಾಶ' ಸಂಶೋಧನಾ ಪ್ರಬಂಧದಲ್ಲಿ ಅಂಬೇಡ್ಕರ್‌ರವರು 'ಹಿಂದುಗಳು ತಮ್ಮ ಸಾಮಾಜಿಕ ಪರಂಪರೆಯು ಯಾವುದನ್ನು ತಮ್ಮ ಮುಂದಿನ ಜನಾಂಗಕ್ಕೆ ವರ್ಗಾಯಿಸಬೇಕು, ಯಾವ ಅಂಶಗಳನ್ನು ವರ್ಗಾಯಿಸಬಾರದೆಮಬುದನ್ನು ತಿಳಿದುಕೊಳ್ಳಬೇಕು'[16] ಎಂದು ಹೇಳುತ್ತಾ ನಾನು ಹೆಚ್ಚು ಗೌರವಿಸುವ ನನ್ನ ಗುರುಗಳಾದ ಪ್ರೊಫೆಸರ್ ಜಾನ್ ಡ್ಯೂಯಿಯವರು : 'ಪ್ರತಿಯೊಂದು ಸಮಾಜ ತಾನು ಉಳಿಯಬೇಕೆಂದು ಬಯಸಿದ್ದಲ್ಲಿ ತನ್ನೊಳಗೆ ಯಾವುದು ತುಕ್ಕು ಹಿಡಿದಿದೆ, ಸತ್ತು ಹೋಗಿದೆ ಎಂಬುದನ್ನು ಅರಿತುಕೊಂಡು, ಉತ್ತಮವಾದುದನ್ನು ಉಳಿಸಿಕೊಂಡರೆ ಅಂತಹ ಸಮಾಜಕ್ಕೆ ಜ್ಞಾನೋದಯವಾದಂತೆ'[17] ಎಂದು ಹೇಳುತ್ತಾ ಹಿಂದುಗಳು ಜಾತಿ ವ್ಯವಸ್ಥೆಯನ್ನು ಪುರಸ್ಕರಿಸಿದರೆ ಅವರಿಗೇನೆ ಅನಾಹುತ ತಪ್ಪಿದ್ದಲ್ಲವೆಂದು ವಿಶ್ಲೇಷಿಸುತ್ತಾರೆ. ಅಂಬೇಡ್ಕರ್‌ರವರು ಪ್ರಯೋಜನವಾದ

(Pragmatism) ದ ಹಿನ್ನಲೆಯಲ್ಲಿಯೇ ಬೌದ್ಧ ಧರ್ಮದ 'ಪರಿವರ್ತನಶೀಲ' ಶಿಕ್ಷಣ ಸಾಂಸ್ಕೃತಿಕವಾಗಿ ತೀರಾ ಬರ್ಬರವಾಗಿ ಧಮನಿತರಾದ ಜನತೆಯ ವಿಮೋಚನೆಗೆ ಹೇಗೆ ಸಾಧನವಾಗಬಲ್ಲದೆಂಬುದನ್ನು ಗ್ರಹಿಸಿದರು. ಚಾರ್ಲ್ಸ್ ಸ್ಯಾಂಡರ್ ಪೀರ್ಸ್ ವಿಲಿಯಂ ಜೇಮ್ಸ್ ಜಾನ್‌ಡ್ಯೂಯಿ ಮತ್ತು ಕಿಲ್‌ಪ್ಯಾಟ್ರಿಕರಂತಹ ಶ್ರೇಷ್ಠ ಶಿಕ್ಷಣ ತಜ್ಞರು ಪ್ರತಿಪಾದಿಸುವ 'ಪ್ರಯೋಜನವಾದ ಅಥವಾ ವ್ಯವಹಾರಿಕವಾದವು, ಮುಖ್ಯವಾಗಿ 'ಮನುಷ್ಯನ ಕ್ರಿಯೆ ಮಹತ್ವದ್ದು' (The Aim of Man is Action) ಕ್ರಿಯೆ ಇಲ್ಲದೇ ಪ್ರತಿಕ್ರಿಯೆ ಇಲ್ಲ, ಪ್ರತಿಕ್ರಿಯೆ ಇಲ್ಲದೇ ಬದಲಾವಣೆ ಇಲ್ಲ, ಈ ಸಿದ್ಧಾಂತ 'ಯಾವುದೇ ಶಾಶ್ವತ ಮೌಲ್ಯಗಳಿಗೆ' (Eternal Values) ಸತ್ಯವನ್ನು (True) ಅಥವಾ (Beauty) ಸೌಂದರ್ಯವನ್ನು ಒಪ್ಪುವುದಿಲ್ಲ; ಬದಲಾಗಿ, ಒಳ್ಳೆಯತನ (Good) ಮತ್ತು ವರ್ತನೆಯಲ್ಲಿ ಪ್ರಕಟವಾಗುವ ಸತ್ಯ (Truth at the time of Behaviour is Proper) ಮುಖ್ಯವಾಗುತ್ತದೆ.'[17@] ವರ್ತನೆಯಲ್ಲಿ ಗೋಚರಿಸುವ ಸತ್ಯ ಅನುಭವ ಗ್ರಸ್ಥವಾಗಿರುತ್ತದೆ. ಕೇವಲ ತರ್ಕದಿಂದ ಸತ್ಯವನ್ನು ಬೋಧಿಸುವುದಕ್ಕಿಂತ ಅದನ್ನು ಆಚರಿಸಬೇಕೆನ್ನುವುದು ಇಲ್ಲಿನ ಪ್ರಧಾನ ಕಾಳಜಿಯಾಗಿದೆ. ಅದೇ ರೀತಿ ಯಾವುದೇ ಶಾಶ್ವತ ಮೌಲ್ಯಗಳು ಇರುವುದಿಲ್ಲ ಆಯಾ ಕಾಲ ಘಟ್ಟಕ್ಕೆ ತಕ್ಕಂತಹ ಮೌಲ್ಯಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಬುದ್ಧನು ಬೋಧಿಸಿದ ತತ್ವಗಳನ್ನು ಇಂತಹ ಪರಿಕಲ್ಪನೆಗಳ ಹಿನ್ನೆಲೆಯಲ್ಲಿಯೇ ಡಾ. ಅಂಬೇಡ್ಕರ್‌ರವರು ಅರ್ಥ ಮಾಡಿಕೊಂಡದ್ದು ಕಂಡು ಬರುತ್ತದೆ.

## ಬುದ್ಧನ ಬೋಧನೆಗಳು ಮತ್ತು ಜಾನ್‌ಡ್ಯೂಯಿ, ಅಂಬೇಡ್ಕರ್‌ರವರ ವೈಜ್ಞಾನಿಕ ಮನೋಧರ್ಮ:

ಬುದ್ಧನ ಪ್ರಮುಖ ಬೋಧನೆಗಳಾದ 'ಅನತ್ತ' (ಸ್ವಾರ್ಥ ರಹಿತ, ವಸ್ತುರಹಿತ, ತಾನಲ್ಲದ ಸ್ಥಿತಿ) ಮತ್ತು 'ಅನಿಚ್ಚ' (ಪರಿವರ್ತನ ಶೀಲ) ಈ ತತ್ವಗಳ ಆಧಾರದ ಮೇಲೆ ಅಂಬೇಡ್ಕರ್‌ರವರು 'ಮನುಷ್ಯನ ಪ್ರಜ್ಞಾ' ವಿಕಾಸವನ್ನು ಪರಿಕಲ್ಪಿಸಿರುವುದು ಕಂಡು ಬರುತ್ತದೆ.

ಇಂದು ದಲಿತ ಬುದ್ಧಿಜೀವಿಗಳು ಜಾನ್ ಡ್ಯೂಯಿ ಅವರ ಶೈಕ್ಷಣಿಕ ತತ್ವಜ್ಞಾನ ಮತ್ತು ಅಂಬೇಡ್ಕರ್‌ರವರ ಶೈಕ್ಷಣಿಕ ಪರಿಕಲ್ಪನೆಗಳನ್ನು ಸಮೀಕರಿಸಿ ಅಂಬೇಡ್ಕರ್‌ರವರು ಪ್ರತಿಪಾದಿಸಿದ ಬುದ್ಧನು ''ಡ್ಯೂಯಿನ್ ಬುದ್ಧ'' (Deweyan Buddha) ಎಂದು ವಿಶ್ಲೇಷಿಸುತ್ತಾರೆ. ಹೀಗೆ ವಿಶ್ಲೇಷಣೆ ಮಾಡುತ್ತಾ 'ದಲಿತ ವಿಮೋಚಕರಾದ ಅಂಬೇಡ್ಕರ್‌ರವರು (1891-1956), ಜಾನ್ ಡ್ಯೂಯಿಯ (1859-1952) ವೈಜ್ಞಾನಿಕ ಮನೋಭಾವನೆ (Scientific temper) ಯ ಪರಿಕಲ್ಪನೆಯನ್ನು, ಬುದ್ಧನ (ಕ್ರಿ.ಶ.ಪೂ. 563-483) ಪ್ರೀತಿ, ಕರುಣೆ ದಯೆಯಂತಹ ಬೋಧನೆಗಳ ಜೊತೆಗೆ ಸಮ್ಮಿಶ್ರಗೊಳಿಸಿ ಬೌದ್ಧ ಪರಂಪರೆಯನ್ನೇ ಮರು ಅರ್ಥೈಸಿ ಹಿಂದೂ ಧರ್ಮವನ್ನು, ಮೌಲ್ಯಗಳನ್ನು ಅದು ಪೋಷಿಸಿಕೊಂಡು ಬಂದ ಅದರ ಸ್ವಭಾವಜನ್ಯ ಜಾತಿ ಅಸಮಾನತೆಯನ್ನು ಪ್ರಶ್ನಿಸಿದರು'[18] ಎಂದು ಅಭಿಪ್ರಾಯ ಪಡುತ್ತಾರೆ. ಅಂಬೇಡ್ಕರ್‌ರವರು ಹಿಂದೂ ಸ್ಥಾಪಿತ ಮೌಲ್ಯಗಳ ಮರುಮೌಲ್ಯಮಾಪನದಲ್ಲಿ ಜಾನ್‌ಡ್ಯೂಯಿ ಮತ್ತು ಅವರ ವೈಜ್ಞಾನಿಕ ಮನೋಭಾವನೆಯ ಪರಿಕಲ್ಪನೆಗಳನ್ನು ಅಂದರೆ ಪ್ರಯೋಜನವಾಗದ ಸಿದ್ಧಾಂತಗಳನ್ನು ಬೆಳೆಸಿಕೊಂಡಿರುವುದು ನಿಜವಾದರೂ ಬೌದ್ಧಧರ್ಮಕ್ಕೆ ದಲಿತರನ್ನು ಕೊಂಡೊಯ್ಯುವಲ್ಲಿ ಪೂರ್ತಿಯಾಗಿ ಜಾನ್ ಡ್ಯೂಯಿಯ ಪ್ರಭಾವಕ್ಕೆ ಅವರು ಒಳಗಾಗಿರಲಿಲ್ಲ ಎಂಬುದು ಮುಖ್ಯವಾಗಿದೆ. ಅಂಬೇಡ್ಕರ್‌ರವರಿಗೆ ಜಾನ್ ಡ್ಯೂಯಿಯ ಆಧುನಿಕ ವಿಜ್ಞಾನದ

ವೈಜ್ಞಾನಿಕ ನಿಕಶದ ಜೊತೆಗೆ 'ಬೌದ್ಧಧರ್ಮದ ಆಚರಣೆಗಳು' ದಲಿತರ ಬದುಕಿನ ಸಾಂಸ್ಕೃತಿಕ ಆಯಾಮಕ್ಕೆ ಬೇಕಾಗಿತ್ತು ಎನ್ನುವುದನ್ನು ಅಲ್ಲಗಳೆಯಲಾಗದು. 1952 ರಲ್ಲಿ ಕೊಲಂಬಿಯಾ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪ್ರಧಾನ ಮಾಡಿದಾಗ ಸವಿತಾ ಅಂಬೇಡ್ಕರ್‌ರವರು ಹೇಳಿದಂತೆ 'ಮೂವತ್ತು ವರ್ಷಗಳ ನಂತರವೂ ಅಂಬೇಡ್ಕರ್‌ರವರು ಸಂತೋಷದಿಂದ ಜಾನ್‌ಡ್ಯೂಯಿ ತರಗತಿಯಲ್ಲಿ ಹೋಗಿ ಕುಳಿತರು'[19] ಈ ಹಿನ್ನೆಲೆಯಲ್ಲಿಯೇ ಮೀರಾ ನಂದಾ ಅವರು ಅಂಬೇಡ್ಕರ್‌ರವರ ಬುದ್ಧನನ್ನು 'ಡ್ಯೂಯಿಯನ್ ಬುದ್ಧ'[20] ನೆಂದೇ ಪ್ರತಿಪಾದಿಸಲು ಪ್ರಯತ್ನಿಸಿರುವುದು ಕಂಡು ಬರುತ್ತದೆ. ಆದರೆ ಮೇಲೆ ಹೇಳಿದಂತೆ ಅಂಬೇಡ್ಕರ್‌ರವರಿಗೆ ಜಾನ್‌ಡ್ಯೂಯಿ ವೈಜ್ಞಾನಿಕ ವಿಶ್ಲೇಷಣಾ ಕ್ರಮವೇ ಇರಲಿ, ಬುದ್ಧನು ಬೋಧಿಸಿ ವಿಶ್ವಮಾನ್ಯ ಮೌಲ್ಯಗಳೇ ಆಗಲಿ 'ದಲಿತರನ್ನು ಶತ ಶತಮಾನಗಳಿಂದ ಅವರು ಪಟ್ಟ ಮಾನಸಿಕ ಬೌದ್ಧಿಕ, ಸಾಂಸ್ಕೃತಿಕ ದಬ್ಬಾಳಿಕೆಗಳ ದಯನೀಯ ಸ್ಥಿತಿಯಿಂದ ವಿಮೋಚನೆಗೊಳಿಸುವುದಾಗಿತ್ತು ಎಂಬುದನ್ನು ಗಮನಿಸಬೇಕು. ಆದ್ದರಿಂದಲೇ ಅವರು ಬುದ್ಧನ 'ಸಾಮಾಜಿಕ ಪರಿವರ್ತನೆ'ಯ ಚಲನಶೀಲ ಸಾಧನವಾದ 'ಸಂಘ' ಮತ್ತು 'ಬಿಕ್ಕು' ಗಳ ಬಗ್ಗೆ ತೀಕ್ಷ್ಣ ವಿಚಾರಗಳನ್ನು ವ್ಯಕ್ತಪಡಿಸಿದ್ದುದನ್ನು ಕಾಣುತ್ತೇವೆ. ಏನೇ ಇರಲಿ ಡಾ. ಅಂಬೇಡ್ಕರ್‌ರವರು ಬುದ್ಧನ ಬೋಧನೆಗಳನ್ನು 'ವ್ಯಕ್ತಿಯನ್ನು ವಿಮೋಚನೆ' ಗೊಳಿಸುವ ಶಿಕ್ಷಣದ ಕ್ರಮವಾಗಿ, ಪರಿವರ್ತನಶೀಲ ತತ್ವವಾಗಿ, ದರ್ಶನವಾಗಿ ಗ್ರಹಿಸಿದರು ಎಂಬುದನ್ನು ಅಲ್ಲಗಳೆಯಲಾಗದು.

ಅಂಬೇಡ್ಕರ್‌ರವರಿಗೆ ಸ್ವಾತಂತ್ರ್ಯ ಸಮಾನತೆ ಮತ್ತು ಭ್ರಾತೃತ್ವ ತತ್ವಗಳ ಆಧಾರವಿರುವ ಬೌದ್ಧ ಧರ್ಮದ ತಾತ್ವಿಕ ಆಯಾಮದ ಜೊತೆಗೆ ಅದರ ಆಚರಣಾತ್ಮಕ, ಚಾರಿತ್ರಿಕ ಆಯಾಮವೂ 'ದಲಿತ ವಿಮೋಚನೆಯ' ಹಿನ್ನಲೆಯಲ್ಲಿ ಮುಖ್ಯವಾಗಿ ಕಂಡಿತು. 1945 ರಲ್ಲಿ ಮುಂಬೈದಲ್ಲಿ ಪ್ರಾರಂಭಿಸಿದ 'ಪೀಪಲ್ಸ್' ಎಜ್ಯುಕೇಶನ್ ಸೊಸೈಟಿಯ ವತಿಯಿಂದ ಅಜಂತಾ, ಎಲ್ಲೋರಾ ಬೌದ್ಧ ಕ್ಷೇತ್ರಗಳಿಗೆ ಹತ್ತಿರದ ಔರಂಗಾಬಾದ್ ಪ್ರದೇಶಗಳಲ್ಲಿ ಪ್ರಾರಂಭಿಸುವ ಅವರ ಕಾರ್ಯತಂತ್ರ ದಲಿತ ವಿದ್ಯಾರ್ಥಿಗಳು ಔಪಚಾರಿಕ ಶಿಕ್ಷಣದ ಜೊತೆಗೆ ಬೌದ್ಧ ಧರ್ಮದ ಕುರುಹಗಳಾದ ಬೌದ್ಧ ಬಿಕ್ಕುಗಳು ಶೈಕ್ಷಣಿಕ ಕೇಂದ್ರಗಳಾಗಿದ್ದ ಅಜಂತಾ, ಎಲ್ಲೋರಾದಂತಹ ಬೌದ್ಧ ಕ್ಷೇತ್ರಗಳಿಂದ ಪ್ರೇರಣೆ ಪಡೆದುಕೊಳ್ಳುತ್ತಾರೆಂಬುದಾಗಿತ್ತು ಎಂದರೆ ತಪ್ಪಾಗಲಾರದು. ಅವರ ಆಶಯದಂತೆ ಮತಾಂತರದ ನಂತರ 'ಪೀಪಲ್ಸ್ ಎಜ್ಯುಕೇಶನ್' ಸೊಸೈಟಿಯ ಶಾಲೆ ಕಾಲೇಜುಗಳಲ್ಲಿ ಬೌದ್ಧ ಶಿಕ್ಷಣ ಮತ್ತು ಸಂಸ್ಕೃತಿ ಪಠ್ಯಕ್ರಮದಲ್ಲಿ'[21] ಸ್ಥಾನ ಪಡೆದಿರುವುದನ್ನು ಕಾಣುತ್ತೇವೆ. ಇವತ್ತು ಅಂಬೇಡ್ಕರ್‌ರವರು ಪ್ರಾರಂಭಿಸಿದ ಸಂಸ್ಥೆಗಳಲ್ಲಿ ಲಕ್ಷಾನುಗಟ್ಟಲೇ ಸಂಖ್ಯೆಯಲ್ಲಿ ದಲಿತರು, ಬೌದ್ಧ ಧರ್ಮಕ್ಕೆ ಮತಾಂತರಗೊಂಡವರ ಮಕ್ಕಳು ವ್ಯಾಸಂಗ ಮಾಡುತ್ತಿದ್ದಾರೆ. 1974 ರಲ್ಲಿಯೇ 66 ಸಾವಿರ ವಿದ್ಯಾರ್ಥಿಗಳ ಪೈಕಿ ಪ್ರತಿಶತ 70% ರಷ್ಟು ಬೌದ್ಧ ವಿದ್ಯಾರ್ಥಿಗಳೇ ಇರುವುದು[22] ಕಂಡು ಬರುತ್ತದೆ.

## 7.2. ಪ್ರಮುಖ ಬೌದ್ಧ ಸಂಘ ಸಂಸ್ಥೆಗಳು, ಬೌದ್ಧ ವಕ್ತಾರರು ಮತ್ತು ಕರ್ನಾಟಕದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನಕ್ಕೆ ಅವರು ಸಲ್ಲಿಸಿದ ಕೊಡುಗೆಗಳು :

ಕರ್ನಾಟಕದಲ್ಲಿ ದಲಿತರು, ದಲಿತ ಚಳವಳಿಯ ನೇತಾರರು, ಬುದ್ಧಿ ಜೀವಿಗಳು, ಅತ್ಯಂತ ಸ್ಪಷ್ಟವಾಗಿ ಬೌದ್ಧ ಧರ್ಮವನ್ನು ತಮ್ಮ ಸಾಂಸ್ಕೃತಿಕ ಐಡೆಂಟಿಟಿಯಾಗಿ ತಮ್ಮ ಚಾರಿತ್ರಿಕ ಪರಂಪರೆಯಾಗಿ ಒಪ್ಪಿಕೊಂಡು

ಸಾಗುತ್ತಿರುವುದು ಪ್ರಸ್ತುತ ಅಧ್ಯಯನದಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ. ಅಧ್ಯಯನಕಾರನು ಕೈಗೊಂಡ ಕ್ಷೇತ್ರ ಕಾರ್ಯ, ಸಂದರ್ಶಿಸಿದ ಪ್ರಮುಖ ಬೌದ್ಧ ವಕ್ತಾರರು ಅತ್ಯಂತ ಸಮರ್ಥವಾಗಿ ಬೌದ್ಧ ಧರ್ಮವನ್ನು 'ದಲಿತ ವಿಮೋಚನೆಯ' ಕಾರ್ಯತಂತ್ರವಾಗಿ ಗ್ರಹಿಸುವುದರ ಜೊತೆಗೆ ಅಸಮಾನತೆಯ ಆಗರವಾದ ಹಿಂದೂ ಧಾರ್ಮಿಕ ವ್ಯವಸ್ಥೆಗೆ ಪರ್ಯಾಯವಾಗಿ ತಮ್ಮದೇ ಆದ ಧಮ್ಮವನ್ನು ಸಾಂಸ್ಕೃತಿಕ ಸ್ವಾವಲಂಬನೆಯನ್ನು (Cultural Self-Reliance) ಕಟ್ಟಿಕೊಳ್ಳಲು ಸಾಧಿಸಲು ವ್ಯಾಪಕವಾದ ಪ್ರಯತ್ನಗಳನ್ನು ನಡೆಸಿರುವುದನ್ನು ಕಾಣುತ್ತೇವೆ. ಪ್ರಸ್ತುತ ಅಧ್ಯಯನದ ಆಶಯಗಳ ಹಿನ್ನೆಲೆಯಲ್ಲಿ ಅಂತಹ ಕೆಲವು ಸಂಘ, ಸಂಸ್ಥೆಗಳನ್ನು, ಬೌದ್ಧ ವಕ್ತಾರರನ್ನು ಅವರು ಹಮ್ಮಿಕೊಂಡ ಚಟುವಟಿಕೆಗಳ ಹಿನ್ನೆಲೆಯಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

**ಕರ್ನಾಟಕ ಬುದ್ಧ ಧಮ್ಮ ಸಮಿತಿ :**

ಆಧುನಿಕ ಕರ್ನಾಟಕದ ಬೌದ್ಧ ಚರಿತ್ರೆಯಲ್ಲಿ ಬಿ. ಬಸವಲಿಂಗಪ್ಪನವರದು ಅತ್ಯಂತ ಮಹತ್ವದ ಕಾಲಘಟ್ಟವಾಗಿದೆ. 21-04-1924 ರಲ್ಲಿ ಜನಿಸಿದ ಬಿ. ಬಸವಲಿಂಗಪ್ಪನವರು (ಅನುಬಂಧ-1, ಚಿತ್ರ : 23 ಗಮನಿಸಿ) ಕರ್ನಾಟಕದ ರಾಜಕೀಯ ನಕ್ಷೆಯಲ್ಲಿ ತಮ್ಮದೇ ಆದ ಛಾಪು ಮೂಡಿಸಿದ್ದಾರೆ. ಪ್ರಾರಂಭದಿಂದಲೂ ಪ್ರಖರ ವೈಚಾರಿಕತೆಯನ್ನು ಹೊಂದಿದ್ದ ಅವರು ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ಅನುಯಾಯಿಗಳಾಗಿದ್ದ ಬೆಳಗಾವಿಯ ಬಲವಂತರಾವ್ ವರಾಳೆ ಹಾಗೂ ಕೊಲ್ಲೂರ್‌ರದ ಎಲ್. ಹರಿಹರಪ್ಪನವರ ಒಡನಾಟದಿಂದ ಅಂಬೇಡ್ಕರ್ ಚಿಂತನೆ ಮತ್ತು ಚಳುವಳಿಗೆ ಮಾರು ಹೋಗಿದ್ದರು. ರಾಜಕೀಯ ಅಧಿಕಾರದ ಒಳ ಹೊರಗುಗಳನ್ನು ತುಂಬಾ ತೀಕ್ಷ್ಣಮತಿಗಳಾಗಿ, ದಲಿತ ಕಾಳಜಿಯಿಂದ ನೋಡುತ್ತಿದ್ದ ಬಿ. ಬಸವಲಿಂಗಪ್ಪನವರು ದಲಿತ ವರ್ಗದ ಶಿಕ್ಷಣಕ್ಕೆ ಪ್ರಥಮ ಆದ್ಯತೆ ಕೊಟ್ಟವರು. ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ಧಾರವಾಡದಲ್ಲಿ 1929 ಪ್ರಾರಂಭಿಸಿದ 'ನಿಮ್ನ ವರ್ಗದ ವಸತಿ ನಿಲಯ' ದ ಅಧ್ಯಕ್ಷರಾಗುವ ಮೂಲಕ ಉತ್ತರ ಕರ್ನಾಟಕದ ದಲಿತರ ಚಿಂತನೆಯ ಮೇಲೆ ಪ್ರಭಾವ ಬೀರಿದರು. '1964 ರಲ್ಲಿ ಮುಂಬಯಿ ಪೀಪಲ್ಸ್ ಎಜ್ಯುಕೇಶನ್ ಸೊಸೈಟಿಯ ಟ್ರಸ್ಟ್ ಹಾಗೂ ಆಡಳಿತ ಮಂಡಳಿಯ ಸದಸ್ಯರಾಗಿ ಆಯ್ಕೆಗೊಂಡರು. ಆ ಸಂದರ್ಭದಲ್ಲಿಯೇ ಮಹಾರಾಷ್ಟ್ರದಲ್ಲಿ ಬೌದ್ಧ ಧರ್ಮ ಚಟುವಟಿಕೆಗಳು ಅವರ ಗಮನ ಸೆಳೆದಿರುವ ಸಾಧ್ಯತೆ ಇರುವುದನ್ನು ಕಾಣುತ್ತೇವೆ. ಬಸವಲಿಂಗಪ್ಪನವರ ದಲಿತಪರ ಪ್ರಜ್ಞೆಯನ್ನು ಗುರುತಿಸಿದ ನಿಪ್ಪಾಣಿಯ ಹನುಮಂತ ವರಾಳೆಯವರು ಇದಕ್ಕೆಲ್ಲ ಕಾರಣರಾಗಿದ್ದರೆಂದು'[24], ವೈ. ಬಿ. ಹಿಮ್ಮಡಿ ಅಭಿಪ್ರಾಯ ಪಡುತ್ತಾರೆ.

1970 ರ ದಶಕ ಕರ್ನಾಟಕದ ದಲಿತ ಚಳುವಳಿಯಲ್ಲಿ ಮಹತ್ವದ ಘಟ್ಟವಾಗಿದೆ. 1973 ರಲ್ಲಿ ಮೈಸೂರಿನಲ್ಲಿ ವಿದ್ಯಾರ್ಥಿಗಳನ್ನು ಉದ್ದೇಶಿಸಿ (18.11.1973) ಮಾತನಾಡುವಾಗ ಈಗಿನ 'ಪಠ್ಯ ಪುಸ್ತಕಗಳಿಂದ ವಿದ್ಯಾರ್ಥಿಗಳಲ್ಲಿ ಪರಾಕ್ರಮ, ದೇಶಭಕ್ತಿ ಸಮಾಜವಾದಿ ಸಮಾಜ ರಚನೆಗೆ ಸಹಾಯಕವಾಗುವ ವಿಚಾರಗಳು ಲಭ್ಯವಾಗಲಾರವು. ಅವುಗಳಲ್ಲಿ ಕೇವಲ ಹಳೇವಾದ, ಶೋಷಣೆವಾದ, ಶುಷ್ಕವಾದ ಕಂಡು ಬರುತ್ತದೆ. ನಮ್ಮ ವಿದ್ಯಾರ್ಥಿಗಳು ಬೇರೆ ಬೇರೆ ದೇಶದ ಕ್ರಾಂತಿಕಾರಕ ಪುಸ್ತಕಗಳನ್ನು ಓದಿ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಬೇಕು. ಇದಿಲ್ಲದ ಸಾಹಿತ್ಯ ಬೂಸಾ' ಎಂದು ಹೇಳಿದ ಮಾತು 'ಹತ್ತು ದಿವಸ ಬಿಟ್ಟು ಪತ್ರಿಕೆಯಲ್ಲಿ 'ಕನ್ನಡ ಸಾಹಿತ್ಯ ಬೂಸಾ' ಎಂಬ ಹೇಳಿಕೆ ಪ್ರಕಟವಾಗಿದ್ದರಿಂದ ಅವರು ಮಂತ್ರಿ ಪದವಿ ತ್ಯಜಿಸಬೇಕಾಯಿತು. ಈ ಪ್ರಕರಣವೇ

ಕರ್ನಾಟಕದಾದ್ಯಂತ ಒಂದು ಹೊಸ ಅಲೆಯನ್ನು ಪ್ರಾರಂಭಿಸಿತು. ಬಿ. ಬಸವಲಿಂಗಪ್ಪ 'ದೇವರುಗಳನ್ನು ಚರಂಡಿಗೆ ಎಸೆಯಿರಿ ಎಂದು ಕರೆಕೊಟ್ಟು "ದೇವರುಗಳೆಂದರೆ ನಮ್ಮ ಪೂರ್ವಜರನ್ನು ಮೋಸದಿಂದ ಧ್ವಂಸ ಮಾಡಿದ ಪುರೋಹಿತರ ಪ್ರತಿನಿಧಿಗಳೆಂದು"[26] ವಿವರಿಸಿ ಹಿಂದೂ ಧರ್ಮಕ್ಕೆ ಬಿಸಿಮುಟ್ಟಿಸಿದರು. ಬಿ. ಬಸಲಿಂಗಪ್ಪನವರೇ ಹೇಳುವಂತೆ "ಹಿಂದೂ ಸಮಾಜದ ಹಿಡಿತದಲ್ಲಿ ಸಿಲುಕಿರುವ ದಲಿತರನ್ನು ಬಿಡುಗಡೆ ಮಾಡಲು ವಿಗ್ರಹಗಳನ್ನು ಬೀದಿಗೆಸೆಯಿರಿ, ಬೂಸಾ ಸಾಹಿತ್ಯ ಎಂಬಿತ್ಯಾದಿ ಶಾಖ ಟ್ರೀಟ್‌ಮೆಂಟ್ ಕೊಟ್ಟಿದ್ದೇನೆ. ಒಟ್ಟು ದಲಿತ ಸಮಾಜದಲ್ಲಿ ಮುಕ್ತತೆ ತರುವುದು. ಅವರ 'ಬಂಧಿತ ಪ್ರಜ್ಞೆ' ಯನ್ನು ವಿಮೋಚನೆಗೊಳಿಸುವ ದಿಸೆಯಲ್ಲಿ ಇವೆಲ್ಲ ಒಂದೊಂದು ಪ್ರಯತ್ನಗಳು"[27], ಎಂದಿರುವುದು ಅವರ ಪ್ರಖರ ಬೌದ್ಧಿಯತೆಗೆ ಹಿಡಿದ ಕನ್ನಡಿಯಾಗಿದೆ.

**ಕರ್ನಾಟಕದಲ್ಲಿ ಬೌದ್ಧ ಧರ್ಮ ಪುನರುಜ್ಜೀವನಕ್ಕೆ ಸಲ್ಲಿಸಿದ ಕೊಡುಗೆ:**

ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು ಪರಿಕಲ್ಪಿಸಿದ ದಲಿತರ ಧಾರ್ಮಿಕ, ಸಾಂಸ್ಕೃತಿಕ ವಿಮೋಚನೆಯ ಮಾರ್ಗದಲ್ಲಿ ಪ್ರಪ್ರಥಮವಾಗಿ ನಡೆದ ದಲಿತ ನಾಯಕರೆಂದರೆ ಬಿ. ಬಸವಲಿಂಗಪ್ಪನವರು. ಅವರು ಅಂಬೇಡ್ಕರ್‌ರವರು ದಲಿತರ ವಿಮೋಚನೆಗೆ ತೆಗೆದುಕೊಂಡ ನಿಲುವುಗಳನ್ನು ಯಾವುದೇ ಪೂರ್ವಾಗ್ರಹಗಳಿಂದ ನೋಡದೆ, ತರ್ಕಿಸದೆ ಒಪ್ಪಿಕೊಂಡು ತಮ್ಮ ಜೀವನದಾದ್ಯಂತ ಅನುಷ್ಠಾನಕ್ಕೆ ಪ್ರಯತ್ನಿಸಿದ್ದು ಕಂಡು ಬರುತ್ತದೆ. ಅವರ ಎಡೆಬಿಡದ ರಾಜಕೀಯ ಚಟುವಟಿಕೆಗಳ ಮಧ್ಯೆಯೂ ಕೂಡಾ ಅವರ ಪ್ರವಾಸ ಕಾರ್ಯಕ್ರಮಗಳಲ್ಲಿ ತಪ್ಪದೇ ಎಲ್ಲಾ ಭಾಗದ ದಲಿತರನ್ನು ಶೋಷಿತರನ್ನು ಭೇಟಿ ಮಾಡಿ ಅವರ ಕಷ್ಟ ಸಂಕೋಲೆಗಳಿಗೆ ಸ್ಪಂದಿಸಿದ್ದಿದೆ. ಹಲವಾರು ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿದ ಬಿ. ಬಸವಲಿಂಗಪ್ಪನವರು ಬೌದ್ಧಧರ್ಮ ಪ್ರಸಾರಕ್ಕಾಗಿಯೇ 'ಬೌದ್ಧ ಧರ್ಮ ಚಕ್ರ ಪರಿವರ್ತನ ಸಮಿತಿ' ಯನ್ನು 1985 ರಲ್ಲಿ ಸ್ಥಾಪಿಸಿದರು. 'ಮೈಸೂರಿನ ಜಯಚಾಮರಾಜೇಂದ್ರ ಒಡೆಯರಿಗೆ ಕಾನೂನು ಸಲಹೆಗಾರರಾಗಿದ್ದ ಡಾ. ಅಂಬೇಡ್ಕರ್‌ರವರಿಗೆ ಮಹಾರಾಜರು ಬೌದ್ಧ ಧರ್ಮದ ಕಾರ್ಯಚಟುವಟಿಕೆಗಳಿಗಾಗಿಯೇ ಬೆಂಗಳೂರಿನ ರಾಜಮಹಲ್ ವಿಲಾಸ ಬಡಾವಣೆಯಲ್ಲಿ ಐದು ಎಕರೆ ಭೂಮಿಯನ್ನು ಕೊಟ್ಟಿದ್ದರು[28]'. ಅಂಬೇಡ್ಕರ್‌ರವರು ಈ ಜಾಗೆಯಲ್ಲಿ ಒಂದು ಬೌದ್ಧ ಬಿಕ್ಕು ತರಬೇತಿ ಕೇಂದ್ರವನ್ನೂ ತೆರೆಯುವ ಉದ್ದೇಶ ಹೊಂದಿದ್ದರು. ಅಂಬೇಡ್ಕರ್‌ರವರ ಮರಣಾನಂತರ ಈ ಜಾಗೆಯ ಉಪಯೋಗ ಅಷ್ಟಕ್ಕೆ ನಿಂತುಹೋಗಿತ್ತು. ಅದನ್ನು ಬಿ. ಬಸವಲಿಂಗಪ್ಪನವರು ಬೌದ್ಧ ಧರ್ಮದ ಚಟುವಟಿಕೆಗಳಿಗಾಗಿಯೇ ಬಳಸಬೇಕು, ಅಂಬೇಡ್ಕರ್‌ರವರ ಆಶಯಗಳನ್ನು ಆಧರಿಸಿ ದಲಿತ ವಿಮೋಚನೆಗೆ ಕಾರಣವಾಗಬೇಕೆಂಬ ಬಲವಾದ ತುಡಿತದಿಂದ ಅಲ್ಲಿ 'ನಾಗಸೇನಾ ವಿದ್ಯಾಲಯ' ಪ್ರಾರಂಭಿಸಿ ಈ ಪೂರ್ತಿ ಜಾಗೆಗೆ 'ಬುದ್ಧ ಭೂಮಿ' ಎಂದು ಹೆಸರಿಟ್ಟರು.

'ಬೌದ್ಧ ಧರ್ಮ ಚಕ್ರ ಪರಿವರ್ತನ ಸಮಿತಿ'ಯೇ ಮುಂದೆ 'ಕರ್ನಾಟಕ ಬುದ್ಧ ಧಮ್ಮ ಸಮಿತಿ' ಎಂಬ ಹೆಸರಿನಲ್ಲಿ ಕಾರ್ಯಚಟುವಟಿಕೆಗಳನ್ನು ಸಂಘಟಿಸಿದ್ದನ್ನು ಕಾಣುತ್ತೇವೆ. 'ಕರ್ನಾಟಕದ ಬುದ್ಧ ಧಮ್ಮ ಸಮಿತಿ'ಯ ಮೂಲಕ ಕರ್ನಾಟಕದಲ್ಲಿ ಬೌದ್ಧ ಧರ್ಮದ ಚಿಂತನ ಮಂಥನ ನಡೆದು ಅವರ ಪ್ರಭಾವದಿಂದ ದಲಿತರ ಬೌದ್ಧಧರ್ಮದ ಕಡೆಗೆ ಆಸಕ್ತರಾಗಿರುವುದನ್ನು ಕಾಣುತ್ತೇವೆ. ಬಿಜಾಪೂರ, ಗುಲ್ಬರ್ಗಾ, ಮೈಸೂರು, ಹುಬ್ಬಳ್ಳಿ, ಧಾರವಾಡ ಮುಂತಾದ ಕಡೆ ಹಲವಾರು ಬೌದ್ಧ ಕಾರ್ಯಕ್ರಮಗಳು ನಡೆದವು. ಬಿ. ಬಸವಲಿಂಗಪ್ಪನವರ

ಅನುಯಾಯಿಗಳು ಈಗಲೂ ಬೌದ್ಧ ಧರ್ಮ ಚಟುವಟಿಕೆಗಳಲ್ಲಿ ಪ್ರಸಾರದಲ್ಲಿ ಕ್ರಿಯಾಶೀಲರಾಗಿರುವುದನ್ನು ಕಾಣುತ್ತೇವೆ. ಸಮಿತಿಯ ವತಿಯಿಂದ ಹಮ್ಮಿಕೊಂಡ 'ಧರ್ಮಚಕ್ರ ಪ್ರವರ್ತನ' ದಿನಾಚರಣೆಯ ಆಮಂತ್ರಣ ಪತ್ರಿಕೆಯಲ್ಲಿ ಬಿ. ಬಸವಲಿಂಗಪ್ಪನವರು 'ಬಂಧುಗಳೇ, ಬೌದ್ಧ ಧರ್ಮ ಚಕ್ರ ಪ್ರವರ್ತನ ಸಮಿತಿ, ಬೆಂಗಳೂರು ಇದರ ಆಶ್ರಯದಲ್ಲಿ ಅಕ್ಟೋಬರ್ 14, 1989 ರಂದು 'ಬುದ್ಧ ಭೂಮಿ' ರಾಜಮಹಲ್ ವಿಲಾಸ, ಬೆಂಗಳೂರು ಇಲ್ಲಿ ಅಶೋಕ ಬೌದ್ಧ ಧರ್ಮ ಚಕ್ರ ಪ್ರವರ್ತನ ದಿನಾಚರಣೆಯನ್ನು ಆಚರಿಸಲಾಗುವುದು. ಇದು ಸಮಿತಿ ಆಚರಿಸುತ್ತಿರುವ ಮೂರನೇ ವಾರ್ಷಿಕ ದಿನಾಚರಣೆ'[29] ಎಂದು ಹೇಳುತ್ತಾರೆ. ಅಂದರೆ 1987 ರಿಂದ ಪ್ರತಿವರ್ಷ ಅಶೋಕನು ಬೌದ್ಧ ಧಮ್ಮ ದೀಕ್ಷೆ ಪಡೆದ ದಿನ (ವಿಜಯದಶಮಿ) ದಂದೇ ಡಾ. ಅಂಬೇಡ್ಕರ್‌ರವರು ಮತಾಂತರ ಹೊಂದಿದ್ದರಿಂದ ಆ ದಿನವನ್ನು 'ಧರ್ಮ ಚಕ್ರ ಪ್ರವರ್ತನ' ದಿನಾಚರಣೆಯನ್ನಾಗಿ ಆಚರಿಸಿರುವುದು ಕಂಡು ಬರುತ್ತದೆ. ಈ ಕಾರ್ಯಕ್ರಮವನ್ನು ಅವರು 1991 ರ ವರೆಗೂ ಸತತವಾಗಿ ಆಚರಿಸಿರುವುದು ತಿಳಿದು ಬರುತ್ತದೆ.

ಬಿ. ಬಸವಲಿಂಗಪ್ಪನವರು ಎಲ್ಲಿಯೇ ಮಾತನಾಡಲಿ, ಹೇಗೆಯೇ ಮಾತಾಡಲಿ ಆ ಮಾತುಗಳ ಹಿಂದಿನ ಕಳಕಳಿ, ಸೈದ್ಧಾಂತಿಕ ನಿಲುವು, ದಲಿತ ವಿಮೋಚನೆಯೇ ಆಗಿರುತ್ತಿತ್ತು. ಬಿ. ಬಸವಲಿಂಗಪ್ಪನವರು ಕರ್ನಾಟಕ ತುಂಬೆಲ್ಲಾ ಅವರ ಅನುಯಾಯಿಗಳನ್ನು ಹೊಂದಿದ್ದಾರೆ. ಅಂಬೇಡ್ಕರ್‌ರವರಂತೆ ಅವರ ಮರಣ ದಲಿತರ ಪಾಲಿಗೆ ಅಕಾಲಿಕವಾಗಿತ್ತು. ಅವರು ತಮ್ಮ ಲಕ್ಷಾಂತರ ದಲಿತ ಅನುಯಾಯಿಗಳೊಂದಿಗೆ ಬೌದ್ಧ ಧರ್ಮಕ್ಕೆ ಮತಾಂತರ ಹೊಂದುವ ಯೋಜನೆ ಹೊಂದಿ ದೊಡ್ಡ ಪ್ರಮಾಣದಲ್ಲಿ ಬೌದ್ಧಧರ್ಮವನ್ನು ಪ್ರಚಾರ ಮಾಡುವ ಉದ್ದೇಶ ಹೊಂದಿದ್ದರು. ಮಹಾರಾಷ್ಟ್ರದಲ್ಲಿ ಬೌದ್ಧ ಸಮಾಜ ಬೆಳೆದಂತೆ ಕರ್ನಾಟಕದಲ್ಲಿ ಬೃಹತ್ ನೆಲೆಯಲ್ಲಿ ಬೌದ್ಧ ಧರ್ಮವನ್ನು ಬೆಳೆಸುವ ಆಶಯ ಹೊಂದಿದ್ದರು. 'ಹಿಂದೂ ಧರ್ಮದ ಮೂಲಭೂತ ವಸ್ತುವಾಗಿರುವ ಜಾತಿ ವ್ಯವಸ್ಥೆಯನ್ನು ನಿರ್ಮೂಲ ಮಾಡಿದರೆ ಹಿಂದೂ -ಧರ್ಮವೇ ಮಾಯವಾಗುತ್ತದೆ ಎನ್ನುವ ವಾದ ಅವರದಾಗಿತ್ತು. ಹಿಂದೂ ಧರ್ಮವನ್ನೇ ಇಲ್ಲವಾಗಿಸುವ ಉದ್ದೇಶದಿಂದ ಅವರು ಅಂಬೇಡ್ಕರ್ ಹಾಕಿಕೊಟ್ಟಿದ್ದ ಮಾರ್ಗವನ್ನೇ ಅನುಸರಿಸಿ ಮತಾಂತರದ, ಬಗ್ಗೆಯೂ ಒಲವು ತೋರಿಸಿದ್ದರು'[30], ಎಂದು ಮಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಬಿ. ಹನಮಯ್ಯ ಅಭಿಪ್ರಾಯಪಡುತ್ತಾರೆ. ಈ ನಿಲುವು ಅವರಲ್ಲಿ ತುಂಬಾ ವ್ಯಾಪಕವಾದ ನೆಲೆಯಲ್ಲಿ ಘಾಡವಾಗಿತ್ತೆಂದು ಕಾಣುತ್ತದೆ. 1990 ರಲ್ಲಿ ಟಿಬೇಟಿನ ಬೌದ್ಧರ ಬಿಡುಗಡೆಗಾಗಿ ನಡೆಸಿದ ಅಹಿಂಸಾತ್ಮಕ ಹೋರಾಟಕ್ಕಾಗಿ ಪೂಜ್ಯ ದಲಾಯಿಲಾಮಾ ಅವರಿಗೆ ನೊಬೆಲ್ ಪ್ರಶಸ್ತಿ ಪ್ರಧಾನ ಮಾಡಿದ ಸಂದರ್ಭದಲ್ಲಿ ಅವರನ್ನು ಕರ್ನಾಟಕದ ಪರವಾಗಿ ಬೃಹತ್ ರೀತಿಯಲ್ಲಿ ಸನ್ಮಾನಿಸಲು ಬಿ. ಬಸವಲಿಂಗಪ್ಪನವರು ಐದಾರು ತಿಂಗಳು ಸತತ ಪರಿಶ್ರಮವಹಿಸಿ ಕಾರ್ಯನಿರ್ವಹಿಸಿದರು. ಆ ಸಂದರ್ಭದಲ್ಲಿ ಬೆಂಗಳೂರು ಕಾನಿಷ್ಕ ಹೋಟೆಲ್‌ನಲ್ಲಿ ನಡೆದ ಪೂರ್ವಭಾವಿ ಸಭೆಗೆ ಸಂಶೋಧನಾರ್ಥಿಯೂ ಪಾಲ್ಗೊಂಡು ಬಿ. ಬಸವಲಿಂಗಪ್ಪನವರಿಗೆ 'ತಾವು ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರ ಮುಂತಾದ ಕಡೆ ಪ್ರಭಾವ ಬೀರಿರುವ ದಲಿತ ನಾಯಕರಾಗಿರುತ್ತೀರಿ. ತಾವೇ ಯಾಕೆ ಈ ಬೃಹತ್ ಕಾರ್ಯಕ್ರಮದಲ್ಲಿ ಬೌದ್ಧ ಧರ್ಮಕ್ಕೆ ಮತಾಂತರಗೊಂಡು ಅಂಬೇಡ್ಕರ್‌ರವರ ದಲಿತ ವಿಮೋಚನಾ ಚಳುವಳಿಗೆ ಹೊಸ ಹುರುಪು ನೀಡಬಾರದು?[31]' ಎಂಬ ಪ್ರಶ್ನೆಗೆ ಬಿ. ಬಸವಲಿಂಗಪ್ಪನವರು ಸಿಡಿಮಿಡಿಗೊಂಡಂತೆ ಕಂಡು ಬಂದರೂ ಕೂಡ ಸಭೆಯ ಕೊನೆಯಲ್ಲಿ 'ಧಾರವಾಡದ ನಮ್ಮ ಯುವಮಿತ್ರರು ಹೇಳಿದಂತೆ ನಾನು ಕೂಡ ಧಮ್ಮ ದೀಕ್ಷೆ

ಪಡೆಯುತ್ತೇನೆ. ಆದರೆ, ನಾನೊಬ್ಬನೇ ಅಲ್ಲ ಅಂತಹ ಬೃಹತ್ ಬೌದ್ಧ ಧಮ್ಮ ದೀಕ್ಷೆ ಅಂಬೇಡ್ಕರ್‌ರವರ ನಾಗಪೂರ ಘಟನೆಯನ್ನು ನೆನಪಿಸುವಂತೆ ಮಾಡಬೇಕು. ಅದರಲ್ಲಿ ನಾವು ನೀವೆಲ್ಲ ನಮ್ಮ ಲಕ್ಷಾಂತರ ಬಂಧುಗಳೊಂದಿಗೆ ದೀಕ್ಷೆ ಪಡೆಯೋಣ. (ಸಭಿಕರ ಕರತಾಡನ)[32], ಎಂದು ಹೇಳಿದರು. ಆದರೆ ಮೊದಲೇ ಹೇಳಿದಂತೆ ಅವರು ದಿಢೀರನೆ ಮರಣ ಹೊಂದಿದ್ದರಿಂದ ಈ ಕಾರ್ಯಕ್ಕೆ ಹಿನ್ನೆಡೆಯಾಗಿದ್ದು ಕಂಡು ಬರುತ್ತದೆ.

ಬಿ. ಬಸವಲಿಂಗಪ್ಪನವರು ಡಾ. ಅಂಬೇಡ್ಕರ್‌ರವರು ಸ್ಥಾಪಿಸಿದ ಮುಂಬಯಿ ಪೀಪಲ್ಸ್ ಎಜ್ಯುಕೇಶನ್ ಸೊಸೈಟಿಯ ಅಧ್ಯಕ್ಷರಾಗಿದ್ದರು. ಮುಂದೆ ಅದರ ಟ್ರಸ್ಟಿಗಳಾಗಿಯೂ ಕೆಲಸ ಮಾಡಿದರು. ಬೌದ್ಧ ಧರ್ಮಕ್ಕೆ ಮತಾಂತರಗೊಂಡ ದಲಿತರಿಗೆ ಮೀಸಲಾತಿ ಸೌಲಭ್ಯ ಕಲ್ಪಿಸುವ ಹೋರಾಟದಲ್ಲಿ ಪೀಪಲ್ಸ್ ಎಜ್ಯುಕೇಶನ್ ಸೊಸೈಟಿಯ ಅಧ್ಯಕ್ಷರಾಗಿ ಮಹಾರಾಷ್ಟ್ರದ ಇತರ ಪ್ರಭಾವಿ ದಲಿತ ನಾಯಕರೊಂದಿಗೆ ಅಂದಿನ ಪ್ರಧಾನಿಗಳಾಗಿದ್ದ ಶ್ರೀಮತಿ ಇಂದಿರಾ ಗಾಂಧಿಯವರಿದ್ದಾಗಲೇ ನಿಯೋಗ ತೆಗೆದುಕೊಂಡು ಹೋಗಿ ಸಿಖ್ ಧರ್ಮಕ್ಕೆ 'ಮತಾಂತರಗೊಂಡ ಪರಿಶಿಷ್ಟರಿಗೆ ದೊರಕುವ ರಾಜಕೀಯ ಹಕ್ಕು ಮತ್ತು ಸೌಲಭ್ಯವನ್ನು ಬುದ್ಧ ಧಮ್ಮಕ್ಕೆ ಸೇರುವ ಪರಿಶಿಷ್ಟರಿಗೂ ವಿಸ್ತರಿಸುವಂತೆ ಕೇಳಿಕೊಂಡೆ, ಫಲ ದೊರೆಯಲಿಲ್ಲ, ಆದರೆ ಕೇಂದ್ರ ಸರ್ಕಾರದ ಸಮಾಜ ಕಲ್ಯಾಣ ಇಲಾಖೆಯಿಂದ ನಮ್ಮ ಅರ್ಜಿ ಪರಿಶೀಲನೆಯಲ್ಲಿದೆ ಎಂಬ ಉತ್ತರ ದೊರೆಯಿತು.... ಡಾ. ಬಿ.ಆರ್. ಅಂಬೇಡ್ಕರ್‌ರವರ ಹೆಜ್ಜೆಗಳು ಸಾಗಿ ಬುದ್ಧ ಧಮ್ಮ ವನ್ನು ಸ್ವೀಕರಿಸುವ ಗುರಿಯತ್ತ ದಲಿತರನ್ನು ಒಗ್ಗೂಡಿಸುವ ಮತ್ತು ಶಿಕ್ಷಣ ನೀಡುವ ಮಹಾನ್ ಕಾರ್ಯಕ್ಕಾಗಿ 1985 ರಲ್ಲಿ ಕರ್ನಾಟಕ ಬುದ್ಧ ಧಮ್ಮ ಸಮಿತಿ ಕರ್ನಾಟಕ ರಾಜ್ಯದಲ್ಲಿ ಸ್ಥಾಪನೆಗೊಂಡಿತು. ಅಂದಿನಿಂದ ಕರ್ನಾಟಕ ರಾಜ್ಯದುದ್ದಕ್ಕೂ ಸತತ ಪ್ರಯತ್ನ ನಡೆಯಿತು. ದಲಿತ ಬುದ್ಧಿಜೀವಿಗಳು ವಿದ್ಯಾರ್ಥಿಗಳು ಮತ್ತು ಸಾಮಾನ್ಯರು ಬುದ್ಧ ಧಮ್ಮಕ್ಕೆ ಮತಾಂತರಗೊಳ್ಳುವ ಐತಿಹಾಸಿಕ ಘಟನೆಯನ್ನು ಕಾತುರಗೊಂಡು ಸಂಕಲ್ಪದಿಂದ ಕಾಯುತ್ತಿರುವುದು ಹೆಮ್ಮೆಯ ವಿಷಯ' ಈ ಮಹಾನ್ ಧಮ್ಮ ಮಾರ್ಗವನ್ನೂ ತಲುಪುವುದಕ್ಕೆ ಸಾಕಷ್ಟು ಬುದ್ಧ ಧಮ್ಮದ ಆಚಾರ ವಿಚಾರಗಳನ್ನು ಜನರಲ್ಲಿ ಪ್ರಚಾರ ಮಾಡಬೇಕಾಗಿದೆ. ಈ ಫಲಿತಾಂಶ ಪಡೆಯಲು ದಲಿತ ನಾಯಕತ್ವ ಈ ನಿಟ್ಟಿನಲ್ಲಿ ಬಹಳಷ್ಟು ಶ್ರಮ ಪಡೆಯಬೇಕಾಗಿದೆ' ಎಂದು ಅವರೇ ದಾಖಲಿಸುತ್ತಾರೆ. ಈ ವಿವರಣೆಯಲ್ಲಿ ಅವರ ನಿಲುವು, ದಲಿತ ಬೌದ್ಧರ ಸಾಂವಿಧಾನಿಕ ಸವಲತ್ತುಗಳು, ಕರ್ನಾಟಕದಲ್ಲಿ ಬೃಹತ್ ರೀತಿಯಲ್ಲಿ ಬೌದ್ಧ ಮತಾಂತರ ಆಂದೋಲನ ನಡೆಸುವ ಅವರ ಸಂಕಲ್ಪಗಳು ಅನಾವರಣಗೊಂಡಿವೆ.

ಬಿ. ಬಸವಲಿಂಗಪ್ಪನವರು ಪ್ರಾರಂಭಿಸಿದ ಕರ್ನಾಟಕ ಬುದ್ಧಧಮ್ಮ ಸಮಿತಿಯ ಹಲವಾರು ಶಾಖೆಗಳು ಅಲ್ಲಲ್ಲಿ ಕ್ರಿಯಾಶೀಲವಾಗಿ ಬೌದ್ಧ ಧಮ್ಮ ಪ್ರಚಾರ, ಬೌದ್ಧ ದೀಕ್ಷಾ ಕಾರ್ಯಕ್ರಮ ಸಂಘಟನೆಗಳಲ್ಲಿ ಭಾಗವಹಿಸುತ್ತಿರುವುದನ್ನು ಕಾಣುತ್ತೇವೆ. ಸರ್ಕಾರ ಸಂವಿಧಾನ ತಿದ್ದುಪಡಿ ಮಾಡಿದ ಮೇರೆಗೆ ಬೌದ್ಧ ಧಮ್ಮಕ್ಕೆ ಮತಾಂತರ ಹೊಂದುವ ಪರಿಶಿಷ್ಟ ಜಾತಿ ಜನಾಂಗಗಳಿಗೆ ಮೀಸಲಾತಿ ಸೌಲಭ್ಯ ಕಲ್ಪಿಸಿದ ನಂತರ ಕರ್ನಾಟಕ ಬುದ್ಧ ಧಮ್ಮ ಸಮಿತಿ ಇನ್ನೂ ಹೆಚ್ಚಿನ ರೀತಿಯಲ್ಲಿ ಬಹಿರಂಗವಾಗಿಯೇ ಬೌದ್ಧ ಧರ್ಮ ಪ್ರಚಾರ ನಡೆಸಿರುವುದು ಕಂಡು ಬರುತ್ತದೆ. ಆ ಸಂದರ್ಭದಲ್ಲಿ ಮೈಸೂರು ಶಾಖೆಯವರು ಹೊರಡಿಸಿದ ಕರಪತ್ರದಲ್ಲಿ ತಿಳಿಸಿರುವ ಅಂಶಗಳನ್ನು ಇಲ್ಲಿ ದಾಖಲಿಸುವುದು ಅಗತ್ಯವೆಂದು ಕಂಡು ಬರುತ್ತದೆ. ಇದು ಸಂಘಟಕರ ಪರಿಕಲ್ಪನೆಗಳನ್ನು ಸಮಕಾಲೀನ ಸಂದರ್ಭದಲ್ಲಿ ಅವರು ಅಳವಡಿಸಿರುವ ಕಾರ್ಯತಂತ್ರವನ್ನು ಸೂಚಿಸುತ್ತದೆ.

**ಬೌದ್ಧಧರ್ಮ ಸೇರೋಣ ಮಾನವ ಕುಲ ಉಳಿಸೋಣ:**

ಭಗವಾನ್ ಬುದ್ಧರು ಜನಿಸಿದ ಭಾರತದಲ್ಲಿ ದಲಿತರು ಮತ್ತು ಇತರರು ಬೌದ್ಧ ಧರ್ಮ ಸೇರಿದರೆ!

1) ನಾವು ಸ್ವಾತಂತ್ರ್ಯ, ಸಮಾನತೆ, ಪಡೆಯಬಹುದು, ಒಗ್ಗಟ್ಟಾಗಬಹುದು.

2) ಧರ್ಮದ ಹೆಸರಿನಲ್ಲಿ ಇರುವ ಕೆಟ್ಟ ರೀತಿ, ನೀತಿಗಳನ್ನು ಬಿಡಬಹುದು.

3) ಇತರ ಧರ್ಮಗಳಿಂದ ಬರುವ ಕಷ್ಟಗಳನ್ನು ಸಂಘಟಿತರಾಗಿ ತಡೆಯಬಹುದು.

4) ಯಾವ ಧರ್ಮದ ಜನರು ನಿಮ್ಮನ್ನು ಕೀಳಾಗಿ ನೋಡುತ್ತಾರೋ ಮತ್ತು ನಿಮ್ಮ ಏಳಿಗೆಯನ್ನು ಸಹಿಸುವುದಿಲ್ಲವೋ ಆ ಧರ್ಮದ ಜನರಿಂದ ದೂರ ಉಳಿದು ಅಭಿವೃದ್ಧಿ ಹೊಂದಬಹುದು.

5) ಹಗಲಿರುಳು ಒಂಟಿ ಧ್ವನಿಯಾಗಿ, ನಿಮ್ಮ ಏಳ್ಗೆಗೆ, ಅಸ್ಪೃಶ್ಯತೆಯ ನಿವಾರಣೆಗಾಗಿ ದುಡಿದ ಮಹಾನ್ ಮಾನವತಾವಾದಿ, ಮಾನವ ಹಕ್ಕುಗಳ ಪ್ರವಾದಿ, ಬಾಬಾಸಾಹೇಬ ಅಂಬೇಡ್ಕರ್‌ರವರ ನಿಜವಾದ ಅನುಯಾಯಿಗಳಾಗಬಹುದು.

6) ಬೌದ್ಧ ಧರ್ಮಕ್ಕೆ ಸೇರಿದರೆ ಈಗ ಇರುವ ಸರ್ಕಾರದ ಮೀಸಲಾತಿಯ ಸೌಲಭ್ಯ ಮುಂದುವರೆಯುತ್ತದೆ. (ಭಾರತ ಸರ್ಕಾರ ಆದೇಶವನ್ನು ಜಿ.ಓ.ನಂ : ಎಸ್. ಡಬ್ಲ್ಯೂ. ಎಲ್. 178. ಎಸ್.ಎ.ಡಿ. 90, ದಿನಾಂಕ : 2-3-1991 ರಲ್ಲಿ ಹೊರಡಿಸಲಾಗಿದೆ).

ಈ ರೀತಿಯಾಗಿ ಕರ್ನಾಟಕದ ಬೌದ್ಧ ಚರಿತ್ರೆಯಲ್ಲಿ ಪುನರುಜ್ಜೀವನದ ಮಜಲುಗಳ ಪುಟಗಳಲ್ಲಿ ಬಿ. ಬಸವಲಿಂಗಪ್ಪನವರು ಕೈಗೊಂಡ ಬೌದ್ಧ ಚಟುವಟಿಕೆಗಳು ಬಹಳ ಮಹತ್ವದ ಸ್ಥಾನ ಪಡೆದುಕೊಳ್ಳುತ್ತವೆ. ಪೌರ ಕಾರ್ಮಿಕರಿಂದ ಹಿಡಿದು ಬುದ್ಧಿಜೀವಿ ವಲಯದ ವರೆಗೆ ಸಮಾನ ಪಾತಳಿಯಲ್ಲಿ ಬಿ. ಬಸವಲಿಂಗಪ್ಪನವರ ಪ್ರಭಾವ ಕಾಣುತ್ತೇವೆ. ಅವರು ಹೇಳಿದಂತೆ ಬೌದ್ಧಧಮ್ಮ ಜೀವನ ರೀತಿಗೆ ಮಾರು ಹೋಗಿದ್ದಾರೆ. ಅವರನ್ನು 'ದಕ್ಷಿಣ ಭಾರತದ ಅಂಬೇಡ್ಕರ್' 'ಆಧುನಿಕ ಬಸವೇಶ್ವರ', 'ಕರ್ನಾಟಕದ ಪೆರಿಯಾರ್',[35] ಎಂದು ಅಭಿಮಾನದಿಂದ ಕರೆಯುತ್ತಾರೆ. ಈ ರೀತಿಯ ಘೋಷಣೆಗಳ ನಡುವೆಯೂ ಅವರ ವೈಚಾರಿಕತೆಯನ್ನು ಮೈಗೂಡಿಸಿ ಕೊಂಡಿರುವುದು ಕಂಡು ಬರುತ್ತದೆ. ಹೀಗೆ ಸ್ಪಷ್ಟವಾಗಿ ಬಿ. ಬಸವಲಿಂಗಪ್ಪನವರು ಅಂಬೇಡ್ಕರ್‌ರವರ ದಲಿತ ವಿಮೋಚನಾ ಸೂತ್ರದ ಮುಂದುವರಿಕೆಗಾಗಿ ಕಂಡು ಬರುತ್ತಾರೆ. ಅಂತೆಯೇ ಅವರ ಕುರಿತು, ಕರ್ನಾಟಕದಲ್ಲಿ ಅವರ ವಿಚಾರಗಳ ಕುರಿತು ವಿಚಾರ ಸಂಕಿರಣ ಹಮ್ಮಿಕೊಳ್ಳುವುದನ್ನು, ಅವರ ಪುತ್ಥಳಿ ಸ್ಥಾಪನೆ ಮಾಡಿ ಆ ಮೂಲಕ ಅವರೊಂದಿಗೆ ಸೈದ್ಧಾಂತಿಕ ತಾದಾತ್ಮ್ಯ ಹೊಂದುತ್ತಿರುವುದನ್ನು ಕಾಣಬಹುದಾಗಿದೆ. ಇತ್ತೀಚೆಗೆ ಹುಬ್ಬಳ್ಳಿ - ಧಾರವಾಡ ಮಹಾ ನಗರ ಪಾಲಿಕೆ ವತಿಯಿಂದ ಅಲ್ಲಿನ ದಲಿತ ಸಂಘಟನೆಗಳ ಮತ್ತು ಅವರ ಅಭಿಮಾನಿಗಳ ಒತ್ತಡದ ಹಿನ್ನೆಲೆಯಲ್ಲಿ ಬಿ. ಬಸವಲಿಂಗಪ್ಪ ಕಂಚಿನ ಪುತ್ಥಳಿ ಸ್ಥಾಪಿಸಲಾಯಿತು. ಆ ಸಂದರ್ಭದಲ್ಲಿ 'ಸ್ವಾಭಿಮಾನ ಶಿಲ್ಪಿ' ಎಂಬ ಸ್ಮರಣ ಸಂಚಿಕೆಯನ್ನು ಹೊರತರಲಾಗಿದೆ. ದಲಿತ ಚಳುವಳಿಯ ವೈಚಾರಿಕತೆ ಮತ್ತು ಬೌದ್ಧ ಧಮ್ಮ ಕುರಿತ ಲೇಖನಗಳನ್ನು ಒಳಗೊಂಡ ಈ ಸಂಚಿಕೆ ಒಂದು ಉತ್ತಮ ಆಕರವಾಗಿ ಹೊರಬಂದಿದೆ.

## ಅಂತರರಾಷ್ಟ್ರೀಯ ಬೌದ್ಧ ಮಿತ್ರರ ಸಂಘ :
## (International Association of Buddhist Friends) :

ಕರ್ನಾಟಕ ದಲಿತ ಚಳುವಳಿಯಲ್ಲಿ ಸಕ್ರೀಯರಾಗಿದ್ದ ಬೌದ್ಧ ಧರ್ಮದ ಬಗ್ಗೆ ಅಪಾರ ಒಲವು ಹೊಂದಿದ ದಲಿತ ಪ್ರಜ್ಞಾವಂತರು, ವೃತ್ತಿಪರರು 1980 ದಶಕದಲ್ಲಿ ಬೆಂಗಳೂರು ಕೇಂದ್ರವಾಗಿರಿಸಿಕೊಂಡು ಅಂತರರಾಷ್ಟ್ರೀಯ ಬೌದ್ಧ ಮಿತ್ರರ ಒಕ್ಕೂಟವನ್ನು ಪ್ರಾರಂಭಿಸಿದರು. ಡಾ. ಅಂಬೇಡ್ಕರ್‌ರವರ ವಿಚಾರಗಳಿಂದ ಹಾಗೂ ಮಹಾರಾಷ್ಟ್ರದಲ್ಲಿನ ಬೌದ್ಧ ಚಳುವಳಿಯಿಂದ ಪ್ರೇರಿತವಾಗಿ ಬೌದ್ಧ ಸಂಸ್ಕೃತಿಯ ಮಹತ್ವ ತಿಳಿದುಕೊಂಡು ಕರ್ನಾಟಕದ ದಲಿತ ಸಮುದಾಯವನ್ನು ಬೌದ್ಧ ಧರ್ಮದ ಕಡೆಗೆ ಕರೆದೊಯ್ಯುವುದು ಈ ಸಂಘಟನೆಯ ಪ್ರಧಾನ ಉದ್ದೇಶವಾಗಿತ್ತು. ಬೆಂಗಳೂರಿನ ಖ್ಯಾತ ವೈದ್ಯ ಡಾ. ಹೆಚ್. ಆರ್. ಸುರೇಂದ್ರ ದಲಿತ ಧುರೀಣರಾದ ಶ್ರೀ ಎಫ್. ಹೆಚ್. ಜಕ್ಕಪ್ಪನವರಂತಹ ಅನೇಕ ಬೌದ್ಧ ಪ್ರಜ್ಞೆಯ ಧುರೀಣರು ಈ ಸಂಘಟನೆಯ ಮುಖಾಂತರ ಉತ್ತರ ಕರ್ನಾಟಕದಲ್ಲಿಯೂ ಹಲವಾರು ಬೌದ್ಧ ಕಾರ್ಯಕ್ರಮಗಳನ್ನು ನಡೆಸಿದ್ದಿದೆ. ಹಿಂದೂ ಧರ್ಮದ ಆಚರಣೆಗಳನ್ನು ನಿರಾಕರಿಸಿದ ಅನೇಕ ದಲಿತ ಯುವಕರ ವಿವಾಹಗಳನ್ನು ಬೌದ್ಧ ರೀತಿಯಲ್ಲಿ ಡಾ. ಸುರೇಂದ್ರ ಅವರೇ ನಡೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಬೆಂಗಳೂರಿನಲ್ಲಿದ್ದರೂ ಹುಬ್ಬಳ್ಳಿ-ಧಾರವಾಡ- ಬೆಳಗಾವಿ ಕಡೆ ಯಾರೇ ಆಮಂತ್ರಿಸಲಿ ಅಲ್ಲಿಗೆ ಬಂದು ಬೌದ್ಧ ಆಚರಣೆಯಂತೆ ವಿವಾಹ ಕಾರ್ಯಕ್ರಮಗಳನ್ನು ಬುದ್ಧನ ತತ್ವಗಳನ್ನು ಪ್ರಸಾರ ಮಾಡಿದ್ದನ್ನು ನೋಡುತ್ತೇವೆ. ಈ ಸಂಘಟನೆಯು ಹೆಚ್ಚಾಗಿ ದಲಿತ ವರ್ಗದಿಂದ ಬಂದ ನೌಕರರ ಸದಸ್ಯತ್ವವನ್ನು ಹೊಂದಿದೆ. ಮೊದ ಮೊದಲು ತುಂಬಾ ಕ್ರಿಯಾಶೀಲವಾಗಿ, ಉತ್ಸಾಹದಿಂದ ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿಯನ್ನು ದಲಿತ ಸಮುದಾಯದ ಐಡೆಂಟಿಟಿಯನ್ನಾಗಿ ಮಾಡಲು ಪ್ರಯತ್ನಿಸಿದ ಅಂತರ್‌ರಾಷ್ಟ್ರೀಯ ಬೌದ್ಧ ಮಿತ್ರರ ಪಾತ್ರ ಉಲ್ಲೇಖನೀಯವಾಗಿದೆ.

## ಸಮಕಾಲೀನ ದಲಿತ ರಾಜಕೀಯ ನಾಯಕರು ಮತ್ತು ಬೌದ್ಧ ಧಮ್ಮ :

ಬಿ. ಬಸವಲಿಂಗಪ್ಪನವರ ನಂತರ ಡಾ. ಅಂಬೇಡ್ಕರ್‌ರವರು ಪ್ರತಿಪಾದಿಸಿದ ಬೌದ್ಧ ಸಾಂಸ್ಕೃತಿಕತೆಯನ್ನು ಗಂಭೀರವಾಗಿ ಪರಿಗಣಿಸಿದವರಲ್ಲಿ ಮೈಸೂರಿನ ಎನ್. ರಾಚಯ್ಯನವರು, ಶ್ರೀ ವಿ. ಶ್ರೀನಿವಾಸ ಪ್ರಸಾದ ಅವರು ಗುಲ್ಬರ್ಗಾ ಪ್ರದೇಶದ ಶ್ರೀ ಮಲ್ಲಿಕಾರ್ಜುನ ಖರ್ಗೆಯವರು, ತುಮಕೂರು ಪ್ರದೇಶದ ಡಾ. ಹೆಚ್.ಜಿ. ಪರಮೇಶ್ವರವರು ಹಾಗೂ ಡಾ. ಹೆಚ್.ಸಿ. ಮಹಾದೇವಪ್ಪ ಬಿ.ಬಿ. ನಿಂಗಯ್ಯನವರು ಹೀಗೆ ಮೊದಲಾದ ಹಿರಿಯ ರಾಜಕಾರಿಣಿಗಳು ಪ್ರಥಮ ಪಂಕ್ತಿಯಲ್ಲಿ ನಿಲ್ಲುತ್ತಾರೆ. ಬಿಜಾಪೂರ, ಇಂಡಿ, ಗುಲ್ಬರ್ಗಾ, ಬೀದರ್, ಮೈಸೂರು ಪ್ರದೇಶಗಳಲ್ಲಿ ಹೊಸ ತಲೆಮಾರಿನ ನಾಯಕರೂ ಸಹಿತ ಬೌದ್ಧ ಧಮ್ಮ ಪ್ರಸಾರಕ್ಕೆ ನೆರವು ನೀಡುತ್ತಿರುವುದು ತಿಳಿದು ಬರುತ್ತದೆ.

ಬಿ. ಬಸವಲಿಂಗಪ್ಪನವರ ನಂತರ ಅವರಂತೆಯೇ ವೈಚಾರಿಕ ನೆಲೆಗಟ್ಟಿನ ರಾಜಕೀಯ ನಾಯಕರಾಗಿದ್ದ ಬಿ.ರಾಚಯ್ಯನವರು ಹಲವಾರು ಸಂದರ್ಭಗಳಲ್ಲಿ ಬಿ.ಬಸವಲಿಂಗಪ್ಪನವರು ಹಾಕಿಕೊಳ್ಳುವ ಕಾರ್ಯಕ್ರಮಗಳಿಗೆ

ಸಹಮತ ವ್ಯಕ್ತಪಡಿಸುತ್ತಾ ಬಂದವರಾಗಿದ್ದರು. ಮೈಸೂರಿನಲ್ಲಿ ಪ್ರಗತಿಪರ ಲೇಖಕರ ಕಾರ್ಯಕ್ರಮಗಳ ಸಂಘಟನೆಗೆ ನೆರವಾಗುವುದರ ಜೊತೆಗೆ ದಲಿತ ಕ್ರಿಯಾ ಸಮಿತಿಯ ಮೂಲಕ ಡಾ. ಅಂಬೇಡ್ಕರ್‌ರವರ ತತ್ವಗಳ ಪ್ರಚಾರ ಮಾಡಿ ಆ ಭಾಗದ ದಲಿತರಲ್ಲಿ ಬೌದ್ಧ ಧರ್ಮದ ಒಲವು ಬೆಳೆದು ಬರಲು ಕಾರಣರಾದವರು. ಎಂ. ನಂಜಯ್ಯ ಹೊಂಗನೂರು ಹೇಳುವಂತೆ 'ದಲಿತ ಕ್ರಿಯಾ ಸಮಿತಿಯಲ್ಲಿ ಸಮಾಜವಾದಿಗಳಾಗಲೀ, ಮಾರ್ಕ್ಸ್‌ವಾದಿಗಳಾಗಲೀ ನೆಲೆ ನಿಲ್ಲಲಿಲ್ಲ. ಅಂಬೇಡ್ಕರ್ ವಾದಿಗಳು ಇವರ ನಾಯಕತ್ವದಲ್ಲಿ ಕ್ರಿಯಾಶೀಲರಾಗಿದ್ದಾರೆ. ಡಾ. ಅಂಬೇಡ್ಕರ್ ಅವರಂತೆ ಗಾಂಧಿ ವಾದವನ್ನು ಹತ್ತಿರ ಸೇರಿಸದವರು. ದಲಿತ ಚಳುವಳಿಯಲ್ಲಿ ದಲಿತರ ವಿಮೋಚನೆಗಾಗಿ ಅಂಬೇಡ್ಕರ್‌ವಾದ ಮತ್ತು ಮಾರ್ಕ್ಸ್‌ವಾದ ದುಡಿಯಬೇಕೆಂದು ಆಶಿಸುತ್ತಾರೆ.

ಏಷ್ಯಾ ಖಂಡದಲ್ಲಿನ ಜನಾಂಗಿಕ ಅಲ್ಪ ಸಂಖ್ಯಾತರ ಸಮ್ಮೇಳನ (World Racial Minorities Conference) ದಲ್ಲಿ ಎರಡು ಸಲ ಭಾಗವಹಿಸಿದ್ದರು. ಮೊದಲ ಸಮ್ಮೇಳನ ನ್ಯೂಜಿಲ್ಯಾಂಡ್‌ನಲ್ಲಿ ಎರಡನೇ ಸಮ್ಮೇಳನ ನೆದರ್‌ಲ್ಯಾಂಡ್ಸ್‌ನಲ್ಲಿ ನಡೆದಾಗ ಭಾರತದ ದಲಿತ ಪ್ರತಿನಿಧಿಯಾಗಿದ್ದರು. ಭಾರತದಿಂದ ಐದು ಜನರಿದ್ದು ಕರ್ನಾಟಕದಿಂದ ಇವರೊಬ್ಬರೇ. ಆ ಸಮ್ಮೇಳನದಲ್ಲಿ 'ಕರ್ನಾಟಕದಲ್ಲಿನ ಅಸ್ಪೃಶ್ಯತೆ' ಕುರಿತು ಭಾಷಣ ಮಾಡಿದರು[37], ಎಂದು ದಾಖಲಿಸುತ್ತಾರೆ. ಬಿ. ರಾಚಯ್ಯನವರು ಹಲವಾರು ಲೇಖನಗಳನ್ನು ಬರೆಯುವುದರ ಜೊತೆಗೆ ಹಲವಾರು ದಲಿತಪರ ಕಾರ್ಯಚಟುವಟಿಕೆಗಳನ್ನು ಮಾಡಿದರು. ಹಾಗೆಯೇ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರ ಪತ್ನಿ ಡಾ. ಸವಿತಾ ಅಂಬೇಡ್ಕರ್‌ವರನ್ನು ಕೋಲಾರದ ದಲಿತ ಸಮ್ಮೇಳನಕ್ಕೆ ಕರೆತಂದು ಕರ್ನಾಟಕ ದಲಿತರಿಗೆ ಚಾರಿತ್ರಿಕ ಅನುಭವ ನೀಡಿದರು. ರಾಜಕೀಯವಾಗಿ ಹಲವಾರು ಪ್ರಯೋಗಗಳನ್ನು ಮಾಡಿದ ಬಿ. ರಾಚಯ್ಯನವರು ಕರ್ನಾಟಕದಲ್ಲಿ ಡಾ. ಅಂಬೇಡ್ಕರ್‌ರವರ ವಿಚಾರಗಳ ಪ್ರಚಾರಕ್ಕೆ ಹೆಚ್ಚಿನ ಕೊಡುಗೆ ಸಲ್ಲಿಸಿದ್ದು ಮಹತ್ವದ್ದಾಗಿದೆ.

ಗುಲ್ಬರ್ಗಾ, ಬೀದರ ಜಿಲ್ಲೆಗಳಲ್ಲಿ ಬೌದ್ಧ ಧಮ್ಮ ಪ್ರಸಾರಕ್ಕೆ, ದಲಿತ ಬೌದ್ಧರಿಗೆ, ಸಂಘಟನೆಗಳ ಕಾರ್ಯಕ್ರಮಗಳಿಗೆ ಶ್ರೀ ಮಲ್ಲಿಕಾರ್ಜುನ ಖರ್ಗೆಯವರು ಹೆಚ್ಚಿನ ಸಹಾಯ ಮಾಡಿದ್ದಾರೆ. ತಮ್ಮ ಪ್ರಖರ ವರ್ಚಸ್ಸಿನ ಪ್ರಭಾವದಲ್ಲಿ ಈ ಭಾಗದಲ್ಲಿ ಬೌದ್ಧ ಕ್ಷೇತ್ರಗಳು ಅಭಿವೃದ್ಧಿ ಹೊಂದಲು ಕಾರಣರಾಗಿದ್ದಾರೆ. 1977 ರಲ್ಲಿಯೇ 'ಕರ್ನಾಟಕದ ಮೊದಲ ಗ್ರಾಮೀಣ ಬೌದ್ಧ ವಿಹಾರ'[38] ವೆಂದು ಖ್ಯಾತಿ ಪಡೆದ ಬಸವ ಕಲ್ಯಾಣ ತಾಲೂಕಿನ, ಮೋರ್ಖಂಡಿ ಗ್ರಾಮದ ಜೇತವನ ಬೌದ್ಧ ವಿಹಾರವು, ಶ್ರೀ ಮಲ್ಲಿಕಾರ್ಜುನ ಖರ್ಗೆಯವರಿಂದಲೇ ಉದ್ಘಾಟನೆಗೊಂಡಿದೆ. ಇಲ್ಲಿ ಬೌದ್ಧ ವಿಹಾರ ಕಟ್ಟಡಕ್ಕೆ ಹಣಕಾಸಿನ ನೆರವು 'ನೀಡುವುದರ ಜೊತೆಗೆ ಅನೇಕರಿಗೆ ಉದ್ಯೋಗ ಅವಕಾಶ ಸೃಷ್ಟಿಸುವಲ್ಲಿ ಶ್ರೀ ಮಲ್ಲಿಕಾರ್ಜುನ ಖರ್ಗೆಯವರು ಕಾರಣರಾಗಿದ್ದಾರೆಂದು ಇಲ್ಲಿನ ಬೌದ್ಧ ಉಪಾಸಕರು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಹುಮನಾಬಾದ್ ತಾಲೂಕಿನ ರಾಷ್ಟ್ರೀಯ ಹೆದ್ದಾರಿ 9 ರ ಪಕ್ಕದಲ್ಲಿರುವ ಮನ್ನಾಳ ಕೇಳಿಯ ರೇಕುಳಗಿ ಮೌಂಟ್ ಎಂದೇ ಹೆಸರು ಪಡೆದಿರುವ ಸ್ಥಳದಲ್ಲಿ ಕರ್ನಾಟಕದ ಅತ್ಯಂತ ವಿಶಿಷ್ಟವಾದ ಬೌದ್ಧ ಕ್ಷೇತ್ರವೊಂದು ಅಭಿವೃದ್ಧಿ ಹೊಂದಿದೆ. ಅಲ್ಲಿ ಸ್ಥಾಪಿಸಲಾದ 'ಅನಾಥ ಪಿಂಡಿಕ' ಬೌದ್ಧ ವಿಹಾರದ ಬೆಳವಣಿಗೆಗೂ ಶ್ರೀ ಮಲ್ಲಿಕಾರ್ಜುನ ಖರ್ಗೆಯವರು ಸಹಾಯ ಸಹಕಾರ ನೀಡಿರುವುದು ತಿಳಿದು ಬರುತ್ತದೆ. ಇಲ್ಲಿನ ಹಿರಿಯ ಬಿಕ್ಕುಗಳಾದ ಪೂಜ್ಯಬಿಕ್ಕು ಮಹಾಕಶ್ಯಪ ಬಂತೇಜಿಯವರು

ಸಂಘಟಿಸುವ ಎಲ್ಲ ಪ್ರಮುಖ ಕಾರ್ಯಕ್ರಮಗಳಲ್ಲಿ ಶ್ರೀ ಖರ್ಗೆಯವರು ಭಾಗವಹಿಸಿರುವುದು ಕಂಡು ಬರುತ್ತದೆ[39]. ಅದೇ ರೀತಿ ಈ ಭಾಗದ ಬೌದ್ಧ ವಿಹಾರಕ್ಕೆ, ಕಟ್ಟಡ ನಿರ್ಮಾಣ ಕಾರ್ಯಗಳಿಗೆ, ದಲಿತ ಬೌದ್ಧರ ಸಮಸ್ಯೆಗಳಿಗೆ ಅವರು ಸ್ಪಂದಿಸಿರುವುದು ಸಂದರ್ಶನ ಕಾಲದಲ್ಲಿ ತಿಳಿದು ಬಂದಿದೆ. ಇತ್ತೀಚೆಗೆ ಗುಲ್ಬರ್ಗ ಜಿಲ್ಲೆಯ 'ಸನ್ನತಿ ಪ್ರಾಚೀನ ಬೌದ್ಧ ಕ್ಷೇತ್ರದ' ಪುನರುಜ್ಜೀವನ ಕಾರ್ಯಕ್ಕೆ ಅಲ್ಲಿನ ಬೌದ್ಧ ಸಂಘಟನೆಗಳಿಗೆ ಶ್ರೀ ಖರ್ಗೆಯವರು ಚಿಂತನಶೀಲರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಕೂಡಲಸಂಗಮ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ, ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ ರಚಿಸಿದಂತೆ 'ಸನ್ನತಿ ಬೌದ್ಧ ಕ್ಷೇತ್ರ ಅಭಿವೃದ್ಧಿ ಪ್ರಾಧಿಕಾರ' ರಚನೆಗೆ ಸರ್ಕಾರದ ಮಟ್ಟದಲ್ಲಿ ಪ್ರಯತ್ನಿಸುತ್ತಿದ್ದಾರೆ. ಹೀಗೆ ಶ್ರೀ ಖರ್ಗೆ ಅವರ ಕೊಡುಗೆಗಳು ಅವರು ಡಾ. ಅಂಬೇಡ್ಕರ್‌ರವರ ಸಿದ್ಧಾಂತಗಳಿಗೆ ಬದ್ಧರಾಗಿರುವುದಕ್ಕೆ, ಕರ್ನಾಟಕದಲ್ಲಿ ಬೌದ್ಧ ಧಮ್ಮ ಮತ್ತು ದಲಿತರ ಸಾಂಸ್ಕೃತಿಕ ವಿಮೋಚನೆಗೆ ಬದ್ಧತೆಯ ಕಾಳಜಿಗಳನ್ನು ಹೊಂದಿದ ದ್ಯೋತಕವಾಗಿ ಕಂಡು ಬರುತ್ತವೆ.

ಮೈಸೂರು ಭಾಗದಲ್ಲಿ ಬಿ. ರಾಚಯ್ಯನವರ ನಂತರ ಬೌದ್ಧ ಧಮ್ಮದ ಕಾರ್ಯಚಟುವಟಿಕೆಗಳಿಗೆ ಹೆಚ್ಚಿನ ಸಹಾಯ ಸಹಕಾರ ನೀಡಿದವರಲ್ಲಿ ಹಿರಿಯ ರಾಜಕೀಯ ಮುತ್ಸದ್ದಿಗಳಾದ ; ಶ್ರೀ ಶ್ರೀನಿವಾಸ ಪ್ರಸಾದ ಅವರು ಮುಖ್ಯವಾಗಿದ್ದಾರೆ. 'ಮಹಾಬೋಧಿ ಸೊಸೈಟಿಯ' ಹಾಗೂ ಇತರ ಬೌದ್ಧ ಸಂಘಟನೆಗಳ ಕಾರ್ಯ ಚಟುವಟಿಕೆಗಳಲ್ಲಿ ತಪ್ಪದೇ ಭಾಗವಹಿಸುತ್ತಾರೆ. ಪೂಜ್ಯ ಬಿಕ್ಕು ಧಮ್ಮಲೋಕರವರು ನೀಡಿದ ಮಾಹಿತಿಯಂತೆ, ಬೌದ್ಧ ಶಿಕ್ಷಣ ಸಂಸ್ಥೆಗಳಿಗೆ ಪ್ರೇರಣೆ ನೀಡುವ ಆಶಯದಿಂದ ಧಮ್ಮ ಪದ ಉತ್ಸವ ಹಾಗೂ ಕಾರ್ಲಾ ಸ್ಟುಡೆಂಟ್ಸ್ ಹೋಮ್ ಉದ್ಘಾಟನೆಯಲ್ಲಿ ಭಾಗವಹಿಸಿ 'ಬೌದ್ಧ ಶಿಕ್ಷಣದ ಹಿನ್ನೆಲೆಯಲ್ಲಿ ಮಾನವೀಯ ಮೌಲ್ಯಗಳ'[40], ಕುರಿತು ವಿಚಾರ ಸಂಕಿರಣದಲ್ಲಿ ಭಾಗವಹಿಸಿ ಮಾತನಾಡಿದ್ದಾರೆ. ಕನ್ನಡ ವಿಶ್ವವಿದ್ಯಾಲಯ ಬೌದ್ಧ ಸಂಸ್ಕೃತಿ, ಸಾಹಿತ್ಯ ಕುರಿತು ಆಸಕ್ತಿಯಿಂದ ಕಾರ್ಯಾರಂಭ ಮಾಡಿದ ಪ್ರಾರಂಭದಲ್ಲಿ ಪ್ರಕಟಿಸಿದ ಮಹತ್ವದ ಬೌದ್ಧ ಆಕರ ಗ್ರಂಥವಾದ 'ಬುದ್ಧ ಸಾಸನ್' ದ ಪ್ರಕಟಣೆಗೆ 'ವಿಚಾರ ಶೀಲ ಕೇಂದ್ರ ಸಚಿವರಾದ ಶ್ರೀ ವಿ. ಶ್ರೀನಿವಾಸ ಪ್ರಸಾದ್ ನೆರವಾಗಿದ್ದಾರೆಂದು'[41], ಕನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ. ಹೆಚ್. ಜೆ. ಲಕ್ಕಪ್ಪಗೌಡರು ದಾಖಲಿಸಿರುವುದು ಗಮನಾರ್ಹವಾಗಿದೆ. ಹೀಗೆ ತುಂಬಾ ಎತ್ತರದ ಬೌದ್ಧ ಪ್ರಜ್ಞೆಯನ್ನು ಹೊಂದಿ ಶ್ರೀನಿವಾಸ ಪ್ರಸಾದ ಅವರು ಕರ್ನಾಟಕದ ಬೌದ್ಧ ಸಮುದಾಯಕ್ಕೆ ತಮ್ಮ ಪ್ರಭಾವ ಬೀರಿದ್ದಾರೆ.

ಕರ್ನಾಟಕದ ದಲಿತ ಚಳುವಳಿಯ ಕಳಕಳಿಯೊಂದಿಗೆ ಸದಾ ತಮ್ಮನ್ನು ಗುರುತಿಸಿಕೊಂಡು ಬಂದ ಡಾ. ಹೆಚ್.ಸಿ. ಮಹದೇವಪ್ಪ ಡಾ. ಹೆಚ್. ಜಿ. ಪರಮೇಶ್ವರ ಹಾಗೂ ಮುಂತಾದವರೂ ಕೂಡ ಬೌದ್ಧ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದರ ಮೂಲಕ ದಲಿತರು ಬೌದ್ಧ ಮತಾವಲಂಬಿಗಳಾಗಿ ತಮ್ಮ ಪೂರ್ಣ ವಿಮೋಚನೆ ಕಂಡುಕೊಳ್ಳಬೇಕೆಂಬ ಆಶಾಯ ಹೊಂದಿ ಈ ನಿಟ್ಟಿನ ಪ್ರಯತ್ನಗಳಿಗೆ ಬೆಂಬಲ ಸೂಚಿಸುವುದರೊಂದಿಗೆ ಅನೇಕ ರೀತಿಯಲ್ಲಿ ತಮ್ಮ ಪಾತ್ರ ನಿರ್ವಹಿಸುತ್ತಿರುವುದು ಕಂಡು ಬರುತ್ತಿದೆ.

ಅಖಿಲ ಭಾರತ ಮಟ್ಟದಲ್ಲಿನ ದಲಿತ ರಾಜಕೀಯ ನೇತಾರರೂ ಸಹಿತ ದಲಿತರು ಬೌದ್ಧ ಧರ್ಮವನ್ನು ತಮ್ಮ ಸಾಂಸ್ಕೃತಿಕ ಐಡೆಂಟಿಟಿಯಾಗಿ, ಸಮಗ್ರ ಅಭಿವೃದ್ಧಿಯ ಸಾಧನವಾಗಿ 'ಸಾಂಸ್ಕೃತಿಕ ಸ್ವಾವಲಂಬನೆ' ಸಾಧಿಸುವುದಕ್ಕೆ ತಮ್ಮ ಸಹಮತ ವ್ಯಕ್ತಪಡಿಸಿದ ಸಾಕಷ್ಟು ದಾಖಲೆಗಳು, ಕಾರ್ಯ ಚಟುವಟಿಕೆಗಳ ವಿವರಗಳನ್ನು

ಕಾಣುತ್ತೇವೆ. ತಮ್ಮ ಅಧಿಕಾರ ವ್ಯಾಪ್ತಿ ಪ್ರಭಾವಗಳ ನೆಲೆಯಲ್ಲಿ ಬೌದ್ಧ ಧರ್ಮದ ಚಟುವಟಿಕೆಗಳಲ್ಲಿ ಭಾಗವಹಿಸಿದ್ದು ಕಂಡು ಬರುತ್ತದೆ. ದಲಿತ ಹಿಂದುಳಿದ, ಅಲ್ಪ ಸಂಖ್ಯಾತ ವರ್ಗದ ನೌಕರರ ಸಂಘಟನೆಯ ನೆಲೆಯಿಂದ, (BAMSEF) ಪ್ರಭಾವಕ್ಕೆ ಬಂದು 'ಬಹುಜನ ಸಮಾಜ ಪಕ್ಷ' ಸ್ಥಾಪಿಸಿದ ಕಾನ್ಶಿರಾಂ ಅವರು ಮೊದಲಿನಿಂದಲೂ ಹಿಂದೂ ಕೋಮುವಾದವನ್ನು 'ಮನುವಾದ' ವೆಂದೇ ಖಂಡಿಸುತ್ತ ಬಂದವರಾಗಿದ್ದಾರೆ. ದಲಿತರನ್ನು ಅವರ್ಣಿಯರನ್ನಾಗಿಸಿ ಅವರನ್ನು 'ರಾಜಕೀಯ ಅಧಿಕಾರ' ದಿಂದ ದೂರ ಇಟ್ಟು ಮಾನವ ಹಕ್ಕುಗಳಿಂದ ವಂಚಿಸಿದ ಬಗ್ಗೆ ಪ್ರಖರವಾದ ಪಾಂಡಿತ್ಯ ಮತ್ತು ವೈಜ್ಞಾನಿಕವಾಗಿ ತಣ್ಣನೆಯ ಪಾತಳಿಯಲ್ಲಿ ತರಾಟೆಗೆ ತೆಗೆದುಕೊಂಡಿದ್ದಾರೆ. 'ಮನುವಾದ' ದಿಂದಾಗಿ ಅಧಿಕಾರ ವಂಚಿತರಾದ ಜನಸಂಖ್ಯೆಯ ಪ್ರತಿಶತ 80 ರಷ್ಟು ಜನರು ಒಂದು ಶಕ್ತಿಯಾದರೆ ಈ ದೇಶವನ್ನು 'ಪ್ರಬುದ್ಧ ಭಾರತ' ವನ್ನಾಗಿ ಮಾಡುವುದು ಚಿಟಿಕೆ ಹೊಡೆದಷ್ಟು ಸರಳವಾಗಿದೆ ಎಂಬ 'ಬಹುಜನ ರಾಜಕೀಯ ಸಿದ್ಧಾಂತ' ವನ್ನು ಅಂಬೇಡ್ಕರ್ ವಾದಿಯಾಗಿಯೇ ಮಂಡಿಸಿರುವುದು ಇಲ್ಲಿ ಉಲ್ಲೇಖನೀಯವಾಗಿದೆ.

ಬಹುಜನ ರಾಜಕೀಯ ಚಳುವಳಿಯ ಬಗ್ಗೆ ವಿಶ್ಲೇಷಣೆ ಮಾಡುತ್ತ ಗೇಲ್ ಓಂವೆದ್ತ ಅವರು 'ಕಾನ್ಶಿರಾಂ ಅವರು ಅಲ್ಪ ಸಂಖ್ಯಾತ ಸಮುದಾಯಗಳೊಂದಿಗೆ ದಲಿತ ಶಕ್ತಿಗಳು ಒಂದಾಗಬೇಕೆನ್ನುವ ಆಶಯ ಹೊಂದಿರುವುದರಿಂದ ಮುಸ್ಲಿಂ ಜನತೆಯ ಬಗ್ಗೆ ಅಪಾರ ಕಳಕಳಿ ಹೊಂದಿದ್ದರೂ ಕೂಡಾ ಯಾವುದೇ ಅಲ್ಪ ಸಂಖ್ಯಾತ ಧಾರ್ಮಿಕ ಕೋಮುವಾದವನ್ನು ಪುರಸ್ಕರಿಸುವುದಿಲ್ಲ. ಅಂಬೇಡ್ಕರ್ ಪ್ರಭಾವದಿಂದಾಗಿ ಬೌದ್ಧ ಧರ್ಮದ ವಿಶೇಷವಾಗಿ, ಅದು ಪ್ರತಿಪಾದಿಸುವ ಪ್ರಜ್ಞಾವಾದ, ಮಾನವೀಯತೆ, ನಿರೀಶ್ವರತೆಯ ಅಂಶಗಳ ಬಗ್ಗೆ ಒತ್ತು (ಧನಾತ್ಮಕ) ಹೊಂದಿದ್ದಾರೆ. ಫುಲೆ, ಪೆರಿಯಾರ್ ಅವರ ನಾಸ್ತಿಕವಾದವೂ ಅವರಿಗೆ ಒಪ್ಪಿಗೆಯಾಗಿದೆ. ಭಾರತೀಯ ಚರಿತ್ರೆಯನ್ನು 'ಆರ್ಯ' ದ ಪುರೋಗಾಮಿತನದ ಹಿನ್ನಲೆಯಲ್ಲಿ ವಿಶ್ಲೇಷಿಸುತ್ತಾರೆ ಎಂದು ವಿವರಿಸುತ್ತಾರೆ. ಇಲ್ಲಿ ಒಂದು ದೊಡ್ಡ ರಾಜಕೀಯ ಸಂಘಟನೆಯ ನೇತೃತ್ವ ವಹಿಸಿದ ನಾಯಕರು ತಾಳುವ ನಿಲುವು ಮತ್ತು ಸಂದಿಗ್ದತೆಗಳು ಎದ್ದು ಕಾಣುತ್ತವೆ. ಆದರೆ ಕಾನ್ಶಿರಾಂ ಅವರು ಇತ್ತೀಚೆಗೆ, (2006 ರಲ್ಲಿ) ತಮ್ಮ 2 ಕೋಟಿ ಅನುಯಾಯಿ ಬೆಂಬಲಿಗರೊಂದಿಗೆ ಅಂಬೇಡ್ಕರ್‌ರವರು ಬೌದ್ಧ ಧಮ್ಮ ಸ್ವೀಕಾರ ಮಾಡಿದ 50 ನೇ ವರ್ಷದ ಅಂದರೆ ಡಾ. ಅಂಬೇಡ್ಕರ್‌ರವರ ಬೌದ್ಧ ದೀಕ್ಷಾ ಸ್ವೀಕಾರದ ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಬೌದ್ಧ ಧರ್ಮಕ್ಕೆ ಮತಾಂತರ ಹೊಂದುವುದಾಗಿ'[43] ಘೋಷಿಸಿದ್ದಾರೆ.

ಈ ಮಹತ್ವದ ಘಟನೆಯನ್ನು ಬೌದ್ಧರು, ಬೌದ್ಧಧರ್ಮ ಪ್ರಸಾರಕ್ಕೆ ವಿರೋಧ ಇದ್ದವರೂ ತುಂಬಾ ಆಸಕ್ತಿಯಿಂದ ನಿರೀಕ್ಷಿಸುತ್ತಿದ್ದಾರೆ. ಅಂದುಕೊಂಡಂತೆ ನಡೆದರೆ ಬೌದ್ಧ ಪುನರುಜ್ಜೀವನ ಒಂದು ಹೊಸ ಆಯಾಮ ಪಡೆದುಕೊಳ್ಳುತ್ತದೆಂದೇ ಹೇಳಬೇಕಾಗುತ್ತದೆ. ವೈಯಕ್ತಿಕವಾಗಿ ಅಧಿಕಾರ ಲಾಲಸೆಯ ಸುಳಿವನ್ನು ಹೊಂದಿರದ ತುಂಬಾ ವ್ಯಾಪಕವಾದ ನೆಲೆಯಲ್ಲಿ ದಲಿತರು, ದಲಿತ-ಬಹುಜನ ಬುದ್ಧಿಜೀವಿಗಳ, ಸಮಾಜ ಪರಿವರ್ತನೆಯ ತುಡಿತ ಹೊಂದಿದ ಎಲ್ಲರ ಮೇಲೆ ತಮ್ಮ ವರ್ಚಸ್ಸು ಪ್ರಭಾವ ಬೀರಿರುವ ಕಾನ್ಶಿರಾಂ ಅವರ ನಿಲುವು ಸಮಕಾಲೀನ ಕಾಲಘಟ್ಟದಲ್ಲಿ ದಲಿತರು ಬೌದ್ಧಧರ್ಮದ ಪ್ರಭಾವಕ್ಕೆ ವ್ಯಾಪಕವಾಗಿ ಒಳಗಾಗಲು ಮಹತ್ವದ ಕಾರಣವೆಂದೇ ಹೇಳಬೇಕಾಗುತ್ತದೆ. ಅವರ ರಾಜಕೀಯ ಸಿದ್ಧಾಂತದ ಪ್ರತಿಫಲವೆಂಬಂತೆ ದಲಿತ ಜನಾಂಗದ ಒಂದು ಸಣ್ಣ ಕುಟುಂಬದಿಂದ ಬಂದ ಕುಮಾರಿ ಮಾಯಾವತಿ ಕಾನ್ಶಿರಾಂ ಅವರ ಸಮರ್ಥ ಮುಂದುವರಿಕೆಯಾಗಿ ಬಹುಜನ

ಚಳವಳಿಯ ನೇತೃತ್ವ ವಹಿಸಿದ್ದಾರೆ. ತಮ್ಮ ಅಧಿಕಾರ ಅವಧಿ, ತಮಗೆ ಒದಗಿ ಬಂದ ಅವಕಾಶಗಳಲ್ಲಿ ಬೌದ್ಧಧರ್ಮದ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಂಡಿದ್ದಾರೆ. ಅವರು ಉತ್ತರ ಪ್ರದೇಶದ ಮುಖ್ಯ ಮಂತ್ರಿಗಳಾಗಿದ್ದ ಸಂದರ್ಭದಲ್ಲಿ ಭಾರತದ ಸಾಮಾಜಿಕ ಪರಿವರ್ತನೆಯ ರೂವಾರಿಗಳಾದ ಡಾ. ಅಂಬೇಡ್ಕರ್, ಗೌತಮ ಬುದ್ಧ, ಮಹಾತ್ಮ ಜೋತಿಭಾ ಫುಲೆ, ಛತ್ರಪತಿ ಶಾಹುಮಹಾರಾಜ್, ಸಂತ ರವಿದಾಸ, ಏಕಲವ್ಯ, ಅಹಲ್ಯಾ ಬಾಯಿ ಹೋಳ್ಕರ್, ಮಹರ್ಷಿ ವಾಲ್ಮೀಕಿ, ಕರ್ಪೂರಿ ಠಾಕೂರ, ಬಿಜ್ಲೆಪಾಸಿ ದೊರೆ, ಮುಂತಾದವರಿಗೆ ಗೌರವ ಸಲ್ಲಿಸುವ ದ್ಯೋತಕವಾಗಿ ಹಲವಾರು ಜಿಲ್ಲೆಗಳನ್ನು, ತಾಲ್ಲೂಕಗಳನ್ನು ನಾಮಾಂತರ ಮಾಡಿದ್ದಾರೆ. ಹೊಸದಾಗಿ ಸೃಷ್ಟಿಸಿ, ಅವುಗಳಿಗೆ ಈ ಪ್ರವರ್ತಕರ ಹೆಸರುಗಳನ್ನು ಇಟ್ಟಿದ್ದಾರೆ. ಅವರ ವಿನೂತನವಾದ ಲಖನೌನ 'ಪರಿವರ್ತನ್ ಚೌಕ್' ಅದ್ಭುತವಾದ ಕಲ್ಪನೆಯ ಸಾಕಾರವಾಗಿದೆ. ಅವರು ಕೈಗೊಂಡ ಎರಡು ವರ್ಷಗಳ ಕಾಲಾವಧಿಯ ಅಭಿವೃದ್ಧಿ ಕಾರ್ಯಗಳಲ್ಲಿ 57 ಅಭಿವೃದ್ಧಿ ಕಾರ್ಯಗಳು ಅಂಬೇಡ್ಕರ್‌ರವರ ಸ್ಮರಣಾರ್ಥ ಮತ್ತು ಗೌರವಾರ್ಥ ಮಾಡಿದವುಗಳಾಗಿವೆ, 29 ಕಾರ್ಯ ಚಟುವಟಿಕೆಗಳು ಗೌತಮ ಬುದ್ಧರ ಹೆಸರಲ್ಲಿ ಮಾಡಿದವು ಆಗಿವೆ, 8 ಛತ್ರಪತಿ ಶಾಹು ಮಹಾರಾಜರ ಕುರಿತು, 10 ಮಹಾತ್ಮ ಜ್ಯೋತಿಭಾ ಫುಲೆಯವರ ಕುರಿತು, 10 ಅಭಿವೃದ್ಧಿ ಕಾರ್ಯಗಳು 'ಸಂತ ರವಿದಾಸ್'ರ ಕುರಿತು ಮಾಡಿದವುಗಳಾಗಿವೆ, 3 ಏಕಲವ್ಯ ಕುರಿತು, 2 ಬಿಜ್ಲೆಪಾಸಿ, 3 ಅಹಲ್ಯಾಬಾಯಿ ಹೋಳ್ಕರ್ ಕುರಿತು[44] ಕೈಗೊಂಡವುಗಳಾಗಿವೆ. ಗೌತಮ ಬುದ್ಧರ ಹೆಸರಲ್ಲಿ ಕೈಗೊಂಡ 29 ಕಾರ್ಯಚಟುವಟಿಕೆಗಳ ಪೈಕಿ, 3 ಗೌತಮ ಬುದ್ಧ ಉದ್ಯಾನವನಗಳ ನಿರ್ಮಾಣ, 1 ಗೌತಮಬುದ್ಧ ವಿಶ್ವವಿದ್ಯಾಲಯ, 4 ಗೌತಮ ಬುದ್ಧ ವಿದ್ಯಾರ್ಥಿ ನಿಲಯಗಳು, 4 ಗೌತಮ ಬುದ್ಧ ಶ್ರಾವಸ್ಥಿ ಕೋಸಂಬಿ ಜಿಲ್ಲೆಗಳು ಕಪಿಲವಸ್ತು ಬೌದ್ಧ ಕ್ಷೇತ್ರ ಅಭಿವೃದ್ಧಿ ಮಂಡಳಿ, ಬೌದ್ಧಕಲೆ, ವಾಸ್ತುಶಿಲ್ಪ ಬುದ್ಧನ ಮೂರ್ತಿಗಳು ಹಾಗೂ ಸಾರನಾಥ ವಾರಣಾಸಿಗಳಲ್ಲಿ ಬೌದ್ಧ ಸಮ್ಮೇಳನ ಏರ್ಪಡಿಸಿದ ಕಾರ್ಯಗಳು ಸೇರಿವೆ. ಅಂಬೇಡ್ಕರ್‌ರವರ ದಲಿತ ವಿಮೋಚನಾ ಸಿದ್ಧಾಂತ, ಕಾಯತಂತ್ರಗಳ ಬಗ್ಗೆ ಬದ್ಧತೆ ಮತ್ತು ಕಳಕಳಿ ಹೊಂದಿರುವ ಕುಮಾರಿ ಮಾಯಾವತಿ ಈ ದೇಶ ಕಂಡ ಅದ್ಭುತ 'ದಲಿತ ರಾಜಕೀಯ ಪ್ರತಿಭೆ'. ಭಾರತದ ರಾಜಕೀಯ ಪಂಡಿತರ ಲೆಕ್ಕಾಚಾರಗಳನ್ನು ಬುಡಮೇಲು ಮಾಡಿ ರಾಜಕೀಯ ಅಧಿಕಾರಕ್ಕೆ ಬಂದವರು. ದಲಿತರಿಗೆ 'ಬೌದ್ಧಧರ್ಮ' ಸಾಂಸ್ಕೃತಿಕ ವಿಮೋಚನೆಯ ಸಾಧನವಾಗುತ್ತದೆ, ರಾಜಕೀಯ ಅಧಿಕಾರದಿಂದಲೇ ಆರ್ಥಿಕ ಸಮಾನತೆ ಸಾಧ್ಯ ಎಂದು ಬಲವಾಗಿ ಪ್ರತಿಪಾದಿಸುವವರು. ಅವರು ಎಲ್ಲಿಯೇ ಪ್ರವಾಸ ಕೈಗೊಂಡರು ಅಲ್ಲಿ ಬೌದ್ಧ ವಿಹಾರಗಳಿಗೆ, ಬೌದ್ಧ ಕ್ಷೇತ್ರಗಳಿಗೆ ತಪ್ಪದೇ ಭೇಟಿ ನೀಡುತ್ತಾರೆ. ನಾಗಪೂರ ದೀಕ್ಷಾ ಭೂಮಿಗೆ ಹಲವಾರು ಸಾರಿ ಭೇಟಿ ನೀಡಿ ಬೌದ್ಧ ಕಾರ್ಯಕ್ರಮಗಳಲ್ಲಿ ಭಾಗವಹಿಸಿ, ಮಹತ್ವದ ವಿಚಾರಗಳನ್ನು ಹಂಚಿಕೊಂಡಿದ್ದಾರೆ. ಅವರು ರಚಿಸಿದ 'ಬಹುಜನ ಸಮಾಜ ಮತ್ತು ಅದರ ರಾಜಕೀಯ ಸಿದ್ಧಾಂತ (Bahujan Samaj aur uski Rajniti) ಕೃತಿಯಲ್ಲಿಯ 200 ಪುಟಗಳಲ್ಲಿ 100 ಪುಟಗಳು ಅಂಬೇಡ್ಕರ್‌ರವರ ವಿಚಾರ ಬೌದ್ಧ ಧರ್ಮ ಸ್ವೀಕರಿಸಿದ ಮಹತ್ವದ ಕುರಿತಾಗಿಯೇ ವಿವರಗಳನ್ನು ದಾಖಲಿಸಿದ್ದಾರೆ. ಕೋರಿಯಾ ದೇಶಕ್ಕೆ ಪ್ರವಾಸ ಕೈಗೊಂಡ ಸಂದರ್ಭದಲ್ಲಿ ಅಲ್ಲಿನ ಬೌದ್ಧ ವಿಹಾರಕ್ಕೆ ಸಂದರ್ಶನವಿತ್ತಿದ್ದಾರೆ. ಆ ಸಂದರ್ಭದಲ್ಲಿ ಕುಮಾರಿ ಮಾಯಾವತಿಯವರ ಕೈಗೊಂಡ ಬೌದ್ಧ ಪುನರುಜ್ಜೀವನ ಕಾರ್ಯ ಚಟುವಟಿಕೆಗಳನ್ನು ಅಭಿನಂದಿಸಿ ಕೋರಿಯಾದ ಪ್ರಧಾನ ಬಿಕ್ಕುಗಳು 'ಬೋಧಿ' ವೃಕ್ಷದ ಸಸಿಯೊಂದನ್ನು ಕೊಡುಗೆಯಾಗಿ ನೀಡಿ ಅಭಿನಂದಿಸಿದ್ದಾರೆ. ಕುಮಾರಿ ಮಾಯಾವತಿಯವರು ಬೌದ್ಧಧರ್ಮವನ್ನು ಬೋಧಿ ವೃಕ್ಷದ ಸಸಿಯಂತೆ ಬೆಳೆಸಬೇಕಾಗಿದೆ ಎನ್ನುವುದನ್ನು ಪರೋಕ್ಷವಾಗಿ ಹೇಳಿದಂತೆ ಕಾಣುತ್ತದೆ (ಅನುಬಂಧ-1 ರ ಚಿತ್ರ: 28

ನೋಡಿ). ಕುಮಾರಿ ಮಾಯಾವತಿಯವರು ತಮ್ಮ ರಾಜಕೀಯ ಮಾರ್ಗದರ್ಶಕರ ಕಾನ್ಶಿರಾಂರವರಂತೆಯೇ ತಾವೂ 'ಬೌದ್ಧ ಧರ್ಮಕ್ಕೆ ಮತಾಂತರ ಹೊಂದುವುದಾಗಿ ಇತ್ತೀಚೆಗೆ ಪ್ರಕಟಿಸಿದ್ದಾರೆ'[45].

ಹೀಗೆ ಅಖಿಲ ಭಾರತ ಮಟ್ಟದ ವರ್ಚಸ್ಸು ಹೊಂದಿರುವ ಕಾನ್ಶಿರಾಂ ಮತ್ತು ಕುಮಾರಿ ಮಾಯಾವತಿಯವರು ಒಟ್ಟಾರೆ ಬೌದ್ಧಧರ್ಮ ಪುನರುಜ್ಜೀವನ ಕಾರ್ಯದ ಜೊತೆಗೆ ದಲಿತರು ಬೌದ್ಧಧರ್ಮದ ಕಡೆಗೆ ಆಸಕ್ತರಾಗಲು, ಬೌದ್ಧ ರೀತಿಯ ಜೀವನಕ್ಕೆ ಮುಂದಾಗಲು ಮಹತ್ವದ ಪ್ರೇರಣೆ ನೀಡಿವೆ.

## ಬೌದ್ಧ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘ, ಗದಗ :

ಸಾಹಿತಿಗಳು, ಬೌದ್ಧಧರ್ಮದ ಬಗ್ಗೆ ಅಪಾರ ಆಸಕ್ತಿ ಹೊಂದಿರುವ ಕವಿಗಳಾದ ಮೂಡ್ನಾಕೂಡು ಚಿನ್ನಸ್ವಾಮಿಯವರ ಅಧ್ಯಕ್ಷತೆಯಲ್ಲಿ ಇತ್ತೀಚಿನ ವರ್ಷಗಳಲ್ಲಿ 'ಬೌದ್ಧ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘ' ಕಾರ್ಯಾರಂಭ ಮಾಡಿದೆ. ದಲಿತ ಸಾಹಿತ್ಯ ಪರಿಷತ್ತಿನ ಡಾ. ಅರ್ಜುನ ಗೊಳಸಂಗಿ, ಕವಿಗಳಾದ ಡಾ. ಶ್ಯಾಮಸುಂದರ ಬಿದರಕುಂದಿ, ಹೆಚ್.ಬಿ. ಪೂಜಾರ, ಪ್ರೊ. ಸಿದ್ದು ಯಾಪಲಪರವಿ, ಪ್ರೊ. ರಾಹುಲ ನಿಂಗು ಸೊಲಗಿ, ಎಂ.ಎನ್. ಕಾಂಬಳೆ ಇವರ ಸಹಕಾರದೊಂದಿಗೆ ಬೌದ್ಧ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

## ಬುದ್ಧ ಬರಲಿ ನಮ್ಮ ಮನ-ಮನೆಗೆ ಹಾಗೂ ಧಮ್ಮ ಸಂವಾದ ಕಾರ್ಯಕ್ರಮ :

ಕರ್ನಾಟಕ ದಲಿತ ಸಂಘರ್ಷ ಸಮಿತಿ 'ಬುದ್ಧ ಬರಲಿ ನಮ್ಮ ಊರಿಗೆ' ಎಂಬ ಕಾರ್ಯಕ್ರಮ ಹಮ್ಮಿಕೊಂಡಂತೆಯೇ ಇಂದು ದಲಿತರು ಬುದ್ಧನನ್ನು ತಮ್ಮ 'ಮನ-ಮನೆಗೆ' ಬರಮಾಡಿಕೊಳ್ಳುವ ಪ್ರಕ್ರಿಯೆಯಲ್ಲಿರುವುದು ಕಂಡು ಬರುತ್ತಿದೆ. ಗದಗಿನ ಬೌದ್ಧ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂಘವು ತನ್ನ ಹೆಸರಿಗೆ ತಕ್ಕಂತೆ ದಲಿತರಲ್ಲಿ 'ಬೌದ್ಧ ಸಂಸ್ಕೃತಿ'ಯನ್ನು ಬಿಂಬಿಸುವ ಕೆಲಸ ಮಾಡುತ್ತಿರುವುದು ಕಂಡು ಬರುತ್ತದೆ. ಕರ್ನಾಟಕ ದಲಿತ ಸಂಘರ್ಷ ಸಮಿತಿ ಹಾಗೂ ದಲಿತ ಸಾಹಿತ್ಯ ಪರಿಷತ್ತು ರಾಜ್ಯ ಘಟಕ ಗದಗ ಇವರ ಸಹಯೋಗದೊಂದಿಗೆ ದಿನಾಂಕ : **04-01-2004** ರಂದು ಶ್ರೀ ಮಾರುತೆಪ್ಪ ಭಜಂತ್ರಿ ಇವರ ಮನೆಯಲ್ಲಿ ಹಮ್ಮಿಕೊಂಡ 'ಬುದ್ಧ ಬರಲಿ ನಮ್ಮ ಮನ-ಮನೆಗಳಿಗೆ' ಕಾರ್ಯಕ್ರಮದ ಕರಪತ್ರದಲ್ಲಿ

''ಬಿಕ್ಕುಗಳೆ, ಲೋಕದ ಮೇಲಿನ ಅನುಕಂಪದಿಂದ, ಬಹುಜನರ ಹಿತಕ್ಕಾಗಿ, ಬಹುಜನರ ಸುಖಕ್ಕಾಗಿ, ಆದಿ, ಮಧ್ಯ ಮತ್ತು ಅಂತ್ಯದಲ್ಲಿ ಸುಖ ಕೊಡುವ ಈ ಧರ್ಮವನ್ನು ಎಲ್ಲ ದಿಕ್ಕಿಗೂ ಪ್ರಚುರ ಪಡಿಸಿ''[46] ಎಂಬ ಭಗವಾನ್ ಬುದ್ಧರ ಸಂದೇಶವನ್ನು ಪ್ರಕಟಿಸಲಾಗಿದೆ.

ಮುಂದುವರೆದು ಬುದ್ಧ ಹೇಳಿದ 'ಧರ್ಮ' ಎಂದರೆ ಪ್ರೀತಿ ಮತ್ತು ದಯೆ. ಬುದ್ಧನ ಕರುಣೆ, ಶಾಂತಿ, ಆತನ ಜೀವನ ಕಾಂತಿ-ಇಂದು ಶೋಷಿತರಿಗೆ, ದಲಿತರಿಗೆ ದಾರಿದೀಪ. ಸಮಾನತೆಯ ಸೂರ್ಯನ ಬೆಳಕನ್ನು ಈ ಭೂಮಿಗೆ

ತಂದವ ತಥಾಗತ. ದುಃಖಿತಪ್ತ ಜಗತ್ತಿನಲ್ಲಿ ದಾರಿ ತಿಳಿಯದವರಿಗೆ ಬುದ್ಧನ ವೈಚಾರಿಕ ಮಾರ್ಗ ಅಗತ್ಯ. ಇಂದು ನಮಗೆಲ್ಲ ಅವಶ್ಯ ಇರುವುದು. ಇಂದಿನ ಉಸಿರು ಗಟ್ಟುವ ವಾತಾವರಣವನ್ನು ಬದಲಿಸುವುದು, ಶತಮಾನಗಳ ಅವಮಾನದ ಪೊರೆಕಳಚಿಕೊಳ್ಳುವುದು. ''ದಲಿತರಿಗೆ ಬುದ್ಧನೇ ಬದುಕು ಹಾಗೂ ಬೆಳಕು''. ನಾವೆಲ್ಲ ಪ್ರಜ್ಞೆ, ಕರುಣೆ ಹಾಗೂ ಸರ್ವ ಸಮಾನತೆಯ ದಾರಿ ಹಿಡಿದು ಭವ್ಯ ಬೌದ್ಧ ಇತಿಹಾಸದ ಮೇಲೆ ನಿರ್ಮಿತವಾದ ಹೊಸ ಜೀವನ ಹಾಗೂ ನಿಸರ್ಗ ಪ್ರೇಮಿ ಸ್ವಚ್ಛ ಬದುಕನ್ನು ಕಟ್ಟಿಕೊಳ್ಳಬೇಕಿದೆ. ಅದಕ್ಕಾಗಿ ಈ ಚಿಂತನ ಮಾಲೆ. ಬನ್ನಿ ಮನೆ-ಮನೆಗೆ ಹೋಗೋಣ, ಕಲೆತು-ಬೆರೆತು ಮಾತನಾಡಿ ಮುನ್ನಡೆಯೋಣ, ಬೆಳೆಯೋಣ''.[47] ಈ ಒಕ್ಕಣೆ, ಕರ್ನಾಟಕದ ಹಲವಾರು ಭಾಗಗಳಲ್ಲಿ ದಲಿತರಲ್ಲಿ ಪ್ರಜ್ಞಾವಂತಿಕೆಯ ನೆಲೆಗಳಲ್ಲಿ ಅತ್ಯಂತ ಸ್ಪಷ್ಟವಾಗಿ ಬೌದ್ಧಧರ್ಮ ದರ್ಶನ ಮೂಡಿ ಬಂದಿರುವುದಕ್ಕೆ ಪುರಾವೆ ಒದಗಿಸುತ್ತದೆ. ಎಲ್ಲ ಮಾತುಗಳಲ್ಲಿ ಅತ್ಯಂತ ಸ್ಪಷ್ಟವಾದ, ನಿಖರವಾದ ದಲಿತರು ಬೌದ್ಧಧರ್ಮ ಅನುಸರಿಸಬೇಕಾದ ಅಗತ್ಯವನ್ನು ಸೂಚಿಸುವಂತವುಗಳಾಗಿವೆ. ಸಮಕಾಲೀನ ವಾತಾವರಣದಲ್ಲಿ ಬದುಕನ್ನು ಹಸನು ಮಾಡಿಕೊಳ್ಳುವ ರೀತಿ ಕಳಕಳಿ ಬದ್ಧತೆ ಅನನ್ಯವಾಗಿ ಮೂಡಿಬಂದಿದೆ. ಈ ಕಾರ್ಯಕ್ರಮದಲ್ಲಿ 'ಬುದ್ಧವಂದನೆ ಹಾಗೂ ಧಮ್ಮ ಸಂವಾದ ಏರ್ಪಡಿಸಿದ್ದು, ಪ್ರೊ. ಪುಟ್ಟಮರುಳಯ್ಯ, ಶ್ರೀ ಮಾರುತೆಪ್ಪ ಭಜಂತ್ರಿ, ವೆಂಕಟೇಶಯ್ಯ, ಡಾ. ಅರ್ಜುನ ಗೊಳಸಂಗಿ, ಮುಂತಾದವರು ಪಾಲ್ಗೊಂಡಿದ್ದಾಗಿ ತಿಳಿದು ಬರುತ್ತದೆ. ಗದಗ, ಇತರ ಭಾಗಗಳಲ್ಲಿ ಡಾ. ಅರ್ಜುನ ಗೊಳಸಂಗಿ ಹಾಗೂ ಅವರ ಒಡನಾಡಿಗಳು ದಲಿತ ಸಾಹಿತ್ಯ ಪರಿಷತ್ತು ಸ್ಥಾಪಿಸಿ, ಸಾಹಿತ್ಯದ ಮೂಲಕ ಅಂಬೇಡ್ಕರ್‌ರವರ ವಿಚಾರಗಳ, ದಲಿತ ಕಷ್ಟನಷ್ಟಗಳ, ಬುದ್ಧನ ತತ್ವಗಳ ಪ್ರಚಾರ ಕಾರ್ಯ ನಡೆಸಿರುವುದನ್ನು ಕಾಣುತ್ತೇವೆ. ಈ ಮೊದಲೇ ಹೇಳಿದಂತೆ ದಲಿತ ಸಾಹಿತ್ಯ ಪರಿಷತ್ತಿನ ವತಿಯಿಂದ 'ಮತಾಂತರ' ದ ಬಗ್ಗೆಯೇ ಒಂದು ಉಪನ್ಯಾಸ-ಸಂವಾದ ಕಾರ್ಯಕ್ರಮವನ್ನು (1999) ಹಿಂದಿನ ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿದ್ದ ಶ್ರೀ ಶಾಂತರಸರ ಅಧ್ಯಕ್ಷತೆಯಲ್ಲಿ ಸಂಘಟಿಸಿದ್ದಾರೆ. 'ಮತಾಂತರ ಪರಿಕಲ್ಪನೆ', ಆಧುನಿಕ ಯುಗದಲ್ಲಿ ಮತಾಂತರ ಪ್ರಕ್ರಿಯೆ' ಈ ಕುರಿತು ಉಪನ್ಯಾಸಗಳು ನಡೆದಿವೆ. ಮೂಡ್ನಾಕೂಡು ಚಿನ್ನಸ್ವಾಮಿ, ಡಾ. ಕೆ.ಆರ್. ದುರ್ಗಾದಾಸ, ಪ್ರೊ. ಶಿವರುದ್ರ ಕಲ್ಲೋಳಿಕರ, ಡಾ. ಹೆಚ್. ಟಿ. ಪೋತೆ, ಮುಂತಾದವರು ಭಾಗವಹಿಸಿದ್ದಾಗಿ ತಿಳಿದು ಬರುತ್ತದೆ. ಮೂಡ್ನಾಕೂಡು ಚಿನ್ನಸ್ವಾಮಿಯವರು ತಮ್ಮ ಕೃತಿಗಳಲ್ಲಿ ಪ್ರಮುಖವಾಗಿ ದಲಿತ ಸಂವೇದನೆಗಳನ್ನು, ಶತಶತಮಾನಗಳಿಂದ ಶೋಷಿತರಾದ ಜನಾಂಗಗಳ ನೋವನ್ನು ಪ್ರಧಾನವಾಗಿ ಸಾಹಿತ್ಯ ಕೃಷಿ ಮಾಡಿರುವುದು, ಯುವಕರಲ್ಲಿ ಬೌದ್ಧಧರ್ಮ ತತ್ವಗಳನ್ನು ಪ್ರಸಾರಕ್ಕೆ ತೊಡಗಿಸಿಕೊಂಡಿರುವುದು ಕಂಡು ಬರುತ್ತದೆ. ದಲಿತ ಯುವಕ ಯುವತಿಯರನ್ನೇ ಉದ್ದೇಶಿಸಿ ಅವರಲ್ಲಿ ಬೌದ್ಧ ಧಮ್ಮ ಜಾಗೃತಿ, ಅಂಬೇಡ್ಕರ್‌ರವರ ಮಾರ್ಗದಲ್ಲಿ ಅವರನ್ನು ನೆಲೆಯಾಗುವಂತೆ ಮಾಡುವ ಉದ್ದೇಶದಿಂದಲೇ 'ಯುವ ಬೌದ್ಧರಿಗೊಂದು ದರ್ಶನ (1994) ಎಂಬ ಕೃತಿಯನ್ನು' ಹೊರತಂದಿದ್ದಾರೆ. ಈ ರೀತಿ ದಲಿತ ಬುದ್ಧಿಜೀವಿಗಳು, ಸಾಹಿತಿಗಳು, ಸಂಘಟಕರು ವೈಚಾರಿಕತೆಯ ನೆಲೆಯಲ್ಲಿ ಬೌದ್ಧ ಧರ್ಮದ ವಿಶ್ವಮಾನ್ಯ ತತ್ವಗಳನ್ನು ಕರ್ನಾಟಕದ ಜನಸಮುದಾಯಗಳಲ್ಲಿ ಬಿಂಬಿಸುವ ಪ್ರಚಾರ ಮಾಡುವ ಕಾರ್ಯದಲ್ಲಿ ಪ್ರಯತ್ನಶೀಲರಾಗಿರುವುದು ಕಂಡು ಬರುತ್ತದೆ.

### ಬೌದ್ಧ ಧಮ್ಮ ದೀಕ್ಷಾ ಸಮಾರಂಭ ಸಿದ್ಧತಾ ಸಮಿತಿ, ಬೆಂಗಳೂರು, ಕರ್ನಾಟಕ:

ಕರ್ನಾಟಕದ ದಲಿತ ಚಳವಳಿಯ 25 ವರ್ಷಗಳ ಚರಿತ್ರೆಯಲ್ಲಿ 'ಬೌದ್ಧ ಧಮ್ಮ ದೀಕ್ಷಾ ಸಿದ್ಧತಾ ಸಮಿತಿ'ಯ ರಚನೆಯು ಅತ್ಯಂತ ಮಹತ್ವದ ಬೆಳವಣಿಗೆಯಾಗಿ ಕಂಡು ಬರುತ್ತದೆ. ಪ್ರಪ್ರಥಮ ಬಾರಿಗೆ ರಾಜ್ಯದ ಎಲ್ಲಾ ಭಾಗದ ದಲಿತ ಚಿಂತಕರು, ನಾಯಕರು ಒಂದೇ ಉದ್ದೇಶದಿಂದ ಕೂಡಿ ಬಂದಿರುವುದು ಇಲ್ಲಿ

ಗಮನಾರ್ಹವಾಗಿದೆ. ಅವರವರ ಸಂಘಟನೆ ಮತ್ತು ವೈಯಕ್ತಿಕ ನೆಲೆಯಲ್ಲಿ 'ಬೌದ್ಧಧರ್ಮ'ದ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತಿದ್ದು, ಈಗ ಎಲ್ಲ ಸಂಘಟನೆಗಳು, ಬೌದ್ಧಧಮ್ಮ ಪ್ರವರ್ತಕರು ಅಕ್ಟೋಬರ್ 14, 2003 ಬೆಂಗಳೂರಿನಲ್ಲಿ 'ಬೌದ್ಧ ದೀಕ್ಷಾ ಸಮಾರಂಭ' ಏರ್ಪಡಿಸಿದ್ದಾರೆ. ಕರ್ನಾಟಕದ ಅನೇಕ ದಲಿತರು, ಕಾರ್ಯಕರ್ತರು ಬಹಳ ದಿನಗಳಿಂದ ಬೌದ್ಧ ಧರ್ಮಕ್ಕೆ ಔಪಚಾರಿಕವಾಗಿ ಮತಾಂತರ ಹೊಂದಲು ಕಾಯುತ್ತಿದ್ದರು. ದಲಿತ ಚಳವಳಿಯಲ್ಲಿ ಅದರಲ್ಲೂ ಮುಖ್ಯವಾಗಿ ಕರ್ನಾಟಕ ದಲಿತ ಸಂಘರ್ಷ ಸಮಿತಿಯಲ್ಲಿ ಕಾರ್ಯನಿರ್ವಹಿಸುತ್ತ ಬಂದ ಅನೇಕ ಕಾರ್ಯಕರ್ತರು, ಎಲ್ಲ ಬಣಗಳು ಈ ರೀತಿ 'ಬೌದ್ಧಧಮ್ಮ ದೀಕ್ಷಾ' ಕಾರ್ಯಕ್ರಮದಲ್ಲಿ ಒಂದಾಗಿ ಬಂದಿರುವುದಕ್ಕೆ ಹರ್ಷ ವ್ಯಕ್ತಪಡಿಸಿದ್ದಿದೆ. ಸಂಘಟನೆಗಳ ವತಿಯಿಂದ ಅಧಿಕೃತವಾಗಿ ಇಂತಹ ದೀಕ್ಷಾ ಕಾರ್ಯಕ್ರಮಗಳನ್ನು ಕಂಡರಿಯದಿದ್ದ ದಲಿತ ಕಾರ್ಯಕರ್ತರಿಗೆ ಸಹಜವಾಗಿಯೇ 'ಬೌದ್ಧಧರ್ಮ ದೀಕ್ಷೆ' ಪಡೆಯುವ ಹುಮ್ಮಸ್ಸು ಮೂಡಿಬಂದಿತ್ತು. ಸಾವಿರಾರು ದಲಿತರು ವಿಶೇಷವಾಗಿ ಗ್ರಾಮೀಣ ಪ್ರದೇಶದಿಂದ ಬಂದವರು ಬೌದ್ಧಧಮ್ಮ ದೀಕ್ಷೆ ಪಡೆದುಕೊಂಡರು. ಆ ಸಂದರ್ಭದಲ್ಲಿ ಒಂದು ಲಕ್ಷ ದಲಿತರು 'ಧಮ್ಮ ದೀಕ್ಷೆ' ಪಡೆಯುವ[48] ಗುರಿ ಹೊಂದಲಾಗಿತ್ತಾದರೂ, ಆ ರೀತಿಯ ಏರ್ಪಾಟುಗಳನ್ನು ಮಾಡಿತ್ತಾದರೂ 10 ಸಾವಿರಕ್ಕಿಂತ ಹೆಚ್ಚು ದಲಿತರು ಬೌದ್ಧಧರ್ಮ ಸ್ವೀಕರಿಸಿದರೆಂದು ತಿಳಿದು ಬರುತ್ತದೆ. ಈ ಸಂದರ್ಭದಲ್ಲಿ 'ಬೌದ್ಧಧಮ್ಮ ದೀಕ್ಷಾ ಸಮಾರಂಭ ಸಿದ್ಧತಾ ಸಮಿತಿ' ಬಿಡುಗಡೆ ಮಾಡಿದ ಕರಪತ್ರದಲ್ಲಿ ಪ್ರಕಟಿಸಿದ ಪ್ರಾಸ್ತಾವಿಕ ವಿಚಾರಗಳು ಗಮನಾರ್ಹವಾಗಿವೆ. ದಲಿತರು ತಮ್ಮ ಸರ್ವಾಂಗೀಣ ಪ್ರಗತಿಯನ್ನು ಸಾಧಿಸಬೇಕಾದರೆ ಬೌದ್ಧಧಮ್ಮವನ್ನು ಸ್ವೀಕರಿಸಿದೆ ಅನ್ಯಮಾರ್ಗವಿಲ್ಲವೆಂಬುದು ಈಗ ಮನದಟ್ಟಾಗಿದೆ ಎಂದು ಹೇಳುವುದರ ಮೂಲಕ ಎಲ್ಲಾ ಸಂಘಟನೆಗಳು, ನಾಯಕರು ಡಾ. ಅಂಬೇಡ್ಕರ್‌ರವರು ಪ್ರತಿಪಾದಿಸಿದ ಧಾರ್ಮಿಕ, ಸಾಂಸ್ಕೃತಿಕ ಸ್ವಾವಲಂಬನೆಗೆ ಒತ್ತು ನೀಡಿರುವುದು, ಒಪ್ಪಿಕೊಂಡಿರುವುದು ಎದ್ದು ಕಾಣುತ್ತದೆ. ಸಂಘಟಕರು ಹೇಳುವಂತೆ,

'ಬೌದ್ಧಧರ್ಮವು ವೈಜ್ಞಾನಿಕ ಹಾಗೂ ವೈಚಾರಿಕ ತಳಹದಿಯ ಮೇಲೆ ನಿಂತಿರುವ ಜಗತ್ತಿನ ಶ್ರೇಷ್ಠ ಮಾನವ ಧರ್ಮವಾಗಿದೆ. ಸಂವಿಧಾನ ಶಿಲ್ಪಿ ಭಾರತರತ್ನ ಬೋಧಿಸತ್ವ ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರು 'ಪ್ರಬುದ್ಧ ಭಾರತ' ನಿರ್ಮಾಣ ಮಾಡುವ ಉದಾತ್ತ ಕನಸನ್ನು ಹೊತ್ತು 1956 ರ ಅಕ್ಟೋಬರ್ 14 ರಂದು ತಮ್ಮ ಅಪಾರ ಅನುಯಾಯಿಗಳೊಂದಿಗೆ ಬೌದ್ಧ ಧಮ್ಮವನ್ನು ಸ್ವೀಕರಿಸಿದ ಐತಿಹಾಸಿಕ ಸತ್ಯ ತಮಗೆಲ್ಲಾ ತಿಳಿದಿದೆ. ಭಾರತದ ಮೂಲ ನಿವಾಸಿಗಳಾದ ದಲಿತರಿಗೆ ಬೌದ್ಧಧಮ್ಮ ಅವರ ಮೂಲ ಧಮ್ಮವೆಂಬ ಸತ್ಯ ಸಂಗತಿ ಬಾಬಾಸಾಹೇಬರ ಸಂಶೋಧನೆಯಿಂದ ತಿಳಿದು ಬಂದಿದೆ. ಹಿಂದೂ ಕರಾಳ ಸಂಕೋಲೆಯಿಂದ ಬಿಡುಗಡೆ ಪಡೆದು, ದಲಿತರು ತಮ್ಮ ಸರ್ವಾಂಗೀಣ ಪ್ರಗತಿಯನ್ನು ಸಾಧಿಸಬೇಕಾದರೆ ಬೌದ್ಧಧಮ್ಮವನ್ನು ಸ್ವೀಕರಿಸದೇ ಅನ್ಯ ಮಾರ್ಗವಿಲ್ಲ ಎಂಬುದು ಮನದಟ್ಟಾಗಿದೆ.

ಬಾಬಾಸಾಹೇಬರು 1956 ರಲ್ಲಿ ನೀಡಿದ ಸಂದೇಶವನ್ನು ಈಡೇರಿಸುವಲ್ಲಿ ನಾವು ಸೋತು, 48 ವರ್ಷಗಳನ್ನು ವ್ಯರ್ಥಮಾಡಿದ್ದೇವೆ. ಬಾಬಾಸಾಹೇಬರ ಬಗ್ಗೆ ನಮ್ಮಲ್ಲಿರುವ ಗೌರವಾದರಗಳಲ್ಲಿ ಎಳ್ಳಷ್ಟು ಕೊರತೆಯಿಲ್ಲ. ಆದರೆ ಅವರ ಆದರ್ಶವನ್ನು ಪಾಲಿಸುವುದರಲ್ಲಿ ಹಿಂದುಳಿದಿದ್ದೇವೆ. ನಮ್ಮ ರಾಜಕೀಯ ನಾಯಕರುಗಳು, ಸಾಮಾಜಿಕ ಹೋರಾಟಗಾರರು, ಧಾರ್ಮಿಕ ಮುಖಂಡರುಗಳು ಮತ್ತು ಬುದ್ಧಿಜೀವಿಗಳು, ಬಾಬಾ

ಸಾಹೇಬರ ಕನಸನ್ನು ಈಡೇರಿಸಬೇಕೆಂಬ ಉದ್ದೇಶದಿಂದಲೇ ತಮ್ಮ ಕಾರ್ಯಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ. ದಲಿತರೆಲ್ಲಾ ಒಟ್ಟಾಗಿ ಅಪಾರ ಸಂಖ್ಯೆಯಲ್ಲಿ ಬೌದ್ಧಧಮ್ಮವನ್ನು ಸ್ವೀಕರಿಸಿ, ತಮ್ಮ ವಿಮೋಚನೆಗಾಗಿ ಸೂಕ್ತ ಸಮಯ ಹಾಗೂ ಸಂದರ್ಭಕ್ಕೆ ಕಾಯುತ್ತಿದ್ದರು; ಎಂದರೆ ತಪ್ಪಾಗಲಾರದು. ಈಗ ಅದಕ್ಕೆ ಅತ್ಯಂತ ಸೂಕ್ತವಾದ ಮತ್ತು ಉಪಯುಕ್ತವಾದ ಸಂದರ್ಭ ಒದಗಿ ಬಂದಿದೆ.

ಬಾಬಾ ಸಾಹೇಬರ ಕನಸನ್ನು ನನಸು ಮಾಡುವ ಹಾಗೂ 'ಧರ್ಮ ರಹಿತ' ವಾಗಿ ಬದುಕುತ್ತಿರುವ ದಲಿತ ಜನಾಂಗಕ್ಕೆ ಮಾನವ ಧರ್ಮವೊಂದರ ಆಶ್ರಯ ನೀಡುವ ಐತಿಹಾಸಿಕ ಧಮ್ಮ ಸ್ವೀಕಾರ ಕಾರ್ಯಕ್ರಮವೊಂದನ್ನು 14.10.2003 ರಂದು ಬೆಂಗಳೂರಿನಲ್ಲಿ ಹಮ್ಮಿಕೊಳ್ಳಲಾಗಿದೆ. ಕರ್ನಾಟಕ ರಾಜ್ಯದಾದ್ಯಂತ ಲಕ್ಷಾಂತರ ಮಂದಿ ದಲಿತರು ಈ ಧಮ್ಮ ಸ್ವೀಕಾರ ಕಾರ್ಯಕ್ರಮದಲ್ಲಿ ಭಾಗವಹಿಸಿ ಬೌದ್ಧಧಮ್ಮ ದೀಕ್ಷೆಯನ್ನು ಪಡೆದು 'ಪ್ರಬುದ್ಧ ಮಾನವ ಸಮಾಜದ ನಿರ್ಮಾಣಕ್ಕೆ ಮುಂದಾಗಲಿದ್ದಾರೆ. ಖ್ಯಾತ ಝೆನ್ ಗುರುಗಳಾದ ಪೂಜ್ಯ ಬೋಧಿಧಮ್ಮ ಭಂತೇಜಿ ಹಾಗೂ ಹಿರಿಯ ಭಂತೇಜಿಗಳು ಧಮ್ಮ ದೀಕ್ಷೆಯನ್ನು ನೀಡಲಿದ್ದಾರೆ. ಐತಿಹಾಸಿಕವಾದ ಈ ಧಮ್ಮ ಸ್ವೀಕಾರ ಸಮಾರಂಭದಲ್ಲಿ ತಾವು ಒಬ್ಬರಾಗಿ, ದಯವಿಟ್ಟು ಬನ್ನಿ, ಗೆಳೆಯರು ಮತ್ತು ಬಂಧುಗಳನ್ನು ಕರೆತನ್ನಿ.

ಸ್ವಾಭಿಮಾನ, ಸಾಮರಸ್ಯ, ಕರುಣೆ ಮತ್ತು ಮೈತ್ರಿಯೇ ತುಂಬಿರುವ ಬದುಕನ್ನು ಕಟ್ಟೋಣ."[49]

ಈ ಮೇಲಿನ ಪ್ರತಿಪಾದನೆಯಲ್ಲಿ ಪ್ರಸ್ತುತ ಅಧ್ಯಯನದ ತಾತ್ವಿಕ ಹಿನ್ನೆಲೆಯಲ್ಲಿ ಗುರುತಿಸಿದಂತೆ ಹಾಗೂ ಈ ಪೂರ್ವದ ಅಧ್ಯಾಯಗಳಲ್ಲಿ ಪ್ರತಿಪಾದಿಸಿದಂತೆ

1) ಈ ಮೊದಲು ದಲಿತರು ಅಧಿಕೃತವಾಗಿ ಬೌದ್ಧದೀಕ್ಷೆ ಹೊಂದಿ ಬೌದ್ಧರೆಂದು ಹೇಳಿಕೊಳ್ಳದೇ ಇದ್ದರು ಅವರು ಡಾ. ಅಂಬೇಡ್ಕರ್‌ರವರ ವಿಚಾರಗಳಿಂದ, ಅವರು ಬೌದ್ಧಧರ್ಮಕ್ಕೆ ಮತಾಂತರ ಹೊಂದಿರುವ ಬಗ್ಗೆ ಪ್ರಜ್ಞಾವಂತಿಕೆಯ ತಿಳುವಳಿಕೆ ಹೊಂದಿದ್ದಾರೆಂಬುದು ಸ್ಪಷ್ಟವಾಗುತ್ತದೆ.

2) ದಲಿತರು ತಮ್ಮ ಸರ್ವಾಂಗೀಣ ಪ್ರಗತಿಯನ್ನು ಸಾಧಿಸಲು ಬೌದ್ಧಧರ್ಮವನ್ನು ಸ್ವೀಕರಿಸುವುದು ಅಗತ್ಯವಾಗಿದೆ ಎಂದು ಸ್ಪಷ್ಟತೆ ಮೂಡಿದ ಕಾಲಘಟ್ಟಕ್ಕೆ ದಲಿತ ಚಳವಳಿ ಮುಟ್ಟಿದೆ ಎಂಬುದು ತಿಳಿದು ಬರುತ್ತದೆ.

3) ದಲಿತರಿಗೆ ಬೌದ್ಧಧರ್ಮ ಅವರ ಮೂಲ ಧರ್ಮವಾಗಿದೆ ಎಂಬ ಚಾರಿತ್ರಿಕ ಹಿನ್ನೆಲೆಯ ಜೊತೆಗೆ ದಲಿತ ಚಳವಳಿ ತಾದಾತ್ಮ್ಯಗೊಂಡಿರುವುದು ತಿಳಿಯುತ್ತದೆ.

4) 48 ವರ್ಷಗಳವರೆಗೆ ಡಾ. ಅಂಬೇಡ್ಕರ್‌ರವರ 'ಬೌದ್ಧ ಧರ್ಮ ದೀಕ್ಷಾ' ಕಾರ್ಯದ ಸಂದೇಶದ ಅಂತರಂಗವನ್ನು ನಿರ್ಲಕ್ಷಿಸಿದ್ದೇವೆ ಎಂಬ ತಿಳುವಳಿಕೆಗೆ ಬಂದಿರುವುದನ್ನು ಕಾಣುತ್ತೇವೆ.

5) ಕರ್ನಾಟಕ ದಲಿತರು 'ಬೌದ್ಧ ಧರ್ಮ ಸ್ವೀಕಾರ'ಕ್ಕೆ ಬಹಳ ದಿನಗಳಿಂದ ಕಾಯುತ್ತಿದ್ದರು ಎಂಬುದು.

6) ದಲಿತರು ಧರ್ಮರಹಿತರಾಗಿ ಬದುಕಬಾರದು ಎಂಬ ಸಮಷ್ಟಿ ಪ್ರಜ್ಞೆಯ ನಿಲುವು ಕಂಡು ಬರುತ್ತದೆ.

7) ಬೌದ್ಧ ಧರ್ಮ ದೀಕ್ಷೆಯನ್ನು ಪಡೆದು ಪ್ರಬುದ್ಧ ಮಾನವ ಸಮಾಜಕ್ಕೆ (Enlightened Human Society) ಆಶಯ ವ್ಯಕ್ತಪಡಿಸುವ ವಿಶ್ವ ಪ್ರಜ್ಞೆ ಗೋಚರಿಸುತ್ತದೆ.

8) ಬೆಂಗಳೂರಿನಲ್ಲಿ ಮಹಾಬೋಧಿ ಸೊಸೈಟಿಯ ಬಿಕ್ಕುಗಳಿದ್ದರೂ 'ಝೆನ್ ಬೌದ್ಧ ಗುರುಗಳ ಮೂಲಕ ದೀಕ್ಷೆ ಪಡೆಯುವ ಮೂಲಕ ದಲಿತ ಬೌದ್ಧರಿಗೆ ಬೌದ್ಧಧರ್ಮದ ಎಲ್ಲ ಶಾಖೆಗಳ ತತ್ವಗಳು ಮುಖ್ಯ. ಅದರಲ್ಲಿ ಅನ್ಯತಾ ಅಭಿಪ್ರಾಯವಿಲ್ಲ. ಬೌದ್ಧಪ್ರಜ್ಞೆ ಮುಖ್ಯವಾದದ್ದು ಎನ್ನುವ ನಿಲುವು ಎದ್ದು ಕಾಣುತ್ತದೆ.

ಬಿಜಾಪೂರದ ಹಿರಿಯ ಬೌದ್ಧ ಉಪಾಸಕರೂ, ಬೌದ್ಧಧರ್ಮ ಪ್ರಚಾರದಲ್ಲಿ ಗಣನೀಯ ಸೇವೆ ಸಲ್ಲಿಸುತ್ತಿರುವ ಆರ್.ಎ. ಔಧಿ ಯವರನ್ನು ಕಾರ್ಯಾಧ್ಯಕ್ಷರಾಗಿ ಹೊಂದಿ ರಚಿಸಲಾಗಿದ್ದ 'ಬೌದ್ಧ ಧರ್ಮ ದೀಕ್ಷಾ ಸಮಾರಂಭ ಸಿದ್ಧತಾ ರಾಜ್ಯ ಸಮಿತಿ'ಯ ಈ ಕರಪತ್ರದಲ್ಲಿ ಡಾ. ಬಾಬಾಸಾಹೇಬ ಅಂಬೇಡ್ಕರ್ ಅವರು 1956 ಅಕ್ಟೋಬರ್ 14 ರಂದು ನಾಗಾಪೂರದಲ್ಲಿ ಜರುಗಿದ ಧರ್ಮ ದೀಕ್ಷಾ ಸಮಾರಂಭದಲ್ಲಿ ಬೋಧಿಸಿದ 22 ಪ್ರತಿಜ್ಞಾ ವಿಧಿಗಳನ್ನು ಪ್ರಕಟಿಸಿದ್ದು ಸಮಿತಿಯು ಸ್ಪಷ್ಟವಾಗಿ ಡಾ. ಅಂಬೇಡ್ಕರ್‌ರವರ ಬೌದ್ಧ ಮಾದರಿಯನ್ನು ಒಪ್ಪಿ ಮುನ್ನಡೆದಿರುವುದಕ್ಕೆ ಸ್ಪಷ್ಟ ಪುರಾವೆ ಒದಗಿಸುತ್ತದೆ. 22 ಪ್ರತಿಜ್ಞೆಗಳನ್ನು ಸಂಕ್ಷಿಪ್ತಗೊಳಿಸಿ ದೀಕ್ಷಾ ಕಾರ್ಯಕ್ರಮದಲ್ಲಿ ಸಾಮೂಹಿಕವಾಗಿ ಬೋಧಿಸಲಾಗಿದೆ. 22 ಸೂತ್ರಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಲಾಗಿದೆ.

1) ನಾನು ಬ್ರಹ್ಮ, ವಿಷ್ಣು ಮಹೇಶ್ವರರನ್ನು ದೇವರೆಂದು ನಂಬುವುದಿಲ್ಲ ಮತ್ತು ಅವರನ್ನು ಪೂಜಿಸುವುದಿಲ್ಲ.

2) ನಾನು ರಾಮ ಮತ್ತು ಕೃಷ್ಣರನ್ನು ದೇವರೆಂದು ನಂಬುದವುದಿಲ್ಲ ಮತ್ತು ಅವರನ್ನು ಪೂಜಿಸುವುದಿಲ್ಲ.

3) ನಾನು ಗೌರಿ, ಗಣಪತಿ ಇತ್ಯಾದಿ ಹಿಂದೂ ಧರ್ಮದ ಯಾವುದೇ ದೇವ, ದೇವತೆಗಳನ್ನು ನಂಬುವುದಿಲ್ಲ ಮತ್ತು ಪೂಜಿಸುವುದಿಲ್ಲ.

4) ನಾನು ದೇವರ ಅವತಾರಗಳಲ್ಲಿ ವಿಶ್ವಾಸ ಇಡುವುದಿಲ್ಲ.

5) ನಾನು ಭಗವಾನ ಬುದ್ಧರನ್ನು ವಿಷ್ಣುವಿನ ಅವತಾರ ಎನ್ನುವುದನ್ನು ನಂಬುವುದಿಲ್ಲ. ನಾನು ಇಂಥ ಪ್ರಚಾರಗಳನ್ನು ಮೂರ್ಖತನದ ಅಪಪ್ರಚಾರವೆಂದು ತಿಳಿಯುತ್ತೇನೆ.

6) ನಾನು ಎಂದೂ ಶ್ರಾದ್ಧ ಮಾಡುವುದಿಲ್ಲ ಮತ್ತು ಪಿಂಡದಾನ ಮಾಡುವುದಿಲ್ಲ.

7) ನಾನು ಬೌದ್ಧಧರ್ಮದ ವಿರುದ್ಧವಾದ ಕಾರ್ಯಗಳನ್ನು ಮಾಡುವುದಿಲ್ಲ.

8) ನಾನು ಯಾವುದೇ ಕ್ರಿಯಾಕರ್ಮ, ಸಂಸ್ಕಾರಗಳನ್ನು ಬ್ರಾಹ್ಮಣರಿಂದ ಮಾಡಿಸುವುದಿಲ್ಲ.

9) ನಾನು ಎಲ್ಲ ಮಾನವರೂ ಒಂದೇ ಎಂಬ ಸಿದ್ಧಾಂತದಲ್ಲಿ ವಿಶ್ವಾಸ ಇಡುತ್ತೇನೆ.

10) ನಾನು ಸಮಾನತೆಯ ಸ್ಥಾಪನೆಗಾಗಿ ಪ್ರಯತ್ನಿಸುತ್ತೇನೆ.

11) ನಾನು ಭಗವಾನ ಬುದ್ಧರ ಅಷ್ಟಾಂಗ ಮಾರ್ಗವನ್ನು ಸಂಪೂರ್ಣ ಪಾಲನೆ ಮಾಡುತ್ತೇನೆ.

12) ನಾನು ಭಗವಾನ್ ಬುದ್ಧರ ಹತ್ತು ಬೋಧನೆಗಳನ್ನು (ಪಾರಮಿ) ಪಾಲನೆ ಮಾಡುತ್ತೇನೆ.

13) ನಾನು ಎಲ್ಲಾ ಜೀವಿಗಳ ಮೇಲೆ ದಯೆ ತೋರಿಸುತ್ತೇನೆ ಮತ್ತು ಪಾಲನೆ ಪೋಷಣೆ ಮಾಡುತ್ತೇನೆ.

14) ನಾನು ಕಳ್ಳತನ ಮಾಡುವುದಿಲ್ಲ.

15) ನಾನು ಸುಳ್ಳು ಹೇಳುವುದಿಲ್ಲ.

16) ನಾನು ವ್ಯಭಿಚಾರ ಮಾಡುವುದಿಲ್ಲ.

17) ನಾನು ಮದ್ಯಪಾನ ಮಾಡುವುದಿಲ್ಲ.

18) ನಾನು ನನ್ನ ಜೀವನದಲ್ಲಿ ಬೌದ್ಧ ಧರ್ಮದ ಮೂರು ತತ್ವಗಳಾದ ಪ್ರಜ್ಞಾಶೀಲ ಮತ್ತು ಕರುಣೆಗಳನ್ನು ಅಳವಡಿಸಿಕೊಳ್ಳುತ್ತೇನೆ.

19) ನಾನು ಮಾನವನ ಪ್ರಗತಿಗೆ ಮಾರಕವಾದ, ಮನುಷ್ಯ ಮನುಷ್ಯರಲ್ಲಿ ಅಸಮಾನತೆಯನ್ನು ಕಾಣುವ ಹಿಂದೂ ಧರ್ಮವನ್ನು ಸಂಪೂರ್ಣ ತ್ಯಜಿಸಿ ಬೌದ್ಧ ಧರ್ಮವನ್ನು ಸ್ವೀಕರಿಸುತ್ತೇನೆ.

20) ಬೌದ್ಧ ಧರ್ಮವೇ ಸದ್ಧರ್ಮ ಎಂಬುದರಲ್ಲಿ ನನಗೆ ಪೂರ್ಣ ವಿಶ್ವಾಸವಿದೆ.

21) ಇಂದು ನನ್ನ ಪುನರ್ಜನ್ಮವಾಗುತ್ತಿದೆ ಎಂದು ನಾನು ತಿಳಿಯುತ್ತೇನೆ.

22) ಇಂದಿನಿಂದ ನಾನು ಬೌದ್ಧ ಧರ್ಮದ ತತ್ವಗಳಿಗೆ ಅನುಸಾರವಾಗಿ ನಡೆದುಕೊಳ್ಳುತ್ತೇನೆ ಎಂದು ಪ್ರತಿಜ್ಞೆ ಮಾಡುತ್ತೇನೆ[50].

ಈ ರೀತಿ ಡಾ. ಅಂಬೇಡ್ಕರ್‌ರವರು 1956 ರಲ್ಲಿ ರಚಿಸಿದ 22 ಬೌದ್ಧ ಧರ್ಮ ದೀಕ್ಷಾ ಪ್ರತಿಜ್ಞೆಗಳನ್ನು ಪ್ರಚಾರಗೊಳಿಸಲಾಗಿದೆ. ಹೀಗೆ ಪ್ರಚಾರಗೊಳಿಸುವುದು ದೀಕ್ಷಾ ಚಳವಳಿಯಲ್ಲಿ ಮಹತ್ವದ ನಿರ್ಧಾರವಾಗಿ ಕಾಣುತ್ತದೆ. ಅಂದರೆ ಬೌದ್ಧದೀಕ್ಷೆ ಪಡೆಯಲು ಬಂದವರು ಪ್ರಜ್ಞಾಪೂರ್ವಕವಾದ ನೆಲೆಯಲ್ಲಿ ಬೌದ್ಧರಾಗಬೇಕು. ಯಾರದೋ ಪ್ರೇರಣೆಯಿಂದ, ಸಂಘಟನೆಗಳ ಒತ್ತಾಯದಿಂದ ಅವರು ಬೌದ್ಧಧರ್ಮದೀಕ್ಷೆ ಪಡೆಯಬಾರದೆಂಬ 'ಪಾರದರ್ಶಕ ನಿಲುವು' ಇಲ್ಲಿ ಕಂಡು ಬರುತ್ತದೆ. ದೀಕ್ಷಾರ್ಥಿ ತಾನು ಎಲ್ಲಿದ್ದೇನೆ, ಯಾವುದನ್ನು ನಿರಾಕರಿಸುತ್ತೇನೆ, ಯಾವುದನ್ನು ಮನಸಾ ಸ್ವೀಕರಿಸುತ್ತೇನೆ ಎಂಬ ಅರಿವು ಮೂಡಿಸುವಲ್ಲಿ ಈ ರೀತಿಯ ಪ್ರಚಾರ ಮಾಡಿರುವುದು ಕಂಡು ಬರುತ್ತದೆ. ಈ ರೀತಿ ಬೇರೆ ಧರ್ಮದವರು ಪ್ರಚಾರ ಮಾಡಿ ನಿರಾಕರಣೆಯ ಅಂಶಗಳನ್ನು ಪಟ್ಟಿ ಮಾಡಲು ಸಾಧ್ಯವಾಗದೇ ಇರುವುದು, ದಲಿತರು ಬೌದ್ಧಧರ್ಮಕ್ಕೆ ಬರಲು

ಇರುವ ಈ ವ್ಯತ್ಯಾಸ ಭಾರತದಲ್ಲಿ ಮತಾಂತರ ಚಳವಳಿಯ ಪ್ರಮುಖ ವಿಶಿಷ್ಟತೆಯನ್ನು ಎತ್ತಿತೋರಿಸುತ್ತದೆ. ಹೀಗೆ ಅನ್ಯ ಯಾವ ಧರ್ಮವಾದರೂ ದಲಿತರನ್ನು ಮತಾಂತರಿಸಲು ಈ ರೀತಿಯ ಪ್ರಚಾರ ಮಾಡಲಿಕ್ಕೆ ಸಾಧ್ಯವೇ ಇಲ್ಲದಿರುವುದನ್ನು ಪಾರದರ್ಶಕ ನೀತಿಯನ್ನು ಬೌದ್ಧ ಮತಾಂತರ ಕಾರ್ಯಕ್ರಮಗಳಲ್ಲಿ ಮಾತ್ರ ಹೊಂದಿರುವುದನ್ನು ಕಾಣುತ್ತೇವೆ. ಅಂಬೇಡ್ಕರ್‌ರವರು ಬೌದ್ಧಧರ್ಮವನ್ನು ಸರಳೀಕರಿಸಿ, ಒಂದು ಚಾರಿತ್ರಿಕ ಮಾರ್ಗ ರೂಪಿಸಿ ದಲಿತರು ಅವರ ಶತಮಾನಗಳ ಸಾಂಸ್ಕೃತಿಕ ಸಂಕೋಲೆಗಳನ್ನು ಕಿತ್ತೆಸೆಯಲು, ವಿಮೋಚನೆ ಕಂಡುಕೊಳ್ಳಲು ರೂಪಿಸಿದ ಚಾರಿತ್ರಿಕ ಕಾರ್ಯತಂತ್ರದ ಶಕ್ತಿಯೆಂದು ಇದನ್ನು ನಾವು ಗುರುತಿಸಿದರೆ ಅತಿಶಯೋಕ್ತಿಯಾಗಲಾರದು. ಧರ್ಮಚಕ್ರವನ್ನು ಪ್ರಾಮುಖ್ಯವಾಗಿವುಳ್ಳ ರಾಜ್ಯ ಸಮಿತಿಯ ಈ ಕರಪತ್ರದಲ್ಲಿ ಮೊದಲೇ ಹೇಳಿದಂತೆ ಕರ್ನಾಟಕದ ದಲಿತ ಚಳವಳಿಯಲ್ಲಿ ಕಳೆದ 25 ವರ್ಷಗಳಿಂದ ಸಕ್ರೀಯವಾಗಿ ಕಾರ್ಯನಿರ್ವಹಿಸಿದ, ಸಂಘಟನಾ ಅನುಭವ ಮತ್ತು ದಲಿತ ವಿಮೋಚನೆಯ ಬಗ್ಗೆ ಸ್ಪಷ್ಟತೆ ಹೊಂದಿರುವ ಎಲ್ಲಾ ನಾಯಕರು, ಬೌದ್ಧ ಸಾಹಿತಿಗಳು, ಸಂಘಟಿಕರು ಹಾಗೂ ದಲಿತ ವಿದ್ಯಾರ್ಥಿ ಮುಖಂಡರು. ಈ ಚಾರಿತ್ರಿಕ ಬೌದ್ಧಧರ್ಮ ದೀಕ್ಷಾ ಸಮಾರಂಭದ ಸಿದ್ಧತಾ ಸಮಿತಿಯ ಸದಸ್ಯರ ಪಟ್ಟಿಯಲ್ಲಿದ್ದಾರೆ. ಬುದ್ಧಸೇನ ಚೋರಯ್ಯ, ವೈ.ಬಿ. ನಂದನ, ಧಮ್ಮರಖ್ಖಿತ, ಡಿ.ಜಿ. ಸಾಗರ[51], ಸಿ.ಎಂ. ಮುನಿಯಪ್ಪ ಮಾವಳ್ಳಿ ಶಂಕರ್[52], ಎನ್. ಶಿವಣ್ಣ ಎಂ. ವೆಂಕಟಸ್ವಾಮಿ[53], ಇಂದುಧರ ಹೊನ್ನಾವರ, ಎನ್. ಮಹೇಶ್, ಎನ್. ನಾಗರಾಜ್, ಎಸ್. ಆರ್. ಕೊಲ್ಲೂರ್, ಕೆ. ಚಂದ್ರಶೇಖರ್, ಬುದ್ಧಘೋಷ ದೇವೆಂದ್ರ ಹೆಗ್ಗಡೆ, ಜಿಗಣಿ ಶಂಕರ್, ಪಟಾಪಟ್ ನಾಗರಾಜ್, ಲಕ್ಷ್ಮೀ ನಾರಾಯಣ ನಾಗವಾರ, ವಿ.ನಾಗರಾಜ್, ಎಫ್.ಹೆಚ್. ಜಕ್ಕಪ್ಪನವರ್, ಹೆಚ್.ಎಸ್. ಮಹೇಶ, ಪುರುಷೋತ್ತಮದಾಸ್, ತ್ಯಾಗರಾಜ್, ಮರಿಯಪ್ಪ ಆರ್. ಮೋಹನರಾಜ್, ಮೂಡ್ನಾಕೂಡು ಚಿನ್ನಸ್ವಾಮಿ, ಸುಬ್ರಹ್ಮಣ್ಯಂ, ಅಣ್ಣಯ್ಯ, ರಾಮಚಂದ್ರ, ಪಿ. ಸಂಘಸೇನಾ, ಕೆ. ಕುಮಾರ್, ಗುಂಡಪ್ಪ ಡೊಳ್ಳೆ, ಆರ್. ಮಹದೇವಪ್ಪ ಡಾ. ಪೂರ್ಣೇಶ್ ರಾಜು, ಸಿದ್ಧರಾಮು, ರಾಜಶೇಖರ ಯಡ್ಡಳ್ಳಿ, ಹನಮಂತ ರಾಯಪ್ಪ ಎಂ.ಎಂ. ಕೃಷ್ಣಯ್ಯ, ಡಾ. ರಾಜಾನಂದ ಮೂರ್ತಿ, ಹೆಚ್.ಎಂ. ಸೋಲಂಕಿ, ಕನಕರಾಜ್, ಜಯರಾಂ, ಡಿ. ಗೋಪಾಲಕೃಷ್ಣ ಧರ್ಮಸೇನಾ ರಮೇಶ ಡಾಕುಳಕಿ, ರಮೇಶ ಆಸಂಗಿ, ಗಾ.ನ. ಅಶ್ವಥ್, ಸುಧಾ ವೆಂಕಟೇಶ್, ಮು. ತಿಮ್ಮಯ್ಯ, ಸುಬ್ಬು ಹೊಲೆಯಾರ್, ಡಾ. ಶಿವಲಿಂಗಯ್ಯ, ಸಿದ್ದಲಿಂಗಯ್ಯ, ಎಂ. ಜೋತೆಪ್ಪ ಜೆ.ಎಂ. ಚಲುವರಾಜು, ಡಾ. ನರೇಂದ್ರ ಕುಮಾರ್, ಓ. ರಾಮದಾಸ್, ಜಿ.ವಿ. ಕೃಷ್ಣಪ್ರಸಾದ್, ಬಾಲಕೃಷ್ಣನ್, ಹೊನ್ನಪ್ಪ ಕಾಳೇಸಿಂಗೆ, ಟಿ. ವಿಜಯಕುಮಾರ, ಹೆಚ್.ಡಿ. ಚಂದ್ರಯ್ಯ, ಓ. ರಾಜಣ್ಣ ಡಾ. ಸಿದ್ದರಾಜು, ಡಾ. ಕೆ.ಹೆಚ್. ಜ್ಞಾನೇಂದ್ರಪ್ಪ ಪ್ರಕಾಶ್ ಪಟಾಪಟ್, ರಾಮಕೃಷ್ಣಯ್ಯ, ಗೌತಮ ಪಾಟೀಲ, ರೋಹಿತಾಕ್ಷ, ಎಸ್. ನಾರಾಯಣಸ್ವಾಮಿ, ಸಿ. ಲಕ್ಷ್ಮಣ್, ವಿಠ್ಠಲ್ ದೊಡ್ಡಮನಿ, ತಿಪ್ಪಣ್ಣ ಆರತಿ, ಎಂ. ಮುನಿಯಪ್ಪ ಇವರ ಹೆಸರುಗಳಿವೆ. ಇವರೆಲ್ಲರು ಕರ್ನಾಟಕದ ಎಲ್ಲಾ ಪ್ರದೇಶಗಳನ್ನು ಸೂಚಿಸುವ ರೀತಿಯಲ್ಲಿ ಈ ಸಮಿತಿಯ ಸದಸ್ಯರಾಗಿ 'ಬೌದ್ಧಧರ್ಮ ದೀಕ್ಷಾ ಸಮಾರಂಭ' ಕ್ಕೆ ಶ್ರಮವಹಿಸಿ ಕಾರ್ಯನಿರ್ವಹಿಸಿರುವುದು ತಿಳಿದು ಬರುತ್ತದೆ. ಮೇಲಾಗಿ ಇವರೆಲ್ಲರೂ 'ಕರ್ನಾಟಕ ದಲಿತ ಸಂಘರ್ಷ ಸಮಿತಿ'ಯ ಪ್ರಾರಂಭದಲ್ಲಿ ಸತತವಾಗಿ ದಲಿತರ ಧ್ವನಿಯಾಗಿ ಕೆಲಸಮಾಡಿದ್ದು ಸೈದ್ಧಾಂತಿಕ, ಕಾರ್ಯಾತ್ಮಕ ನಿಲುವುಗಳಲ್ಲಿ ವ್ಯತ್ಯಾಸ ಉಂಟಾಗಿ ಬೇರೆ ಬೇರೆ ಬಣ್ಣಗಳೊಂದಿಗೆ, ಸಂಘಟನೆಗಳೊಂದಿಗೆ ಗುರುತಿಸಿಕೊಂಡು ಕಾರ್ಯ ನಿರ್ವಹಿಸಿದರೂ ಕೂಡ 'ಬೌದ್ಧ ಧರ್ಮ ದೀಕ್ಷೆಯ' ಚಳವಳಿಯಲ್ಲಿ ತಮ್ಮ ರಾಜಕೀಯ ನಿಲುವುಗಳು, ಕಾರ್ಯತಂತ್ರದ ವ್ಯತ್ಯಾಸಗಳನ್ನು ಬದಿಗೆ ತಳ್ಳಿ ಬೌದ್ಧ ಧರ್ಮದ ತತ್ವಾಚರಣೆಯಲ್ಲಿ

ಪುನರುಜ್ಜೀವನದಲ್ಲಿ ಒಂದಾಗಿ ಕಾರ್ಯನಿರ್ವಹಿಸುತ್ತಿರುವುದು ಕೂಡಾ ಬೌದ್ಧತತ್ವಗಳಿಗೆ ಇರುವ ಶಕ್ತಿ ಮತ್ತು ಮಾನಸಿಕ ಪರಿವರ್ತನಾ ಪ್ರಕ್ರಿಯೆಯ ಪ್ರಖರತೆಯನ್ನು ಸೂಚಿಸುತ್ತದೆ.

ಹೀಗೆ ಕರ್ನಾಟಕದಲ್ಲಿ ಬೌದ್ಧ ಸಂಘಟನೆಗಳು, ಅದರಲ್ಲೂ ಮುಖ್ಯವಾಗಿ ದಲಿತ ಚಳವಳಿಯ ಅಗ್ರ ಗಣ್ಯ ನಾಯಕರು, ರಾಜಕೀಯ ನೇತಾರರು, ಕಾರ್ಯಕರ್ತರು ದಲಿತ-ಬಹುಜನ ಬುದ್ಧಿಜೀವಿಗಳು ರಾಜ್ಯ, ರಾಷ್ಟ್ರೀಯ ಮತ್ತು ಅಂತರ್ ರಾಷ್ಟ್ರೀಯ ಮಟ್ಟದಲ್ಲಿ ತಮ್ಮ ತಮ್ಮ ಕಾರ್ಯತಂತ್ರ, ಸೈದ್ಧಾಂತಿಕ ಚೌಕಟ್ಟುಗಳ ನೆಲೆಗಳಲ್ಲಿ ದಲಿತರ ಧಾರ್ಮಿಕ, ಸಾಂಸ್ಕೃತಿಕ ವಿಮೋಚನೆಯ ಸಾಧನಸೂತ್ರವಾಗಿ ಅಂಬೇಡ್ಕರ್‌ರವರು ಪ್ರತಿಪಾದಿಸಿದ 'ಬುದ್ಧಮಾರ್ಗ' ವನ್ನು ಪುಷ್ಟೀಕರಿಸುತ್ತಿರುವುದು ಕಂಡು ಬಂದಿದೆ. ಈ ಸಂಘಟನೆಗಳ ವಕ್ತಾರರ ಪ್ರಭಾವ ಮತ್ತು ಸಂಪರ್ಕದಲ್ಲಿರುವ ಕರ್ನಾಟಕದ ದಲಿತರು, ಬಹುಜನ ಚಳವಳಿಯ ಪ್ರಭಾವದಲ್ಲಿರುವ ಕಾರ್ಯಕರ್ತರು, ಕೆಲವು ಹಿಂದುಳಿದ ವರ್ಗದ ನೆಲೆಯ ಬಹುಜನ ಧುರೀಣರೂ ಬೌದ್ಧಧರ್ಮರ ಐಡೆಂಟಿಟಿಯ ನೆಲೆಯಲ್ಲಿ ಗುರುತಿಸಿಕೊಳ್ಳುತ್ತಿರುವುದು ಕಂಡು ಬರುತ್ತದೆ. ಈ ಪ್ರಕ್ರಿಯೆಯ ಇನ್ನೊಂದು ಪ್ರಮುಖ ಆಯಾಮವನ್ನು ಅಧ್ಯಯನದ ಪರಿಕಲ್ಪನೆಗಳ ಹಿನ್ನೆಲೆಯಲ್ಲಿ ದಾಖಲಿಸುವ ಅನಿವಾರ್ಯತೆ ಇದೆ. ಈ ಮೇಲಿನ ಬಾಗದಲ್ಲಿ ಪ್ರಸ್ತಾಪಿಸಿದ ದಲಿತ ಬಹುಜನ ಸಂಘಟನೆಗಳು ಬೌದ್ಧಧರ್ಮ ಸಾಂಸ್ಕೃತಿಕ ವಿಮೋಚನಾ ಕಾರ್ಯತಂತ್ರವನ್ನು ಕೆಲವೊಮ್ಮೆ ಸಾಮಾನ್ಯ ವೇದಿಕೆಗಳಲ್ಲಿ, ವಿಚಾರ ಸಂಕಿರಣಗಳಲ್ಲಿ ಬಹಿರಂಗವಾಗಿ ಪ್ರತಿಪಾದಿಸುತ್ತಿವೆಯಾದರೂ, ಹೆಚ್ಚಾಗಿ ಸಂಘಟನೆಯ ಕಾರ್ಯತಂತ್ರವಾಗಿ ಆಂತರಿಕವಾಗಿಯೇ ತರಬೇತಿ ಶಿಬಿರಗಳನ್ನು ಕಮ್ಮಟಗಳನ್ನು ಹಮ್ಮಿಕೊಳ್ಳುವುದರ ಮೂಲಕ ಬೌದ್ಧಧರ್ಮದ ಹಲವಾರು ಆಯಾಮಗಳ ಬಗ್ಗೆ ಚರ್ಚಿಸುತ್ತಾರೆ, ಆ ಮೂಲಕ ತಮ್ಮ ತಮ್ಮ ಸಂಪರ್ಕದ ದಲಿತ-ಬಹುಜನ ಕಾರ್ಯಕರ್ತರಿಗೆ 'ಸಾಮಾಜಿಕ ಪರಿವರ್ತನೆಯ' ಶಿಕ್ಷಣ, ತರಬೇತಿ ನೀಡುತ್ತಿದ್ದಾರೆ.

ಪ್ರಾಸ್ತಾವಿಕ ಅಧ್ಯಾಯದಲ್ಲಿ ವಿವರಿಸಿದಂತೆ ತಮ್ಮನ್ನು ಶೋಷಿಸಿದ ಶಕ್ತಿಗಳಿಗೆ, 'ಒಳ ಕಾರ್ಯಾಚರಗಳಿಗೆ' ತಾವೂ ಅದೇ ರೀತಿಯ 'ಒಳಕಾರ್ಯಾಚರಣೆ' ಯ ಕಾರ್ಯತಂತ್ರವನ್ನು (Internal Strategy) ಅನುಸರಿಸಿಯೇ ಉತ್ತರ ನೀಡುವ ಕಾಲಘಟ್ಟವನ್ನು ತಲುಪಿವೆ. ಇದು 'ಪ್ರಬುದ್ಧ ಭಾರತ' ಪರಿಕಲ್ಪನೆಯ ನೆಲೆಯಲ್ಲಿ ನಡೆಯುತ್ತಿರುವುದು ಅತ್ಯಂತ ಗಮನಾರ್ಹವಾದ ಅಂಶವಾಗಿದೆ.

**ಮಹಾಬೋಧಿ ಸಂಘ, ಬುದ್ಧ ಧಮ್ಮ ಸಮಿತಿ, ಯಕ್ಸಂಬಾ, ತಾ : ಚಿಕ್ಕೋಡಿ, ಜಿಲ್ಲಾ : ಬೆಳಗಾವಿ :**

1920 ರ ದಶಕದಿಂದಲೇ ಡಾ. ಬಾಬಾಸಾಹೇಬರು ಬೆಳಗಾವಿ ಜಿಲ್ಲೆಯ ದಲಿತ ಸಮುದಾಯಗಳ ಮೇಲೆ ತಮ್ಮ ಪ್ರಭಾವ ಬೀರಿರುವುದನ್ನು ನೋಡಿದ್ದೇವೆ. ಈ ಪ್ರಭಾವಕ್ಕೆ 'ಯಕ್ಸಂಬಾ' ಗ್ರಾಮದ ದಲಿತರೂ ಹೊರತಾಗಿಲ್ಲದಿರುವುದನ್ನು, ಡಾ. ಅಂಬೇಡ್ಕರ್‌ರವರ ವಿಚಾರಗಳನ್ನು ಒಪ್ಪಿ ಅನುಸರಣೆ ಮಾಡಿರುವುದನ್ನು ಕಾಣುತ್ತೇವೆ. ಈ ಪ್ರೇರಣೆಯ ನೆಲೆಯಲ್ಲೇ 29.9.1990 ರಂದು ಯಕ್ಸಂಬಾದ ಮಹಾಬೋಧಿ ಸಂಘ ಎಂಬ ಸಂಸ್ಥೆ ಉದಯಿಸಿ ಬುದ್ಧ ಧಮ್ಮ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಳ್ಳುತ್ತ ಬಂದಿದೆ. ಸುತ್ತಮುತ್ತಲಿನ ಗ್ರಾಮಗಳಲ್ಲಿ ದಲಿತರನ್ನು ಬೌದ್ಧ ಧಮ್ಮಕ್ಕೆ ಸೆಳೆದು ಅವರಲ್ಲಿ ಬೌದ್ಧ ಧಮ್ಮ ಮತ್ತು ಸಂಸ್ಕೃತಿಯ ಐಡೆಂಟಿಟಿಯನ್ನು ಬೆಳೆಸಲು

ತೀವ್ರ ಪ್ರಯತ್ನ ನಡೆಸಿದ್ದನ್ನು ಕಾಣುತ್ತೇವೆ. ಇಲ್ಲಿ ಹಿರಿಯ ಬೌದ್ಧ ಉಪಾಸಕರಾದ ವಸಂತ ದತ್ತ ಮಾಳಗೆ, ಚಿತಳೆ ಮಾಸ್ತರ್, ಜಾಣು ಥಬ್ಬೆ ಕುಂದಾರೆ, ಮುಂತಾದ ಕ್ರಿಯಾಶೀಲ ಧಮ್ಮ ಸಂಘಟಿಕರು ಬೌದ್ಧ ಧಮ್ಮ ಪ್ರಸಾರ ಕಾರ್ಯದಲ್ಲಿ ಮಹತ್ವದ ಪಾತ್ರ ವಹಿಸಿದ್ದಾರೆ. ಹುಬ್ಬಳ್ಳಿ - ಧಾರವಾಡವರೆಗೆ ಯಾರೇ ಆಮಂತ್ರಿಸಿದರೂ ಅಲ್ಲಿಗೆ ಹೋಗಿ ಬೌದ್ಧ ವಿಧಿ ವಿಧಾನಗಳ ಮೂಲಕ ವಿವಾಹ ಸಮಾರಂಭ, ದೀಕ್ಷಾ ಸಮಾರಂಭ ನಡೆಸಿಕೊಟ್ಟಿದ್ದಾರೆ. (ಅನುಬಂಧ -1 ಚಿತ್ರಗಳಲ್ಲಿ ನೋಡಬಹುದಾಗಿದೆ).

ಈ ಸಂಘದಿಂದ ಬೌದ್ಧ ಪೂರ್ಣಿಮೆ, ವರ್ಷಾವಾಸ, ಧಮ್ಮ ಚಕ್ಕ ಪ್ರವರ್ತನ ದಿನ, ಬಾಬಾಸಾಹೇಬ ಅಂಬೇಡ್ಕರ್, ನಾಲ್ವಡಿ ಕೃಷ್ಣರಾಜ ಒಡೆಯರ್, ಫುಲೆ, ಪೆರಿಯಾರ್‌ರವರ ಜಯಂತಿಗಳನ್ನು ಆಚರಿಸುವುದು ಕಂಡು ಬಂದಿದೆ. ಅದೇ ರೀತಿ ನಾಮಕರಣ ವಿಧಿ, ಮಂಗಲ ಪರಿಕಾಯ (ವಿವಾಹ) ದೀಕ್ಷಾ-ವಿಧಿ, ಶವಸಂಸ್ಕಾರ ವಿಧಿ, ಗೃಹ ಪ್ರವೇಶ ಇಂತಹ ಆಚರಣೆಗಳಲ್ಲಿ ಹಿಂದೂ ಆಚರಣೆಗಳನ್ನು ತ್ಯಜಿಸಿ ಪೂರ್ಣವಾಗಿ ಬೌದ್ಧ ರೀತಿಯ ವಿಧಿ ವಿಧಾನಗಳನ್ನೇ ಅನುಸರಿಸುತ್ತಿರುವುದು ಕಂಡು ಬಂದಿದೆ. ಬಿಕ್ಕುಗಳು ಬಂದಾಗ ಸದರಿಯಂತೆ ಅವರಿಗೆ ಭೋಜನ ಧಾನ ನೀಡಿರುವುದು ಕಂಡು ಬಂದಿದೆ. ದಲಿತರ ಮನೆಗಳಲ್ಲಿಯೇ ಹೋಗಿ ಧಮ್ಮ ಗುರುಗಳ ಸಾಮಾನ್ಯರಂತೆ ಬೆರೆತು ಭೋಜನ ಸ್ವೀಕರಿಸುವ ಪರಿಪಾಠ ಯಾವ ಮಠಮಾನ್ಯರು ತಮ್ಮ ಹೊಸ್ತಿಲು ತುಳಿಯದ ಸಂದರ್ಭದಲ್ಲಿ ಬೌದ್ಧ ಬಿಕ್ಕುಗಳು ತಮ್ಮ ಮನೆಗೆ ಆಗಮಿಸಿ ಭೋಜನ ಸ್ವೀಕರಿಸುವುದು ಅಂತಹ ಕುಟುಂಬದಲ್ಲಿ ರೋಮಾಂಚನದ ಘಟನೆಯೇ ಆಗಿ, ಬೇರೊಂದು ರೀತಿಯ ಪ್ರಗತಿಗೆ ಕಾರಣವಾಗುವುದನ್ನು ಅಲ್ಲಗಳೆಯಲಾಗದು. ಅದೇ ರೀತಿ ಮನೆ ಮನೆಗಳಲ್ಲಿ ಧರ್ಮ ಪ್ರವಚನಗಳನ್ನು ಏರ್ಪಡಿಸಲಾಗಿದೆ. ''ದಲಿತರಲ್ಲಿ ಮನೆ ಮಾಡಿದ ಅಂಧ ಶ್ರದ್ಧೆಗಳನ್ನು ಪ್ರಮಾಣೀಕರಿಸಿ ವಿಶ್ಲೇಷಣೆ ಮಾಡಿ ಜನರಲ್ಲಿ ಪ್ರಾಯೋಗಿಕ ವಿಶ್ಲೇಷಣೆ ಮಾಡಿ ಅವು ಸುಳ್ಳು ಎಂಬುದನ್ನು ಖಚಿತ ಪಡಿಸಿದೆವು. ಮಾನಸಿಕ ದುರ್ಬಲತೆಯನ್ನು ಹೋಗಲಾಡಿಸಲು ಪ್ರಯತ್ನ ಶೀಲರಾದೆವು. ಹೆದರಿಕೆ, ದೇವರು ದಿಂಡಿರು ಇವುಗಳ ಭೀತಿಯನ್ನು ಹೋಗಲಾಡಿಸಿ ಈ ಅದೆಲ್ಲಾ ಮಾಯವಾಗಿರುವುದನ್ನು ಕಾಣುತ್ತೇವೆ'', ಎಂದು ಯಕ್ಸಂಬಾ ಬೌದ್ಧ ಸಮಾಜ ಬೆಳೆದು ಬಗೆಯನ್ನು ಶ್ರೀ ಮಾಳಗೆ ಮಾಸ್ತರರು ದಾಖಲಿಸಿದ್ದಾರೆ. (ದಿನಾಂಕ : 15.11.2004 ರ ಸಂದರ್ಶನಾವಳಿಯಲ್ಲಿ ಭರ್ತಿ ಮಾಡಿದ ಮಾಹಿತಿ).

ಈ ಬೌದ್ಧ ಸಂಘಕ್ಕೆ ಲಂಡನ್ನಿನ ಅಶ್ವಜಿತ ಬಂತೇಜಿ, ಮಹಾರಾಷ್ಟ್ರದ ಬಿಕ್ಕು ಸಂಘ ರಕ್ಷಿತ, ಕೊಲ್ಲಾಪೂರ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು, ಮಂಟೇಲಿಂಗಯ್ಯನವರು, ಬಂತೇಜಿ ಶೀಲಭದ್ರ ಇವರು ಸಂದರ್ಶನ ನೀಡಿದ್ದಾರೆ. ಇಲ್ಲಿನ ದಲಿತರಿಗೆ ಬೌದ್ಧ ಧಮ್ಮ ದೀಕ್ಷೆ ನೀಡಿದ ಬೌದ್ಧ ಗುರು ಭಂತೆ ದೀಪಂಕರ ಅವರು ಈ ಭಾಗದಲ್ಲಿ ಧಮ್ಮ ಪ್ರಸಾರ ಮಾಡುತ್ತಾ ಚಿಕ್ಕೋಡಿ, ನಿಪ್ಪಾಣಿ, ಹುಕ್ಕೇರಿ ತಾಲೂಕಿನಲ್ಲಿ ಬೌದ್ಧ ಧಮ್ಮ ದೀಕ್ಷೆ ನೀಡಿರುವುದು ತಿಳಿದು ಬರುತ್ತದೆ. ಹೀಗೆ ಧರ್ಮ ಪ್ರಸಾರ ಮಾಡುತ್ತಲೇ ಇರುವಾಗ 1999 ರಲ್ಲಿ ಪರಿನಿರ್ವಾಣ ಹೊಂದಿರುವುದು ತಿಳಿದು ಬರುತ್ತದೆ. ಅವರ ಅಸ್ಥಿ ಅವಶೇಷಗಳ ಮೇಲೆ ಯಕ್ಸಂಬಾದ ಡಾ. ಅಂಬೇಡ್ಕರ್ ಗಾರ್ಡನ್‌ನಲ್ಲಿ ಚೈತ್ಯ (ಸ್ಮಾರಕ) ನಿರ್ಮಿಸಲಾಗಿದೆ. ಪ್ರತಿದಿನ ಇಲ್ಲಿ ಬುದ್ಧವಂದನೆ ನಡೆಯುತ್ತದೆ. ಹೀಗೆ ಮಹಾ ಬೋಧಿ ಸಂಘದ ಮುಖಾಂತರ ಯಕ್ಸಂಬಾದ ಬೌದ್ಧ ಸಮಾಜ ಅಂಬೇಡ್ಕರ್ ಮಾರ್ಗದಲ್ಲಿ ನಡೆಯುತ್ತಿರುವುದು ಕಂಡು ಬಂದಿದೆ.

**ಬುದ್ಧ ಪ್ರತಿಷ್ಠಾನ, ಬೆಂಗಳೂರು :**

ಕರ್ನಾಟಕದಲ್ಲಿ ಬೌದ್ಧ ಧಮ್ಮ ಪ್ರಸಾರ ಕಾರ್ಯದಲ್ಲಿ ಕಳೆದ ಎರಡು ದಶಕಗಳಿಂದ ಗಣನೀಯವಾಗಿ ಸೇವೆ ಸಲ್ಲಿಸುತ್ತಿರುವ ಬುದ್ಧ ಪ್ರತಿಷ್ಠಾನವು ಸಮಕಾಲೀನ ಸಂದರ್ಭದ ಬೌದ್ಧ ಸಂಘ ಸಂಸ್ಥೆಗಳಲ್ಲಿಯೇ ತುಂಬಾ ವಿಶಿಷ್ಟವಾದ ರೀತಿಯಲ್ಲಿ ತನ್ನ ಕೊಡುಗೆ ಸಲ್ಲಿಸುತ್ತಿದೆ. ಈ ಸಂಸ್ಥೆಯ ಸಂಸ್ಥಾಪಕರೂ, ಟ್ರಸ್ಟಿಗಳೂ ಆದ ಡಾ. ಬಿ. ರಾಜಾನಂದ ಮೂರ್ತಿಯವರು ತಮ್ಮ ಮನೆಯನ್ನೇ ವಿಹಾರದಂತೆ ರೂಪಿಸಿಕೊಂಡು ಐದಾರು ಸಾವಿರ ಜನರಿಗೆ ಬೌದ್ಧ ದಮ್ಮ ದೀಕ್ಷೆ ಕೊಡಿಸಿ ಸಾಹಿತ್ಯ, ಕಲೆಗಳ ಮೂಲಕ ಬೌದ್ಧ ಧಮ್ಮಕ್ಕೆ ತಮ್ಮನ್ನು ಅರ್ಪಿಸಿಕೊಂಡು ಅಂಬೇಡ್ಕರ್‌ರವರ ಆಶಯದಂತೆ ಧಮ್ಮಾಚಾರಿಗಳಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಸಂಸ್ಥೆಯ ವತಿಯಿಂದ ''ಬುದ್ಧ ವಂದನೆ' 'ಬೌದ್ಧ ಸಂಸ್ಕೃತಿ ಮತ್ತು ಮೌಲ್ಯಗಳು' 'ಜ್ಞಾನಿಗಳ ದೃಷ್ಟಿಯಲ್ಲಿ ಬುದ್ಧಧರ್ಮ' 'ಸಾಕ್ಷರ ಕುಸುಮ' ಡಾ.ಬಿ.ಆರ್. ಅಂಬೇಡ್ಕರ್‌ರವರ ಕ್ರಾಂತಿಕಾರಿ ವಿಚಾರಗಳನ್ನು ಬಿಂಬಿಸುವ ವಿಜ್ಞಾನ ಸೂರ್ಯ ಮತ್ತು ಅಂಬೇಡ್ಕರ್ ನಕ್ಕಾಗ' ಎಂಬ ಗ್ರಂಥಗಳನ್ನು ಪ್ರಕಟಿಸಿದ್ದಾರೆ. 'ಬುದ್ಧ ವಂದನೆ' ಎಂಬ ಧ್ವನಿಸುರುಳಿಯನ್ನು ಹೊರತಂದಿದ್ದಾರೆ. ಡಾ. ರಾಜಾನಂದ ಮೂರ್ತಿಯವರೇ ಸ್ವತಃ ಗಾಯಕರಾಗಿ ಬೌದ್ಧ ಧಮ್ಮ ಕುರಿತ ಹಾಡುಗಳನ್ನು ಶ್ರೂಶ್ರವ್ಯವಾಗಿ ಹಾಡುತ್ತಾರೆ. ಅದೇ ರೀತಿ ದಲಿತ ಕಾರ್ಯಕರ್ತರಲ್ಲಿ 'ಧಮ್ಮ' ಜಾಗೃತಿಯುಂಟು ಮಾಡಿ ಅವರು ಬೌದ್ಧ ಧಮ್ಮ ದೀಕ್ಷೆ ಪಡೆದುಕೊಂಡು ತಮ್ಮ ಜೀವನದಲ್ಲಿ ಯಶಸ್ಸು ಸಾಧಿಸಲು ಮಾರ್ಗದರ್ಶನ ಮಾಡುತ್ತಲಿದ್ದಾರೆ. ಮುದ್ರಣ ಮಾಧ್ಯಮದ ವಿವಿಧ ಪ್ರಕಾರಗಳಲ್ಲಿ ಬುದ್ಧ ಪ್ಯಾಕೆಟ್ ಕ್ಯಾಲೆಂಡರ್, ಬೌದ್ಧ ಪೂಜಾ ಪಾಠಗಳ ಕೈಪಿಡಿ, ಸಣ್ಣ ಸಣ್ಣ ಜಾಗೃತಿ ಕರ ಪತ್ರಗಳು, ಸ್ಟಿಕರ್‌ಗಳನ್ನು ಮುದ್ರಿಸಿ ಬುದ್ಧನ ಉಪದೇಶಗಳು, ಬೌದ್ಧ ಸಂಸ್ಕೃತಿ ಬೆಳೆಯಲು ಪ್ರಯತ್ನಿಸುತ್ತಿರುವುದು ಮುಖ್ಯವಾಗಿದೆ.

**ದಲಿತೇತರರಿಗೂ ಧಮ್ಮ ದೀಕ್ಷೆ:**

ಬುದ್ಧ ಪ್ರತಿಷ್ಠಾನವು ಒಕ್ಕಲಿಗರು ; ಲಿಂಗಾಯತ ಸಮಾಜದ ಕೆಲವರು, ದೇವಾಂಗ ಸಮಾಜದವರಿಗೂ ಬೌದ್ಧ ಧಮ್ಮ ಸ್ವೀಕರಿಸಲು ಕಾರಣವಾಗಿರುವುದನ್ನು ನೋಡುತ್ತೇವೆ. 'ಬಹುಜನ ಹಿತಾಯ, ಬಹುಜನ ಸುಖಾಯ' ಎಂಬ ಬುದ್ಧವಾಣಿಯ ಪ್ರೇರಣೆಯಿಂದ ಮನೆ ಮನೆಗೆ ಹೋಗಿ ಬೌದ್ಧ ಧರ್ಮವನ್ನು ಪ್ರಸಾರ ಮಾಡುತ್ತಿರುವುದು ದಾಖಲಾರ್ಹವಾದ ಪ್ರಕ್ರಿಯೆಯಾಗಿದೆ.

ಡಾ. ರಾಜಾನಂದ ಮೂರ್ತಿಯವರು 'ದಲಿತರ ಬೌದ್ಧ ಧರ್ಮ ಸ್ವೀಕಾರ' ಮತಾಂತರವಾಗಿರದೇ ಮರಳಿ ಮನೆಗೆ ಹೋಗುವುದಾಗಿದೆ. ಆದರೆ, ಅವರಲ್ಲಿರುವ ಮೂಢನಂಬಿಕೆ, ವಿಜ್ಞಾನ, ಬಡತನ, ನಿರುದ್ಯೋಗ, ಆರ್ಥಿಕ, ಸಾಂಸ್ಕೃತಿಕ, ದಿವಾಳಿತನ, ಬೌದ್ಧಿಕ ಬಡತನಗಳನ್ನು ಅವರನ್ನು ನಾಶ ಮಾಡಿವೆ. ಬೌದ್ಧರಾದ ದಲಿತರಿಗೂ ಮೀಸಲಾತಿ ಇದ್ದರೂ, ಹಿಂದೆ ಮುಂದೆ ನೋಡುವ ವಿದ್ಯಾವಂತ ಜನರೇ ಸಮಸ್ಯೆಯಾಗಿದ್ದಾರೆ'' ಎಂದು ಅಭಿಪ್ರಾಯ ಪಡುತ್ತಾರೆ. ಇಂದಿನ 'ದಲಿತ ಸಂಸ್ಕೃತಿಯೇ ಬೌದ್ಧ ಸಂಸ್ಕೃತಿಯಾಗಿದೆ'. ಅಂಬೇಡ್ಕರ್‌ವಾದ ಬೇರೆನೂ ಆಗಿರದೇ ಅದು ಬುದ್ಧ ಧರ್ಮವೇ ಆಗಿದೆ. ಅಂಬೇಡ್ಕರ್‌ರವರ ಸಿದ್ಧಾಂತಗಳು ಬುದ್ಧ ಧರ್ಮದ ಸಿದ್ಧಾಂತಗಳೇ ಆಗಿದ್ದು ಅವುಗಳನ್ನು ಮತ್ತೇ ಮರಳಿ ತಂದು ಸ್ಥಾಪಿಸಿ 'ಪ್ರಬುದ್ಧ ಭಾರತ' ಮಾಡುವುದೇ ಅವರ

ಆಶಯವಾಗಿತ್ತು. ಆ ದಿಕ್ಕಿನಲ್ಲಿ ತುಂಬಾ ಆಶಾದಾಯಕವಾಗಿದೆ''. (2005, ಜೂನ್ ತಿಂಗಳ ಸಂದರ್ಶನ ನಮೂನೆಯಲ್ಲಿ ದಾಖಲಿಸಿದಂತೆ) ಎಂದು ತಮ್ಮ ಸ್ಪಷ್ಟ ನಿಲುವನ್ನು ವ್ಯಕ್ತಪಡಿಸಿದ್ದಾರೆ. ಇಂತಹ ನಿಲುವೇ ಇಂದಿನ ದಲಿತ - ಬಹುಜನರಲ್ಲಿನ ಪ್ರಬುದ್ಧತೆಯುಳ್ಳವರಲ್ಲಿ ಪ್ರಚಲಿತವಾಗಿರುವ ಸಂಕೇತವಾಗಿ ಇವರು ನಿಲುವುಗಳು ಮಂಡನೆಯಾಗಿರುವುದನ್ನು ಕಾಣುತ್ತೇವೆ.

ಅತ್ಯಂತ, ಕ್ರಿಯಾಶೀಲವಾಗಿ ಕಾರ್ಯನಿರ್ವಹಿಸುತ್ತಿರುವ 'ಬುದ್ಧ ಪ್ರತಿಷ್ಠಾನ' ವು ಒಂದು ಫ್ಯಾಮಿಲಿ ಟ್ರಸ್ಟ್ ಆಗಿ (2002 ರಲ್ಲಿ ಅಗಸ್ಟ 8) ನೋಂದಣಿಯಾಗಿರುವುದನ್ನು ಕಾಣುತ್ತೇವೆ. ದಲಿತರು ಎಲ್ಲರೂ ಒಂದಾಗಬೇಕು. ಒಂದಾದರೇನೆ ಭವಿಷ್ಯ ಎಂದು ವ್ಯರ್ಥಕಾಲಹರಣ ಮಾಡದೇ ದಲಿತ ವಿಮೋಚನೆಯಲ್ಲಿ ತನ್ನ ಪಾಲಿನ ಕರ್ತವ್ಯ ತಾನು ಮಾಡಬೇಕು ಎಂಬ ಉನ್ನತ ಮಾದರಿಯಾಗಿ ಈ ಬೌದ್ಧ ಕುಟುಂಬ ನಮ್ಮ ಮುಂದಿರುವುದು ಮಹತ್ವದ್ದಾಗಿದೆ.

ಈ ಸಂಘವು ಹಮ್ಮಿಕೊಳ್ಳುವ ಕಾರ್ಯಚಟುವಟಿಕೆಳ ಬಗ್ಗೆ ಆಕರ್ಷಿತರಾಗಿ ಬುದ್ಧಗಯಾದ ಮುಖ್ಯ ಬಿಕ್ಕುಗಳಾದ ಪ್ರಜ್ಞಾ ಶೀಲ ಬಂತೇಜ, ಅಮೇರಿಕಾದ ಬಿಕ್ಕು ಭೋಧಿ ಧಮ್ಮ ಶ್ರೀಲಂಕಾ, ಥೈಲ್ಯಾಂಡ್, ನಾಗಪೂರ ಮುಂತಾದ ಹಿರಿಯ ಬಿಕ್ಕುಗಳು ಈ ಸಂಘಕ್ಕೆ ಸಂದರ್ಶಿಸಿದ್ದಾರೆ. 'ತಮ್ಮ ಕುಟುಂಬದ ಆದಾಯದಲ್ಲಿ ಅಂಬೇಡ್ಕರ್‌ರವರ ಆದೇಶದಂತೆ 1/20 ನೇ ಒಂದು ಭಾಗವನ್ನು ಸಂಘದ ಚಟುವಟಿಕೆಗೆ ವಿನಿಯೋಗಿಸುತ್ತಿದ್ದಾರೆ'. (ಅದೇ: ಪುಟ 4) ಯಾವುದೇ ಸರ್ಕಾರಿ ಸೌಲಭ್ಯ ಪಡೆಯದೇ ತಾವೇ ಒಂದು ಉತ್ತಮ ಮಾದರಿಯಾಗಿರುವುದು ಉಲ್ಲೇಖನೀಯವಾಗಿದೆ. ''ಬೌದ್ಧರಾದ ಕೂಡಲೇ ದಲಿತರು ಸಾಂಸ್ಕೃತಿಯಾಗಿ ಶ್ರೀಮಂತರಾಗುತ್ತಾರೆ. ಪ್ರಜಾಪ್ರಭುತ್ವದ ಇಂದಿನ ದಿನಗಳಲ್ಲಿ ಜನಸಂಖ್ಯೆಯ ಸಂಖ್ಯಾಬಲ ತುಂಬಾ ಮಹತ್ತರವಾದುದೆಂಬುದನ್ನು ನಾವೆಲ್ಲ ತಿಳಿಯಬೇಕು. ದಲಿತರೆಂಬ ಜನರೇ ಇರಕೂಡದು. ಎಲ್ಲರೂ ಬೌದ್ಧರಾಗಬೇಕು ಆಗ ಯಾವ ಸಮಸ್ಯೆಗಳು ಇರುವುದಿಲ್ಲವೆನ್ನುವ ಉತ್ಕಟ ವಿಶ್ವಾಸವನ್ನು ಹೊಂದಿ ಡಾ. ರಾಜಾನಂದ ಮೂರ್ತಿ ಬೋಧ, ಎಂ.ಬಿ.ಬಿ.ಎಸ್. ಎಂ.ಎಸ್. ಇವರು ಬೌದ್ಧ ಧಮ್ಮವನ್ನು ಸ್ಪಷ್ಟವಾಗಿ, ಪ್ರಜ್ಞಾವಂತಿಕೆಯ ನೆಲೆಯಲ್ಲಿ ದಲಿತ ವಿಮೋಚನೆಯ ಕಾರ್ಯತಂತ್ರವಾಗಿ ಪರಿಕಲ್ಪಿಸಿ ಕುಟುಂಬದ ಸದಸ್ಯರಾದಿಯಾಗಿ ಆರೋಗ್ಯಕರ ಸಮಾಜದ ನಿರ್ಮಾಣಕ್ಕೆ ಶ್ರಮಿಸುತ್ತಿದ್ದಾರೆ. ಸಮಕಾಲೀನ ಭಾರತದ ಬೌದ್ಧ ಕುಟುಂಬವೊಂದು ಹೇಗೆ ಕರ್ನಾಟಕದಲ್ಲಿ ಬೌದ್ಧ ಧರ್ಮ ಪುನರುಜ್ಜೀವನಕ್ಕೆ ತನ್ನ ಸೇವೆ ಸಲ್ಲಿಸಬಲ್ಲದೆಂಬುದಕ್ಕೆ ಜೀವಂತ ಉದಾಹರಣೆಯಾಗಿ ನಮ್ಮ ಮುಂದಿರುವುದು ಅಷ್ಟೇ ಮಹತ್ವದ್ದಾಗಿದೆ.

★★★★★

## ಸಂದರ್ಭಸೂಚಿ ಹಾಗೂ ಟಿಪ್ಪಣಿಗಳು

| | | |
|---|---|---|
| 1. | Chaube S.P.:A.Chaube, 1999 : | Education in Ancient and Medieval India, Vikas Publications, Delhi p.83. |
| 2. | ಅದೇ : | ಪುಟ ; 105. |
| 3. | ಅದೇ : | ಪುಟ ; 105 - 107. |
| 4. | ಅದೇ : | ಪುಟ ; 111-116. |
| 5. | Mookerji Radha Kumud, 1940 : | Ancient Indian Education, Vol. 2, Cosmo Publications, New Delhi, 1999, p.535. |
| 6. | ಅದೇ : | ಪುಟ ; 536. |
| 7. | ಅದೇ : | ಪುಟ ; 594. |
| 8. | Chaube S.P.: A. Chaube, 1999 : | ಪೂರ್ವೋಕ್ತ ; ಪುಟ ; 98. |
| 9. | Ven. Sanghasena, 2001 : | Amita, Mahabodhi Residential School Information Letter No. 2, Bangalore, P.3. |
| 10. | Mahabodhi School, Mysore 2001 : | Holistic Education for Happiness, and excellence – prospectus Mysore, P-7. |
| 11. | ಅದೇ : | ಪುಟ ; 8. |
| 12. | Ven. Anand , 2001 : | Amita ಪೂರ್ವೋಕ್ತ, ಪುಟ ; 4. |
| 13. | Vardhan B.K.S., 1992 : | "Contributions of Dr. B.R. Ambedkar to Indian Education" in Proceedings Volume of South Indian History Congress, XII[th] Session, Dharwad, p-167. |
| 14. | ಅದೇ : | ಪುಟ ; ಅದೇ. |
| 15. | Lokhande G.S., 1982 : | Dr. Ambedkar Study in Social Democracy, ಪುಟ ; 168. |

16. Rodrigues Valerian, (ed) 2002: The Essential writings of B.R. Ambedkar, Oxford University Press, New Delhi, p-303.

17. ಅದೇ : ಪುಟ ; ಅದೇ.

17. (a) Pandey R.S., 1976 : Principles of Education, Vinod Pustak Mandir, Agra ; p.159.

18. Meera Nanda, 2004 : Prophets Facing Backward, Permanent Black, Delhi. p.182.

19. Zelliot, Eleanor, 1992 : Quoted in Meera Nada, 2004, ಪೂರ್ವೋಕ್ತ ಪುಟ ; 190.

20. ಅದೇ : ಪುಟ ; 193.

21. Jayashree B. Gokhale, 1986 : "The Sociological Effects of Ideological Change: Buddhist Conversion of Maharashtrian Untouchables" (in) Journal of Asian Ethics" Vol.XLV:2, 1986, University of Pennsylvavia, p.280

22. ಅದೇ : ಪುಟ ; 281.

23. ಶಿವರುದ್ರ ಕಲ್ಲೋಳಿಕರ, ಹಿಮ್ಮಡಿ. ವೈ.ಬಿ.(ಸಂ) : ಸ್ವಾಭಿಮಾನ ಶಿಲ್ಪಿ ಬಿ. ಬಸವಲಿಂಗಪ್ಪನವರ ಸ್ಮರಣ ಸಂಚಿಕೆ, ಹುಬ್ಬಳ್ಳಿ - ಧಾರವಾಡ ಮಹಾನಗರ ಪಾಲಿಕೆ, ಹುಬ್ಬಳ್ಳಿ, 2000, ಪುಟ ; 2.

24. ಅದೇ : ಪುಟ ; 2.

25. ಅದೇ : ಡಾ. ಸೋಮಶೇಖರ ಇಮ್ರಾಪೂರ, ಇತರರು ಬಿ. ಬಸವಲಿಂಗಪ್ಪನವರೊಂದಿಗೆ ನಡೆಸಿದ ಸಂದರ್ಶನ. ಪುಟ ; 178,

26. ಅದೇ : ಅದೇ ಪುಟ.

27. ಅದೇ : ಪುಟ ; 6.

28. ಅದೇ : ಪುಟ ; 3.

29. ಕರ್ನಾಟಕ ಬುದ್ಧಧಮ್ಮ ಸಮಿತಿ, ಬೆಂಗಳೂರು ಇವರ ಕರಪತ್ರ 1989.

30. ಹನುಮಯ್ಯ ಬಿ. 2002 : 'ಬಿ. ಬಸವಲಿಂಗಪ್ಪನವರು ನಾನು ಕಂಡಂತೆ' 'ಸ್ವಾಭಿಮಾನಿ ಶಿಲ್ಪಿ' ಪೂರ್ವೋಕ್ತ, ಪುಟ ; 29.

31. ವರ್ಧನ್ ಬಿ.ಕೆ. ಎಸ್., 1991 : ಕರ್ನಾಟಕ ಬುದ್ಧ ಧಮ್ಮ ಸಮಿತಿ, ಬೆಂಗಳೂರಿನ ಕನಿಷ್ಕ ಹೋಟೆಲ್‌ನಲ್ಲಿ ಜರುಗಿದ ಪೂಜ್ಯ ದಲಾಯಿಲಾಮಾ ಸನ್ಮಾನ ಸಮಾರಂಭದ ಪೂರ್ವಭಾವಿ ಸಭೆಯ ಸಂದರ್ಭ, ಬೆಂಗಳೂರು.

32. ಅದೇ : ಅದೇ.

33. ಬಸವಲಿಂಗಪ್ಪ ಬಿ., 1990 : ಬುದ್ಧಮಾರ್ಗ : ಡಾ. ಬಿ.ಆರ್. ಅಂಬೇಡ್ಕರ್‌ರವರ ಹೆಜ್ಜೆ ಗುರುತಿನಲ್ಲಿ, ಕರ್ನಾಟಕ ಬುದ್ಧ ಧಮ್ಮ ಸಮಿತಿ, ಬೆಂಗಳೂರು, ಪುಟ ; 2-3.

34. ಕರ್ನಾಟಕ ಬುದ್ಧ ಧಮ್ಮ ಸಮಿತಿ, ಬೆಂಗಳೂರಿನ ಮೈಸೂರು ಶಾಖೆಯ ಅಧ್ಯಕ್ಷರು (ಹಿಂದಿನ), ಹಿರಿಯ ಬೌದ್ಧ ಉಪಾಸಕರೂ ಆದ ಶ್ರೀ ಸಿ.ರಂಗಸ್ವಾಮಿ ಇವರು ಕಳುಹಿಸಿದ ಕರಪತ್ರ.

35. Rajshekhar Shetty, V.T., 1980: Basavalingappa's Rational Battle, ಬುದ್ಧ ರಕ್ಷಿತ ವಸತಿ ಪ್ರೌಢ ಶಾಲೆ, ಧಾರವಾಡ ಇವರ ಸಂಗ್ರಹದಿಂದ.

36. ಹೊಂಗನೂರು ಗಂಗಯ್ಯ ಎಂ., 1998 : 'ಸ್ವಚ್ಛ ಆಡಳಿತದ ಜೀವಂತ ದಂತಕಥೆ ಬಿ. ರಾಚಯ್ಯ, ಅವರ ಒಂದು ಅವಲೋಕನ' ದಲಿತ ಚಳವಳಿ ಒಂದು ಅವಲೋಕನ (ಸಂ) : ಡಾ. ಮುನಿವೆಂಕಟಪ್ಪ ವಿಚಾರವಾದಿ ಪ್ರಕಾಶನ, ಮೈಸೂರು, ಪುಟ : 43.

37. ಅದೇ : ಪುಟ ; 44.

38. 'ಪ್ರಜಾವಾಣಿ' ದಿನಪತ್ರಿಕೆ ದಿನಾಂಕ : 04.11.2001 ರ ವರದಿ.

39. ಅದೇ ಪತ್ರಿಕೆ : ದಿನಾಂಕ : 25.10.2001.

40. Mahabodhi School, Mysore 2002 : Amita Mahabodhi Residential School, Information letter, No. 2, Mysore, P-7.

41. ನಂದನ ವೈ.ಬಿ., 2003 : ಬುದ್ಧಸಾಸನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಪುಟ (ಕನ್ನಡ ಪ್ರಜ್ಞೆ ವಿಶ್ವ ಪ್ರಜ್ಞೆಯಾಗಿ)

42. Omvedt Gail, 1994 : "Kanshi Ram and Bahujan Samaj Party" in Sharma K.L. (ed)., <u>Caste and Class in India</u>, Rawat Publications, New Delhi, 1994, p.165.

43. Wikpedia Internet Site, 'Neo – Buddhism'.

44. Kumari Mayawati, 2000 : <u>Bahujan Samaj and Uski Rajniti,</u> Media Graphics, New Delhi, p.139-143.

45. ಸಂಯುಕ್ತ ಕರ್ನಾಟಕ ದಿನಪತ್ರಿಕೆ : 15-04-2003.

46. ಡಾ. ಅರ್ಜುನ ಗೊಳಸಂಗಿ, ರಾಜ್ಯಾಧ್ಯಕ್ಷರು, ಕರ್ನಾಟಕ ದಲಿತ ಸಾಹಿತ್ಯ ಪರಿಷತ್, ಹುಲಕೋಟಿ ಇವರು ಕಳುಹಿಸಿದ ಕರಪತ್ರ.

47. ಅದೇ : ಅದೇ.

48. ಮಾವಳ್ಳಿ ಶಂಕರ್, 2003 : ಸಂಶೋಧನಾರ್ಥಿಯ ಸಂದರ್ಶನ ವಿವರಗಳು.

49. ಬೌದ್ಧ ಧಮ್ಮ ದೀಕ್ಷಾ ಸಮಾರಂಭ ಸಮಿತಿ, 2003 : ಬೋಧಿಸತ್ವ ಡಾ. ಬಾಬಾಸಾಹೇಬ ಅಂಬೇಡ್ಕರ್ ರವರ 48 ನೇ ಧಮ್ಮ ಚಕ್ರ ಪ್ರವರ್ತನಾ ದಿನದ ಅಂಗವಾಗಿ ಬೌದ್ಧಧಮ್ಮ ದೀಕ್ಷಾ ಸಮಾರಂಭ, ದಿನಾಂಕ : 14-10-2003, ಕರಾರು ಪತ್ರ, ಪುಟ : 2

50. ಅದೇ : ಪುಟ : 3

51. ರಾಜ್ಯ ಸಂಚಾಲಕರು, ಕರ್ನಾಟಕ ದಲಿತ ಸಂಘರ್ಷ ಸಮಿತಿ.

52. ರಾಜ್ಯ ಸಂಚಾಲಕರು, ಕರ್ನಾಟಕ ದಲಿತ ಸಂಘರ್ಷ ಸಮಿತಿ (ರಿ)., ಅಂಬೇಡ್ಕರ್‌ವಾದ. ಈ ಎರಡೂ ಸಂಘಟನೆಗಳಿಗೆ ರಾಜ್ಯ ಮಟ್ಟದಲ್ಲಿ ಬಹು ಸಂಚಾಲಕತ್ವವಿದೆ.

53. ರಾಜ್ಯಾಧ್ಯಕ್ಷರು, ಕರ್ನಾಟಕ ಸಮತಾ ಸೈನಿಕ ದಳ.





ಅಧ್ಯಾಯ-8

# ಸಮಾರೋಪ ಹಾಗೂ ಮುನ್ನೋಟಗಳು

8.1. ಕರ್ನಾಟಕದಲ್ಲಿ ಧಾರ್ಮಿಕ ಅನುಸಂಧಾನ, ದಲಿತರು ಮತ್ತು ಬೌದ್ಧಧರ್ಮ.

8.2. ಬೌದ್ಧೀಯತೆ, ಜಾತ್ಯತೀತತೆ ಮತ್ತು ಸಾಮಾಜಿಕ ಸಾಮರಸ್ಯ.

8.3. ದಲಿತರ ಸಮಗ್ರ ಅಭಿವೃದ್ಧಿ, ಸಾಂಸ್ಕೃತಿಕ ಸವಾಲುಗಳು ಮತ್ತು ಅವರ ಮಾನವ ಹಕ್ಕುಗಳ ಪ್ರಶ್ನೆಗಳು.

8.4. ಅಧ್ಯಯನದ ಮುನ್ನೋಟಗಳು ಮತ್ತು ಹೊಸ ದೃಷ್ಟಿಕೋನದ ಅವಶ್ಯಕತೆಗಳು.

## ಅಧ್ಯಾಯ-8

# ಸಮಾರೋಪ ಹಾಗೂ ಮುನ್ನೋಟಗಳು

### 8.1. ಕರ್ನಾಟಕದಲ್ಲಿ ಧಾರ್ಮಿಕ ಅನುಸಂಧಾನ, ದಲಿತರು ಮತ್ತು ಬೌದ್ಧಧರ್ಮ :

ಬ್ರಾಹ್ಮಣವಾದದ ಕುತಂತ್ರದಿಂದಾಗಿ, ಬ್ರಾಹ್ಮಣಶಾಹಿಯನ್ನು ಪುರಸ್ಕರಿಸುವ ರಾಜರುಗಳು ಪ್ರಾಬಲ್ಯಕ್ಕೆ ಬಂದಿದ್ದರಿಂದ ಬೌದ್ಧಧರ್ಮ ಕ್ಷೀಣಾವಸ್ಥೆ ತಲುಪಿ ಮತ್ತೆ ಸಮಾಜದಲ್ಲಿ ಗೊಡ್ಡು ಆಚರಣೆಗಳು, ಮೂಢನಂಬಿಕೆಗಳು ಬೆಳೆದವು. ಮತ್ತೆ ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ದಲಿತರು ತಮ್ಮ ಮಾನವ ಹಕ್ಕುಗಳನ್ನು ಕಳೆದುಕೊಂಡು ಜೀವಿಸುತ್ತಿದ್ದ ಸಂದರ್ಭದಲ್ಲಿಯೇ, 12 ಶತಮಾನದಲ್ಲಿ ಕರ್ನಾಟಕದಲ್ಲಿ ಜಗತ್ತಿನಲ್ಲಿಯೇ ತುಂಬಾ ವಿಶಿಷ್ಟವೆನ್ನಬಹುದಾದ ಸಮಾಜೋ-ಧಾರ್ಮಿಕ ಚಳವಳಿ ಕ್ರಾಂತಿಯೋಗಿ ಬಸವಣ್ಣನವರ ನಾಯಕತ್ವದಲ್ಲಿ ಪ್ರಾರಂಭವಾಯಿತು. 'ದಯವೇ ಧರ್ಮದ ಮೂಲವಯ್ಯ' ಎಂಬ ಸರಳೀಕರಿಸಿದ 'ಧರ್ಮ' ವ್ಯಾಖ್ಯಾನ, ಸಂಸ್ಕೃತ ಭೂಯಿಷ್ಟ ಮಂತ್ರಗಳನ್ನು ಬಾಯಿಪಾಠ ಮಾಡಿಕೊಂಡು ಹೊಟ್ಟೆ ಹೊರೆಯುತ್ತಿದ್ದ ಪುರೋಹಿತ ವರ್ಗಕ್ಕೆ ಅಪಥ್ಯವಾಯಿತು. ಬಸವಣ್ಣನವರು 'ಕಮ್ಯುನಿಸಂ'ಗೂ ವಿಭಿನ್ನವಾದ ಆರ್ಥಿಕ ಸಮಾನತೆಯ, ಆದರೆ 'ಜಾತಿ ಅಸಮಾನತೆ' ನಿವಾರಣೆಯೇ ಪ್ರಧಾನವಾದ ಕಾರ್ಯತಂತ್ರಗಳನ್ನು ರೂಪಿಸಿ ಪಶುಪಕ್ಷಿಗಳಿಗಿಂತಲೂ ಹೀನಾಯವಾದ ಸ್ಥಾನಕ್ಕೆ ತಳ್ಳಲ್ಪಟ್ಟ ದಲಿತರಿಗೆ, ಶೂದ್ರರಿಗೆ ಮಾನವ ಹಕ್ಕುಗಳನ್ನು ದೊರಕಿಸಲು ಬೃಹತ್ ಆಂದೋಲನವನ್ನೇ ರೂಪಿಸಿದರು. ಇದು ಕರ್ನಾಟಕ, ಭಾರತ, ಅಷ್ಟೇ ಏಕೆ, ಜಾಗತಿಕ ಚರಿತ್ರೆಯಲ್ಲಿ ವಿನೂತನವಾದ 'ಧಾರ್ಮಿಕ, ಸಾಂಸ್ಕೃತಿಕ ವಿಮೋಚನೆಯ' ಕಾರ್ಯತಂತ್ರವಾಗಿದೆ. ಅಂತರ್ಜಾತೀಯ ವಿವಾಹ, ಕಾಯಕ ಗೌರವ, ದಾಸೋಹ ಪರಿಕಲ್ಪನೆಗಳು ಸಮಾಜದಲ್ಲಿ ತುಳಿತಕ್ಕೆ ಒಳಗಾದ ಶೋಷಿತರನ್ನು ಜಾತಿ ಆಧಾರಿತ ದಬ್ಬಾಳಿಕೆ, ಅಮಾನುಷತೆ, ಹಿಂಸೆಗಳಿಂದ ಮುಕ್ತಗೊಳಿಸುವುದಾಗಿತ್ತು. ಆದರೆ ದುರದೃಷ್ಟವಶಾತ್ ಹನ್ನೆರಡನೇ ಶತಮಾನದ ಈ ಶರಣರ ಸಮಾಜೋ-ಧಾರ್ಮಿಕ ಚಳವಳಿ ತನ್ನ ಸ್ಥಿರತೆ ಕಾಯ್ದುಕೊಳ್ಳುವಲ್ಲಿ ವಿಫಲವಾಗಿ ಕುಟಿಲಶಾಹಿಗಳ ಕಾರ್ಯ ತಂತ್ರಕ್ಕೆ ಬಲಿಯಾಗಿ, ಬಸವಣ್ಣನವರ ಧಿಡೀರ್ ನಿರ್ಗಮನದಿಂದ ನಿರೀಕ್ಷಿತ ಉದ್ದೇಶಗಳ ಸಾಧನೆಗೆ ಹಿನ್ನೆಡೆಯಾಯಿತು. ಮತ್ತೆ ಶೂನ್ಯತೆ ನಿರ್ಮಾಣಗೊಂಡು ಯಾವುದೇ ಸಂಘಟನಾತ್ಮಕ ಸ್ವರೂಪವಿಲ್ಲದೆ ಶರಣ ಚಳವಳಿ ಕ್ಷೀಣಿಸಿತು. ಹಲವಾರು ರಾಜರುಗಳು ಮತ್ತೆ ಪುರೋಹಿತಶಾಹಿಗಳ ಪ್ರಭಾವಕ್ಕೆ ಒಳಗಾಗಿ ಧರ್ಮಧರ್ಮಗಳಲ್ಲೇ ತಿಕ್ಕಾಟಗಳು ಪ್ರಾರಂಭವಾಗಿ ದಲಿತರ ವಿಮೋಚನಾ ಪ್ರಕ್ರಿಯೆಗೆ, ಜನಸಾಮಾನ್ಯರ ತುಡಿತಗಳಿಗೆ ಸ್ಥಾನ ಇಲ್ಲದೇ ಹೋಯಿತು. ಸಾಂಸ್ಕೃತಿಕ ಶೂನ್ಯತೆ ಸೃಷ್ಟಿಯಾಯಿತು. ಕ್ರಾಂತಿಕಾರಿ ವಚನಗಳನ್ನು ಜನಸಾಮಾನ್ಯರಿಂದ ಕಸಿದುಕೊಂಡು ಮಠಮಾನ್ಯರು ತಮ್ಮ ಗದ್ದುಗೆ ಕೆಳಗೆ ತಳ್ಳುತ್ತಾ ಸಮಾನತೆಯ ತತ್ವಗಳನ್ನು ಮರೆಮಾಚುತ್ತಾ ಬಂದರು. ಬಸವಣ್ಣನವರ ಉಪದೇಶಗಳಿಗೆ ಭಿನ್ನವಾದ ಧಾರ್ಮಿಕ ಆಚರಣೆಗಳು ಮತ್ತೆ ದಲಿತರನ್ನು ಆ ಸಾಂಸ್ಕೃತಿಕ ವ್ಯವಸ್ಥೆಯಿಂದ ಹೊರಗೆ ತಳ್ಳುತ್ತ ಬಂದವು. ಧರ್ಮ ಧರ್ಮಗಳ ಪೈಪೋಟಿಗಳು ಶೈವ, ಜೈನ, ವೈಧಿಕರ ಘರ್ಷಣೆಗಳು ಹೆಚ್ಚಾಗಿ 'ಜಾತಿ ವ್ಯವಸ್ಥೆ' ಪ್ರಾಬಲ್ಯ ಪಡೆಯಿತು.

ಪ್ರಾಚೀನ ಕಾಲದಲ್ಲಿ ಬೌದ್ಧ ರಾಜರುಗಳು ಅವನತಿ ಹೊಂದಿದಾಗ 'ಶುಂಗವಂಶದ ದೊರೆ ಪುಷ್ಯಮಿತ್ರ ಮತ್ತು ಅವನ ಸೈನಿಕರು ಹೇಗೆ ಬಿಕ್ಕುಗಳನ್ನು ಸಾಮೂಹಿಕವಾಗಿ ಭೇಟಿಯಾಡಿ ಹಲ್ಲೆಗೈಯಲಾಯಿತೋ ಹಾಗೆ,

12 ನೇ ಶತಮಾನ ಬಸವಣ್ಣನವರ ಸಮಾಜೋ-ಧಾರ್ಮಿಕ ಆಂದೋಲನದಲ್ಲಿನ ಪ್ರಮುಖರನ್ನು, ಸಮಾನತೆ ಪ್ರತಿಪಾದಿಸುವ ಶರಣರನ್ನು ಹಲ್ಲೆಗೈಯ್ದಿರುವ ಸಾಧ್ಯತೆಗಳಿವೆ. ಈ ರೀತಿಯ ಕಗ್ಗೊಲೆಗಳ ಬೆನ್ನಲ್ಲೇ, ಸಮಾನತೆ ಸಾರುವ ವಚನ ಸಾಹಿತ್ಯವನ್ನು ನಿರ್ನಾಮ ಮಾಡುವ ಪ್ರಯತ್ನಗಳನ್ನು ಮಾಡಲಾಯಿತು. ಗುಹೆ ಗವ್ವರಗಳಲ್ಲಿ ಉಳಿದು ಬಂದ ವಚನ ಸಾಹಿತ್ಯದ ಬಗ್ಗೆ ಸಾಕಷ್ಟು ಪುರಾವೆಗಳು ನಮ್ಮಲ್ಲಿವೆ. 'ಕುಮಾರ ಕುಕ್ಕಯ್ಯಪೋಳ' ಅವರು ಕಲ್ಯಾಣದ ಶರಣ ದುರಂತವನ್ನು ಪುರಾಣ ರೂಪದಲ್ಲಿಯೇ ಬರೆಯುತ್ತಾ 'ಕೈಗೆ ಸಿಕ್ಕ ಎಲ್ಲ ಶರಣರನ್ನು ಕೊಚ್ಚಿ ಹಾಕಿದರು. ಗವಿಯ ಒಳಗಡೆ ಸಿಕ್ಕುಬಿದ್ದವರ ಸಾಮೂಹಿಕ ಕಗ್ಗೊಲೆಯಾಯಿತು. ನೂರಾರು ಜನ ಶರಣರು ಹುತಾತ್ಮರಾದರು. ಹೀಗೆ, ವಿಶ್ವ ಧರ್ಮವಾಗಬೇಕಿದ್ದ ಬಸವಣ್ಣನವರ ಧರ್ಮ, ಆ ಕೊಳ್ಳದಲ್ಲಿಯ ಮಹಾ ಮನೆಯೆಂಬ ಗವಿಯಲ್ಲಿ ಭೂಗತವಾಯಿತು. . . ಇಲ್ಲಿಗೆ ಮುಗಿಯಿತು ಕಲ್ಯಾಣ ಶರಣರ ದುರಂತ ಪುರಾಣ . . . ಬಸವ ಧರ್ಮಕ್ಕೆ ಜಯವಾಗಲಿ'[1] ಎಂದು ತಮ್ಮ ಚಿಂತನಪರ ಪುರಾಣ ಪ್ರಬಂಧ ಮುಕ್ತಾಯಗೊಳಿಸುತ್ತಾರೆ. ಹೀಗೆ ಬಸವಣ್ಣನವರು ಪ್ರತಿಪಾದಿಸಿದ, ವೈದಿಕ ವ್ಯವಸ್ಥೆಗೆ ಪರ್ಯಾಯವಾಗಿ ರೂಪಿಸಿದ ಎಲ್ಲ ವರ್ಗರಾದರೂ ಮುಕ್ತವಾಗಿ ಒಳಗೊಳ್ಳಬಹುದಾಗಿದ್ದ 'ಧಾರ್ಮಿಕ-ಸಾಂಸ್ಕೃತಿಕ' ಆವರಣ ಸ್ಥಿತ್ಯಂತರಕ್ಕೆ ಒಳಗಾಗಿ ಬಸವಣ್ಣನ ಪರಿಕಲ್ಪನೆಗಳು ರೂಪಾಂತರಗೊಂಡು ಕಾಯಕಗಳು ಬರುಬರುತ್ತಾ ಜಾತಿಗಳಾಗಿ ಪರಿವರ್ತಿತವಾದವು. ವೈದಿಕರಿಗಿಂತ ಮಠಗಳ ಪೌರೋಹಿತ್ಯದಲ್ಲಿ ಕೆಳಜಾತಿಗಳ ಜನರು ನಿರ್ಲಕ್ಷ್ಯಕ್ಕೆ ಒಳಗಾದರು. ವೀರಶೈವರಿಂದಲೂ ಜಾತೀಯತೆಯ ಆಚರಣೆಗಳು ನಡೆದು ದಲಿತರು ತಮ್ಮನ್ನು ಆಧರಿಸುವ ಯಾವುದೇ ಧಾರ್ಮಿಕ, ಸಾಂಸ್ಕೃತಿಕ ಆವರಣಗಳಲ್ಲಿದೆ ಧರ್ಮಹೀನ ಸ್ಥಿತಿಗೆ ತಳ್ಳಲ್ಪಟ್ಟರು. ಈ ರೀತಿಯ ಪ್ರಕ್ರಿಯೆಗೆ ಪ್ರತ್ಯೇಕ ವಿಶ್ಲೇಷಣೆಯ ಅಗತ್ಯವಿದೆಯಾದರೂ ಪ್ರಸ್ತುತ ಅಧ್ಯಯನದ ಆಶಯಗಳ ಹಿನ್ನೆಲೆಯಲ್ಲಿ ಈ ರೀತಿಯ ಧಾರ್ಮಿಕ ಅನುಸಂಧಾನ ಮುರಿದು ಬಿದ್ದು, ಮತ್ತೆ ದಲಿತರ ಸಾಂಸ್ಕೃತಿಕ ಶೂನ್ಯತೆಗಳನ್ನು ಅನುಭವಿಸಿದ ಪ್ರಕ್ರಿಯೆಯ ಕುರಿತು ಅನಿವಾರ್ಯವಾಗಿ ಪ್ರಸ್ತಾಪಿಸಲೇಬೇಕಾಗಿದೆ. ಬಸವಣ್ಣ ಪ್ರತಿಪಾದಿಸಿದ 'ಧರ್ಮ' ಪುರೋಹಿತಶಾಹಿ ಪ್ರಣೀತವಾದ, ಮಠಮಾನ್ಯರ ಗದ್ದುಗೆ ಕೆಳಗೆ ತಳ್ಳಲ್ಪಟ್ಟಿದ್ದನ್ನು ಪ್ರತಿಭಟಿಸಿಯೇ ಮಾತೆ ಮಹಾದೇವಿಯವರ ನೇತೃತ್ವದಲ್ಲಿ 'ಬಸವ ಧರ್ಮ' ಪರಿಕಲ್ಪನೆಯ ಪ್ರಗತಿಪರ ಲಿಂಗಾಯತ ಧರ್ಮ ಪ್ರಚಲಿತಕ್ಕೆ ಬಂದಿದೆ. ಹೀಗೆ ಪ್ರಚಲಿತಕ್ಕೆ ಬಂದ 'ಬಸವಧರ್ಮ' ದ ಪರಿಕಲ್ಪನೆಯೊಂದಿಗೆ ಇಂದು ಆಂಧ್ರಪ್ರದೇಶ, ಮಹಾರಾಷ್ಟ್ರ, ಗೋವಾ ಮತ್ತು ತಮಿಳುನಾಡುಗಳಲ್ಲಿ ಸಂಘಟನೆಗಳನ್ನು ಹೊಂದಿ ಇಂದಿನ ಸಂದರ್ಭದಲ್ಲಿ 'ಭಾರತೀಯ ಧರ್ಮಗಳ ಮಹಾಸಂಘ'[2] (Federation of Indian Religions) ಸ್ಥಾಪಿಸಿ, ಬೌದ್ಧಧರ್ಮವನ್ನೂ ಒಳಗೊಂಡು ಬಸವಣ್ಣನವರು ಪ್ರತಿಪಾದಿಸಿದ ಜಾತಿ ರಹಿತ, ವರ್ಗರಹಿತ ಸಮಾನತೆಯ ತತ್ವಗಳನ್ನು ಪ್ರಚಾರ ಮಾಡುತ್ತಿರುವುದನ್ನು ಕಾಣುತ್ತೇವೆ. ಆ ಮೂಲಕ ಧಾರ್ಮಿಕ ಅನುಸಂಧಾನದ ಮೂಲಕ ಎಲ್ಲ ವರ್ಗಗಳ ಬೆಂಬಲದೊಂದಿಗೆ ಸಮಾನತೆಯ ಸ್ಥಾಪನೆಗೆ ಪ್ರಯತ್ನಿಸುತ್ತಿರುವ ಪ್ರಯತ್ನಗಳನ್ನು ಕಾಣುತ್ತೇವೆ.

## ಬುದ್ಧ ಬಸವಣ್ಣ ಮತ್ತು ಅಂಬೇಡ್ಕರವರ ಸಮನ್ವಯ ಹಾಗೂ ದಲಿತ ವಿಮೋಚನೆ:

ಕರ್ನಾಟಕದಲ್ಲಿ ಕೆಲವು ಮಠಗಳು, ಮಠಾಧೀಶರಾದರೂ ಬಸವಣ್ಣನವರ ನಿಜವಾದ ತತ್ವಗಳ ಅಡಿಯಲ್ಲಿ ದಲಿತಪರ ನಿಲುವುಗಳನ್ನು ಹೊಂದಿರುವುದು ಸಮಾಧಾನ ಪಡುವ ಸಂಗತಿಯಾದರೂ ಈ ಪ್ರಯತ್ನಗಳಿಗೆ ವ್ಯಾಪಕತೆ ಮತ್ತು ದಲಿತ ವಿಮೋಚನೆಯ ಬಗ್ಗೆ ಸ್ಪಷ್ಟ ನಿಲುವು ಮತ್ತು ನಿರ್ದಿಷ್ಟ ಕಾರ್ಯ ಕ್ರಮಗಳಲ್ಲಿರುವುದನ್ನು ಕಾಣಬಹುದಾಗಿದೆ. ಕೆಲವು ಪ್ರಗತಿಪರ ಮಠಾಧೀಶರು 'ದಲಿತ ವರ್ಗದವರನ್ನೇ ಮಠಗಳ

ಪೀಠಾಧ್ಯಕ್ಷರನ್ನಾಗಿ ಮಾಡುವಲ್ಲಿ ಸಮಾನತೆಯ ತತ್ವಗಳ ಅನುಷ್ಠಾನ ಮತ್ತು ಪ್ರತಿಪಾದನೆ ಕಂಡು ಬರುತ್ತಿದೆಯಾದರೂ ಇದು ಒಟ್ಟು ದಲಿತರ ಸಾಂಸ್ಕೃತಿಕ, ಧಾರ್ಮಿಕ ಬದುಕಿಗೆ ಆಪತ್ತೆಯನ್ನು ಸೃಷ್ಟಿಸುವಲ್ಲಿ ಸಂಕೇತವಾಗಿ ಮಾತ್ರ ಕಾಣುತ್ತಿದೆ.

'ಬಸವಣ್ಣನವರ ಜನನವೇ ಮಹಾಘಟನೆ'[3] ಎಂದು ಕರ್ನಾಟಕದ ಪ್ರಮುಖ ವೈಚಾರಿಕ ಸಾಹಿತಿ, ಕುವೆಂಪುರವರ 'ಶೂದ್ರ ಪ್ರಜ್ಞೆಯ' ಮುಂದುವರಿಕೆಯಾದ ದೇ. ಜವರೇಗೌಡ ಅವರು ಅಭಿಪ್ರಾಯ ಪಡುತ್ತಾರೆ. ಆದರೆ ಬಸವಣ್ಣನವರ ಸಂದೇಶಗಳು ಜಾಗತಿಕ ವ್ಯಾಪ್ತಿಯನ್ನು ಪಡೆಯಲಿಲ್ಲ, ಅವರ ಸಾಧನೆ ಸಿದ್ಧಿಗಳು, ಸಿದ್ಧಾಂತ ಸಂದೇಶಗಳು ಕನ್ನಡ ನಾಡಿನ ಗಡಿಯಿಂದಾಚೆ ಹೋಗಲಿಲ್ಲ.[4] ಹೀಗಾಗಿ ಬುದ್ಧ ಕ್ರಿಸ್ತರಿಗೆ ದೊರೆತಂತೆ ಜಾಗತಿಕ ವ್ಯಾಪ್ತಿ ದೊರೆಯಲಿಲ್ಲವೆಂದು ಅಭಿಪ್ರಾಯ ಪಡುತ್ತಾರೆ. ಆದರೆ, 'ಸ್ತ್ರೀ, ದಲಿತೋದ್ಧಾರದ ಮೂಲಕ ಅವರು ಮಾನವ ಹಕ್ಕುಗಳ ಹರಿಕಾರರಾದರೆಂದು'[5] ದೇಜಗೌ ಬಸವಣ್ಣನವರ ಸಿದ್ಧಾಂತದ ಬಗ್ಗೆ ಮಹತ್ವದ ಅರ್ಥೈಸುವಿಕೆ ದಾಖಲಿಸುತ್ತಾರೆ.

ಬಂಡಾಯ ಸಾಹಿತಿ ಡಾ. ಸರಜೂ ಕಾಟ್ಕರ್ ಅವರು 'ಬುದ್ಧ ಮತ್ತು ಬಸವರಿಬ್ಬರಿಗೂ ಮನುಷ್ಯನ ಅಸ್ತಿತ್ವ ಮಹತ್ವದ್ದಾಗಿತ್ತು. ಇಬ್ಬರೂ ಸಾಮಾಜಿಕ ಕ್ರಾಂತಿಕಾರರಾಗಿದ್ದರೂ, ಇಬ್ಬರೂ ಪ್ರಜಾಪ್ರಭುತ್ವವಾದಿಗಳಾಗಿದ್ದರು. ಇಬ್ಬರ ಆಸಕ್ತಿಯ ಕ್ಷೇತ್ರ ಮನುಷ್ಯನೇ ಆಗಿದ್ದು, ನಾನಾ ನಮೂನೆಯ ಶೋಷಣೆಗೆ ಒಳಗಾಗಿದ್ದ ಮನುಷ್ಯನನ್ನು ಸ್ವತಂತ್ರಗೊಳಿಸಿ 'ಅವನಿಗೆ ಅವನದ್ದೇ ಆದ ಗುರುತನ್ನು' ನೀಡುವಲ್ಲಿ ಇಬ್ಬರೂ ಶ್ರಮಿಸಿದ್ದಾರೆ. ಇಬ್ಬರೂ ದೇವಭಾಷೆಯಾದ ಸಂಸ್ಕೃತವನ್ನು ಧಿಕ್ಕರಿಸಿ ಜನಸಾಮಾನ್ಯರ ಭಾಷೆಯನ್ನು ತಮ್ಮ ವಿಚಾರಗಳ ಮಂಡನೆಗೆ ಉಪಯೋಗಿಸಿದರು. ಬುದ್ಧ ಪಾಲಿ ಭಾಷೆಯಲ್ಲಿ ತನ್ನ ವಿಚಾರಗಳನ್ನು ಹೇಳಿದರೆ, ಬಸವಣ್ಣನವರು ಕನ್ನಡವನ್ನು ಉಪಯೋಗಿಸಿದರು. ಇದರಿಂದ ಇಬ್ಬರೂ ಜನ ಸಾಮಾನ್ಯರ ಹೃದಯಕ್ಕೆ ಹತ್ತಿರವಾದರು'[6] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅವರು ಮುಂದುವರೆದು ಅಂಬೇಡ್ಕರ್ ಬಸವಣ್ಣನವರ ಬಗ್ಗೆ ವಿವರಿಸುತ್ತ

'ರಾಜಕೀಯ ಅಧಿಕಾರದ ಮೂಲಕ ಇಬ್ಬರೂ ಸಮಾನತೆಯನ್ನು ತರಲು ಪ್ರಯತ್ನಿಸಿದರೂ ಪ್ರಭುತ್ವಕ್ಕೆ ಎಂದೂ ತಲೆಬಾಗಲಿಲ್ಲ, ಬಸವಣ್ಣನವರು ರಾಜಕೀಯ ಅಧಿಕಾರವನ್ನು ತಮ್ಮ ಎಡಪಾದದಿಂದ ಒದ್ದರೆ ಅಂಬೇಡ್ಕರ್‌ರವರು ಅದನ್ನು ತಮ್ಮ ಬಲಪಾದದಿಂದ ಒದ್ದಿದ್ದಾರೆ.[7] ಎಂದು ಕಾಟ್ಕರ್ ವಿಶ್ಲೇಷಿಸುತ್ತ ಅಂಬೇಡ್ಕರ್ ಬಸವಣ್ಣನವರು ಹಿಂದೂ ವೈದಿಕ ಧರ್ಮದ ವಿರುದ್ಧ ತೆಗೆದುಕೊಂಡ ನಿಲುವುಗಳನ್ನು ತುಲನಾತ್ಮಕವಾಗಿ ನೋಡುತ್ತಾ 'ನಾನು ಹಿಂದೂವಾಗಿ ಹುಟ್ಟಿರುವೆ, ಆದರೆ ಹಿಂದೂವಾಗಿ ಸಾಯಲಾರೆ' ಎಂದು ಅಂಬೇಡ್ಕರ್ ಘೋಷಿಸಿದರು. ಹಾಗೆಯೇ ಮಾಡಿದರು ಕೂಡ ಬಸವಣ್ಣನವರು ಬ್ರಾಹ್ಮಣರಾಗಿ ಹುಟ್ಟಿದರೂ ಅವರೂ ಕೂಡ ಅದನ್ನು ಕಳೆದುಕೊಂಡು ವೀರಶೈವರಾದರು. ಈ ಇಬ್ಬರೂ ಮಹನೀಯರ ನಡುವೆ ಕಾಲದ ಕಂದಕವಿದ್ದರೂ ಅವರ ವಿಚಾರಗಳು ತುಂಬ ಹತ್ತಿರ ಹತ್ತಿರವಾಗಿಯೇ ಹರಿಯುತ್ತವೆ[8] ಎಂದು ಹೇಳುತ್ತಾರೆ. 'ಬಸವಣ್ಣ ಮತ್ತು ಅಂಬೇಡ್ಕರ್‌ವರ ಅಸ್ಪೃಶ್ಯತೆಯ ನಿವಾರಣೆಯ ಪ್ರಯತ್ನಗಳ' ಕುರಿತು ಮಹತ್ವದ ಸಂಶೋಧನೆ ಮಾಡಿರುವ ಡಾ. ಶಿವರುದ್ರ ಕಲ್ಲೋಳಿಕರ ತಳವರ್ಗದ ನೆಲೆಯ 'ವಿಶ್ಲೇಷಣೆ ಮಾಡುತ್ತ ಸಾಮಾಜಿಕ ಜಡತೆಯನ್ನು ಅಸಮಾನತೆಯನ್ನು ಹೋಗಲಾಡಿಸಲು ಬಸವಣ್ಣ ಸುಸಂಬದ್ಧ

ಸಂಘಟನೆಯನ್ನು ಕಟ್ಟಿ ಚಳುವಳಿ ರೂಪಿಸಲು, ಜಾತಿಯಿಂದ ಅಪಮಾನಿತರಾದ ಕೆಳವರ್ಗದ ಶೋಷಿತರನ್ನೇ ಮುಂಚೂಣಿಗೆ ತಂದು ನಿಲ್ಲಿಸಬೇಕಾಯಿತು. ಅವರಲ್ಲಿರುವ ಕೀಳರಿಮೆಯನ್ನು ಕಿತ್ತೊಗೆಯಬೇಕಾಯಿತು. ಅಷ್ಟೇ ಸಂಪ್ರದಾಯಸ್ಥರ ಮತ್ತು ಮೇಲ್ಜಾತಿಗಳ ವಿರೋಧಗಳನ್ನು ಕಟ್ಟಿಕೊಳ್ಳಬೇಕಾಯಿತು. ಇದ್ಯಾವುದಕ್ಕೂ ಬಸವಣ್ಣ ಹಿಂಜರಿಯಲಿಲ್ಲ. ಅದಕ್ಕಾಗಿ ಕೆಳಜಾತಿಗಳಿಗೆ ಆತ್ಮಾಭಿಮಾನ (Self Respect) ತುಂಬಲು ಮುಂದಾದರು. ಅವರಲ್ಲಿನ ಕೀಳರಿಮೆಯನ್ನು ಕಂಡು,

"ಸೆಟ್ಟಿಯೆಂಬೆನೆ ಸಿರಿಯಾಳನ?
ಮಡಿವಾಳನೆಂಬೆಗೆ ಮಾಚಯ್ಯನ?
ಡೋಹರನೆಂಬೆನೆ ಕಕ್ಕಯ್ಯನ?
ಮಾದರನೆಂಬೆನೆ ಚೆನ್ನಯ್ಯನ?

ಆನು ಹಾರುವನೆಂದಡೆ ಕೂಡಲಸಂಗಮ ನಗುವನಯ್ಯಾ' ಎಂದೂ, ಕೆಳಜಾತಿಗಳು ಕೀಳಲ್ಲ, ಕೆಳ ವರ್ಗದಲ್ಲಿ ಜನಿಸಿದ ಆ ಜನ ಬ್ರಾಹ್ಮಣರಿಗಿಂತಲೂ ಸುಜ್ಞಾನಿಗಳೂ, ಮಹನೀಯರೂ ಆಗಿದ್ದಾರೆಂಬುದು ಅಭಿಪ್ರಾಯ. ತನ್ನ ಬ್ರಾಹ್ಮಣ ಸ್ಥಾನವನ್ನು ಕನಿಷ್ಠಕ್ಕೆ ತಂದು ನಿಲ್ಲಿಸಿ ಸಚ್ಚಾರಿತ್ರ್ಯದ ಕೆಳಜಾತಿಗಳನ್ನು ಉನ್ನತಕ್ಕೇರಿಸುವುದರಿಂದ ಮೈ ಚಳಿಬಿಟ್ಟು ಚಳುವಳಿಯಲ್ಲಿ ಪಾಲ್ಗೊಳ್ಳಲು ಮಾನಸಿಕ ಸ್ಥೈರ್ಯವನ್ನು ಬಸವಣ್ಣ ತುಂಬಿದರು.[9] ಎಂದು ದಾಖಲಿಸುತ್ತ ಬಸವಣ್ಣನವರು ಬುದ್ಧನ ಹಾಗೆ 'ಮನುಷ್ಯನ ಘನತೆಗೆ' (Human Dignity) ಪ್ರಾಮುಖ್ಯತೆ ಕೊಟ್ಟ ಅಂಶವನ್ನು ಅಂಬೇಡ್ಕರ್‌ರವರಂತೆ ದಲಿತರಲ್ಲಿನ ಕೀಳರಿಮೆ ಮನೋಭಾವನೆಯನ್ನು (Inferiority Complex) ಹೋಗಲಾಡಿಸಲು ಮಾಡಿದ ಮಹಾತ್ಕಾರ್ಯವನ್ನು ವಿಶ್ಲೇಷಿಸಿದ್ದಾರೆ.

ಕರ್ನಾಟಕದವೀರಶೈವ ಜಾತಿಗಳು ದಲಿತರನ್ನು ನಿಜವಾದ 'ಬಸವ ಧರ್ಮ' ದಿಂದ ಅಂತರದಲ್ಲಿಡಲು ಪ್ರಯತ್ನಿಸಿದರೂ ಕೂಡ, ದಲಿತರು ಬಸವಣ್ಣನವರ 'ಸಮಾಜೋ-ಧಾರ್ಮಿಕ' ಕ್ರಾಂತಿಯ ಆಶಯಗಳನ್ನು ತಮ್ಮ ವಿಮೋಚನೆಗೆ ತಳಹದಿಯನ್ನಾಗಿ ಮಾಡಿಕೊಳ್ಳುವ ದಲಿತ ಶಕ್ತಿಗಳ ಯತ್ನಗಳೂ ಅಷ್ಟೇ ಪ್ರಖರವಾಗಿರುವುದನ್ನು ಕಾಣುತ್ತೇವೆ. ಏಳೆಂಟು ಶತಮಾನಗಳ ನಂತರ ಅಂಬೇಡ್ಕರ್‌ವರು ದಲಿತರಲ್ಲಿ ಬೆಳೆಸಿದ ವೈಚಾರಿಕ ಚಿಂತನೆಯ ಆಳಗಳಿಂದಲೇ ಇಂತಹ ಪ್ರಯತ್ನಗಳಿಗೆ, ಬಸವಪರ ಧೋರಣೆಗಳಿಗೆ ಕಾರಣವಾಗಿರುವುದನ್ನು ಅಲ್ಲಗಳೆಯಲಾಗದು. ಕರ್ನಾಟಕದ ಮಟ್ಟಿಗೆ ಇದು ವಿಶಿಷ್ಟವಾದ ಆಯಾಮ ಕೂಡ. ಹಿಂದೂ ದೇವಸ್ಥಾನಗಳ ಹೊರಗಡೆ ಸ್ಥಾನ ಪಡೆದ 'ನಂದಿ' ಮತ್ತು ಅಮವಾಸ್ಯೆಗಳಲ್ಲಿ ಪೂಜೈಸಲ್ಪಡುವ 'ಮಣ್ಣಿನ ಎತ್ತು' ಗಳ ಮೂಢ ಅಂಧಾನುಚರಣೆಗಳಿಗೆ ಬಸವಣ್ಣನವರನ್ನು ಸೀಮಿತಗೊಳಿಸಿ ಕನ್ನಡದ ಪಠ್ಯಪುಸ್ತಕಗಳಲ್ಲೂ 'ಬಸವನ ರಥ' ಎಳೆಸಿದ ವೈಧಿಕರ ಹುನ್ನಾರಗಳನ್ನು ದಲಿತ - ಬಂಡಾಯದ ಅನೇಕ ವಕ್ತಾರರು ಖಂಡಿಸುತ್ತಲೇ ಬಂದಿರುವುದನ್ನು ಕಾಣುತ್ತೇವೆ. ಮಹೇಶ ತಿಪ್ಪಶೆಟ್ಟಿಯವರು ಈ ಪ್ರಕ್ರಿಯೆಯನ್ನು ಗುರುತಿಸುತ್ತಾ ಬಂಡಾಯ ಸಾಹಿತಿಗಳು 'ಎತ್ತಿನ ಮಿತ್' ದಿಂದ ಬಸವಣ್ಣನವರನ್ನು ಬಿಡುಗಡೆಗೊಳಿಸಿ ಹನ್ನೆರಡನೇ ಶತಮಾನವನ್ನು ವೈಚಾರಿಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ವಿವರಿಸುವ ಯತ್ನ ಮಾಡಿದ್ದಾರೆ'[10] ಎಂದು ಹೇಳುತ್ತಾ ಇವತ್ತಿನ ವೀರಶೈವ 'ದಲಿತ ಮೂಲ'

ವನ್ನು ಮರೆತಿದೆ, ವೀರಶೈವದ ಹಲವು ಮೇಲಿನ ಉಪಜಾತಿಗಳು ದಲಿತ ವಿರೋಧಿಗಳಾಗಿವೆ[11] ಎಂದು ಅಭಿಪ್ರಾಯ ಪಡುತ್ತಾರೆ. ಅದೇ ರೀತಿ 'ಬೇಡ ಜಂಗಮ ಹಣೆಪಟ್ಟಿ ಬೇಡುವ ಲಿಂಗಾಯತರಿಗೂ ದಲಿತ ಉತ್ತರಾಧಿಕಾರಿ ಬೇಕಾಗಿಲ್ಲ'[12] ಎಂದು ಪ್ರಚಲಿತ ವಿದ್ಯಮಾನಗಳ ಕುರಿತು ಗೊಂದಲಗಳ ಕುರಿತು, ಮಹತ್ವದ ವಿಶ್ಲೇಷಣೆ ನೀಡುತ್ತಾರೆ.

ಬಸವಣ್ಣನವರ ಚಲನಶೀಲ ಸ್ವರೂಪದ ಹಾಗೂ 'ದಲಿತ ವಿಮೋಚನೆ'ಗೆ ಒಂದು ಉತ್ತಮ 'ಮಾದರಿ' ಯಾಗಬಹುದಾಗಿದ್ದ 'ಬಸವ ಧರ್ಮ' ಮಠ ಮಾನ್ಯರ ಕೈಯಲ್ಲಿ ಸಿಕ್ಕು 'ಸ್ಥಾವರ' ವಾಗಿದೆ. ಈ ರೀತಿಯಾಗಿ ಬಸವಣ್ಣನವರ ತತ್ವಗಳನ್ನು ಸ್ಥಾವರ ಮಾಡಿದ ಕೆಲವು ಮಠಾಧೀಶರ ಕುರಿತು ಕರ್ನಾಟಕದ ಅನೇಕ ಸ್ವಾಮಿಜಿಗಳೇ ಕಟು ವಿಮರ್ಶೆ ಮಾಡಿರುವುದನ್ನು ನೋಡುತ್ತೇವೆ. ತಮ್ಮನ್ನು 'ಜಗದ್ಗುರು' ಎಂದು ಕರೆಯಲು ನಿರಾಕರಿಸುವ, ಈಗಲೂ ಹಾಗೆ ಬಳಸದಂತೆ ತಾಕೀತು ಮಾಡುವ 'ಮಾನವ ಧರ್ಮ ಪೀಠ' ದ ಅಧ್ಯಕ್ಷರಾದ ವೀರಭದ್ರ ಚನ್ನಮಲ್ಲ ಸ್ವಾಮೀಜಿಯವರು 'ಮಠಾಧೀಶರು ಸ್ಥಿತಿಪಾಲಕರೇ ವಿನಾ ಸ್ಥಿತಿ ಪರಿವರ್ತಕರಲ್ಲ' ಎಂದು ಅಭಿಪ್ರಾಯಪಡುತ್ತಾ 'ಜಾತಿಯ ಗುರುಗಳು 'ಜಗದ್ಗುರುಗಳು' ಹೇಗಾಗುತ್ತಾರೆ, ಎಲ್ಲಿಯವರೆಗೆ ಜಾತಿಯ ಗುರುಗಳು, ಮಠದ ಗುರುಗಳು, ಮತದ ಗುರುಗಳು ಆಗಿರುತ್ತಾರೆಯೋ ಅಲ್ಲಿವರೆಗೂ ಜಗತ್ತಿನ ಗುರುಗಳಾಗಲಿಕ್ಕೆ ಬರುವುದಿಲ್ಲ, ಕಾಗದದಲ್ಲಿ ಜಗದ್ಗುರುಗಳಾಗುವುದಕ್ಕಿಂತ ಕೃತಿಯಲ್ಲಿ ಜಗದ್ಗುರುತ್ವವನ್ನು ತೋರಿಸಬೇಕು. ಆಸ್ತಿಗಾಗಿ ಸ್ವಾಮಿಗಳಾಗಬಾರದು; ಆದರ್ಶಕ್ಕಾಗಿ ಸ್ವಾಮಿಗಳಾಗಬೇಕು ?[14] ಎಂದು ಸಮಕಾಲೀನ ಸಂದರ್ಭದ ಬಗ್ಗೆ ಕಟು ವಿಶ್ಲೇಷಣೆ ನೀಡುತ್ತಾರೆ. ಆದರೆ ಬಸವಣ್ಣನವರ ಸಮಾನತೆಯ ತತ್ವಗಳನ್ನು ಆಶಯದಂತೆ ಚಲನಶೀಲಗೊಳಿಸುವ ಪ್ರಯತ್ನಗಳು ಅಲ್ಲಲ್ಲಿ ನಡೆದಿರುವುದನ್ನು ಕಾಣುತ್ತೇವೆ. ಮೊದಲಿನಿಂದಲೂ ಪ್ರಗತಿಪರ ನಿಲುವುಗಳನ್ನು ಪ್ರತಿಪಾದಿಸುತ್ತಾ ಬಂದಿರುವ ಇಂಚಗೇರಿ ಸಂತ ಸಂಪ್ರದಾಯ, ದಲಿತವರ್ಗದ ಸನ್ಯಾಸಿಗಳನ್ನು ಉತ್ತರಾಧಿಕಾರಿ ಮಾಡಲು ಪ್ರಯತ್ನಿಸಿದ ಇಳಕಲ್ ಮಠಾಧೀಶರು, ತಮ್ಮ ಪ್ರಖರ ಪಾಂಡಿತ್ಯದಿಂದ ಉತ್ತರ ಕರ್ನಾಟಕದ ಜನಮಾನಸದಲ್ಲಿ ದಲಿತರ ಬದುಕಿನ ಅಭಿವೃದ್ಧಿ ಕುರಿತು ಮೇಲ್ಜಾತಿಗಳು ಸ್ಪಂದಿಸುವಂತೆ ಪ್ರಯತ್ನಿಸುತ್ತಿರುವ ಗದುಗಿನ ತೋಂಟದ ಶ್ರೀಗಳು ಬುದ್ಧ, ಬಸವಣ್ಣನವರ 'ವ್ಯಕ್ತಿ ಪರಿವರ್ತನ ಶೀಲ' ಮಾದರಿಯನ್ನು ಅತ್ಯಂತ ಉನ್ನತ ಮಟ್ಟದಲ್ಲಿ ಅರ್ಥೈಸಿ ಬುದ್ಧ, ಝೆನ್ ಬೌದ್ಧ ಪರಂಪರೆಯನ್ನು ಕನ್ನಡದ ಜನಮಾನಸದಲ್ಲಿ ತುಂಬಾ ಪರಿಣಾಮಕಾರಿಯಾಗಿ ನೆಲೆಗೊಳಿಸಲು ಪ್ರಯತ್ನಿಸುತ್ತಿರುವ ಪ್ರಖ್ಯಾತ ಪ್ರವಚನಕಾರರಾದ ಶ್ರೀ ಸಿದ್ದೇಶ್ವರ ಸ್ವಾಮೀಜಿಯವರು ಅಗ್ರಗಣ್ಯರಾಗಿದ್ದಾರೆ. ಇವರಲ್ಲದೇ, ಇನ್ನೂ ಅನೇಕ ಪ್ರಗತಿಪರ ಸ್ವಾಮೀಜಿಗಳಿದ್ದಾರೆಂಬುದು ಇಲ್ಲಿ ಗಮನಿಸಬೇಕಾದ ಮಹತ್ವದ ಅಂಶವಾಗಿದೆ.

ಬುದ್ಧನ ನಂತರ ವೈಚಾರಿಕತೆಯ ತಳಹದಿಯ, ಅಸ್ಪೃಶ್ಯರ, ಶೋಷಿತರ ಹಾಗೂ ಕನಿಷ್ಟವೆಂದು ಪರಿಗಣಿಸಲ್ಪಟ್ಟ ಕಾಯಕ ಜೀವಿಗಳ ವಿಮೋಚನೆಯ ತತ್ವಗಳನ್ನಾಧರಿಸಿದ ಮಾನವತೆಯನ್ನೇ ಮೂಲ ಕಳಕಳಿಯಾಗಿಟ್ಟು ಪ್ರತಿಪಾದಿಸಿ 'ಬಸವ ಧರ್ಮ'ದ ಬೀಜಗಳು ಇಂದು ಕರ್ನಾಟಕದಲ್ಲಿ ಅಲ್ಲಲ್ಲಿ ಫಲ ನೀಡುತ್ತಿರುವುದನ್ನು ಕಾಣುತ್ತೇವೆ. ಬಸವಣ್ಣನವರು ಪ್ರತಿಪಾದಿಸಿದ ದಯೆ, ಪ್ರೀತಿ, ಆರ್ಥಿಕ, ಭೌತಿಕ ಸೌಲಭ್ಯಗಳಲ್ಲಿ ಸರ್ವರಿಗೂ ಸಮಪಾಲು ದಕ್ಕಬೇಕು ಎಂಬ ಆಶಯದ 'ದಾಸೋಹ ಕಲ್ಪನೆ', ಯಾವ ವೃತ್ತಿಯೂ ಕೀಳವಲ್ಲವೆಂಬ ವಿನೂತನವಾದ 'ಕಾಯಕವೇ ಕೈಲಾಸ' (Work is Worship),

ಮೌಢ್ಯರಹಿತ ಅಪ್ಪಾವರಣ ಆಚರಣೆಗಳು, ಧರ್ಮವನ್ನು 'ಬೌದ್ಧಿಕ ಸ್ವಾತಂತ್ರ್ಯ' (Intellectual Freedom), ಕ್ಕೆ ಸಾಧನ ಮಾಡುವ ಕಾರ್ಯತಂತ್ರಗಳು, ದೇಹವೇ ದೇವಾಲಯವೆಂಬ ಮೂರ್ತಿಭಂಜಕ ಪರಿಕಲ್ಪನೆಗಳು, ಬುದ್ಧನು ಪ್ರತಿಪಾದಿಸಿದ ಧಾರ್ಮಿಕ ಪರಿಕಲ್ಪನೆಗಳ ಮುಂದುವರಿಕೆಯಾಗಿಯೇ ಕಾಣುತ್ತವೆ. ಈ ಹಿನ್ನಲೆಯಲ್ಲಿ ಬಸವಣ್ಣನವರಿಗೆ 'ಬುದ್ಧ'ನ ಬೋಧನೆಗಳು ಪರಿಚಯವಾಗಿದ್ದರೆ, ಮುಂದೆ ಡಾ. ಅಂಬೇಡ್ಕರ್‌ರವರಿಗೆ ಬಸವಣ್ಣ ನವರ ಸಮಾಜೋ-ಧಾರ್ಮಿಕ ಪರಿವರ್ತನೆಯ ಕಾರ್ಯ ತಂತ್ರಗಳು ಪರಿಚಿತವಾಗಿದ್ದರೆ, ಈ ದೇಶದ ಭವಿಷ್ಯವೇ ಬೇರೆಯಾಗಿರುತ್ತಿತ್ತು. ಅಂತಹ ಧಾರ್ಮಿಕ ಅನುಸಂಧಾನ, ಸಾಮಾಜಿಕ, ಆರ್ಥಿಕ ಬದಲಾವಣೆಯ ಕಾರ್ಯತಂತ್ರಗಳು ಬುದ್ಧ, ಬಸವ ಮತ್ತು ಅಂಬೇಡ್ಕರ ರವರಲ್ಲಿ ಒಂದು ಸಮಾನ ಪಾತಳಿ ಮತ್ತು ಬಂಧ (Texture) ದಲ್ಲಿ ನಮ್ಮ ಮುಂದಿರುವುದು ಮಹತ್ವದ ಅಂಶವಾಗಿದೆ.

ಬುದ್ಧನು ಅನುಸರಿಸಿದ ಪ್ರಖರ ಚಲನಶೀಲತೆಯ, ಚಾತುರ್ವರ್ಣ್ಯ ವ್ಯವಸ್ಥೆಗೆ ಕೊಡಲಿಪೆಟ್ಟು ಹಾಕುವ, ಕ್ಷಿಪ್ರ ಬದಲಾವಣೆಗಳಿಗೆ ಕಾರಣವಾಗುವ ಕಾರ್ಯತಂತ್ರಗಳನ್ನೇ ಬಸವಣ್ಣನವರು ಮುಂದುವರಿಸಿದ್ದು ಕಂಡುಬರುತ್ತದೆ. ಕೊಲೆಗಡುಕ 'ಅಂಗುಲಿಮಾಲನ' ನ್ನು ತನ್ನ ಅಮಿತವಾದ ಪ್ರೀತಿಯಿಂದ ಬದಲಾಯಿಸಿದ ಬುದ್ಧನಂತೆ ಬಸವಣ್ಣನವರೂ 'ಕಳ್ಳತನ' ಮಾಡಲು ಬಂದ ಭವಿಗಳನ್ನು 'ಶರಣರಾಗಿ' ಪರಿವರ್ತಿಸಿದ ಮಾರ್ಗ ಒಂದೇ ಪಾತಳಿಯನ್ನು ಸೂಚಿಸುತ್ತದೆ. ಅದೇ ರೀತಿ ವೇಶ್ಯೆಯರಿಗೂ 'ಸಂಘ'ದಲ್ಲಿ ಬಂದು ಸಾಧಕರಾಗುವಂತೆ ಮಾಡಿದ ಬುದ್ಧನಂತೆ, ಬಸವಣ್ಣನವರು ನೆಪಕ್ಕಾಗಿ 'ಲಿಂಗಧಾರಣೆ' ಮಾಡಿ ಪಂಕ್ತಿಯಲ್ಲಿ ಕುಳಿತ ಸುಳ್ಳುವೇಷದ ಶರಣರಿಗೆ 'ಅನ್ನದಾಸೋಹ' ದಲ್ಲಿ ಅವಕಾಶ ಕೊಟ್ಟು, ಅದರಲ್ಲಿ ಸಮಾನತೆ ಇರಬೇಕು, ಭೋಜನ ಪಂಕ್ತಿಯಲ್ಲಿ 'ಕುಲವನರಸಬಾರದು' ಎಂಬ ಪರಿಕಲ್ಪನೆಗಳಲ್ಲಿ ವಿಶಿಷ್ಟ ಸಾಮ್ಯತೆ ಇರುವುದನ್ನು ಕಾಣುತ್ತೇವೆ. ಪ್ರಜಾಪ್ರಭುತ್ವ ಮಾದರಿಯ ಸಾಮಾಜಿಕ ವ್ಯವಸ್ಥೆ ಇಂತಹ ಕಾರ್ಯತಂತ್ರಗಳಿಂದ ಯಶಸ್ವಿಯಾಗುವ ಸ್ಪಷ್ಟ ಸೂಚನೆಗಳನ್ನು, ಪಾಠಗಳನ್ನು ನೀಡುತ್ತದೆ. ಅದೇ ಕಾಲಕ್ಕೆ 'ಧರ್ಮವೇ' ಪ್ರಭುತ್ವ ಹೊಂದಿದ ಮತಾಂಧತೆಯ ಕಪಿಮುಷ್ಠಿಗೆ ಸಿಲುಕಿದ ರಾಷ್ಟ್ರಗಳಲ್ಲಿ ಇಂತಹ ಪ್ರಕ್ರಿಯೆಗಳನ್ನು ಕಾನೂನಿನ ಕ್ರಮಗಳಿಂದಲೇ, ದಬ್ಬಾಳಿಕೆಯಿಂದಲೇ ಸಾಮಾಜಿಕ ಪರಿವರ್ತನೆ ಸಾಧ್ಯವಿಲ್ಲವೆಂಬ ಸಂದೇಶವನ್ನು ನೀಡುತ್ತವೆ. ಬಸವ, ಬುದ್ಧರ ಮಾನವೀಯ ನೆಲೆ ಆಧಾರಿತ ಇಂತಹ ಪರಿವರ್ತನೆಯ ಪ್ರಕ್ರಿಯೆ ಕುರಿತು ಡಾ. ಶಿವಮೂರ್ತಿ ಶರಣರು ಇತ್ತೀಚಿಗೆ ಮಹತ್ವದ ಅಭಿಪ್ರಾಯ ಮಂಡಿಸಿದ್ದಾರೆ. " ಸೂಳೆ ಸಂಕವ್ವೆಯೆಂಬ ವಚನಾಕಾರ್ತಿ ಅನುಭವ ಮಂಟಪದಲ್ಲಿ ವಚನ ರಚಿಸಿದ ಉದಾಹರಣೆ, 'ಹೆಂಡದ' ಮಾದಯ್ಯನೆಂಬ ವ್ಯಕ್ತಿ ತಾನು ಶರಣರನಾಗಿ ಜೀವನ ನಡೆಸಿದ"[15] ಎಂದು ಹೇಳುತ್ತಾ, ಎಲ್ಲಕ್ಕಿಂತ ಮುಖ್ಯವಾಗಿ "ಶೂನ್ಯ ಪೀಠವೊಂದನ್ನು ರಚಿಸಿ, 'ಅನುಭವ ಮಂಟಪವೆಂಬ ಪ್ರಥಮ ಧಾರ್ಮಿಕ ಸಂಸತ್ (First Religious Parliament) ನ್ನು ನಿರ್ಮಿಸಿದರು".[16] ಎಂದು ಹೇಳಿದ್ದಾರೆ. ಪ್ರಜೆಗಳಿಗೆ ಹತ್ತಿರವಾದ, ಮತಾಂಧತೆಗೆ ಅವಕಾಶ ನೀಡದ, ಬರೆಯುವ, ಮಾತನಾಡುವ, ಬದುಕಿನ ಎಲ್ಲಾ ಮಾನವ ಹಕ್ಕುಗಳನ್ನು ಸ್ವಾತಂತ್ರ್ಯಗಳನ್ನು ಧರ್ಮ ಒದಗಿಸಬೇಕು. "ನಾನು ಹೇಳಬೇಕು, ನೀನು ಕೇಳಬೇಕು" ಎಂಬ ನೀತಿ ಇರಕೂಡದು, ಮುದ್ರಿತರೂಪದಲ್ಲಿದ್ದುದಷ್ಟೇ ಧರ್ಮವಲ್ಲ, ಹೊಸ ವಿಚಾರಗಳಿಗೆ, ಸಮಕಾಲಿನ ಸಂದರ್ಭಗಳಿಗೆ ಅವಕಾಶ ನೀಡುವುದರ ಮೂಲಕ ಒಂದು ಧರ್ಮ ತಾನು ಸಮಕಾಲೀನವೆಂಬದನ್ನು ತೋರಿಸಿ ಕೊಡಬೇಕಾಗುತ್ತದೆ.[17] ಎಂದು ಧರ್ಮದ ಸಮಕಾಲೀನ ಜವಾಬ್ದಾರಿಗಳನ್ನು ಕುರಿತು ಹೇಳುತ್ತಾರೆ. ಈ

ಆಶಯಗಳಿಗೆ ಬೌದ್ಧ ಧರ್ಮದ ಬೋಧನೆಗಳು, ಬಸವಣ್ಣನವರು ಅನುಸರಿಸಿದ ವಿಧಾನಗಳ ತಳಹದಿ ಇರುವುದನ್ನು ಕಾಣುತ್ತೇವೆ. ಪೂರ್ಣಪ್ರಮಾಣದ ಶೋಷಿತರ ವಿಮೋಚನೆ, ಮಾನವ ಅಭಿವೃದ್ಧಿಯ ಪರಿಕಲ್ಪನೆಗಳು (Human Development Concepts) ಬುದ್ಧ ಬಸವಣ್ಣನವರಲ್ಲಿ ಸಮ್ಮಿಳಿತ ಗೊಂಡಿರುವುದನ್ನು ಕಾಣುತ್ತೇವೆ. ಅಂಬೇಡ್ಕರ್‌ರವರು ಅನುಸರಿಸಿದ ಮಾರ್ಗ ಈ ನೆಲೆಯದ್ದೇ ಆಗಿರುತ್ತದೆ. ಬೌದ್ಧಿಕ ಪಠ್ಯವಾಗಿದ್ದ ಗ್ರಂಥಸ್ಥವಾಗಿದ್ದ ಧಾರ್ಮಿಕ ಸಾಂಸ್ಕೃತಿಕ ಮಾದರಿಗಳನ್ನು ಪರಿಷ್ಕರಿಸಿ, ಸರಳೀಕರಿಸಿ ಬಸವಣ್ಣನವರಂತೆ ಶೋಷಿತರ ಮಾನವ ಅಭಿವೃದ್ಧಿಗೆ, ಅರಳುವಿಕೆಗೆ ದರ್ಶನ ಮತ್ತು ಪಥಗಳೆರೆಡನ್ನು ರೂಪಿಸಿದ ರೀತಿ ಜಾಗತಿಕ ಚರಿತ್ರೆಯ ಪುಟಗಳಲ್ಲಿ ವಿಶಿಷ್ಟವಾಗಿರುತ್ತದೆ. ಪ್ರೊಟೆಸ್ಟಂಟ್ ತತ್ವಗಳ ಹಿನ್ನಲೆಯಲ್ಲಿ ವರ್ಣದ್ವೇಷದ ದುಳ್ಳುರಿಗೆ (Racial Discrimination) ಬಲಿಯಾದ 'ಕಪ್ಪು ವರ್ಣೀಯ' ಆಫ್ರಿಕನ್ ಜನಾಂಗವನ್ನು ಶೋಷಣೆಯಿಂದ ವಿಮೋಚನೆಗೊಳಿಸುವ ಕಾರ್ಯಕ್ಕಿಂತಲೂ, ದಲಿತ ವಿಮೋಚನೆಯ ಈ ಕಾರ್ಯ ವಿಭಿನ್ನ ಮಾದರಿಯದು ಎಂಬುದನ್ನು ಗಮನಿಸಬೇಕಾಗುತ್ತದೆ.

ಕರ್ನಾಟಕ ಮಟ್ಟಿಗೆ 'ದಲಿತ ವಿಮೋಚನೆ' ಯ ಪರಿಕಲ್ಪನೆಗಳನ್ನು, ಅಸ್ಪೃಶ್ಯರ, ಶೋಷಿತರ ಮಾನವ ಹಕ್ಕುಗಳ ವಿಶ್ಲೇಷಣೆಗಳನ್ನು 'ಬಸವಣ್ಣನವರ ದಲಿತ ವಿಮೋಚನಾ ಮಾದರಿ' ಹೊರತುಪಡಿಸಿ ಚರ್ಚಿಸಲು ಸಾಧ್ಯವೇ ಇಲ್ಲ. ಕರ್ನಾಟಕದ ದಲಿತ ಚಳುವಳಿಯ ಮುಂಚೂಣಿಯ ಸಂಘಟನೆಯಾದ ಕರ್ನಾಟಕ ದಲಿತ ಸಂಘರ್ಷ ಸಮಿತಿಯು ಯಾವತ್ತಿನಿಂದಲೂ 'ದಲಿತ ವಿಮೋಚನೆಯನ್ನು ಬುದ್ಧ ಬಸವ ಮತ್ತು ಅಂಬೇಡ್ಕರ್‌ವರ ಸಿದ್ಧಾಂತಗಳ ಸಮನ್ವಯದ ನೆಲೆಯಲ್ಲೇ ಪ್ರತಪಾದಿಸುತ್ತ ಬಂದಿದೆ. ಅದರ ಪ್ರಭಾವಳಿಯ ನಾಯಕರು, ಸಮಾಜ ಕಾರ್ಯಕರ್ತರು, ದಲಿತ ಬುದ್ಧಿ ಜೀವಿಗಳು, ಸಾಹಿತಿಗಳು ಬಸವಣ್ಣನವರ ಹಾಗೂ ಇತರ ಶರಣರ ವಚನಗಳನ್ನು ಉದ್ದರಿಸದೇ ಮಾತು ಮುಗಿಸುವುದಿಲ್ಲ. ದಲಿತರ ಮನೆಗಳಲ್ಲಿ ಸಂಘ ಸಂಸ್ಥೆಗಳಲ್ಲಿ ಇಂದು ಲಕ್ಷ್ಮೀ, ಪಾರ್ವತಿ, ಶಿವನ ಫೋಟೋಗಳು ಮಾಯವಾಗಿ ಬುದ್ಧ ಬಸವಣ್ಣ ಅಂಬೇಡ್ಕರ್, ಫುಲೆ, ಮುಂತಾದ ಸಾಮಾಜಿಕ ಕ್ರಾಂತಿಕಾರಿಗಳ ಭಾವ ಚಿತ್ರಗಳನ್ನು ಅಭಿಮಾನದಿಂದ, ಪ್ರಜ್ಞೆಯ ನೆಲೆಯಲ್ಲಿ ಇಟ್ಟುಕೊಂಡಿರುವುದನ್ನು ಕಾಣುತ್ತೇವೆ. ದಲಿತ ಚಳುವಳಿಯ ಕರ ಪತ್ರಗಳಲ್ಲಿ ಇಂತಹ ಮಹಾತ್ಮರ ಭಾವಚಿತ್ರಗಳನ್ನು ಮೇಲ್ಭಾಗದಲ್ಲಿ ಸತತವಾಗಿ ಬಳಸಿರುವುದನ್ನು ನೋಡಿದರೆ ಸಂಘಟನೆಗಳ ನಿಲುವುಗಳು ಎದ್ದು ಕಾಣುತ್ತವೆ. ಅಂಬೇಡ್ಕರ್‌ವರ ಜಯಂತಿ, ವಿಚಾರ ಸಂಕಿರಣಗಳು ಮುಂತಾದ ಸಂದರ್ಭದಲ್ಲಿ ಬುದ್ಧ, ಬಸವಣ್ಣ ಮತ್ತು ಅಂಬೇಡ್ಕರ್‌ರವರ ಭಾವ ಚಿತ್ರಗಳಿಗೆ ಪುಷ್ಪ ಗೌರವ ಸಲ್ಲಿಸಿಯೇ ಕಾರ್ಯಕ್ರಮಗಳನ್ನು ಸಂಘಟಿಸುವುದನ್ನು ನೋಡಬಹುದಾಗಿದೆ. ಹೀಗೆ ಭಾವನಾತ್ಮಕವಾಗಿ, ವೈಚಾರಿಕವಾಗಿ ಎರಡೂ ಆಯಮಗಳಲ್ಲಿ ಬುದ್ಧ ಬಸವಣ್ಣ ಮತ್ತು ಅಂಬೇಡ್ಕರ್‌ರವರ ವಿಮೋಚನಾ ಸಿದ್ಧಾಂತಗಳನ್ನು ಕರ್ನಾಟಕ ದಲಿತ ಸಮುದಾಯ ಒಪ್ಪಿಕೊಂಡಿರುವುದು ಸ್ಪಷ್ಟವಾಗಿದೆ. ಅದೇ ಕಾಲಕ್ಕೆ ಅಂಬೇಡ್ಕರ್‌ರವರ 'ಧಾರ್ಮಿಕ, ಸಾಂಸ್ಕೃತಿಕ ವಿಮೋಚನಾ ಮಾದರಿಗೆ ಹಾಗೂ ಬೌದ್ಧ ಧರ್ಮವನ್ನು ತಮ್ಮ ಧಾರ್ಮಿಕ, ಸಾಂಸ್ಕೃತಿಕ ಐಡೆಂಟಟಿಯಾಗಿ ಹೊಂದುವ ಯತ್ನಗಳು ಪುರೋಹಿತಶಾಹಿತ್ವಕ್ಕೆ ಅವಕಾಶ ನೀಡದ, ಧಾರ್ಮಿಕ ಏಜೆಂಟರಿಗೆ ಆಸ್ಪದ ಇಲ್ಲದ, ಜಾತಿ ಪದ್ಧತಿಗೆ ಮನ್ನಣೆ ಇಲ್ಲದ, ಬೌದ್ಧಧರ್ಮದತ್ತ ಒತ್ತುಕೊಟ್ಟಿರುವುದಕ್ಕೆ ಪುರಾವೆ ಒದಗಿಸುತ್ತವೆ.

## 8.2 : ಬೌದ್ಧೀಯತೆ, ಜಾತ್ಯತೀತತೆ ಮತ್ತು ಸಾಮಾಜಿಕ ಸಾಮರಸ್ಯ :

'ನಾವು ಭಾರತವನ್ನು ಅರ್ಥ ಮಾಡಿಕೊಳ್ಳಬೇಕಾದರೆ ಇಬ್ಬರು ವ್ಯಕ್ತಿಗಳನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ'[18] ಎಂದು ಪ್ರಸಿದ್ಧ ವಿದ್ವಾಂಸರಾದ ಡಾ. ಕೆ. ರಾಘವೇಂದ್ರರಾವ್ ಅವರು ಅಭಿಪ್ರಾಯ ಪಡುತ್ತಾರೆ. ಅವರು ಅಂಬೇಡ್ಕರ್, ಗಾಂಧೀಜಿಯವರ 'ಧರ್ಮ' ಕುರಿತ ನಿಯಮಗಳನ್ನು ವಿಶ್ಲೇಷಿಸುತ್ತ ಗಾಂಧೀಜಿ ನೈತಿಕತೆಯ ಹಿನ್ನೆಲೆಯಲ್ಲಿ ಧರ್ಮವನ್ನು ನೋಡುತ್ತಾರೆ. ಆದರೆ, ಅಂಬೇಡ್ಕರ್‌ರವರು ದಲಿತರ ವಿಮೋಚನೆ ಮತ್ತು ರಾಷ್ಟ್ರೀಯತೆಯ ಹಿನ್ನೆಲೆಯಲ್ಲಿ ಧರ್ಮವನ್ನು ಗ್ರಹಿಸಿದರು'[19] ಎಂದು ಹೇಳಿರುವುದು ಪ್ರಸ್ತುತ ಅಧ್ಯಯನ ದೃಷ್ಟಿಯಿಂದ ಮಹತ್ವದ ವಿಶ್ಲೇಷಣೆಯಾಗಿದೆ. ಅಂಬೇಡ್ಕರ್‌ರವರು ಹಿಂದೂ ವೈಧಿಕ ಸನಾತನ ಧರ್ಮವನ್ನು ಖಂಡಿಸುವುದರ ಹಿತಾಸಕ್ತಿ ಅವರ ಸಿಮೀತ ಬದುಕಿನ ಆಯಾಮ, ದಲಿತರ ಅಭಿವೃದ್ಧಿಯನ್ನೇ ಆಧರಿಸಿದ್ದಲ್ಲ, ಬದಲಾಗಿ ಗಾಂಧೀಜಿಯವರಿಗಿಂತ ಉತ್ಕಟವಾದ 'ರಾಷ್ಟ್ರದ ಹಿತಾಸಕ್ತಿ ' ಮುಖ್ಯವಾಗಿತ್ತು 'ಅಧರ್ಮ 'ವನ್ನು ಖಂಡಿಸುತ್ತಲೇ ಅವರು ಈ ದೇಶದ ಭವಿಷ್ಯತ್ತನ್ನು ಕಲ್ಪಿಸಿಕೊಂಡು ಅಂದೇ ಕೋಮುವಾದದ ಮೂಲೋತ್ಪಾಟನೆಗೆ ಕಾರ್ಯೋನ್ಮುಖರಾದರು. 'ಎಲ್ಲಿಯವರೆಗೆ ಸಾಮರಸ್ಯ ಇಲ್ಲವೋ ಇಬ್ಬರಿಗೂ, ಎರಡೂ ಕಡೆಗೂ ಹಾನಿ ತಪ್ಪಿದ್ದಲ್ಲ' ವೆಂದು ಅಂಬೇಡ್ಕರ್‌ರವರ ಪ್ರತಿಪಾದನೆಯಾಗಿತ್ತು ಎಂಬುದು ಮುಖ್ಯವಾದ ಆಯಾಮವಾಗಿದೆ.

ಅಂಬೇಡ್ಕರ್‌ರವರು ಗ್ರಹಿಸಿದ ಧರ್ಮ, ಈಗಾಗಲೇ ವಿಶ್ಲೇಷಿಸಿದಂತೆ ಅದು ಉತ್ಕಟ ಮಾನವೀಯತೆಯನ್ನು ಪ್ರತಿಪಾದಿಸಿದ 'ಧಮ್ಮ'ವಾಗಿ ಹಾಗೂ ಜೀವನ ಶೈಲಿಯಾಗಿರುವುದನ್ನು ಕಾಣುತ್ತೇವೆ. ಇಂತಹ ಉನ್ನತ ತಿಳುವಳಿಕೆಯ ಬೌದ್ಧೀಯತೆಯೇ ಕರ್ನಾಟಕದ ಅಷ್ಟೇ ಏಕೆ, ಭಾರತದಾದ್ಯಂತ ದಲಿತ-ಬಹುಜನರ ಪ್ರಜ್ಞಾಪಾತಳಿಯಲ್ಲಿ ಪ್ರವಹಿಸುತ್ತಿರುವುದನ್ನು ಕಾಣುತ್ತೇವೆ. ಪ್ರಸ್ತುತ ಅಧ್ಯಯನಕಾರನು ಪ್ರಶ್ನಾವಳಿಗಳ ಮೂಲಕ ಸಂದರ್ಶಿಸಿದ ಬೌದ್ಧ ಉಪಾಸಕರಲ್ಲಿ, ದಲಿತ ಬಹುಜನ ಚಳವಳಿಯ ಬುದ್ಧಿಜೀವಿಗಳ ಮಾತು, ಬರೆಹಗಳಲ್ಲಿ ಅಂಬೇಡ್ಕರವರು ಪ್ರತಿಪಾದಿಸಿದ ಸಾಮಾಜಿಕ ಸಾಮರಸ್ಯ, ರಾಷ್ಟ್ರ ಕುರಿತ ಅಪ್ರತಿಮ ನಿಷ್ಠೆ ವ್ಯಕ್ತವಾಗಿರುವುದನ್ನು ಕಾಣುತ್ತೇವೆ. ಈ ರೀತಿಯ 'ಮೌಲ್ಯಕ್ರಾಂತಿ' ದಲಿತ ಬೌದ್ಧರಲ್ಲಿ ಉಂಟಾಗಿ ಸಮಗ್ರ ಅಭಿವೃದ್ಧಿಯ ನೋಟಗಳು, ದೃಷ್ಟಿಕೋನಗಳಲ್ಲಿ ವಿಶಾಲ ಮನೋಭಾವನೆ ಬೆಳೆದಿರುವುದನ್ನು ಯಾವ ಸಮಾಜ ಶಾಸ್ತ್ರಜ್ಞರೂ ಅಲ್ಲಗಳೆಯಲಾರರು. ಈ ಮೊದಲೇ ಚರ್ಚಿಸಿದಂತೆ ಇವತ್ತು 'ಅಂಬೇಡ್ಕರ್- ಗಾಂಧಿ' ಹೋಲಿಕೆಯ ಚರ್ಚೆಗಳನ್ನು ಮೀರಿ, ಹಿಂದೂ ಧರ್ಮವನ್ನೇ ಟೀಕಿಸಿ, ಅದರಲ್ಲೇ ಸಮಯ ವ್ಯರ್ಥಮಾಡಿಕೊಳ್ಳಬಾರದೆಂಬ ಸ್ಪಷ್ಟ ತಿಳುವಳಿಕೆಯ ಪರಿಕಲ್ಪನೆಗಳು ಪ್ರಚಲಿತವಿರುವುದನ್ನು ಕಾಣುತ್ತೇವೆ. ಆ ಹಿನ್ನೆಲೆಯಲ್ಲಿಯೇ ಇಂದು 'ಪ್ರಬುದ್ಧ ಭಾರತದ' ಸಂಕಲ್ಪದ ಬದ್ಧತೆಯೊಂದಿಗೆ ದಲಿತ ಚಳವಳಿ, ಕಾರ್ಯಕರ್ತರು ಮುನ್ನಡೆದಿರುವುದನ್ನು ಕಾಣುತ್ತೇವೆ.

ಅಂಬೇಡ್ಕರ್‌ರವರು ಪ್ರತಿಪಾದಿಸಿದ 'ಜಾತ್ಯಾತೀತ' ರಾಷ್ಟ್ರೀಯ ಬದುಕಿನ ವಿಚಾರಗಳು 'ಪ್ರಬುದ್ಧ ಭಾರತ' ದ ಪರಿಕಲ್ಪನೆಗಳಲ್ಲೇ ತಮ್ಮ ನೆಲೆಹೊಂದಿರುವುದನ್ನು ಕಾಣುತ್ತೇವೆ. ಮಾನವೀಯತೆಯನ್ನು ಪ್ರೀತಿಯನ್ನು ದಯೆಯನ್ನು ಪ್ರತಿಪಾದಿಸಿದ ಬೌದ್ಧ ಧರ್ಮಕ್ಕೆ ಮತಾಂತರಗೊಳ್ಳುವ ಮೂಲಕ ಈ ದೇಶಕ್ಕೆ ಬಂದೊದಗಬಹುದಾಗಿದ್ದ ಗಂಡಾಂತರವನ್ನು ಅಂಬೇಡ್ಕರ್‌ರವರು ಅಂದೇ ತಪ್ಪಿಸಿದರು ಎಂದು ಅನೇಕ ತಜ್ಞರು

ಅಭಿಪ್ರಾಯಪಟ್ಟಿದ್ದಾರೆ. ಡಾ. ಎಲ್. ಹನುಮಂತಯ್ಯನವರು 'ಅನೇಕ ಶತಮಾನಗಳಿಂದ ಬಂದ ಜಾತಿ ವ್ಯವಸ್ಥೆಯನ್ನು ಗ್ರಂಥಸ್ಥಗೊಳಿಸಿದ ಮನುಧರ್ಮ ಶಾಸ್ತ್ರವನ್ನು ಅನಗಾರಿಕ, ಅಮಾನವೀಯ ಸಂಸ್ಕೃತಿಗಳ ಸಂಕೇತವೆಂದು ಬಣ್ಣಿಸಿದ ಅಂಬೇಡ್ಕರ್ ಸಾರ್ವಜನಿಕವಾಗಿ ಅದನ್ನು ಸುಟ್ಟರು. ಈ ಸಂದರ್ಭದಲ್ಲಿ ಟಿಳಕರ ಮಗ ಅಂಬೇಡ್ಕರ್‌ರ ಜೊತೆಯಲ್ಲಿ ಇದ್ದರು. ಗುಜರಾತ್ ರಾಜ್ಯದಲ್ಲಿ ಮನುವಿನ ಪ್ರತಿಮೆ ಸ್ಥಾಪಿಸಿರುವ ಮನಸ್ಸುಗಳು ದಿನೇ ದಿನೇ ಚಿಗುರೊಡೆಯುತ್ತಿರುವುದು ನಮ್ಮ ದೇಶದ ದುಸ್ಥಿತಿಗೆ ಹಿಡಿದ ಕನ್ನಡಿ. ಹಿಂದೂ ಧರ್ಮದ ಸುಧಾರಣೆಗೆ ಸಾಕಷ್ಟು ಪ್ರಯತ್ನಿಸಿದ ಅಂಬೇಡ್ಕರ್ ಸಾಧ್ಯವಾಗದಿದ್ದಾಗ ಧರ್ಮಾಂತರಗೊಂಡರು. ಬೌದ್ಧ ಧರ್ಮಕ್ಕೆ ಮತಾಂತರವಾಗದೇ, ಸಧ್ಯ ನಮ್ಮ ಮುಂದಿರುವ ಉಗ್ರಗಾಮಿ ಧರ್ಮಗಳಿಗೆ ಮತಾಂತರವಾಗಿದ್ದರೆ ಭಾರತದ ಇವತ್ತಿನ ಸ್ಥಿತಿ ಊಹಾತೀತವಾಗಿರುತ್ತಿತ್ತು. ಪ್ರತಿನಿತ್ಯ ರಕ್ತದಲ್ಲಿ ಕೈತೊಳೆಯಬೇಕಾದ ಪರಿಸರದಲ್ಲಿ ನಾವು ಬದುಕಬೇಕಾಗಿತ್ತು. ಹಿಂದುತ್ವದ ಪ್ರತಿಪಾದಕರು ಅಂಬೇಡ್ಕರ್‌ರವರು ತೆಗೆದುಕೊಂಡ ದೂರಗಾಮಿ ಪ್ರಬುದ್ಧ ತೀರ್ಮಾನಕ್ಕೆ ಅವರಿಗೆ ಕೃತಜ್ಞರಾಗಿರಬೇಕು. ಅಂಬೇಡ್ಕರ್‌ರವರ ಸಮಾಜವಾದಿ, ಜಾತ್ಯತೀತ ಹಂಬಲ ಸಂವಿಧಾನದಲ್ಲಿ, ಅವರ ಚಿಂತನೆಗಳಲ್ಲಿ, ಪ್ರತಿಫಲನಗೊಂಡಿದೆ. ಭಾರತೀಯ ಕಾಲಮಾನದ ಅಪೂರ್ವ ಚಿಂತಕರಲ್ಲಿ ಅಂಬೇಡ್ಕರ್ ಒಬ್ಬರು[20], ಎಂದು ಅವರ ಜಾತ್ಯತೀತ ನಿಲುವು ಮಂಡಿಸುತ್ತಾರೆ. ಇಂತಹ ವಿಚಾರಗಳನ್ನು ಮಂಡಿಸುತ್ತ ಡಾ. ಎಲ್. ಹನಮಂತಯ್ಯನವರು ಮೇಲೆ ವಿಶ್ಲೇಷಿಸಿದಂತೆ ಕರ್ನಾಟಕದ ದಲಿತ ಬಹುಜನರ ಬೌದ್ಧಿಕ ಎತ್ತರದ ಪಾತಳಿಯನ್ನು ಪ್ರಾತಿನಿಧಿಕವಾಗಿ ಬಿಂಬಿಸುತ್ತಾರೆಂದರೆ ಅತಿಶಯೋಕ್ತಿಯಾಗಲಾರದು. ಈ ಹಿನ್ನೆಲೆಯಲ್ಲಿಯೇ, ಮುಂದಿನ ಜನಾಂಗವನ್ನು ತಯಾರಿಸುವ 'ಶಿಕ್ಷಣ ವ್ಯವಸ್ಥೆ' ಯಲ್ಲಿ 'ಪಠ್ಯ ಕ್ರಮ' ದಲ್ಲಿಯೂ ಜಾತ್ಯತೀತ ಕಳಕಳಿ ಇರಬೇಕೆನ್ನುವುದು ಅಂಬೇಡ್ಕರ್ ರವರ ನಿಲುವಾಗಿತ್ತು. ಅವರು ಒಂದು ಸಂದರ್ಭದಲ್ಲಿ ಧರ್ಮಸೂಚಕ ಬನಾರಸ 'ಹಿಂದೂ' ವಿಶ್ವವಿದ್ಯಾಲಯ, ಅಲೀಘರ ಮುಸ್ಲಿಂ ವಿಶ್ವವಿದ್ಯಾಲಯ'[21] ಎಂಬ ಪದಗಳ ಬಳಕೆಗೆ ತಮ್ಮ ಅಸಮ್ಮತಿ ವ್ಯಕ್ತಪಡಿಸಿದ್ದನ್ನು ಕಾಣುತ್ತೇವೆ. ಜಾತ್ಯತೀತತೆ ಕೇವಲ ಗ್ರಂಥಸ್ಥವಾಗದೇ, ನಮ್ಮ ನಡೆನುಡಿಗಳಲ್ಲೂ ಆಚರಣೆಯಲ್ಲಿರಬೇಕೆಂಬುದು ಅಂಬೇಡ್ಕರ್‌ರವರ ಸ್ಪಷ್ಟ ನಿಲುವಾಗಿತ್ತು. ಅವರ ವಿಚಾರಧಾರೆಯಿಂದ ಪ್ರಭಾವಿತರಾದ ದಲಿತ ಬಹುಜನ ವಿದ್ಯಾರ್ಥಿಗಳು, ಪ್ರಾಧ್ಯಾಪಕರು, ಬೌದ್ಧ ಜೀವನ ಶೈಲಿಯನ್ನು ಅಳವಡಿಸಿಕೊಂಡ ಎಲ್ಲರೂ 'ಕೋಮುವಾದದಿಂದ ಮುಕ್ತವಾದ ಚಿಂತನೆಗಳನ್ನು, ಜಾತ್ಯತೀತ ನಿಲುವುಗಳನ್ನು' ಹೊಂದಿರುವುದನ್ನು ಕಾಣುತ್ತೇವೆ. ಈ ಹಿನ್ನೆಲೆಯಲ್ಲಿ ಅವರ ಬೇಡಿಕೆಗಳ ಸ್ವರೂಪದಲ್ಲಿ ಬದಲಾವಣೆ, ಹೊಸ ಒತ್ತು (New Thrust) ಕಂಡು ಬರುತ್ತಿದೆ.

## 8.3. ದಲಿತರ ಸಮಗ್ರ ಅಭಿವೃದ್ಧಿ ಸಾಂಸ್ಕೃತಿಕ ಸವಾಲುಗಳು ಮತ್ತು ಅವರ ಮಾನವ ಹಕ್ಕುಗಳ ಪ್ರಶ್ನೆಗಳು :

ಅಂಬೇಡ್ಕರ್‌ರವರು ಅಸ್ಪೃಶ್ಯರನ್ನು ಶೂದ್ರಾತಿ ಶೂದ್ರರನ್ನು ಸಾಂಸ್ಕೃತಿಕ ಐಡೆಂಟಿಟಿಯ ಹುಡುಕಾಟಕ್ಕೆ ಹಚ್ಚಿದರು. ದಲಿತರ ಸಾಂಸ್ಕೃತಿಕ ಐಡೆಂಟಿಟಿಯನ್ನು ಕಟ್ಟಲು ವಿಸ್ತಾರವಾದ ನೆಲೆಯನ್ನು ಅವರು ಗುರುತಿಸಿದರು. ದಲಿತರು ಒಂದು ಕಾಲಘಟ್ಟದಲ್ಲಿ ಆಳುವ ವರ್ಗವಾಗಿದ್ದರು. ವೈಧಿಕರ ಹುನ್ನಾರಗಳಿಂದ ಅವರು ತಮ್ಮ ಸ್ಥಾನವನ್ನು, ಅಧಿಕಾರವನ್ನು ಕಳೆದುಕೊಂಡು ಜಾತಿ ವ್ಯವಸ್ಥೆಯಲ್ಲಿ ದಯನೀಯ ಸ್ಥಿತಿ, ಅಧಿಕಾರಹೀನತೆ (Powerlessness) ಅನುಭವಿಸುವಂತಾಯಿತು ಎಂಬ ಅಂಬೇಡ್ಕರ್‌ರವರ ವಿಶ್ಲೇಷಣೆ'[22], ದಲಿತರು ಸಾಂಸ್ಕೃತಿಕ,

ಧಾರ್ಮಿಕ ಐಡೆಂಟಿಟಿಯನ್ನು ಸಾಧಿಸುವ ಪ್ರಜ್ಞೆಗೆ ಕಾರಣವಾಗಿದ್ದುದನ್ನು ವಿಶ್ಲೇಷಿಸಲಾಗಿದೆ. ಈ ಹಿನ್ನಲೆಯಲ್ಲಿಯೇ ದಲಿತರು ತಮ್ಮ ಸಾಂಸ್ಕೃತಿಕ ಸ್ವಾವಲಂಬನೆ (Cultural Self-Reliance) ಸಾಧಿಸಿದರೆ ಮಾತ್ರ ಇಂದಿಗೂ ಅವರನ್ನು ಕಟ್ಟಿ ಹಾಕಿರುವ ಹಲವಾರು ಸಂಕೋಲೆಗಳನ್ನು ಕಿತ್ತೆಸೆಯಲು ಸಾಧ್ಯವಾಗುತ್ತದೆ ಎಂಬ ವಿಶ್ಲೇಷಣೆಯನ್ನು ಈ ಅಧ್ಯಯನ ಪ್ರಾರಂಭದಿಂದಲೇ ಹೇಳಿಕೊಂಡು ಬರಲಾಗಿದೆ. ಇಂದು ಬೌದ್ಧ ಧರ್ಮವನ್ನು ತಮ್ಮ ಸಾಂಸ್ಕೃತಿಕ ಐಡೆಂಟಿಯಾಗಿ, ಧಾರ್ಮಿಕ ಐಡೆಂಟಿಟಿಯಾಗಿ ದಲಿತರು ಸ್ವೀಕರಿಸುತ್ತಿರುವ ವಿಶ್ಲೇಷಣೆಗಳನ್ನು ನೀಡಲಾಗಿದೆ. ದಲಿತರು ವೀರಶೈವರಾದರೂ, ಕ್ರೈಸ್ತರಾದರೂ ಬಡವರಾಗಿದ್ದಾರೆ, ದಲಿತರಾಗಿದ್ದಾರೆ ಎಂಬ ಸಮೀಕರಣಗಳು ಪ್ರಸ್ತುತ ಅಧ್ಯಯನದ ಆಶಯದಲ್ಲಿ ಮಹತ್ವ ಪಡೆಯಲಾರವು. 'ಬಡತನ'ದ ವಿಶ್ಲೇಷಣೆ ಸಂಪೂರ್ಣ ಭಿನ್ನವಾದ ರೀತಿಯಲ್ಲೇ ಸಾಗಬೇಕು. ಯಾವುದೇ ಧರ್ಮ ಬಡತನವನ್ನು ನೀಗಿಸಲಾರದು. ಆದರೆ, ದಲಿತರನ್ನು 'ಧರ್ಮದ ಸಾಧನದಿಂದ' ಸಾಂಸ್ಕೃತಿಕ ಗುಲಾಮಗಿರಿಗೆ (Cultural Subjugation) ತಳ್ಳಿರುವುದು ಒಂದು ರೀತಿಯಲ್ಲಿ ಒತ್ತಾಯದ ಗುಲಾಮಗಿರಿ (Forced Slavery) ಯಾಗಿದೆ. ಆದ್ದರಿಂದ ಇಂತಹ 'ಒತ್ತಾಯದ ಗುಲಾಮಗಿರಿ' ನಿರ್ಮಿಸಿದ ದಲಿತರಲ್ಲಿನ 'ಬೌದ್ಧಿಕ ಗುಲಾಮಗಿರಿಯನ್ನು (Intellectual Slavery), ಬೌದ್ಧಿಕ ಬಡತನವನ್ನು (Intellectual Poverty) ನೀಗಿಸಲು ದಲಿತರಿಗೆ ಚಾರಿತ್ರಿಕ ಸಮರ್ಥನೆಗಳ ಮೇಲೆ, ಅವರಿಗೆ ಸಾಂಸ್ಕೃತಿಕ ಸ್ಥಾನಮಾನ ಕಲ್ಪಿಸಿದ, ಹಿಂದೆ ಅವರ ಜೀವನ ವಿಧಾನವಾಗಿದ್ದ ಸ್ವಾತಂತ್ರ ಸಾಂಸ್ಕೃತಿಕ ಧಾರ್ಮಿಕ ವ್ಯವಸ್ಥೆಯಾಗಿ ಬೌದ್ಧ ಧರ್ಮ ಅನಿವಾರ್ಯವಾಗಿರುವುದನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಇಂದು ಹನ್ನೆರಡನೇ ಶತಮಾನದಲ್ಲಿ ವೀರಶೈವರಾದ ತಳವರ್ಗದ ಕೆಲವು ಜಾತಿಗಳು ಅತ್ತ ಉನ್ನತ ಜಾತಿಗಳ ಜೊತೆ ವೈವಾಹಿಕ ಸಂಬಂಧಗಳೂ ಏರ್ಪಡದೇ, ಇತ್ತ ತಮ್ಮ ಜಾತಿಯ ಜನರಿಂದಲೂ ದೂರವಾಗಿ ಸಾಂಸ್ಕೃತಿಕ ಅತಂತ್ರತೆಯನ್ನು ಅನುಭವಿಸುತ್ತಿರುವುದು ಕಳವಳಕಾರಿಯಾದದ್ದು ಮತ್ತು ಮಾನವೀಯತೆ ಬಗ್ಗೆ ಕಾಳಜಿ ಹೊಂದಿರುವ ಮನಸ್ಸುಗಳನ್ನು ಕಲಕದೇ ಇರಲಾರದ ಸತ್ಯವಾಗಿದೆ. ಪ್ರಸ್ತುತ ಅಧ್ಯಯನವನ್ನು ದಲಿತರ ಅಂತಹ ಸಾಂಸ್ಕೃತಿಕ ಅತಂತ್ರತೆಗಳನ್ನು ನೀಗಿಸುವಲ್ಲಿನ ದೃಷ್ಟಿಕೋನ ಮತ್ತು ಆಶಯವುಳ್ಳದ್ದಾಗಿಯೇ ನಡೆದಿರುವುದನ್ನು ಗಮನಿಸಬಹುದಾಗಿದೆ. ಇದೇ ತಿಳುವಳಿಕೆಯಿಂದಲೇ ಕರ್ನಾಟಕದ ವ್ಯಾಪ್ತಿಯಲ್ಲಿ ದಲಿತ ಚಳುವಳಿಗಳು 'ಬೌದ್ಧ ಧರ್ಮ' ವನ್ನು ದಲಿತರ ಮನ - ಮನೆಗಳಲ್ಲಿ ಬಿಂಬಿಸಲು ಪ್ರಯತ್ನಿಸಿ ಸಾಂಸ್ಕೃತಿಕ ಸ್ವಾವಲಂಬನೆ (Cultural Self-Reliance) ಸಾಧಿಸುವಲ್ಲಿ ಮುಂದಾಗಿರುವುದನ್ನು ವಿವರವಾಗಿ ವಿಶ್ಲೇಷಿಸಲಾಗಿದೆ.

**ಭಾರತದ ದಲಿತರ ಸಾಂಸ್ಕೃತಿಕ, ಧಾರ್ಮಿಕ ನಾಯಕರಾಗಿ ಡಾ. ಅಂಬೇಡ್ಕರ್‌ರವರು :**

ಅಂಬೇಡ್ಕರ್‌ರವರ ಬೌದ್ಧಧಮ್ಮದ ಪರ್ಯಾಯ ಸಂಸ್ಕೃತಿಯ ಪ್ರತಿಪಾದನೆಯ, ಅವರ ಧಾರ್ಮಿಕ, ಸಾಂಸ್ಕೃತಿಕ ಐಡೆಂಟಿಟಿಯ ಪ್ರತಿಪಾದನೆಯ ಹೋರಾಟದ ಕುರಿತ ಅಧ್ಯಯನಗಳಲ್ಲಿ, ವಿಶ್ಲೇಷಣೆಗಳಲ್ಲಿ ,ಪೂರ್ವ ಕಲ್ಪಿತ ಸೀಮಿತ ಅಭಿಪ್ರಾಯಗಳೇ ಕಾಣಿಸಿಕೊಂಡ ಅಪಾಯಗಳಿವೆ. ನವಬೌದ್ಧರ ಪೈಕಿ ಹೆಚ್ಚಾಗಿ 'ಮಹಾರರೇ' ಇರುವರೆಂಬಂತೆ ತಪ್ಪಾಗಿ ಅರ್ಥೈಸಲಾಗುತ್ತದೆ. ಆದರೆ, ಬೌದ್ಧ ಧರ್ಮಕ್ಕೆ ಅಂಬೇಡ್ಕರ್‌ವರು ಮತಾಂತರ ಹೊಂದಿದ ಸಂದರ್ಭದಲ್ಲಿ ಮಹಾರಾಷ್ಟ್ರ, ಉತ್ತರ ಪ್ರದೇಶ, ಪಂಜಾಬ, ಗುಜರಾತ್, ಮಧ್ಯಪ್ರದೇಶ, ಕರ್ನಾಟಕ, ಹೀಗೆ ಅನೇಕ ಕಡೆಗಳಿಂದ ದಲಿತರ ಪೈಕಿ ಎಲ್ಲಾ ಜಾತಿ ವರ್ಗಗಳ ಜನತೆ ಅವರ ಕರೆಗೆ ಓಗೊಟ್ಟು

ನಾಗಪೂರಕ್ಕೆ ಆಗಮಿಸಿದ್ದರು. ಮಹಾರಾಷ್ಟ್ರದ ದಲಿತರ ಪೈಕಿ (ಪರಿಶಿಷ್ಟ ಜಾತಿಗಳ ಪೈಕಿ) ಪ್ರತಿಶತ 30 ಕ್ಕಿಂತ ಹೆಚ್ಚು(1971 ರ ಜನಗಣತಿ ಪ್ರಕಾರ 35%) ಜನಸಂಖ್ಯೆ ಮಹಾರ ಸಮುದಾಯಕ್ಕೆ ಸಂಬಂಧಿಸಿದೆ. '1961 ರ ಜನಗಣತಿ ಪ್ರಕಾರ ಮತಾಂತರ ಹೊಂದಿದ ಬೌದ್ಧರನ್ನು ಪ್ರತ್ಯೇಕವಾಗಿ ಗಣತೀಕರಿಸಿದೆ. ಒಟ್ಟು ಬೌದ್ಧ ಜನಸಂಖ್ಯೆಯ ಪೈಕಿ ಮಹಾರಾಷ್ಟ್ರ ಬೌದ್ಧರ ಜನಸಂಖ್ಯೆ 85%, ಅಂದರೆ ಈ ಸಂಖ್ಯೆ 1951 ರಲ್ಲಿ ಕೇವಲ 2487, 1952-1961 ರ ದಶಕದಲ್ಲಿ ಒಟ್ಟು ದಲಿತರ ಪೈಕಿ ಮಹಾರಾಷ್ಟ್ರದಲ್ಲಿ ಪರಿಶಿಷ್ಟ ಜಾತಿ ಜನಸಂಖ್ಯೆ 44.39% ರಷ್ಟು ಇಳಿಮುಖವಾಗಿದೆ.[23], ಇದು ಸ್ಪಷ್ಟವಾಗಿ ಸೂಚಿಸುವುದೇನೆಂದರೆ, ಪರಿಶಿಷ್ಟ ಜಾತಿಯ ಪ್ರತಿಶತ 44.39% ರಷ್ಟು ಜನರು ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ್ದಾರೆಂಬುದು. ಹೀಗಾಗಿ ಮಹಾರರನ್ನು ಹೊರತುಪಡಿಸಿ ಪ್ರತಿಶತ 15 ರಷ್ಟು ಬೇರೆ ಅಸ್ಪೃಶ್ಯ ಜಾತಿಗಳ ಜನರೂ ಅಂಬೇಡ್ಕರ್‌ವರ ಜೊತೆಗೆ ಬೌದ್ಧ ಧರ್ಮ ಸ್ವೀಕಾರ ಮಾಡಿರುವುದು ಸ್ಪಷ್ಟವಾಗಿದೆ. ಆದ್ದರಿಂದ ಮಹಾರರೇ ಹೆಚ್ಚಾಗಿ ನವಬೌದ್ಧರಾಗಿದ್ದಾರೆ. ನವಬೌದ್ಧರೇ ದಲಿತ ಚಳುವಳಿಯಲ್ಲಿನ ಇತರ ಜನಸಮುದಾಯಗಳ ಸೌಲಭ್ಯ ಪಡೆಯುವಲ್ಲಿ ವ್ಯತ್ಯಾಸಗಳು ಕಾಣುತ್ತಿವೆ ಎಂಬ ಕೆಲವು ಪಾಕ್ಷಿಕ ಅಭಿಪ್ರಾಯಗಳು ಪೂರ್ವಾಗ್ರಹದಿಂದ ಕೂಡಿರುವಂತಾಗಿವೆ.

ಮಹಾರಾಷ್ಟ್ರದ ನವಬೌದ್ಧರ ಕುರಿತು ನಡೆದ ಅಧ್ಯಯನಗಳು ಒಂದು ಕಾಲಘಟ್ಟದಲ್ಲಿ ಒಂದು ವಿಶಿಷ್ಟ ಪ್ರಾದೇಶಿಕ ನೆಲೆಯಲ್ಲಿ ನಡೆದಂತಹುಗಳು. ಮಹಾರಾಷ್ಟ್ರದ ದಲಿತ ಚಳುವಳಿಯೂ ಕರ್ನಾಟಕಕ್ಕಿಂತ ವಿಭಿನ್ನವಾದ ಸ್ವರೂಪ ಇರುವಂತದ್ದು, ಅಂಬೇಡ್ಕರ್‌ರವರನ್ನು ಅಖಿಲ ಭಾರತ ಮಟ್ಟದಲ್ಲಿ ಎಲ್ಲಾ ಅಸ್ಪೃಶ್ಯರು ತಮ್ಮ ನಾಯಕನೆಂದು ಮತಾಂತರಕ್ಕೆ ಮೊದಲೇ ಒಪ್ಪಿಕೊಂಡದ್ದನ್ನು ಕಾಣುತ್ತೇವೆ. ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ, 'ನಾನು ಹಿಂದುವಾಗಿ ಹುಟ್ಟಿದ್ದೇನೆ. ಆದರೆ ನಾನೆಂದೂ ಹಿಂದುವಾಗಿ ಸಾಯಲಾರೆ' ಎಂಬ 1935 ರಲ್ಲಿನ ಯೋಲಾ ಘೋಷಣೆಯ ನಂತರವೇ ಅವರನ್ನು ವ್ಯಾಪಕವಾಗಿ ದಲಿತರು ತಮ್ಮ ಸಾಂಸ್ಕೃತಿಕ ನಾಯಕನೆಂದು ಒಪ್ಪಿಕೊಂಡಿದ್ದಾರೆ. ಅಷ್ಟೇ ಏಕೆ, ಎಲ್ಲಾ ಭಾಗಕ್ಕೂ ಅವರನ್ನು ಆಮಂತ್ರಿಸಿದ್ದನ್ನು ನೋಡುತ್ತೇವೆ. ಕರ್ನಾಟಕದ ಜೊತೆಗಂತೂ 1920 ರಲ್ಲಿ ದಶಕದಲ್ಲಿಯೇ ಅಂಬೇಡ್ಕರ್‌ವರು ಸಂಪರ್ಕ ಸಾಧಿಸಿದ್ದಾರೆ. ಈ ಭಾಗದಲ್ಲಿಯೇ ಅವರ ಕಟ್ಟಾ ಅನುಯಾಯಿಗಳಾಗಿದ್ದ ಶ್ರೀ ಬಿ.ಹೆಚ್. ವರಾಳೆ, ಶ್ರೀ ಶಂಕರಾನಂದ ಶಾಸ್ತ್ರಿ ಮುಂತಾದವರು ಇದ್ದರೆಂದು ಹಲವಾರು ಅಧ್ಯಯನಗಳಿಂದ ತಿಳಿದು ಬರುತ್ತದೆ. 'ಮನೋಹರ ಯಾದವ (1998)[24], ಲಕ್ಷ್ಮಣ ತೆಲಗಾವಿ (1999)'[25] ಇತ್ಯಾದಿ. 1923 ರಲ್ಲಿಯೇ ಡಾ. ಅಂಬೇಡ್ಕರ್‌ರವರು ಧಾರವಾಡಕ್ಕೆ ಆಗಮಿಸಿ 'ಮಚಿಗಾರ ಮಹಾಸಂಘ' ವನ್ನು ಉದ್ಘಾಟನೆ ಮಾಡಿದ್ದು ತಿಳಿದು ಬರುತ್ತದೆ. ಈ ಭೇಟಿಗೆ ಮುಖ್ಯವಾಗಿ ಧಾರವಾಡದ ಅಂಬೇಡ್ಕರ್‌ವರ ಕಟ್ಟಾ ಅನುಯಾಯಿ ಶ್ರೀ ಶಂಕರಾನಂದ ಶಾಸ್ತ್ರಿಯವರು ಎಂಬುದು ತಿಳಿದು ಬರುತ್ತದೆ.

ನಾಗಪುರದಲ್ಲಿ 1956 ರಲ್ಲಿ ಬೌದ್ಧ ಮತಕ್ಕೆ ಮತಾಂತರಗೊಳ್ಳುವ ಮೂಲಕ ಅಖಿಲ ಭಾರತ ಮಟ್ಟದಲ್ಲಿ ಅಂಬೇಡ್ಕರ್‌ರವರು ದಲಿತರ ಧಾರ್ಮಿಕ, ಸಾಂಸ್ಕೃತಿಕ ನಾಯಕರಾಗಿರುವುದು ಸ್ಪಷ್ಟವಾಗಿ ತಿಳಿದು ಬರುತ್ತದೆ. ನಟರಾಜ್ ಹುಳಿಯಾರ್ ಅವರು ಓವೆನ್ ಲಿಂಚ್ ಎಂಬ ಮಾನವ ಶಾಸ್ತ್ರಜ್ಞರ, ಅಧ್ಯಯನ ಉಲ್ಲೇಖಿಸಿ ಆಗ್ರಾದ ದಲಿತರು 1960 ರ ದಶಕದಲ್ಲಿ ಅಂದರೆ ಅಂಬೇಡ್ಕರ್‌ರವರ ಮರಣಾನಂತರ ಹೇಗೆ ಅವರು 'ಚಮ್ಮಾರ' ಜನಾಂಗದ ಸಾಂಸ್ಕೃತಿಕ ಐಡೆಂಟಿಟಿಯ ಹುಡುಕಾಟದಲ್ಲಿ ಪರಿಹಾರವಾಗಿ, ಸಾಂಸ್ಕೃತಿಕ ನಾಯಕರಾಗಿ ದೊರಕಿದರು

ಎಂಬ ಬಗ್ಗೆ ವಿಶ್ಲೇಷಿಸುತ್ತಾರೆ. ಆರ್ಥಿಕವಾಗಿ ಸ್ವಾವಲಂಬನೆ ಸಾಧಿಸಿದ 'ಜಾತವರು' ಧಾರ್ಮಿಕವಾಗಿ ಏಕಾಏಕಿ ಬೌದ್ಧರೇಕೆ ಆದರೆಂಬ ಬಗ್ಗೆ ಓವೆನ್ ಲಿಂಚ್ ವಿಶ್ಲೇಷಿಸುತ್ತಾರೆ. 'ಅಂಬೇಡ್ಕರ್‌ರವರ ಚಾರಿತ್ರಿಕ ವಾದಗಳು ಜಾತವರಿಗೆ ಒಪ್ಪಿಗೆಯಾದವು, ತಾವು ಮೂಲತಃ ಬೌದ್ಧರೇ ಆಗಿದ್ದವರು, ಯಾರದೋ ದಬ್ಬಾಳಿಕೆಯಿಂದ, ಈಗ ಕೀಳು ಜಾತಿಗೆ ತಳ್ಳಲ್ಪಟ್ಟು ಧಾರ್ಮಿಕ, ಸಾಂಸ್ಕೃತಿಕ, ಸ್ಥಾನಮಾನ ಇಲ್ಲದವರಾಗಿದ್ದೇವೆ, ಎಂಬ ವಿಶ್ಲೇಷಣೆಗಳು ಅವರಲ್ಲಿ ಅರಿವು ಮೂಡಿಸಿದವರು. 1930-31 ರ ಸಂದರ್ಭದ ದುಂಡು ಮೇಜಿನ ಪರಿಷತ್ತಿಗೆ, ಗಾಂಧಿ - ಅಂಬೇಡ್ಕರ್ ಇಬ್ಬರಲ್ಲಿ ಅಂಬೇಡ್ಕರ್‌ರವರನ್ನೇ ತಮ್ಮ ನಾಯಕನೆಂದು ಜಾತವರು ಲಂಡನ್ನಿಗೆ ಟೆಲಿಗ್ರಾಂ ಕಳಿಸಿದ ಘಟನೆ, 1942 ರ ಹೊತ್ತಿಗೆ 'ಅಂಬೇಡ್ಕರ್‌ರವರಿಂದ ಆಗ್ರಾದಲ್ಲಿ ಪರಿಶಿಷ್ಟ ಜಾತಿಯ ಫೆಡರೇಶನ್ ಬೆಳೆದದ್ದು, ಅಂಬೇಡ್ಕರ್‌ರವರ ಅಂತರರಾಷ್ಟ್ರೀಯ ಖ್ಯಾತಿ ಮತ್ತು ಅವರ ಪಾಂಡಿತ್ಯಕ್ಕೆ ಸಿಕ್ಕ ಮನ್ನಣೆ ಹೀಗೆ ಹಲವಾರು, ಅಂಶಗಳು ಸೇರಿಕೊಂಡು ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರನ್ನು 'ಜಾತವರು' ತಮ್ಮ 'ಧಾರ್ಮಿಕ, ಸಾಂಸ್ಕೃತಿಕ ನಾಯಕ' ನೆಂದು ಒಪ್ಪಿದರು ಮತ್ತು ಅವರ ಮಾರ್ಗದಲ್ಲಿ ನಡೆಯುವ ಸಂಕಲ್ಪದಿಂದ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದರು. ಹೀಗೆ ಬಾಬಾಸಾಹೇಬರು ಜಾತವರ ಪಾಲಿಗೆ ಬೋಧಿಸತ್ವರಾದರು'[26] ಎಂದು ವಿಶ್ಲೇಷಿಸುತ್ತಾರೆ.

ಇಂದು 'ದಲಿತ' ಎಂಬ ಐಡೆಂಟಿಟಿ, ದಲಿತರಲ್ಲದ ಒಂದು ಗುಂಪಿನ ಸಮಾಜ ಶಾಸ್ತ್ರಜ್ಞರಿಗೆ ಪ್ರಿಯವಾದಂತೆ ತೋರುತ್ತದೆ. ಅವರ ಶೋಷಣೆಯನ್ನು ಕೇವಲ ದೈಹಿಕ ಹಲ್ಲೆಗಳು, ರಕ್ತಪಾತ, ಸ್ಥಳಾಂತರ ಇವುಗಳ ಹಿನ್ನಲೆಯಲ್ಲಿಯೇ ಗ್ರಹಿಸುತ್ತಾರೆ. ಆದರೆ 'ಜಾತಿ ವ್ಯವಸ್ಥೆಯು ದಲಿತನ ಮನದಾಳದಲ್ಲಿ ನಿರ್ಮಿಸಿದ ಮಲಿನತೆ' ತುಂಬಾ ಹೀನಾಯವಾದದ್ದು, ''ಯಾವುದೋ ಕಾರಣಕ್ಕೇ ಒಬ್ಬ ಹೊಲೆಯನನ್ನು ನಾಲ್ಕು ಏಟು ಹೊಡೆದರೆ ಆ ಘಟನೆಯನ್ನು ಒಬ್ಬ ಹೊಲೆಯನಾದವನು ಕೆಲವು ದಿನಗಳ ನಂತರ ಮರೆತು ಬಿಡಬಹುದು. ಆದರೆ 'ಏ ಹೊಲೆಯ' ಎಂದು ಕರೆದರೆ ಅದನ್ನು ಒಬ್ಬ ಹೊಲೆಯ ಜನಾಂಗದ ವ್ಯಕ್ತಿ ಎಂದಿಗೂ ಮರೆಯಲಾರ'' ನೆಂಬ ಕನಿಷ್ಟ ತಿಳುವಳಿಕೆ ಇಲ್ಲದವರು ದಲಿತನನ್ನು ಶತಶತಮಾನಗಳು ಬಂದರೂ 'ದಲಿತ' ಪದದಿಂದಲೇ ಗುರುತಿಸುತ್ತ ಹೋದರೆ ಅದು ಹಿಂದೂ ಬ್ರಾಹ್ಮಣಶಾಹಿಯ 'ಜಾತಿ' ಹುನ್ನಾರಕ್ಕಿಂತಲೂ ಅಪಾಯಕಾರಿಯಾದದ್ದು. ಒಬ್ಬ ದಲಿತ ಖಂಡಿತವಾಗಿಯೂ ಒಬ್ಬ ಬೌದ್ಧನಾಗಲೇ ಬೇಕು, ಅಂದಾಗಲೇ ಅವನಿಗೆ, ಅವನ ಜನಾಂಗಕ್ಕೆ ನ್ಯಾಯ ಸಿಗುತ್ತದೆ ಎಂಬಲ್ಲೇ ಅಂಬೇಡ್ಕರ್‌ರವರು ಪ್ರಶ್ನಾತೀತವಾಗಿ ದಲಿತರಿಗೆ ಧಾರ್ಮಿಕ, ಸಾಂಸ್ಕೃತಿಕ ಐಡೆಂಟಿಟಿಯಾಗಿ ಬೌದ್ಧ ಧರ್ಮವನ್ನು ಗುರುತಿಸಿದ್ದು, ಆದ್ದರಿಂದಲೇ ಈ ಐಡೆಂಟಿಟಿಯನ್ನು ದೆಹಲಿ ವಿಶ್ವವಿದ್ಯಾಲಯದ ಸಮಾಜಶಾಸ್ತ್ರಜ್ಞ ಗೋಪಾಲ ಗುರು 'ದಲಿತ ಐಡೆಂಟಿಯನ್ನು' ಮನಶಾಸ್ತ್ರದ ಆಧಾರದ ಮೇಲೆ ವಿಶ್ಲೇಷಿಸಲು ಸಮಾಜಶಾಸ್ತ್ರಜ್ಞರಿಗೆ ಸೂಚಿಸುತ್ತಾರೆ.

'ಒಬ್ಬ ವ್ಯಕ್ತಿ ಮಾನಸಿಕ ಯಾತನೆಯಿಂದ (Humiliation) ಹೊರಟಿರಬೇಕಾದರೆ, ಆತ ಸ್ವ-ಗೌರವ (Self-respect) ಸಾಧಿಸಬೇಕಾಗುತ್ತದೆ. ದಕ್ಷಿಣ ಆಫ್ರಿಕಾದ ಕಪ್ಪು ಜನಾಂಗಕ್ಕಿಂತ (ಕಣ್ಣಿಗೆ ಕಾಣುವ ಐಡೆಂಟಿಟಿ) ವಿಚಿತ್ರವಾದ ಯಾತನೆಯನ್ನು ಜಾತಿ ವ್ಯವಸ್ಥೆಯಲ್ಲಿ ದಲಿತ ಅನುಭವಿಸುತ್ತಾನೆ. ವ್ಯಕ್ತಿಯನ್ನು ನಾಯಿ, ನರಿಗಿಂತ ಇನ್ನೂ ಕೀಳಾದ ಸ್ಥಾನಕ್ಕೆ ತಳ್ಳಲ್ಪಡುವ ಭಾರತದಲ್ಲಿ ಸ್ವ-ಗೌರವಕ್ಕೆ ಸ್ಥಾನವೇ ಇಲ್ಲ[27], ಆದ್ದರಿಂದ ದಲಿತರ ಸಾಂಸ್ಕೃತಿಕ ವಿಮೋಚನೆ, ಐಡೆಂಟಿಟಿಯನ್ನು ವಿಶ್ಲೇಷಿಸುವಾಗ ಅಂಬೇಡ್ಕರ್ ಮಾದರಿಗಿಂತ ಬೇರೆ ನೆಲೆಯಲ್ಲಿ ನೋಡಲು ಸಾಧ್ಯವಾಗುವುದಿಲ್ಲವೆಂಬ ಅರ್ಥದಲ್ಲಿ ಮನೋವೈಜ್ಞಾನಿಕ ವಿಶ್ಲೇಷಣೆ ಕೊಡುತ್ತಾರೆ.

ಈ ಹಿನ್ನೆಲೆಯಲ್ಲಿ ಸಂಸದೀಯ ಪ್ರಜಾಸತ್ತೆಯಲ್ಲಿ ತಮ್ಮ ವಿಮೋಚನೆಯ ತಳಹದಿಯಾಗಿ ಅಂಬೇಡ್ಕರ್‌ರವರು ಪರಿಕಲ್ಪಿಸಿದ ಐಡೆಂಟಿಟಿಯನ್ನು ಸಾಂಖಿಕವಾಗಿ ಸಾಧಿಸುವುದೇ ಭಾರತದ ದಲಿತರ ಹಿಂದುಳಿದವರ ಮುಂದಿರುವ ಸವಾಲು, ಈ ಸವಾಲಿನಲ್ಲಿಯೇ ಅವರ ಸಮಗ್ರ ಅಭಿವೃದ್ಧಿ ವಿಮೋಚನೆಯ ರೂಪುರೇಷೆಗಳು ಸಮ್ಮಿಳಿತವಾಗಿರುವುದು ಎಂಬುದನ್ನು ಅಲ್ಲಗಳೆಯಲಾಗದು.

ದಲಿತರ ಸಾಂಸ್ಕೃತಿಕ ಧಾರ್ಮಿಕ ಬದುಕಿನ ಬಗ್ಗೆ ಅವಿರತವಾಗಿ ಚಿಂತಿಸಿ, ಹಗಲಿರುಳೆನ್ನದೇ ಶ್ರಮಿಸಿದ ಡಾ. ಅಂಬೇಡ್ಕರ್‌ರವರನ್ನು ಮಹಾರಾಷ್ಟ್ರದಲ್ಲಿ ಬೌದ್ಧ ಬಿಕ್ಕುಗಳೇ 'ಬೋಧಿಸತ್ವ' ರೆಂದು ಅಭಿಮಾನದಿಂದ ಗೌರವ ಭಾವನೆಯಿಂದ ಸಂಬೋಧಿಸುವುದನ್ನು ಕಾಣುತ್ತೇವೆ. ಮಹಾರಾಷ್ಟ್ರದ ಹಿರಿಯ ಬೌದ್ಧ ಬಿಕ್ಕುಗಳಾದ ಪೂಜ್ಯ ಶಾಂತಿ ಭದ್ರ (1966) ಬಂತೇಜಿಯವರು ಅಂಬೇಡ್ಕರ್‌ರವರು ಎದುರಿಸಿದ ಸಮಸ್ಯೆಗಳನ್ನು ವಿವರಿಸುತ್ತ 'ಇಷ್ಟೆಲ್ಲ ಕಠಿಣ ಪರಿಸ್ಥಿತಿಯಲ್ಲಿ ಸಂಕಟಗಳಲ್ಲಿ ತಮ್ಮನ್ನು ಕಳೆದುಕೊಳ್ಳದೇ, ಕುಗ್ಗದೇ, ಶೋಷಿತರ, ಅವಮಾನಿತರ ಮಾನವ ಹಕ್ಕುಗಳನ್ನು ಮತ್ತೇ ದೊರಕಿಸಿ ಕೊಟ್ಟು ಅಂಬೇಡ್ಕರ್‌ರವರು ಬೋಧಿಸತ್ವರಾದರು'[28] ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅವರು ಹೇಳುತ್ತಾ ಈ ಮಾತು ಹಿಂದೆ, ಮತ್ತು ಮುಂದೆಯೂ ಕೂಡ ಅವರಿಗೆ ಅನ್ವಯಿಸುತ್ತದೆ. ಅವರು ಸ್ವಾಭಿಮಾನ ಸ್ವ-ಸಹಾಯ (Self-Help) ಎಂದರೇನು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಶೋಷಿತರು ಅವರು ಏನು ಆಗಿದ್ದಾರೋ, ಅದನ್ನು ತಿಳಿಸಿ ಅವರ 'ಮನುಷ್ಯತ್ವ' ದ ಸ್ಥಾನ ತಿರುಗಿ ಕೊಡಿಸಿದ್ದಾರೆ. ಅವರಲ್ಲಿ ಅರಿವು ಮೂಡಿಸಿದ್ದಾರೆ. ಬುದ್ಧ ಮತ್ತು ಆತ ಬೋಧಿಸಿದ ವಿಮೋಚನಾ ಸಂದೇಶ, ಸದ್ಧಾ (ಶ್ರದ್ಧೆ ನಂಬಿಕೆ) ಉತ್ತಮ ನಡತೆ (ಪಂಚ ಶೀಲಗಳು) ಮತ್ತು ಮಾನಸಿಕ ನಿಯಂತ್ರಣ (Concentration or Trance) ಮಾನಸಿಕ ಕೃಷಿಯ (Mental Culture) ಮಹತ್ವವನ್ನು ತಿಳಿಸಿದ್ದಾರೆ. ಯಾವುದೇ ಪವಾಡ ಸದೃಶತೆ ಮತ್ತು ಅತಿಭೌತಿಕ ಪಾತಳಿಗೆ ಬುದ್ಧನನ್ನು ಒಳಪಡಿಸದಿರುವ ಅರ್ಥೈಸುವಿಕೆಗಳನ್ನು , ಪ್ರಪಂಚವನ್ನು ಅರಿತುಕೊಳ್ಳುವುದಷ್ಟೇ ಅಲ್ಲ, ಅದರ ನಿಯಮಗಳನ್ನು ಪರಿವರ್ತಿಸುವ, ತಿಳಿದುಕೊಳ್ಳುವ ರೀತಿಯನ್ನು 'ದುಃಖ' ಕ್ಕೆ ಕಾರಣಗಳನ್ನು ಅಂದರೆ, 'ಶೋಷಣೆಗೆ' ಕಾರಣಗಳನ್ನು ವಿಶ್ಲೇಷಿಸಿ ಬುದ್ಧನಂತೆ ಪೂರ್ಣ ಮನಸ್ಸಿನಿಂದ ಆಧ್ಯಾತ್ಮಿಕ ನೆಲೆಯ ಸಮರವನ್ನೇ ಸಾರುತ್ತಾರೆ,[29] ಎಂದು ಅಂಬೇಡ್ಕರ್‌ವರು ಗ್ರಹಿಸಿದ ಬೌದ್ಧ ಧರ್ಮದ ಸಾರವನ್ನು ಮುಂದಿಡುತ್ತಾರೆ. ಅಂಬೇಡ್ಕರ್‌ರವರು ಈ ಮೊದಲು ವಿಶ್ಲೇಷಿಸಿದಂತೆ ದಲಿತರಿಗೆ ಸಮಾನ ಆಸ್ತಿ ಒಡೆತನ ಪ್ರತಿಪಾದಿಸಿ, ಲೌಕಿಕ ಪ್ರಗತಿಗೆ ಸಂಪನ್ಮೂಲಗಳ ಸಮಾನ ಹಂಚಿಕೆಗೆ ಮುಖ್ಯವೆನ್ನುವ ಹಿನ್ನಲೆಯಲ್ಲಿ ಬೌದ್ಧ ಧರ್ಮವನ್ನು ಗ್ರಹಿಸಿದರೆಂಬುದು ಮುಖ್ಯವಾಗಿದೆ. ಆದರೆ ಅವರ ಒಟ್ಟು ಆಶಯ ದಲಿತರನ್ನು ಕೇವಲ ಶ್ರೀಮಂತರನ್ನಾಗಿಸುವ ಉದ್ದೇಶವುಳ್ಳದ್ದಾಗಿರದೇ 'ಸಾಂಸ್ಕೃತಿಕವಾಗಿ ಶ್ರೀಮಂತರನ್ನಾಗಿ' ಮಾಡುವುದಾಗಿತ್ತು. ದಲಿತರನ್ನು ಬೌದ್ಧಿಕ ಗುಲಾಮಗಿರಿಗೆ ತಳ್ಳಿದ, ದಾಸ್ಯಕ್ಕೆ ತಳ್ಳಿದ ಹಿಂದೂ ಧಾರ್ಮಿಕ ಆವರಣದಿಂದ ಮುಕ್ತಗೊಳಿಸಿ ಆರ್ಥಿಕ ಸಮಾನತೆಗಿಂತ ಮೂಲಭೂತವಾಗಿ ದಲಿತರಿಗೆ ಬೇಕಾದ ಸಾಂಸ್ಕೃತಿಕ ಸಮಾನತೆ, ಧಾರ್ಮಿಕ ಸಮಾನತೆ ಆ ಮೂಲಕ 'ಸ್ವಾವಲಂಬೀ ಸಾಂಸ್ಕೃತಿಕ ಐಡೆಂಟಿಟಿಯನ್ನು (Self-Reliant Cultural Identity) ಸಾಧಿಸುವ ಉದ್ದೇಶವುಳ್ಳದಾಗಿತ್ತು ಎಂದು ಪುನರಪಿ ಹೇಳುವ ಅಗತ್ಯವಿಲ್ಲ, ಬೌದ್ಧಿಕ ಸ್ವಾತಂತ್ರ್ಯವಿಲ್ಲದೇ, ಭೌತಿಕ ಪ್ರಗತಿ ಸಾಧಿಸಿದರೆ, ಶ್ರೀಮಂತಿಕೆ ಒಡೆತನ ಸಿಕ್ಕರೆ, 'ಬೌದ್ಧಿಕ ದಾರಿದ್ರ್ಯವೇ' ಅಂತಹ ಶ್ರೀಮಂತಿಕೆಗೆ ಕಲ್ಪಿತ ಸ್ಥಾನಮಾನಕ್ಕೆ ತಳಹದಿಯಾಗಿ ಅದು 'ಉಸುಕಿನ ಮೇಲೆ ನಿರ್ಮಾಣ ಮಾಡಿದ ಮನೆಯಂತೆ' ಆಗುತ್ತದೆ ಎಂಬ ದೂರಗಾಮಿ ಚಿಂತನೆಗಳನ್ನು ಅವರ ಮಾದರಿಯಲ್ಲಿ ಕಾಣುತ್ತೇವೆ.

ಪ್ರಖ್ಯಾತ ಸಮಾಜಶಾಸ್ತ್ರಜ್ಞೆ ಈಲಿಯನೋರ್ ಝೇಲಿಟ್ (1966) ಗುರುತಿಸುವ ಪ್ರಕಾರ ಅಂಬೇಡ್ಕರ್‌ರವರು 'ದಲಿತರಿಗೆ ಹಿಂದೂ ಆಚರಣೆಗಳಿಗೆ ಪರ್ಯಾಯವಾಗಿ ಕೊಡಮಾಡಿದ ಬೌದ್ಧ ಆಚರಣೆಗಳು ದಲಿತರನ್ನು 'ಪಾಲೀಕರಣ' (Pali nization) ಗೊಳಿಸುವ ಉದ್ದೇಶವುಳ್ಳವುಳ್ಳ ಮತ್ತು ಎಂ.ಎನ್. ಶ್ರೀನಿವಾಸರವರು ಪ್ರತಿಪಾದಿಸುವ 'ಸಂಸ್ಕೃತೀಕರಣ' ಕ್ಕೆ (Sanskritization) ಪರ್ಯಾಯವಾದ ಕ್ರಮ[30], ಎಂದು ಹೇಳುತ್ತಾರೆ. ದಲಿತರು ಬೌದ್ಧರಾಗಿ, ಮತಾಂತರದ ಜೊತೆಗೆ ವಿಶೇಷವಾಗಿ ಮಹಾರರು 'ಮಹಾರವಾಡಾದಿಂದ ಹಿಂದೂ ದೇವದೇವತೆಗಳನ್ನು ಹೊರಗೆ ಚೆಲ್ಲಿದರು'[31] ಎಂದು ಬೌದ್ಧ ಮತಾಂತರ ಪ್ರಕ್ರಿಯೆ ಅಧ್ಯಯನ ಮಾಡಿದ ಸುನಂದಾ ಪಟವರ್ಧನ್ (1973) ಹೇಳುತ್ತಾರೆ. ಇದೇ ಪ್ರಕ್ರಿಯೆಯನ್ನು ಕರ್ನಾಟಕದಲ್ಲಿ 'ಹಿಂದೂ ದೇವರುಗಳನ್ನು ಗಟಾರಕ್ಕೆ ಎಸೆಯಿರಿ' ಎಂದು ಬಿ. ಬಸವಲಿಂಗಪ್ಪನವರು ದಲಿತರಿಗೆ ಕರೆ ನೀಡಿದ ಹಿನ್ನೆಲೆಯಲ್ಲಿ ಉಂಟಾದ ಬೌದ್ಧ ಜಾಗೃತಿಯನ್ನು ಕಾಣುತ್ತೇವೆ. ಇದೇ ಪ್ರಕ್ರಿಯೆಯನ್ನು ರಿಚರ್ಡ್ ಡಬ್ಲ್ಯೂ ಟೇಲರ್ (1972) ಅವರು 'ಅಂಬೇಡ್ಕರ್‌ರವರ ಬೌದ್ಧ ಧರ್ಮ, ದಲಿತರನ್ನು ಸಂಸ್ಕೃತೀಕರಣ, ಪಾಶ್ಚಾತ್ತೀಕರಣಗಳ ಬದಲಾಗಿ'[32] ಅಂದರೆ ಮೇಲ್ಜಾತಿಗಳ ಆಚಾರ ವಿಚಾರಗಳನ್ನೇ ಅನುಸರಿಸಿ ಪ್ರಜ್ಞೆ ಬೌದ್ಧಿಕ ಗುಲಾಮಗಿರಿಯಲ್ಲೇ, ಅನ್ಯ ಸಂಸ್ಕೃತಿಯ ಹಂದರದಲ್ಲೇ ಮೇಲಿನ ಸ್ಥಾನ ಪಡೆಯಲು ವ್ಯರ್ಥ ಪ್ರಯತ್ನ ಮಾಡುವ ಬದಲಾಗಿ ಬೌದ್ಧ ಧರ್ಮದ ಸಾಂಸ್ಕೃತಿಕ ಆವರಣದಲ್ಲಿ ದಲಿತರನ್ನು ಅಂಬೇಡ್ಕರ್‌ರವರು ಪೌರ್ವಾತ್ತೀಕರಣ (Easternization) ಅಥವಾ ಮಹಾಭಾರತೀಕರಣ (Mahabharatization)'[33] ಮಾಡಲು ಪ್ರಯತ್ನಿಸಿದರು ಎಂದು ಅಭಿಪ್ರಾಯಪಡುತ್ತಾರೆ. ಡಾ. ಬಾಬಾಸಾಹೇಬ ಅಂಬೇಡ್ಕರ್‌ರವರಿಗೆ ದಲಿತರಿಗೆ 'ಭಾರತದ ರಾಷ್ಟ್ರೀಯತೆ' ಯನ್ನು ದೃಢಪಡಿಸುವ ಅನ್ಯ ದೇಶಗಳ ಧರ್ಮಗಳ ಸಾಂಸ್ಕೃತಿಕ ಗುಲಾಮಗಿರಿಗೆ, ಒಳಗಾಗದೇ ಅವರನ್ನು 'ಸದೃಢ ಭಾರತ' ದ ಪ್ರಜ್ಞೆಗಳನ್ನಾಗಿಸುವುದು ಮಹತ್ವದ ಕಾರ್ಯವಾಗಿತ್ತು. ಈ ಮಹಾನ್ ಪ್ರಯತ್ನದಲ್ಲಿ ಅವರು ಗಾಂಧೀಜಿಯಿಂದ ಹಿಡಿದು ಯಾರೊಂದಿಗೂ ರಾಜಿ ಮಾಡಿಕೊಳ್ಳಲೇ ಇಲ್ಲ. ಹೀಗಾಗಿ ಅವರ ಮೇಲೆ 'ರಾಷ್ಟ್ರ ವಿರೋಧಿ' ಗೂಬೆ ಕೂಡ್ರಿಸಲು ಪ್ರಯತ್ನಿಸಲಾಯಿತು. ಅಂತಹ ವ್ಯರ್ಥ ಆರೋಪಕ್ಕೆ ಅಂಬೇಡ್ಕರ್‌ರವರು ತಕ್ಕ ಉತ್ತರ ನೀಡುವ ಪ್ರಾಮಾಣಿಕ ಪ್ರಯತ್ನವೂ ಇದಾಗಿತ್ತು. ಅದು 'ಬೌದ್ಧ ಧರ್ಮದಿಂದ ಬೌದ್ಧೀಕರಣದಿಂದ ಭಾರತೀಕರಣ' ದ ಸಾಧಿಸುವ ಪ್ರಕ್ರಿಯೆ ಎಂದರೆ ಅತಿಶಯೋಕ್ತಿಯಾಗಲಾರದು. ಭಾರತದಲ್ಲಿಯೇ ಜನಿಸಿ ವಿಶ್ವಮಾನ್ಯವಾದ ಸ್ವಾತಂತ್ರ್ಯ ಸಮಾನತೆ ಮತ್ತು ಭ್ರಾತೃತ್ವಗಳನ್ನು ಬೋಧಿಸಿದ ಬೌದ್ಧ ಧರ್ಮದ ಮಾನವೀಯ ತೆಕ್ಕೆಗೆ ದಲಿತರನ್ನು ಒಳಪಡಿಸಿ ಭಾರತೀಕರಣ (Indianization) ಮಾಡುವುದಾಗಿತ್ತು. ಅಂತಹ 'ಭಾರತೀಕರಣ' ದ, ಮತ್ತು, ಅಂತಹ 'ಭಾರತ' ವೇ ಅಂಬೇಡ್ಕರ್‌ರವರ ಕನಸಿನ 'ಪ್ರಬುದ್ಧ ಭಾರತ' (Enlightened India) ವಾಗಿತ್ತು. ಈ ಅರ್ಥದಲ್ಲಿಯೇ ಅವರು 'ಮಿ ಭಾರತ್ ಬೌದ್ಧಮಯ ಕರೂಣ್' (I will make India Buddhist country) ಎಂದು ಹೇಳುತ್ತಿದ್ದರು. ಅಂತಹ ಪ್ರಬುದ್ಧ ಭಾರತದ ಪರಿಸರದಲ್ಲಿ ಕೋಮುವಾದ ತನ್ನ ಸ್ಥಾನ ಕಳೆದುಕೊಂಡು, ಪ್ಯಾಸಿಸ್ಟ್ ಶಕ್ತಿಗಳಿಗೆ ಕಡಿವಾಣ ಬಿದ್ದು, ವಿಶ್ವದ ಜನ ಸಮುದಾಯ ಮತ್ತೇ ''ಬುದ್ಧನನ್ನು ನೋಡಿದಂತೆ, ಭಾರತವನ್ನು ನೋಡುತ್ತಾರೆಂಬುದರಲ್ಲಿ'' ಸಂದೇಹವಿಲ್ಲ, ಇಂತಹ ಆಶಯಗಳುಳ್ಳ ಪ್ರಸ್ತುತ ಅಧ್ಯಯನ ಕನ್ನಡ ಪ್ರಜ್ಞೆಯಿಂದ, ವಿಶ್ವ ಪ್ರಜ್ಞೆಗೆ ಸಲ್ಲಿಸಿದ ಒಂದು ಬೌದ್ಧಿಕ ಆಕರ ಮತ್ತು ಅಳಿಲು ಸೇವೆ ಎಂಬುದಾಗಿ ವಿನೀತವಾಗಿ ಹೇಳಲು ಬಯಸುತ್ತದೆ. ಆ ಮೂಲಕ 'ಪ್ರಬುದ್ಧ ಭಾರತ ಪ್ರಿಯ' ಪ್ರಾಜ್ಞ ಸಮುದಾಯಕ್ಕೆ ಪ್ರಸ್ತುತ ದಲಿತ ವಿಮೋಚನಾ ಆಯಾಮವನ್ನು, ದಲಿತರ ವಿಮೋಚನೆಯ, ಸಮಗ್ರ ಅಭಿವೃದ್ಧಿಯ ಹಿನ್ನಲೆಯಲ್ಲಿ, ಸಾವಿರಾರು ವರ್ಷಗಳ ಸತತ

''ಸಾಂಸ್ಕೃತಿಕ ದಬ್ಬಾಳಿಕೆಗೆ'' (Cultural Oppression) ಒಳಗಾಗಿ ಮಾನವ ಹಕ್ಕುಗಳಿಂದ ವಂಚಿತವಾದ ಪರಿಯ ನೆಲೆಯಲ್ಲಿ ಒಟ್ಟಾರೆ ದಲಿತರ ಮಾನವ ಹಕ್ಕುಗಳ ಪ್ರಶ್ನೆಗಳ ಹಿನ್ನಲೆಯಲ್ಲಿಯೇ ಅರ್ಥೈಸಲು ಕೋರುತ್ತದೆ.

## 8.4. ಅಧ್ಯಯನದ ಮುನ್ನೋಟಗಳು ಮತ್ತು ಹೊಸ ದೃಷ್ಟಿಕೋನದ ಅವಶ್ಯಕತೆ:

ಪ್ರಸ್ತುತ ಅಧ್ಯಯನದಲ್ಲಿ ವಿವರವಾಗಿ ವಿಶ್ಲೇಷಿಸಿದಂತೆ ದಲಿತರು ಇಂದು ತಮ್ಮ ಡಾ. ಅಂಬೇಡ್ಕರ್‌ರವರು ರೂಪಿಸಿದ ಬೌದ್ಧ ಧರ್ಮದ ಸಾಂಸ್ಕೃತಿಕ, ಧಾರ್ಮಿಕ ಐಡೆಂಟಿಟಿಯ ಚಲನ ಶೀಲತೆಯಲ್ಲಿ ವಿಮೋಚನೆಯ ಕಡೆಗೆ ದಾಪುಗಾಲು ಹಾಕುತ್ತಿರುವುದು ಕಂಡು ಬಂದಿದೆ. ಯಾವ ಸ್ಥಾಪಿತ ಹಿತಾಸಕ್ತಿಗಳು, 'ಸಂಸ್ಕೃತಿಯ ಯಜಮಾನರು' ದಲಿತರ ಈ ಸಾಂಸ್ಕೃತಿಕ ವಿಮೋಚನಾ ಪ್ರಕ್ರಿಯೆಯನ್ನು ಅಡ್ಡಿ ಪಡಿಸಲು ಸಾಧ್ಯವಿಲ್ಲ. 1930 ರ ದಶಕದಲ್ಲಿ ಡಾ. ಅಂಬೇಡ್ಕರ್‌ರವರೇ 'ವೀಸಾಕ್ಕೆ ಕಾಯುತ್ತಿದ್ದೇನೆ'[34], ಎಂದು ಹೇಳಿದರು. ಮುಂದೆ ಅವರೇ 1954 ರಲ್ಲಿ ದಲಿತರು ಬೌದ್ಧರಾದರೆ ಯಾವುದೇ ವೀಸಾ ಅಗತ್ಯವಿಲ್ಲ 'ಬುದ್ಧನಿಗೆ ಯಾವ ಪಾಸಪೋರ್ಟ್ ಅಥವಾ ವೀಸಾದ ಅವಶ್ಯಕತೆ ಇಲ್ಲ'[35], ಎಂದು ಭಾರತದಲ್ಲಿ ಬೌದ್ಧ ಧರ್ಮ ಕುರಿತು ನೀಲ ನಕ್ಷೆಯನ್ನೇ ಪ್ರಸ್ತುತ ಪಡಿಸಿದರು. ಇಂತಹ ವ್ಯಾಪಕವಾದ ನೆಲೆಯಲ್ಲಿ ಚಾರಿತ್ರಿಕ ಆಧಾರಗಳಿಂದ ದಲಿತ ವಿಮೋಚನೆಗೆ ಭದ್ರ ತಳಪಾಯ ನಿರ್ಮಿಸಿ ಕೊಟ್ಟಿದ್ದಾರೆ. ಈ ಹಿನ್ನೆಲೆಯಲ್ಲಿ ದಲಿತ ಶಕ್ತಿಗಳು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ವಿಶ್ವದ ತಜ್ಞರ ಕಣ್ಣು ತೆರೆಸುವಂತೆ ಮಾನವ ಹಕ್ಕುಗಳಿಗೆ ನೂತನ ಪರಿಕಲ್ಪನೆ ಸೇರಿಸುವಲ್ಲಿ ಯಶಸ್ವಿಯಾಗುತ್ತಿರುವುದು ಪ್ರಮುಖ ಬೆಳವಣಿಯಾಗಿದೆ.

ಇಂದು ದಲಿತರು ದಲಿತ, ದಲಿತತ್ವ ಇಂತಹ ಪದಗಳಿಗೆ ಮೀರಿದ ಮಾನವ ಹಕ್ಕುಗಳ ಹೋರಾಟದ ಘಟ್ಟವನ್ನು ತಲುಪಿರುವುದು ಸಮಕಾಲೀನ ಸತ್ಯವಾಗಿದೆ. ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣದ ಸಂಕ್ರಮಣ ಸ್ಥಿತಿಯಲ್ಲಿ ಮೀಸಲಾತಿಯಂತಹ ಸೌಲಭ್ಯಗಳನ್ನು ಮೀರಿದ ಆರ್ಥಿಕ ಸ್ವಾವಲಂಬನೆಯ ಮಾರ್ಗಗಳ ಶೋಧದಲ್ಲಿರುವುದನ್ನು ಹಲವಾರು ಸಮಾಜೋ-ಆರ್ಥಿಕ ಅಧ್ಯಯನಗಳು ದೃಢಪಡಿಸಿದ್ದನ್ನು ಕಾಣುತ್ತೇವೆ. ಜನಸಂಖ್ಯೆಗೆ ಸರಿಸಮನಾದ ಪ್ರಾತಿನಿಧ್ಯ, ಸಾಂವಿಧಾನಿಕ ಸೌಕರ್ಯಗಳ ಪ್ರತಿಪಾದನೆ ಮಾಡುತ್ತ ರಾಜಕೀಯ, ಆರ್ಥಿಕ ಮತ್ತು ಸಾಂಸ್ಕೃತಿಕ ಸಂಪನ್ಮೂಲಗಳ ವಾರಸುದಾರಿಕೆಗೆ ಪ್ರಯತ್ನಿಸುತ್ತಿರುವುದು ಕಂಡು ಬರುತ್ತಿದೆ. 1889 ರಲ್ಲಿ ಪ್ರಿನ್ಸ್ ಆಫ್ ವೇಲ್ಸ್ ಭಾರತಕ್ಕೆ ಬಂದಾಗ ಅವರ ಸ್ವಾಗತವನ್ನು ಫುಲೆಯವರ ಅನುಯಾಯಿಗಳು ಈ ರೀತಿ ಮಾಡಿದರು.

'ಅಜ್ಜಿಗೆ ಹೇಳಿ ನಮ್ಮದು ಸಂತೋಷದ ದೇಶ
ಆದರೆ 19 ಕೋಟಿ ಜನರಿಗೆ ಶಿಕ್ಷಣವಿಲ್ಲ'
ಇದು ಸಾಮಾಜಿಕ ಕ್ರಾಂತಿಯ ಆರಂಭ'[36]

ಎಂದು ಖ್ಯಾತ ಅರ್ಥಶಾಸ್ತ್ರಜ್ಞ ಡಾ. ನರೇಂದ್ರ ಜಾಧವ್ ತಮ್ಮ ಆತ್ಮ ಕಥನದಲ್ಲಿ ದಾಖಲಿಸುತ್ತಾರೆ. ಅಂದರೆ ಕೇವಲ ನೂರು ವರ್ಷಗಳಲ್ಲಿ ಐದು ಸಾವಿರ ವರ್ಷಗಳ ಸಾಂಸ್ಕೃತಿಕ ದಬ್ಬಾಳಿಕೆಗೆ ಉತ್ತರ ಕೊಡುವ,

ಸಮಕಾಲೀನ ಭಾರತದಲ್ಲಿ ಸವಾಲುಗಳನ್ನು ಎದುರಿಸುವ ಛಾತಿಯನ್ನು ಬೆಳೆಸಿಕೊಂಡಿದ್ದು ಜಗತ್ತಿನ ಸಾಮಾಜಿಕ ಕ್ರಾಂತಿಯ ಇತಿಹಾಸದಲ್ಲೇ ಒಂದು ಮೈಲಿಗಲ್ಲು. ಈ ಛಾತಿಯನ್ನು ಅಮೇರಿಕದಲ್ಲಿ ಶಿಕ್ಷಣ ಪಡೆಯುತ್ತಿರುವ ಡಾ. ಜಾಧವ ಅವರ ಮಗಳಾದ 16 ವರ್ಷದ 'ಅಪೂರ್ವ' ಳೇ ಸಂಕೇತಿಸುತ್ತಾಳೆ. ಅವಳು ಅವರ ತಂದೆಯ 'ದಲಿತ ಆತ್ಮಕಥೆ' ಗೆ ಹಿನ್ನುಡಿ ಬರೆಯುತ್ತ 'ಈಗ ನಾನು ಯಾರು ಎಂದು ಮನಗಂಡಿದ್ದೇನೆಂದು ನನಗನಿಸುತ್ತದೆ. ನಾನೀಗ ಕೇವಲ 'ಅಪೂರ್ವ' ಅಷ್ಟೆ ನನಗೆ ಯಾವ ಕುಲ, ಮತ ಅಥವಾ ಜಾತಿಯ ಬಂಧನಗಳೂ ಇಲ್ಲ. ನನ್ನ ಹಿರಿಯರು ತಾವು ದಲಿತರೆಂದು ಹೊರೆ ಹೊತ್ತು ಭಾರತ ಸ್ವತಂತ್ರವಾದ ನಂತರವೂ ಅತ್ಯಂತ ಹೀನಾಯದ. ಕೆಲಸ ಕಾರ್ಯಗಳನ್ನು ತಲೆಬಾಗಿ ನಡೆಸಿಕೊಂಡು ಬಂದಿದ್ದಾರೆ. ಆದರೆ ನನ್ನ ವಿಷಯ ಬೇರೆ. ಅವರು ನನಗಾಗಿ ಹಚ್ಚಿಕೊಟ್ಟ ದೀವಟಿಗೆಯನ್ನು ನಾನೀನ ಕೈಲಿ ಹಿಡಿದಿದ್ದೇನೆ. ನನ್ನನ್ನು ಯಾವ ಶಕ್ತಿಯೂ ತಡೆಹಿಡಿಯಲಾರದು'[37] ಎಂದು ಹೇಳುವ ಈ ಹುಡುಗಿ ಶೋಷಿತ ಜನಾಂಗದ ಮುಂದಿನ ತಲೆಮಾರುಗಳ ಸಂಕೇತವಾಗಿ ನಮ್ಮ ಮುಂದೆ ನಿಂತುಕೊಳ್ಳುತ್ತಾಳೆ. ಈ ಅಧ್ಯಯನದ ತಾತ್ವಿಕ ನೆಲೆಗಳಲ್ಲಿ ವಿವರಿಸಿದಂತೆ ಅಧ್ಯಯನಕಾರನು ಕರ್ನಾಟಕದ ಬೌದ್ಧ ಉಪಾಸಕ, ಉಪಾಸಕಿಯರನ್ನು ಪ್ರಾತಿನಿಧಿಕವಾಗಿ, ಅಲ್ಲಲ್ಲಿ ಪ್ರಶ್ನಾವಳಿ ಮತ್ತು ವೈಯಕ್ತಿಕ ಸಂದರ್ಶನ ಮೂಲಕ ಸಂಪರ್ಕಿಸಿದಾಗ 'ದಲಿತ ಬೌದ್ಧ' ಪದದ ಬಳಕೆಗೆ ತಮ್ಮ ಅಸಮ್ಮತಿ ವ್ಯಕ್ತಪಡಿಸಿದ್ದಾರೆ. ಇಂತಹ ಅಸಮ್ಮತಿ ಅವರು ದಲಿತ ಐಡೆಂಟಿಟಿಗೆ ಹೊರತಾದ 'ಬೌದ್ಧ' ರೆಂಬ ಐಡೆಂಟಿಟಿಯನ್ನು ಹೊಂದುವ ಪ್ರಜ್ಞಾಪೂರ್ವಕ ಪ್ರಯತ್ನ ಮತ್ತು ಸಾಂಸ್ಕೃತಿಕ ಪ್ರತಿರೋಧವನ್ನೇ (Cultural Assertion) ಸೂಚಿಸುತ್ತದೆ. ಇಂತಹ ಸಾಂಸ್ಕೃತಿಕ ಪ್ರತಿರೋಧವನ್ನು ಗುರುತಿಸುವಲ್ಲಿ ಬೌದ್ಧ ಸಾಂಸ್ಕೃತಿಕ ಆವರಣದಲ್ಲಿ ದಲಿತರ ಒಟ್ಟು ವಿಮೋಚನೆಯ ಆಯಾಮಗಳನ್ನು ವಿಶ್ಲೇಷಿಸುವಲ್ಲಿ ಪ್ರಸ್ತುತ ಅಧ್ಯಯನ ತಕ್ಕ ಮಟ್ಟಿಗೆ ಯಶಸ್ವಿಯಾಗಿರುವುದನ್ನು ಕಾಣಬಹುದಾಗಿದೆ. ಅದೇ ರೀತಿ 'ದಲಿತ ಪ್ರತಿರೋಧ' (Dalit Assertion) ದ ಹಂತದಾಟಿ, ಅಂಬೇಡ್ಕರ್‌ರವರು ಅಭಿಲಾಷಿಸಿದ 'ಸಾಂಸ್ಕೃತಿಕ ಪ್ರತಿರೋಧ' (Cultural Assertion) ದ ಹಂತಕ್ಕೆ ಮುಟ್ಟಿರುವುದು, ದಲಿತರು ಜಾಗತಿಕರಣದ ಸವಾಲುಗಳನ್ನು ಎದುರಿಸಿ ದೇಸಿಯ ಕ್ರಮಗಳಲ್ಲೇ ಸಮಗ್ರ ಅಭಿವೃದ್ಧಿ ಆರ್ಥಿಕ ಸ್ವಾವಲಂಬನೆ ಸಾಧಿಸುವ ಲಕ್ಷಣಗಳನ್ನು ಬಿಂಬಿಸುತ್ತದೆ. ಅಂತಹ ಅಭಿವೃದ್ಧಿ ಮಾದರಿಗಳನ್ನೇ ದಲಿತ ಬುದ್ಧಿ ಜೀವಿಗಳು, ದಲಿತ ಅಭಿವೃದ್ಧಿ ಪರ ಚಿಂತಕರು ಮಂಡಿಸುತ್ತಿರುವುದನ್ನು ಕಾಣುತ್ತೇವೆ. (ಅಮರ್ತ್ಯಸೇನ್ : 2001, ರಾಘವೇಂದ್ರರಾವ್ : 1990, ಬಾಲಚಂದ್ರ ಮುಂಗೇಕರ : 2002, ಯೋಗೇಶ ವರ್ಧಾಡೆ : 2002, ಮನೋಹರ ಯಾದವ : 2004 ಇತ್ಯಾದಿ)

ಅಸ್ಪೃಶ್ಯತೆಯ ರಾಜಕೀಯ ಆಯಾಮ ಕುರಿತ ಸಮಾಜೋ - ಮಾನವಶಾಸ್ತ್ರದ (Socio-Anthropological) ಅಧ್ಯಯನ ಮಾಡಿರುವ ಡಾ. ಮನೋಹರ ಯಾದವ, 'ಆರ್ಥಿಕವಾಗಿ ನಮ್ಮನ್ನು ಸಲಹುವ ಶಕ್ತಿ ನಮ್ಮಿಂದಲೇ ಹೊರಹೊಮ್ಮಬೇಕು. ಒಟ್ಟಾರೆ ವ್ಯವಸ್ಥೆಯ ಮೇಲಿರುವ ದಲಿತರ ಅವಲಂಬನೆ ತಪ್ಪಬೇಕು. ವ್ಯವಸ್ಥೆ ದಲಿತರಿಗೆ ಸೋಲಬೇಕು, ಹೊರತು ದಲಿತರು ವ್ಯವಸ್ಥೆಗೆ ಸೋಲಬಾರದು. ಕಾರಣ ದಲಿತರು ವ್ಯವಸ್ಥೆಯ ಮೇಲೆ ಅವಲಂಬಿಸಿರುವಷ್ಟೇ ಪ್ರಮಾಣದಲ್ಲಿ ವ್ಯವಸ್ಥೆಯೂ ದಲಿತರ ಮೇಲೆ ಅವಲಂಬಿಸಿದೆ. ದಲಿತರ ಪ್ರಗತಿ ಅನ್ನುವಂತಹದ್ದು 'ಬುದ್ದಿಸ್ಟ್ ವಿಧಾನದ' ಮೂಲಕ ನಡೆಯಬೇಕಾಗಿರುವುದರಿಂದ, ಅಂತಹ ಪ್ರಗತಿಗೆ ಮಾನವೀಯ ಮುಖವಿರಬೇಕೆ ಹೊರತು ಲೋಭ, ದುರಾಸೆ, ಹಗೆತನ ಮತ್ತು ನಿರಾಶೆಗಳಿಗೆ ಅಲ್ಲಿ ಸ್ಥಾನ ಇರಕೂಡದು[38]' ಎಂದು ಹೇಳುವಲ್ಲಿ ಅಂಬೇಡ್ಕರ್‌ರವರಿಂದ ಪರಿಕಲ್ಪನೆಯೇ ಪ್ರತಿಬಿಂಬಿತವಾಗಿರುವುದನ್ನು

ಕಾಣುತ್ತೇವೆ. ಅವರು ಮುಂದುವರೆದು ಬರೆಯುತ್ತಾ 'ಈಗ ನಾವು ಸ್ಥಳೀಯವಾಗಿ, ರಾಷ್ಟ್ರೀಯವಾಗಿ ಹಾಗೂ ಜಾಗತಿಕವಾಗಿ ಕೇವಲ ಪರಾವಲಂಬಿಗಳಾಗಿದ್ದೇವೆ. ಯಾರು ಶೋಷಣಾತ್ಮಕ ವ್ಯವಸ್ಥೆಯ ರೂವಾರಿಗಳಾಗಿದ್ದಾರೋ ಅವರೇ ನಮ್ಮ ಅಭಿವೃದ್ಧಿಯ ರೂಪುರೇಷೆಗಳನ್ನು ಬರೆಯುವವರೂ ಆಗಿದ್ದಾರೆ. ಹೀಗಾಗಿ ಪ್ರಜಾಸತ್ತೆಯ ಹೆಸರಿನಲ್ಲಿ ತೇಪೆ ಹಾಕುವ ತಂತ್ರಗಳಿಗೆ ಬಲಿಪಶುಗಳಾಗುತ್ತಲೇ ಹೊರಟಿದ್ದೇವೆ. ಈ ಅವಸ್ಥೆಯಿಂದ ದಲಿತರು ಪಾರಾಗಬೇಕು[39]' ಎಂದು ಮಹತ್ವದ ಸೂಚನೆ ನೀಡುತ್ತಾರೆ.

ಇನ್ನೊಂದು ಮಹತ್ವದ ಸಮಕಾಲೀಯ ತಿಳುವಳಿಕೆಯ ಅನಾವರಣವೂ ಈ ಅಧ್ಯಯನದಲ್ಲಿ ಪ್ರಸ್ತಾಪವಾಗಲೇ ಬೇಕಾಗಿದೆ. ಭಾರತದಾದ್ಯಂತ ಈ ಹೊತ್ತು ಲಕ್ಷ ಲಕ್ಷ ಸಂಖ್ಯೆಯಲ್ಲಿ ದಲಿತರು ಬೌದ್ಧ ಧರ್ಮಕ್ಕೆ ಮತಾಂತರವಾಗುವುದರಿಂದ ಅವರೆಲ್ಲ ದಿಢೀರನೇ, ಅಭಿವೃದ್ಧಿ ಹೊಂದಿದ ಜನಾಂಗವಾಗುತ್ತದೆಂಬ ಎಂಬ ಪೂರ್ವಾಗ್ರಹದಿಂದ ನೋಡದಿರುವ ಅವಶ್ಯಕತೆ ಇದೆ. ಹೀಗೆ ಮತಾಂತರ ಚಳುವಳಿಯನ್ನು ತಕ್ಷಣದ ಫಲಗಳ ದೃಷ್ಟಿಯಿಂದ ಗ್ರಹಿಸಿ ಅರ್ಥೈಸಿದರೆ ದಲಿತರ ಪೂರ್ಣ ಪ್ರಮಾಣದ ಪ್ರಗತಿಯ ಪರಿಕಲ್ಪನೆ ಸ್ಪಷ್ಟವಾಗಲಾರದು, ಹಾಗೆ ಪ್ರಯತ್ನಿಸಲೂಬಾರದು. ಹಾಗೇನಾದರೂ ಪ್ರಯತ್ನಿಸಿದರೆ ಸನಾತನ ವೈಧಿಕ ಅಸಮಾನತೆಯನ್ನೇ ನಾವು ಅನುಮೋದಿಸಿದಂತಾಗುತ್ತದೆ. ಮತಾಂತರದಿಂದ ಪವಾಡಗಳನ್ನು ನಿರೀಕ್ಷಿಸಲಾಗದು. ಆರ್ಥಿಕ ದಾರಿದ್ರ್ಯಕ್ಕೆ (Economical Poverty) ಮೂಲಕಾರಣವಾದ ಹಿಂದೂ ಸನಾತನ ವ್ಯವಸ್ಥೆ ದಲಿತರ ಶಕ್ತಿಯನ್ನೇ ನಾಶಗೊಳಿಸಿ ಬಲವಂತದಿಂದ ಬೌದ್ಧಿಕ ದಾರಿದ್ರ್ಯ (Intellectual Poverty) ಕ್ಕೆ ತಳ್ಳಿದ ಮೂಲಕಾರಣವನ್ನೇ ಮೂಲೋತ್ಪಾಟನೆ ಮಾಡುವ, ದೂರಗಾಮಿ ಬದಲಾವಣೆಯ ಗುರಿಯನ್ನು ಮತಾಂತರ, ಬೌದ್ಧ ಐಡೆಂಟಿಟಿ ಹೊಂದಿರುವುದನ್ನು ಗಮನಿಸಬೇಕಾಗುತ್ತದೆ.

ಆದ್ದರಿಂದ ಸರ್ಕಾರಗಳು, ಅಂತರರಾಷ್ಟ್ರೀಯ ಸಂಘ - ಸಂಸ್ಥೆಗಳು ದಲಿತರ ಅಭಿವೃದ್ಧಿಯನ್ನು ಏಕಮುಖಿಯಾಗಿ ಗ್ರಹಿಸದೇ,

1) ಆರ್ಥಿಕ ಸ್ವಾತಂತ್ರ್ಯ (Economical Liberation)
2) ಸಾಂಸ್ಕೃತಿಕ ಸ್ವಾತಂತ್ರ್ಯ (Cultural Liberation)

ಈ ಎರಡೂ ಮಹತ್ವದ ಆಯಾಮಗಳಲ್ಲಿ, ಅಭಿವೃದ್ಧಿ ಮಾದರಿಗಳನ್ನು (Development Models) ವಿನ್ಯಾಸಗೊಳಿಸಬೇಕಾದ ಅಗತ್ಯತೆಯನ್ನು ಪ್ರಸ್ತುತ ಅಧ್ಯಯನ ಪ್ರತಿಪಾದಿಸಲು ಬಯಸುತ್ತದೆ. ಮಾನವ ಅಭಿವೃದ್ಧಿ ಸೂಚ್ಯಾಂಕ (Human Development Index) ನಲ್ಲಿ ಗಣನೀಯವಾಗಿ ಕೆಳಗಿಳಿದ ಭಾರತ ಈ ಆಯಾಮಗಳನ್ನು ಗಂಭೀರವಾಗಿ ಪರಿಗಣಿಸಬೇಕಾಗುತ್ತದೆ. ಪಾವ್ಲೋ ಫ್ರೇಯರೆ ಹೇಳಿದಂತೆ 'ಕಳಂಕಿತ ಜನಾಂಗಿಕ ಐಡೆಂಟಿಟಿಯಿಂದ (Stigmatized Ethnic Identity) "ಸಾಂಸ್ಕೃತಿಕ ದಬ್ಬಾಳಿಕೆಗೆ ಒಳಗಾದ ತಳ ಸಮುದಾಯಗಳು ಬೌದ್ಧಿಕ ದಾರಿದ್ರ್ಯದಿಂದ ವಿಮೋಚನೆಗೊಳ್ಳದಿದ್ದರೆ ಆ ಜನಾಂಗಗಳು ಸೋಲುತ್ತವೆ". ಅಷ್ಟೇ ಅಲ್ಲ ಅವರಿಗಾಗಿ ಹಮ್ಮಿಕೊಳ್ಳುವ ಸಾಂವಿಧಾನಿಕ ಅಭಿವೃದ್ಧಿ ಕಾರ್ಯಕ್ರಮಗಳು ನಿರೀಕ್ಷಿತ ಫಲಕಾಣದೇ, ಅಥವಾ ಸೂಕ್ತವಾಗಿ ಅನುಷ್ಠಾನಗೊಳ್ಳದೇ ಮೀಸಲಾತಿ ಹಣ ಹಾಗೆಯೇ ಖಜಾನೆಗಳಲ್ಲಿ ಕೊಳೆಯಲು, ಪೋಲಾಗಲು ಕಾರಣವಾಗುತ್ತವೆ. ಬೌದ್ಧ ಧರ್ಮವನ್ನು ಒಂದು 'ಧರ್ಮ' ದ ಮಟ್ಟಕ್ಕೆ

ಸರಳೀಕರಿಸಿ ನೋಡುವ ಬದಲಾಗಿ ಸರ್ಕಾರಗಳು ದಲಿತರಿಗೆ ಖರ್ಚು ಮಾಡುವ ಹಣದಲ್ಲಿ ಹೆಚ್ಚಿನ ಪಾಲು ಸಾಂಸ್ಕೃತಿಕ ಆಯಾಮಗಳಲ್ಲಿ ವಿನಿಯೋಗಿಸುವ ಅಗತ್ಯವಿದೆ. ವಿಹಾರ ಕಟ್ಟಿಸಿಕೊಡಲು ಸಾಧ್ಯವಾಗದಿದ್ದರೂ, ವಿಹಾರ ಕಟ್ಟಿಸಿಕೊಂಡು ಆ ಮೂಲಕ ತಮ್ಮ ಸಾಂಸ್ಕೃತಿಕ ಲೋಕ ಸೃಷ್ಟಿಕೊಳ್ಳುತ್ತಿರುವ ದಲಿತ ಬೌದ್ದರಿಗೆ ಭೂಮಿಯನ್ನಾದರೂ ಆದ್ಯತೆ ಮೇಲೆ ಮಂಜೂರಿಸುವ ಅಗತ್ಯವನ್ನು ಅಧ್ಯಯನಕಾರನು ಸಂದರ್ಶಿಸಿದ ಹಲವಾರು ಬೌದ್ದ ಉಪಾಸಕರು ವ್ಯಕ್ತಪಡಿಸಿದ್ದಾರೆ.

ಸಂವಿಧಾನದ ಅಲ್ಪ ಸಂಖ್ಯಾತ ಪರಿಕಲ್ಪನೆಯಲ್ಲಿ ಕೇವಲ ಕ್ರೈಸ್ತರು, ಮುಸ್ಲೀಮರು, ಜೈನರನ್ನು ಪರಿಗಣಿಸದೇ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ ದಲಿತ ಬಹುಜನರನ್ನು ಅಲ್ಲಿನ ಧಾರ್ಮಿಕ ಹಕ್ಕಿನ ಹಿನ್ನೆಲೆಯ ಸೌಕರ್ಯಗಳಿಗೆ ಪರಿಗಣಿಸಬೇಕಾಗಿದೆ. ಸರ್ಕಾರದ ಧಾರ್ಮಿಕ ದತ್ತಿ ದಾನಗಳ ಹಣವನ್ನು ಯಾರು, ಎಷ್ಟು ವಿನಿಯೋಗಿಸಿಕೊಂಡಿದ್ದಾರೆಂಬ ಅಧ್ಯಯನ ನಡೆಯಬೇಕಾದ ಅನಿವಾರ್ಯ ಕ್ರಮವೂ ಅಗತ್ಯವಾಗಿರುವ ಬಗ್ಗೆ ಅಧ್ಯಯನಕ್ಕೆ ಸಂದರ್ಶನ ನೀಡಿದ ವಕ್ತೃಗಳು ಅಭಿಪ್ರಾಯ ಪಟ್ಟಿದ್ದಾರೆ.

ಸಾಂಸ್ಕೃತಿಕ ಆಯಾಮವನ್ನು ನಿರ್ಲಕ್ಷಿಸಿದ್ದರಿಂದಲೇ ಇವತ್ತು ತಳ ಸಮುದಾಯಗಳು ನಿರೀಕ್ಷಿತ ಶಿಕ್ಷಣದ ಮಟ್ಟ ತಲುಪದೆ ಶಾಲಾ ವ್ಯವಸ್ಥೆಯಿಂದ ಹೊರಗುಳಿಯುತ್ತಿರುವುದನ್ನು ಗಂಭೀರವಾಗಿ ಪರಿಗಣಿಸಬೇಕು. ಅವರ ಸಾಂಸ್ಕೃತಿಕ ಹಿನ್ನೆಲೆಯನ್ನು, ಅವರು ಬೆಳೆದು ಬಂದ ಪರಿಸರವನ್ನು ಪರಿಗಣಿಸಿ ವಿಶೇಷ ಕಾರ್ಯತಂತ್ರಗಳಿಂದ ನಿಜವಾದ ಅರ್ಥದ ಶಿಕ್ಷಣ ಕೊಡಬೇಕಾಗಿದೆ. ಇಲ್ಲದೇ ಹೋದರೆ ನಮ್ಮ ದೇಶವು ಜಾಗತಿಕ ಮಾನವ ಅಭಿವೃದ್ಧಿ ಸೂಚ್ಯಾಂಕದಲ್ಲಿನ 127 ನೇ ಸ್ಥಾನದಿಂದ ಮೇಲೇಳಲಾರದು'[40]. ಅದೇ ರೀತಿ ಮಾನವ ಅಭಿವೃದ್ಧಿ ಸಾಧಿಸಬೇಕಾದರೆ ಸಾಂಸ್ಕೃತಿಕ ಐಡೆಂಟಿಟಿಗೆ, ಸಾಂಸ್ಕೃತಿಕ ಸ್ವಾತಂತ್ರ್ಯಕ್ಕೆ (Cultural Liberty) ಮಹತ್ವ ನೀಡಲೇಬೇಕಾಗುತ್ತದೆ ಎಂದು ತಜ್ಞರು ಅಭಿಪ್ರಾಯ ಪಡುತ್ತಿದ್ದಾರೆ. ಜಾಗತಿಕ ಮಾನವ ಅಭಿವೃದ್ಧಿ ಸೂಚ್ಯಾಂಕದ ವರದಿಯನ್ನು (2004) ಸಿದ್ಧಪಡಿಸಿದ ತಜ್ಞರು 'ಮಾನವ ಅಭಿವೃದ್ಧಿ ಸಾಧಿಸಲು ಆರೋಗ್ಯ, ಶಿಕ್ಷಣ ಮತ್ತು ಅಪೇಕ್ಷಿತ ಜೀವನಮಟ್ಟ ಮತ್ತು ರಾಜಕೀಯ ಸ್ವಾತಂತ್ರ್ಯ ಮೂಲಕಾರಣವಾಗಿವೆ. ಸಾಂಸ್ಕೃತಿಕ ಐಡೆಂಟಿಟಿಯನ್ನು ಸರ್ಕಾರಗಳು ಪರಿಗಣಿಸಲೇಬೇಕಾದ ಅನಿವಾರ್ಯತೆ ಇದೆ. ಸಾಂಸ್ಕೃತಿಕ ಐಡೆಂಟಿಟಿ ಹೊಂದುವುದು ಮಾನವ ಹಕ್ಕು, ಸರ್ಕಾರ ಕೂಡಲೇ ಗಮನಹರಿಸಿ ಈ ಕುರಿತು ಕ್ರಿಯಾಶೀಲವಾಗಬೇಕು'[41] ಎಂದು ಒತ್ತಾಯಿಸಿರುವುದನ್ನು ನೋಡುತ್ತೇವೆ. ಈ ಹಿನ್ನೆಲೆಯಲ್ಲಿಯೇ ನಾವು ದಲಿತರ ಸಾಂಸ್ಕೃತಿಕ ಬದುಕಿನ ಕುರಿತು ಅದರ ಸ್ವಾತಂತ್ರ್ಯದ ಕುರಿತು ಗಮನಹರಿಸಲೇ ಬೇಕಾಗುತ್ತದೆ. ಇವತ್ತಿನ ಸೌಲಭ್ಯಗಳನ್ನು ಸಾಂಸ್ಕೃತಿಕ ಬದುಕಿನ ಹಿನ್ನಲೆಯಲ್ಲಿ ಪುನರ್ ಪರಿಶೀಲಿಸಿ ಅವುಗಳಲ್ಲಿ ಸುಧಾರಣೆಗಳ ಕಾರ್ಯತಂತ್ರಗಳನ್ನು ಅಳವಡಿಸಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಬೇಕಾಗುತ್ತದೆ. ಪರಿಶಿಷ್ಟ ಜಾತಿ ಜನಾಂಗದ ವಸತಿಗ್ರಹಗಳಲ್ಲಿ ಇಂದು ತೀರ ಶೋಚನೀಯ ಪರಿಸ್ಥಿತಿ ಇದೆ. ಗ್ರಾಮಗಳನ್ನು ತೊರೆದು ಹಾಸ್ಟೆಲ್‌ಗಳಲ್ಲಿರುವ ಮಕ್ಕಳಿಗೆ ಸೂಕ್ತ ಮಾರ್ಗದರ್ಶನವಿಲ್ಲದೇ, ನಿರೀಕ್ಷಿತ ಬದಲಾವಣೆ ಸಾಧಿಸದೇ ಉದ್ದೇಶ ನಿರರ್ಥಕವಾಗಿರುವ ಅಂಶಗಳನ್ನು ಹಲವಾರು ಅಧ್ಯಯನಗಳು ಸೂಚಿಸಿವೆ. ದಲಿತ ಜನಾಂಗದಿಂದ ಬಂದ ಮಕ್ಕಳಿಗೆ ಬೌದ್ಧ ಮಾದರಿಯ ವ್ಯಕ್ತಿತ್ವ ನಿರ್ಮಾಣ ಮತ್ತು ನಾಯಕತ್ವ ಗುಣ ಬೆಳೆಸುವ ಶಿಬಿರಗಳನ್ನು 'ವಿಪಷ್ಯನ ಧ್ಯಾನ' ಶಿಬಿರಗಳನ್ನು ಸಂಘಟಿಸುವುದು ಉತ್ತಮ ಕೊಡುಗೆಯಾಗಬಲ್ಲದು.

ಡಾ. ಅಂಬೇಡ್ಕರ್‌ರವರು ತಾವು ಪ್ರಾರಂಭಿಸಿದ ವಸತಿ ಗೃಹಗಳಲ್ಲಿ ಇಂತಹ ಶೈಕ್ಷಣಿಕ ಆಯಾಮಗಳಿಗೆ ಒತ್ತು ಕೊಟ್ಟಿದ್ದನ್ನು ನಾವು ಮಹಾರಾಷ್ಟ್ರ ರಾಜ್ಯದ ಮುಂಬೈ, ನಾಸಿಕ, ಪಣವೇಲ, ಮರಾಠವಾಡಾ ಪ್ರದೇಶಗಳಲ್ಲಿ ನೋಡುತ್ತೇವೆ. 2001 ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿ 4 ಲಕ್ಷ ಬೌದ್ಧರೆಂದು ವರದಿಯಾಗಿದೆಯಾದರೂ ಜನಗಣತಿಯ ಪ್ರಕ್ರಿಯೆಯನ್ನು ಸರಿಪಡಿಸಲು (Rationalisation of Census Process) ಖಚಿತವಾದ ಅಂಕಿ ಸಂಖ್ಯೆಗಳ ಕ್ರೋಢಿಕರಣಕ್ಕೂ ಪ್ರಸ್ತುತ ಅಧ್ಯಯನದಲ್ಲಿ ಹಲವಾರು ಬೌದ್ಧ ವಕ್ತಾರರು ಪ್ರತಿಪಾದಿಸಿರುವುದನ್ನು ಕಾಣುತ್ತೇವೆ. 'ಬೌದ್ಧ' ರೆಂದು ಜಾತಿ ಪತ್ರ ನೀಡಲು ಅನುಭವಿಸುವ ತೊಂದರೆಗಳು, ದೌರ್ಜನ್ಯಗಳು ವರದಿಯಾಗಿದ್ದನ್ನು ನೋಡಿದ್ದೇವೆ. (ಅನುಬಂಧ 5, 6, 7 ಮತ್ತು 8 ರಲ್ಲಿ ಹಲವಾರು ವಿವರಗಳನ್ನು ನೋಡಬಹುದು). ಹೀಗೆ ಪ್ರಸ್ತುತ ಅಧ್ಯಯನ ವಸಹಾತುಷಾಹಿಯೋತ್ತರ ಭಾರತದಲ್ಲಿ ದಲಿತ ವಿಮೋಚನೆಯ ಕಾರ್ಯತಂತ್ರವಾಗಿ ಬೌದ್ಧ ಧರ್ಮವನ್ನು ಗ್ರಹಿಸಿ ಲಭ್ಯವಾದ ಮಾಹಿತಿ ಮತ್ತು ಅವಲೋಕನಾತ್ಮಕವಾಗಿ ಗ್ರಹಿಸಿದ ಸೀಮಿತ ವ್ಯಾಪ್ತಿಯಲ್ಲಿ 'ದಲಿತರ ಪೂರ್ಣ ಪ್ರಮಾಣದ ವಿಮೋಚನೆ'ಯ ಚರ್ಚೆಗೆ ಒಂದು ಬೌದ್ಧಿಕ ಆಕರವನ್ನು ಒದಗಿಸಲು ಪ್ರಯತ್ನಿಸಿದೆ.

ಹೀಗೆ, ಕನ್ನಡದ ಸಾಂಸ್ಕೃತಿಕ ಅಧ್ಯಯನಗಳ ಸಾಲಿನಲ್ಲಿ ಪ್ರಸ್ತುತ ಅಧ್ಯಯನ ಪೂರ್ಣ ಪ್ರಮಾಣದ ದಲಿತ ವಿಮೋಚನೆಗೆ, ಅವರು 'ಸಾಂಸ್ಕೃತಿಕ ಸ್ವಾತಂತ್ರ್ಯ' ಸಾಧಿಸುವುದು ಮತ್ತು 'ಐಡೆಂಟಿಟಿ' ಹೊಂದುವುದು ಅಗತ್ಯವೆಂದು ಪ್ರತಿಪಾದಿಸುತ್ತ ತನ್ನದೇ ಆದ ವಿಶಿಷ್ಟತೆ ಹೊಂದಿದೆ. ಆದಾಗ್ಯೂ ಈ ನಿಟ್ಟಿನಲ್ಲಿ ಇನ್ನೂ ಹಲವಾರು ಕ್ಷೇತ್ರ, ಉಪಕ್ಷೇತ್ರಗಳಲ್ಲಿ ಬೌದ್ಧ ಸಾಂಸ್ಕೃತಿಕ ನೆಲೆಗಳ ಸಂಶೋಧನಗಳು ನಡೆಯಬೇಕಾದ ಅವಶ್ಯಕತೆ ಇದೆ. ಆ ಮೂಲಕ ಶೋಷಿತ ಸಮುದಾಯಗಳು ಹಿಂದೂ ಧಾರ್ಮಿಕ ವರ್ಣಾಶ್ರಮ ವ್ಯವಸ್ಥೆಗೆ ಪರ್ಯಾಯವಾಗಿ ರೂಪಿಸಿಕೊಂಡ ಶ್ರೀಮಂತ 'ಬೌದ್ಧ ಸಾಂಸ್ಕೃತಿಕ ಐಡೆಂಟಿಟಿಯ' ನೆಲೆಯನ್ನು, ಸಾಂಸ್ಕೃತಿಕ ಸ್ವಾತಂತ್ರ್ಯವನ್ನು ಪರಿಕಲ್ಪಿಸಿ ಭಾರತದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನ ಚರಿತ್ರೆ ರೂಪಿಸಬೇಕಾಗಿದೆ. ಯಾವುದೇ ಜನರ ಧರ್ಮದ ಚರಿತ್ರೆ ಎಂದರೆ ಆ ಜನರ ಬದುಕಿನ ಚರಿತ್ರೆ ಎಂಬುದನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಸಾಂಸ್ಕೃತಿಕ ಐಡೆಂಟಿಟಿಯ ಬೆನ್ನಲ್ಲೇ ಅವರ ಮಾನವ ಹಕ್ಕುಗಳ ಹಿತಾಸಕ್ತಿಗಳು ಅಡಗಿವೆ ಎಂಬುದನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಈ ರೀತಿಯ ಪರ್ಯಾಯ ಸಾಂಸ್ಕೃತಿಕ ಅಧ್ಯಯನಗಳು ಸಬಾಲ್ಟರ್ನ್ ಕಣ್ಣೋಟಗಳಿಂದ ನಡೆಯಬೇಕಾಗಿರುವುದು ಈ ಕಾಲದ ತುರ್ತು ಅವಶ್ಯಕತೆಯಾಗಿದೆ. ಅಂತಹ ಕೆಲವು ಅಧ್ಯಯನ ಕ್ಷೇತ್ರಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

1) ಬೌದ್ಧಪಂಥೀಯ ಶಿಕ್ಷಣ ಕ್ರಮ ಮತ್ತು ಪ್ರಯೋಗಗಳು (ದಲಿತ ವಿಮೋಚನೆಯ ನೆಲೆಯಲ್ಲಿ).

2) ದಲಿತರ ಸಾಂಸ್ಕೃತಿಕ ವೇದಿಕೆಯಾಗಿ ಬೌದ್ಧ ವಿಹಾರಗಳು.

3) ವಿಹಾರಗಳು ಮತ್ತು ದಲಿತಾಭಿವೃದ್ಧಿ

4) ಬೌದ್ಧ ಬಿಕ್ಕುಗಳು ಮತ್ತು ಸಮಾಜ ಸೇವಾ ಕಾರ್ಯ.

5) ಕನ್ನಡ ಸಾಹಿತಿಗಳು ಮತ್ತು ಬೌದ್ಧ ಧರ್ಮ

6) ಕರ್ನಾಟಕದಲ್ಲಿ ಮತಾಂತರ ಚಳುವಳಿ.

7) ಬೌದ್ಧ ಮಾದರಿಯ ಆರ್ಥಿಕತೆ ಮತ್ತು ದಲಿತ ವಿಮೋಚನೆ.

8) ಮಹಿಳಾ ವಿಮೋಚನೆಯ ಕಾರ್ಯತಂತ್ರವಾಗಿ ಬೌದ್ಧಧರ್ಮ.

9) ಬೌದ್ಧಧರ್ಮ ಮತ್ತು ದಲಿತ ಮಾನವ ಹಕ್ಕುಗಳು.

10) ಮೂಲನಿವಾಸಿಗಳ ಸಂಸ್ಕೃತಿ ಮತ್ತು ದಲಿತರ 'ಧರ್ಮದ' ಹುಡುಕಾಟ.

11) ದಲಿತ ಚಳುವಳಿ ಮತ್ತು ಬೌದ್ಧಧರ್ಮ.

12) ಜಾತಿ ವ್ಯವಸ್ಥೆಯ ಪ್ರಚಲಿತ ಸಮಸ್ಯೆಗಳು (ಬೌದ್ಧ ಧರ್ಮದ ಹಿನ್ನೆಲೆಯ ವಿಶ್ಲೇಷಣೆ)

ಹೀಗೆ ಹತ್ತು ಹಲವಾರು ಆಯಾಮಗಳಲ್ಲಿ ಆಳವಾದ ಅಧ್ಯಯನಗಳು ನಡೆಯಬೇಕಾಗಿದೆ.

★★★★★★

# ಸಂದರ್ಭಸೂಚಿ


| | | | |
|---|---|---|---|
| 1. | ಕುಮಾರ ಕಕ್ಕಯ್ಯ ಪೋಳ, 1983 | : | ಬಸವಧರ್ಮ ಯಾರ ಸೊತ್ತು? ಕುಮಾರ ಕಕ್ಕಯ್ಯ ಪೋಳ, ಪ್ರಕಾಶನ, ಬಿಜಾಪೂರ, 2001, ಪುಟ : 109. |
| 2. | ದೆಹಲಿ ವಾರ್ತೆ | : | 24-10-2005. |
| 3. | ಸರಜೂ ಕಾಟ್ಕರ್, 2003 | : | 'ಬಸವ ಮತ್ತು' ವೀರಶೈವ ಅಧ್ಯಯನ ಅಕಾಡೆಮಿ, ಶ್ರೀ ನಾಗನೂರ ರುದ್ರಾಕ್ಷಿಮಠ, ಬೆಳಗಾವಿ, ಪುಟ ;5. |
| 4. | ಅದೇ | : | ಪುಟ ; 6. |
| 5. | ಅದೇ | : | ಪುಟ ; 13. |
| 6. | ಅದೇ | : | ಪುಟ ; 22-23. |
| 7. | ಅದೇ | : | ಪುಟ ; 94. |
| 8. | ಅದೇ | : | ಪುಟ ; 96. |
| 9. | ಶಿವರುದ್ರ ಕಲ್ಲೋಳ್ಕರ, 2003 | : | 'ಬಸವ ತತ್ವ: ತಳ ವರ್ಗದ ದೃಷ್ಟಿಯಲ್ಲಿ' ಬಸವತತ್ವ: ಸಾಮಾಜಿಕ ಬದಲಾವಣೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ; 106. |
| 10. | ಮಹೇಶ ತಿಪ್ಪಶೆಟ್ಟಿ(ಸಂ), 2003 | : | ಬಸವ ತತ್ವ: ಸಾಮಾಜಿಕ ಬದಲಾವಣೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ; ಪುಟ: 5. |
| 11. | ಅದೇ | : | ಅದೇ ಪುಟ. |
| 12. | ಅದೇ | : | ಅದೇ. |
| 13. | ವೀರಭದ್ರ ಚನ್ನಮಲ್ಲ ಸ್ವಾಮೀಜಿ, 1995 | : | ಚಿಂತನ ಚೇತನ, ಮಾನವ ಧರ್ಮ ಪ್ರಕಾಶನ, ಬೆಂಗಳೂರು, ಪುಟ ; 49. |
| 14. | ಅದೇ | : | ಪುಟ ; 49. |
| 15. | ಶಿವಮೂರ್ತಿ ಶರಣರು, 2005 | : | 'ಧರ್ಮ ಮತ್ತು ಪ್ರಜಾಪ್ರಭುತ್ವ' ಸಂವಾದ ಸಂಪುಟ, 3, ಸಂಚಿಕೆ, 5, 2005, ಪುಟ : 14. |

| | | | |
|---|---|---|---|
| 16. | ಅದೇ | : | ಅದೇ ಪುಟ : 15. |
| 17. | ಅದೇ | : | ಅದೇ |
| 18. | ರಾಘವೇಂದ್ರರಾವ್ ಕೆ., 1998 | : | ದಿನಾಂಕ : 14.10.1998 ರಂದು ಕರ್ನಾಟಕ ವಿಶ್ವವಿದ್ಯಾಲಯದ ಡಾ. ಅಂಬೇಡ್ಕರ್ ಅಧ್ಯಯನ ಪೀಠವು ಹಮ್ಮಿಕೊಂಡಿದ್ದ ಧರ್ಮ ಪರಿವರ್ತನೆಯ ಅವಶ್ಯಕತೆ ಮತ್ತು ಪ್ರಸ್ತುತತೆ, ವಿಚಾರ ಸಂಕೀರಣದಲ್ಲಿ ಮಂಡಿಸಿದ ವಿಚಾರಗಳ ಆಯ್ದ ಭಾಗ, ಧಾರವಾಡ. |
| 19. | ಅದೇ | : | ಅದೇ |
| 20. | ಹನಮಂತಯ್ಯ ಎಲ್, 2000 | : | ಜಾತ್ಯತೀತ ಸಮಾಜವಾದಕ್ಕೆ ಹಂಬಲಿಸಿದ ಅಂಬೇಡ್ಕರ್, ಪ್ರಜಾವಾಣಿ ಸಾಪ್ತಾಹಿಕ ಲೇಖನ. |
| 21. | Vardhan B.K.S., 1992 | : | "Contributions of Dr. B.R. Ambedkar to Indian Education", in proceeding Volume of South, Indian History Congress Session, XII$^{th}$ Dharwad, p.169. |
| 22. | Rodrigues Valerian, 2002 | : | The Essential Writings of B.R. Ambedkar, Oxford University Press, New Delhi, p-383. |
| 23. | Jayashree B. Gokhale, 1986 | : | "The Sociological Effects of Ideological Change : The Buddhist Conversion of Maharashtrian Untouchables" in "Journal of Asian Studies" VOL. XLV. No. 2, University of Pensylvania, p.270. |
| 24. | Manohar Yadav, 1998 | : | 'Career of Dalit Movement in Karnataka' in "Journal of Social Economic Development Vol. No. 1, ISEC, Bangalore, p. 111. |
| 25. | ಲಕ್ಷ್ಮಣ ತೆಲಗಾವಿ, 1999 | : | ಹಿಂದುಳಿದ ವರ್ಗಗಳ ಮತ್ತು ದಲಿತ ವರ್ಗಗಳ ಚಳವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ ; 79. |

26. ನಟರಾಜ್ ಹುಳಿಯಾರ, 2003 : 'ಆಗ್ರಾದ ದಲಿತರ ಬೌದ್ಧ ಧರ್ಮ ಸ್ವೀಕಾರ : ಮಾನವ ಶಾಸ್ತ್ರಜ್ಞನ, ನೋಟ' (ಓವೆನ್ ಲಿಂಚ್ ಲೇಖನದ ಅನುವಾದ) ಅಂಬೇಡ್ಕರ್‌ವಾದ ಮಾಸಿಕ, ಸಂಪುಟ;1, ಸಂಚಿಕೆ ; 2, ಕರ್ನಾಟಕ ದಲಿತ ಸಂಘರ್ಷ ಸಮಿತಿ (ರಿ)., ಅಂಬೇಡ್ಕರ್‌ವಾದ, ಬೆಂಗಳೂರು, ಪುಟ: 12-13.

27. Anand Siriyavan, 2003 : "Caste on the Couch" do Brahmanical Ideologies Permeate. Indian Psychological Theory'. A Report, www.himalmag.com. p.1-9.

28. Bhikku Shantibadhra, 1966 : "Bodhisatva Ambedkar" in wilkinson T.S. & Thomas M.M. (ed) : Ambedkar and Neo-Buddhist Movement. The Christian Literature Society, Madras 1972, p.112.

29. ಅದೇ : ಅದೇ ಪುಟ.

30. Neera Burra, 1996 : "Buddhism Conversion and Identity : A Case Study of Village Mahars in M.N. Srinivas (ed) : Caste, its twentieth Century Avatar Viking (Panguin) New Delhi, p.155.

31. ಅದೇ : ಪುಟ ; 156.

32. ಅದೇ :

33. Taylor W. Richard, 1972 : "The Ambedkarite Buddhists" in T.S. Wilkinson & M.M. Thomas (ed): ಪೂರ್ವೋಕ್ತ, ಪುಟ; 163.

34. Ambedkar B.R., 1990 : "Waiting for a Visa" Reminiscences, Peoples Education Society, Bombay p.3

35. Hari Narake, 2003 : Dr. Babasaheb Ambedkar writings and speeches, Vol.17, Part Three., Govt. of Maharashtra, Mumbai p.152.

36. ನರೇಂದ್ರ ಜಾಧವ್, 1993 (ಮೂಲ) ಸುಮಾ ದ್ವಾರಕಾನಾಥ (ಅನು) : ಬಹಿಷ್ಕೃತ : ಒಂದು ನೆನಪು (A memoir of Dr. Narendra Jadhav's original title "Out Caste" English) ಆಮಿ, ಆಮ್ಚಾ ಬಾಪ್ (ಮರಾಠಿ) ನವಕರ್ನಾಟಕ ಪ್ರಕಾಶನ, ಬೆಂಗಳೂರು, 2005, ಪುಟ ; 275.

37. ಅದೇ : ಪುಟ ; 269.

38. ಮನೋಹರ ಯಾದವ, 2004 : 'ದಲಿತರ ಪೂರ್ಣ ಪ್ರಮಾಣದ ವಿಮೋಚನೆ ಅಂಬೇಡ್ಕರ್‌ವಾದ, ಕರ್ನಾಟಕ ದಲಿತ ಸಂಘರ್ಷ ಸಮಿತಿ (ರಿ)., ಬೆಂಗಳೂರು, ಸಂಪುಟ ; 1, ಸಂಚಿಕೆ : 3, ಪುಟ : 12.

39. ಅದೇ : ಪುಟ ; 12.

40. Wikpidia free Encyclopeida Internet site.

41. Sakiko Fukuda parr and others : 2004 Human Development Report – 2004 : Cultural Liberty in Today's Diverse World United Nations Programme, UNDP. New York, USA : 2004, p.6



## ಅನುಬಂಧಗಳು

I. ಬೌದ್ಧ ವಿಹಾರಗಳು, ಬೌದ್ಧ ಆಚರಣೆಗಳು ಹಾಗೂ ಪ್ರಮುಖ ವಕ್ತಾರರ ಭಾವಚಿತ್ರಗಳು.

II. ಕ್ಷೇತ್ರ ಕಾರ್ಯಕ್ಕೆ ಅಧ್ಯಯನಕ್ಕೆ ಬಳಸಿದ ಪ್ರಶ್ನಾವಳಿಗಳು.

- ಅ) ಬೌದ್ಧ ಉಪಾಸಕ, ಉಪಾಸಕಿಯರ ಸಂದರ್ಶನ, ಮಾಹಿತಿ ಸಂಗ್ರಹ ನಮೂನೆ.
- ಬ) ಬೌದ್ಧ ವಿಹಾರಗಳು ಹಾಗೂ ಸಾಂಸ್ಕೃತಿಕ, ಶೈಕ್ಷಣಿಕ ಸಂಘ ಸಂಸ್ಥೆಗಳ ಸಂದರ್ಶನ, ಮಾಹಿತಿ ಸಂಗ್ರಹ ನಮೂನೆ.
- ಕ) ಕರ್ನಾಟಕದ ಪ್ರಗತಿಪರ ಸಾಹಿತಿಗಳು, ಬುದ್ಧಿ ಜೀವಿಗಳು ಮತ್ತು ದಲಿತ ಬಹುಜನ ಚಳುವಳಿಯ ನೇತಾರರ ಸಂದರ್ಶನ, ಮಾಹಿತಿ ಸಂಗ್ರಹ ನಮೂನೆ.

III. ಅಧ್ಯಯನದಲ್ಲಿ ಸಂದರ್ಶಿಸಿದ, ಅಂಚೆಯಿಂದ ಮಾಹಿತಿ ನೀಡಿದ ವಕ್ತೃಗಳ ಪಟ್ಟಿ

- ಅ) ಸಂಶೋಧನಾರ್ಥಿ ಸಂದರ್ಶಿಸಿದ ಬೌದ್ಧ ಉಪಾಸಕ, ಉಪಾಸಕಿಯರು ಹಾಗೂ ಧಮ್ಮ ಸಂಘಟಕರು.
- ಬ) ಪ್ರಶ್ನಾವಳಿಯ ಮೂಲಕ ಪ್ರತಿಕ್ರಿಯೆ ಕಳುಹಿಸಿದವರು
  - i) ಬೌದ್ಧ ಉಪಾಸಕರು
  - ii) ಬೌದ್ಧ ಸಂಘ ಸಂಸ್ಥೆಗಳು
  - iii) ಬೌದ್ಧ ಚಿಂತಕರು, ಪ್ರಗತಿಪರ ಸಾಹಿತಿಗಳು ಮತ್ತು ದಲಿತ ಬಹುಜನ ಚಳುವಳಿಯ ನೇತಾರರು.

IV. ಬೌದ್ಧಧರ್ಮ ಸ್ವೀಕರಿಸಿದವರಿಗೆ ನೀಡುವ ಪ್ರಮಾಣ ಪತ್ರದ ಮಾದರಿಗಳು.

V. ಅಧ್ಯಯನಕ್ಕೆ ಸಂಬಂಧಿಸಿದ ಸುದ್ದಿ ಪತ್ರಿಕೆಗಳ ಮಹತ್ವದ ಕ್ಲಿಪಿಂಗ್ಸ್‌ಗಳು.

VI. ಬೆಂಗಳೂರಿನಲ್ಲಿ 1920 ರಲ್ಲಿ ನಡೆದ ದಕ್ಷಿಣ ಭಾರತ ಬೌದ್ಧ ಸಮ್ಮೇಳನದ ಗೊತ್ತುವಳಿಗಳು.

VII. ಸಂಶೋಧನಾರ್ಥಿ ಕ್ಷೇತ್ರ ಕಾರ್ಯಕ್ಕಾಗಿ ಸಂದರ್ಶಿಸಿದ ಸ್ಥಳಗಳು.

VIII. ಸಂವಿಧಾನ ತಿದ್ದುಪಡಿ ಆದೇಶ ಸಂಖ್ಯೆ : 15/1990 ರ ಕರ ಪತ್ರ ಮತ್ತು ಜಾತಿ ಪ್ರಮಾಣ ಪತ್ರ ನೀಡುವ ಬಗ್ಗೆ ಸರ್ಕಾರ ನೀಡಿದ ನಿರ್ದೇಶನಗಳು ಹಾಗೂ ಮಾದರಿಗಳು.

- ಅ. ಸಂವಿಧಾನ ತಿದ್ದುಪಡಿಯ ಆದೇಶ ಸಂಖ್ಯೆ : 15/1990 ರ ಪ್ರಕಾರ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ ದಲಿತರಿಗೆ ಮೀಸಲಾತಿ ಸೌಲಭ್ಯ ಕಲ್ಪಿಸಿದ ಆದೇಶವನ್ನು ಕರ್ನಾಟಕ ಬುದ್ಧದಮ್ಮ ಸಮಿತಿ ಪ್ರಚಾರ ಮಾಡಿದ ಕರಪತ್ರ.
- ಬ. 2001 ರ ಜನಗಣತಿಯಂತೆ ಭಾರತದಲ್ಲಿ ಬೌದ್ಧರ ಜನಸಂಖ್ಯೆ (ರಾಜ್ಯವಾರು).
- ಕ. 'ಬೌದ್ಧ' ಎಂದು ನಮೂದಿಸಿ ಪಡೆದ ಜಾತಿ ಪ್ರಮಾಣ ಪತ್ರದ ಮಾದರಿ (ಮಹಾರಾಷ್ಟ್ರದ ಕೊಲ್ಹಾಪೂರದಲ್ಲಿ ನೀಡಿದ್ದು)
- ಡ. ಬೌದ್ಧಧರ್ಮಕ್ಕೆ ಮತಾಂತರ ಹೊಂದಿದ ಪರಿಶಿಷ್ಟ ಜಾತಿ, ಜನಾಂಗದವರಿಗೆ 'ಬೌದ್ಧ' ಎಂದು ನಮೂದಿಸಿ ಪ್ರಮಾಣ ಪತ್ರ ನೀಡಲು ಸಮಾಜ ಕಲ್ಯಾಣ ಇಲಾಖೆ, ಕರ್ನಾಟಕ ಸರ್ಕಾರ ಇವರು ಜಿಲ್ಲಾಧಿಕಾರಿಗಳಿಗೆ ಬರೆದ ಪತ್ರ.

**IX. ಆಕರ ಗ್ರಂಥ ಸೂಚಿ.**

★★★★★



## ಅನುಬಂಧ-I

# ಅಧ್ಯಯನಕ್ಕೆ ಸಂಬಂಧಿಸಿದ ಪ್ರಮುಖ ಭಾವಚಿತ್ರಗಳು



## ಅಂತರರಾಷ್ಟ್ರೀಯ ಬೌದ್ಧ ಧ್ವಜ

| ಕ್ರಸಂ | ಬಣ್ಣ | ಸಂಕೇತಿಸುವ ಸಂದೇಶ |
|---|---|---|
| 1 | ನೀಲಿ | ವಿಶ್ವಕಾರುಣ್ಯತೆ |
| 2 | ಹಳದಿ | ಬುದ್ಧ ಬೋಧಿಸಿದ ಮಧ್ಯಮ ಮಾರ್ಗ |
| 3 | ಕೆಂಪು | ಮಂಗಳಕಾರಿ ಹಾರೈಕೆಗಳು |
| 4 | ಬಿಳಿ | ಚಿತ್ತಶುದ್ಧಿ, ನಿರ್ಮಲತೆ ಮತ್ತು ಸ್ವಾತಂತ್ರ್ಯ |
| 5 | ಕಿತ್ತಳೆ | ಸಮ್ಯಕ್ ಜ್ಞಾನ |

ಕರ್ನಲ್ ಹೆನ್ರಿ ಎಸ್. ಆರ್ಕಾಟ್ ಮತ್ತು ಜಿ.ಆರ್. ಡಿಸಿಲ್ವ ಇವರೀರ್ವರು 1880 ರಲ್ಲಿ ಶ್ರೀಲಂಕಾದಲ್ಲಿ ' ಬೌದ್ಧ ಧರ್ಮ ಪುನರುಜ್ಜೀವನ ' ನೆನಪಿಗಾಗಿ ರೂಪಿಸಿದ ಬೌದ್ಧ ಧ್ವಜ ಇದಾಗಿದೆ. 1952 ರಲ್ಲಿ ನಡೆದ ' ಅಂತರ್ ರಾಷ್ಟ್ರೀಯ ಬೌದ್ಧ ಅಧಿವೇಶನ ' ದಲ್ಲಿ ಈ ಧ್ವಜವನ್ನು ' ಅಂತರ್ ರಾಷ್ಟ್ರೀಯ ಬೌದ್ಧ ಧ್ವಜ ' ವೆಂದು ಸ್ವೀಕರಿಸಲಾಯಿತು. ವಿಶ್ವದ 60ಕ್ಕಿಂತ ಹೆಚ್ಚು ರಾಷ್ಟ್ರಗಳಲ್ಲಿ ಬೌದ್ಧರು ಈ ಧ್ವಜವನ್ನು ಬೌದ್ಧ ಉತ್ಸವಗಳಲ್ಲಿ, ವೈಶಾಖಿ ಆಚರಣೆಯಲ್ಲಿ ವಿಶೇಷವಾಗಿ ದಲಿತ ಬೌದ್ಧರು ' ಧಮ್ಮ ಚಕ್ರ ಪ್ರವರ್ತನ ದಿನಾಚರಣೆ ,' ಬೌದ್ಧ ಮತಾಂತರ ಕಾರ್ಯಕ್ರಮಗಳಲ್ಲಿ ಹೆಚ್ಚಾಗಿ ಬಳಸುತ್ತಾರೆ. ಇತ್ತೀಚೆಗೆ ಈ ಧಮ್ಮ ಧ್ವಜಾರೋಹಣ ಮಾಡಿಯೇ ಕಾರ್ಯಕ್ರಮಗಳನ್ನು ಪ್ರಾರಂಭಿಸುವ ಪರಿಪಾಠ ಬೆಳೆದಿದೆ.

3



ಪೂಜ್ಯ ಬಿಕ್ಕು, ಯು. ಚಂದ್ರಮಣಿ

ಡಾ. ಬಿ.ಆರ್. ಅಂಬೇಡ್ಕರವರಿಗೆ 14.10.1956 ರಂದು ನಾಗಪುರದಲ್ಲಿ ಬೌದ್ಧ ಧರ್ಮ ದೀಕ್ಷೆ ನೀಡಿದವರು.
ಆ ಸಂದರ್ಭದಲ್ಲಿ ಇವರು ಭಾರತದಲ್ಲಿಯೇ ಅತ್ಯಂತ ಹಿರಿಯ ಬಿಕ್ಕುಗಳಾಗಿದ್ದರು. ಇವರು ಮೂಲತಃ ಬರ್ಮಾದವರು.




ಡಾ. ಅಂಬೇಡ್ಕರವರು ತಮ್ಮ ಪತ್ನಿ ಡಾ. ಸವಿತಾ ಅಂಬೇಡ್ಕರವರೊಂದಿಗೆ
ಪೂಜ್ಯ ಬಿಕ್ಕು ಯು. ಚಂದ್ರಮಣಿಯವರಿಗೆ ತಮಗೆ ಬೌದ್ಧ ಧರ್ಮ ದೀಕ್ಷೆ ನೀಡಬೇಕೆಂದು ವಿನಂತಿಸುತ್ತಿರುವುದು.
'ಪ್ರಬುದ್ಧ ಭಾರತ' ಪತ್ರಿಕೆ ತನ್ನ 34ನೇ ಸಂಚಿಕೆಯನ್ನು 'ಅಂಬೇಡ್ಕರ್ ಬೌದ್ಧ ದೀಕ್ಷಾ ವಿಶೇಷಾಂಕ'
ವನ್ನಾಗಿ ಪ್ರಕಟಿಸಿರುವುದು. (27.10.1956)

4

5



ಡಾ. ಅಂಬೇಡ್ಕರವರು ಬೌದ್ಧ ಧರ್ಮ ಸ್ವೀಕಾರ ಮಾಡಿದ ನಂತರ ಸಭೆಯನ್ನುದ್ದೇಶಿಸಿ ಮಾತನಾಡುತ್ತಿರುವುದು.
ಅವರೊಂದಿಗೆ ಪಕ್ಕದಲ್ಲಿ ಡಾ. ಸವಿತಾ ಅಂಬೇಡ್ಕರವರೂ ನಿಂತುಕೊಂಡಿರುತ್ತಾರೆ.
(ಪ್ರಬುದ್ಧ ಭಾರತ 27.10.1956)



' ಪ್ರಬುದ್ಧ ಭಾರತ 'ದಲ್ಲಿ (27.10.1956) ಪ್ರಕಟವಾದ ಛಾಯಾಚಿತ್ರಗಳು.
ಡಾ. ಅಂಬೇಡ್ಕರವರೊಂದಿಗೆ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ ಅನುಯಾಯಿಗಳು,
ಅವರ ಭಾಷಣ ಆಲಿಸುತ್ತಿರುವುದು.

6

7



ಪಂಡಿತ ಸಿ. ಅಯೋಥಿದಾಸ್ (1845-1914)

ತಮಿಳುನಾಡು ,ಕರ್ನಾಟಕದಲ್ಲಿ ಅಂಬೇಡ್ಕರ್ ಪೂರ್ವದಲ್ಲಿ ಬೌದ್ಧ ಧರ್ಮ ಪ್ರಸಾರ ಮಾಡಿದ ಮಹತ್ವದ ಬೌದ್ಧ ಚಿಂತಕರು.ಕ್ರಿ.ಶ. 1900 ರಲ್ಲಿ ಮದ್ರಾಸಿನಲ್ಲಿ ಸಾಕ್ಯ ಬೌದ್ಧ ಸಂಘವನ್ನು ಸ್ಥಾಪಿಸಿದರು. ಈ ಸಂಸ್ಥೆಯ ಪ್ರಭಾವದಿಂದಲೇ ತಮಿಳುನಾಡು ,ಕರ್ನಾಟಕ , ಬರ್ಮಾ,ದಕ್ಷಿಣ ಆಫ್ರಿಕಾ ಮುಂತಾದ ಕಡೆ ಬೌದ್ಧ ಧರ್ಮ ಪುನರುಜ್ಜೀವನ ನಡೆಯಿತು.



ಎಂ. ವೈ. ಮುರುಗೇಸಂ (1869-1921)

1907 ರಲ್ಲಿ ಕೋಲಾರದ ಕೆ.ಜಿ.ಎಫ್.ನಲ್ಲಿ ಪ್ರಾರಂಭವಾದ ದಕ್ಷಿಣ ಭಾರತ ಬೌದ್ಧ ಸಂಘ (South Indian Buddhist Association ) ಸಂಸ್ಥಾಪಕ ಅಧ್ಯಕ್ಷರು

8

9



ಪಿ. ಎನ್. ಐಯಾಕನ್ನು ಪುಲವರ್ (1874-195)
ಪ್ರಸಿದ್ಧ ಬೌದ್ಧ ಕವಿ 40 ವರ್ಷಗಳಿಗಿಂತ ಹೆಚ್ಚು ಧರ್ಮದ ಪ್ರಚಾರ ಮಾಡಿದರು,
ತಮಿಳಿನಲ್ಲಿ ಮೈಸೂರು ರಾಜ್ಯದ ಚರಿತ್ರೆ ರಚಿಸಿದ ಮೊದಲಿಗರು



ಎ.ಪಿ. ಪೆರಿಯಸ್ವಾಮಿ (1884-1939)
ಬೌದ್ಧ ಧರ್ಮದ ಪ್ರಚಾರ, ದಲಿತರ ಅಭಿವೃದ್ಧಿ ಕುರಿತು ಹಲವಾರು ಸಮ್ಮೇಳನ ಸಂಘಟಿಸಿದವರು

10

11



**ರಟ್ಟೈ ಮಲ್ಲೈ ಶ್ರೀನಿವಾಸನ್ (1860-1945)**

ತಮಿಳುನಾಡಿನಲ್ಲಿ ಅಸ್ಪ್ರಶ್ಯರ ಚಳುವಳಿಗೆ ನಾಯಕತ್ವ ಕೊಟ್ಟವರು . ಲಂಡನ್ನಿನಲ್ಲಿ 1930-31ರಲ್ಲಿ ನಡೆದ
ರೌಂಡ ಟೇಬಲ್ ಕಾನ್ಫರೆನ್ಸ್ ನಲ್ಲಿ ಬ್ರಿಟಿಷ್ ದೊರೆಗೆ ಹಸ್ತಲಾಘವ ಮಾಡುವಾಗ '
ನಾನು ಭಾರತದಿಂದ ಬಂದಿರುವ ಅಸ್ಪ್ರಶ್ಯ ಪರಿಯಾ ' ಎಂದು ಪರಿಚಯಿಸಿಕೊಂಡವರು.



**ಎಸ್. ಶಿವರಾಜ (1892 -1964)**

ಮದ್ರಾಸ ಪ್ರಾಂತ್ಯದಲ್ಲಿ ಅಸ್ಪೃಶ್ಯರ ನಾಯಕರಾಗಿದ್ದರು. 12 ಜನೇವರಿ 1936 ರಂದು ಪುಣೆಯಲ್ಲಿ ಜರುಗಿದ ಅಸ್ಪೃಶ್ಯರ ಮಹಾ ಅಧಿವೇಶನದ ಅಧ್ಯಕ್ಷತೆ ವಹಿಸಿದ್ದರು. ಏವಲಾ ಅಧಿವೇಶನ (13.10.1935) ದಲ್ಲಿ ಡಾ. ಅಂಬೇಡ್ಕರರವರು ಮಂಡಿಸಿದ್ದ ಮತಾಂತರ ಪ್ರಸ್ತಾವದ ಪರಿಶೀಲನೆ ಇಲ್ಲಿ ನಡೆಯಿತು. ಎಸ್. ಶಿವರಾಜ ಅವರು 'ಆರ್ಯರು ಭಾರತಕ್ಕೆ ಬರುವುದಕ್ಕಿಂತ ಪೂರ್ವದಲ್ಲಿ ದಲಿತರು ಅನುಸರಿಸುತ್ತಿದ್ದ ಮೂಲನಿವಾಸಿಗಳ ಧರ್ಮವನ್ನು ಪುನರುಜ್ಜೀವನಗೊಳಿಸಲು ಅಭಿಪ್ರಾಯ ವ್ಯಕ್ತಪಡಿಸಿದರು.ಕೊನೆಯಲ್ಲಿ ಸಮಾವೇಶದಲ್ಲಿ ನೆರೆದಿದ್ದ ಎಲ್ಲರೂ ದಲಿತರು ಯಾವ ಧರ್ಮವನ್ನು ಸ್ವೀಕರಿಸಬೇಕು ಎಂಬ ನಿರ್ಧಾರ ತೆಗೆದುಕೊಳ್ಳುವ ಜವಾಬ್ದಾರಿಯನ್ನು ಡಾ. ಅಂಬೇಡ್ಕರವರಿಗೆ ವಹಿಸಿದರು.

12




1907ರಲ್ಲಿ ಕೋಲಾರ ಜಿಲ್ಲೆಯ ಕೆ.ಜಿ.ಎಫ್.ನ ಮಾರಿಕುಪ್ಪಂನಲ್ಲಿ ಪ್ರಾರಂಭವಾದ ಕರ್ನಾಟಕ ಪ್ರಥಮ ಬೌದ್ಧ ವಿಹಾರ

(ಮದ್ರಾಸಿನ ಸಾಕ್ಯ ಬೌದ್ಧ ಸೊಸೈಟಿಯ ಶಾಖೆಯಾಗಿ ಪ್ರಾರಂಭವಾಯಿತು. ಇದೇ ಮುಂದೆ South Indian Buddhist Society ಈಗ The Buddhist Society of India ಎಂದು ಕಾರ್ಯನಿರ್ವಹಿಸುತ್ತಿದೆ.




ಸ್ವಾತಂತ್ರ್ಯ ನಂತರದ ಸಂದರ್ಭದಲ್ಲಿ ಪ್ರಸ್ತುತ ಅಧ್ಯಕ್ಷರಾದ ಐ.ಲೋಗನಾಥನ್ ಅವರೊಂದಿಗೆ ಕೆ.ಜಿ.ಎಫ್.ನ ಬೌದ್ಧ ಉಪಾಸಕ/ಉಪಾಸಕಿಯರು.



1924 ರಲ್ಲಿ ಹುಬ್ಬಳ್ಳಿಯಲ್ಲಿ ಪ್ರಾರಂಭವಾದ ಬೌದ್ಧ ವಿಹಾರದ ನೂತನ ಕಟ್ಟಡ
(ಮದ್ರಾಸಿನ ಸಾಕ್ಯ ಬೌದ್ಧ ಶಾಖೆಯಾದರೂ, ಮುಂದೆ Hubli Buddhist Associaton ಎಂದು ಕಾರ್ಯನಿರ್ವಹಿಸುತ್ತಿದೆ)



ಹುಬ್ಬಳ್ಳಿಯ ಬುದ್ಧ ವಿಹಾರದಲ್ಲಿ ಪ್ರತಿ ರವಿವಾರ ಬುದ್ಧ ವಂದನೆ ಪಂಚಶೀಲ ಪಠಣ
ಮಾಡುತ್ತಿರುವ ಉಪಾಸಕ/ಉಪಾಸಕಿಯರು

17



ಪೂಜ್ಯ ಬಿಕ್ಕು ಎಸ್. ಪರಮಶಾಂತಿ ಮಹಾಥೇರೋ
1964 ರಲ್ಲಿ ಉದ್ಘಾಟನೆಯಾದ ಹುಬ್ಬಳ್ಳಿ ಬೌದ್ಧ ವಿಹಾರದ ನೂತನ ಕಟ್ಟಡದ ನಿರ್ಮಾಣಕ್ಕೆ ಶ್ರಮಿಸಿದವರು.



ಹುಬ್ಬಳ್ಳಿ ಬೌದ್ಧವಿಹಾರಕ್ಕೆ ಭೇಟಿ ನೀಡಿದ ಬೌದ್ಧ ಬಿಕ್ಕುಗಳಿಗೆ ಮುಂಡಗೋಡದ ಟಿಬೇಟನ್ ಬೌದ್ಧ ಕಾಲನಿಗೆ ಸಂದರ್ಶನಕ್ಕೆ ಕರೆದೊಯ್ದು ಹುಬ್ಬಳ್ಳಿಯ ಹಿರಿಯ ಉಪಾಸಕರಾದ ಶ್ರೀ ಕೆ ಗೋಪಾಲ ಅವರು .

18



ಪಂಡಿತ ಜಿ. ಅಪ್ಪಾದು ರೈಯಾರ್ (1890-1961)
(ಮೊದಲು ಗ್ಯಾಬ್ರಿಯೇಲ್ ಅಪ್ಪಾದುರೈಯಾರ್ ಇದ್ದವರು 1911 ರಲ್ಲಿ ಕ್ಯಾಥಲಿಕ್ ಪಾಥ ತ್ಯಜಿಸಿ ಬೌದ್ಧಧರ್ಮ ಸ್ವೀಕರಿಸಿದರು. ಬೌದ್ಧ ಪಂಡಿತರಾದ ಪ್ರೊ. ಲಕ್ಷ್ಮೀ ನರಸು ಹಾಗೂ ಡಾ.ಬಿ. ಆರ್. ಅಂಬೇಡ್ಕರ್ ಈ.ವಿ. ರಾಮಸ್ವಾಮಿ ಪೆರಿಯಾರ್ ಅವರ ನಿಕಟವರ್ತಿಗಳು) ಮೊದಲು ಇದ್ದವರು ನಂತರ ಬೌದ್ಧರಾದರೆಂದು ತಿಳಿದು ಬರುತ್ತದೆ.



ಐ.ಲೋಗನಾಥನ್

ಅಧ್ಯಕ್ಷರು ಭಾರತ ಬೌದ್ಧ ಸಂಘ (Buddhist Society of India K.G.F. Karnataka )
1960 ರ ದಶಕದಿಂದ ಇಲ್ಲಿಯವರೆಗೆ ಬೌದ್ಧ ಧರ್ಮ ಸಂಘಟನೆ ಸಾಹಿತ್ಯ ಪ್ರಕಟಣೆ ಅಧ್ಯಯನಕಾರರಿಗೆ ಖಚಿತ ಮಾಹಿತಿ ಕೊಡುತ್ತಿದ್ದಾರೆ.

## ಮಹಾಬೋಧಿ ಸೊಸೈಟಿಯ ಬಿಕ್ಕು ಪರಂಪರೆ





ಪೂಜ್ಯ ಬಿಕ್ಕು ಅನಗಾರಿಕ ಧರ್ಮಪಾಲ (1864 ರಿಂದ 1933) ಸಂಸ್ಥಾಪಕರು ಮಹಾಬೋಧಿ ಸೊಸೈಟಿ ಆಫ್ ಇಂಡಿಯಾ ಇವರು ಭಾರತದ ಬೌದ್ಧ ಕ್ಷೇತ್ರಗಳಲ್ಲಿನ ವಿಹಾರ, ಸ್ತೂಪ, ಚೈತ್ಯ ಮತ್ತು ಪಾಲಿ ಬೌದ್ಧ ಸಾಹಿತ್ಯ ಸಂರಕ್ಷಿಸಲು ಶ್ರಮಿಸಿದರು. ಆಧುನಿಕ ಭಾರತದಲ್ಲಿ ಬೌದ್ಧ ಧರ್ಮದ ಪುನರುಜ್ಜೀವನಕ್ಕೆ ಚಾಲನೆ ನೀಡಿದರು.



ಪೂಜ್ಯ ಆಚಾರ್ಯ ಬುದ್ಧ ರಕ್ಷಿತ ಬಂತೇಜಿಯವರು

1956ರಲ್ಲಿ ಬೆಂಗಳೂರಿನಲ್ಲಿ ' ಮಹಾಬೋಧಿ ಸೊಸೈಟಿ ' ಯನ್ನು ಪ್ರಾರಂಭಿಸಿ ಕರ್ನಾಟಕದಲ್ಲಿ ಬೌದ್ಧ ಧರ್ಮದ ತತ್ವಗಳನ್ನು ಪ್ರಸಾರ ಮಾಡಲು ಶ್ರಮಿಸಿದ್ದಾರೆ. ಹಲವಾರು ರಾಷ್ಟ್ರೀಯ, ಅಂತರ್ ರಾಷ್ಟ್ರೀಯ ಬೌದ್ಧ ಸಮಾವೇಶಗಳನ್ನು ಏರ್ಪಡಿಸಿದ್ದಾರೆ. ಡಾ. ಬಿ.ಆರ್. ಅಂಬೇಡ್ಕರವರ ಜನ್ಮ ಶತಮಾನೋತ್ಸವ ಕಾರ್ಯಕ್ರಮ ಸಂಘಟಿಸಿ ಡಾ. ಅಂಬೇಡ್ಕರವರು ಬೌದ್ಧ ಧರ್ಮಕ್ಕೆ, ಶಾಂತಿಗೆ, ಸಾಮರಸ್ಯಕ್ಕೆ ನೀಡಿದ ಕೊಡುಗೆಯ ಬಗ್ಗೆ ಚಿಂತನ ಮಂಥನ ಸಂಘಟಿಸಿದ್ದಾರೆ.



ಪೂಜ್ಯ ಬಿಕ್ಕು ಸಂಘಸೇನ ಬಂತೇಜಿಯವರು

ಕಾರ್ಯಾಧ್ಯಕ್ಷರು ಮಹಾಬೋಧಿ ಸೊಸೈಟಿ, ಬೆಂಗಳೂರು ಆಚಾರ್ಯ ಬುದ್ಧ ರಕ್ಷಿತರ ಮಾರ್ಗದರ್ಶನದಲ್ಲಿ ಪೂಜ್ಯ ಬಿಕ್ಕು ಆನಂದ ಬಂತೇಜಿಯವರಿಗೆ ' ಮಹಾಬೋಧಿ ಸೊಸೈಟಿಯ ಕಾರ್ಯಚಟುವಟಿಕೆಗಳಲ್ಲಿ ಸಕ್ರಿಯರಾಗಿದ್ದಾರೆ.



ಪೂಜ್ಯ ಬಿಕ್ಕು ಆನಂದ ಬಂತೇಜಿಯವರು

' ಮಹಾಬೋಧಿ ಸೊಸೈಟಿಯ ಪ್ರಸ್ತುತ ಕಾರ್ಯದರ್ಶಿಗಳು' ಬೆಂಗಳೂರು, ಮೈಸೂರು ಮುಂತಾದ ಕಡೆ ಜನ ಕಲ್ಯಾಣ, ಬೌದ್ಧ ಶಿಕ್ಷಣ ಪ್ರಸಾರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದ್ದಾರೆ. ಕರ್ನಾಟಕದ ದಲಿತ ಬೌದ್ಧರನೇಕರು ಇವರ ಸಂಪರ್ಕದಲ್ಲಿದ್ದಾರೆ.

23



ಮಾನ್ಯ ಶ್ರೀ ಬಿ. ಬಸವಲಿಂಗಪ್ಪ(1924-1992) ಸಂಸ್ಥಾಪಕ ಅಧ್ಯಕ್ಷರು
ಕರ್ನಾಟಕ ಬುದ್ಧ ಧರ್ಮ ಸಮಿತಿ, ನಾಗಸೇನಾ ವಿದ್ಯಾಲಯ, ಬೆಂಗಳೂರು
ಕರ್ನಾಟಕದಲ್ಲಿ ಬೌದ್ಧ ಧರ್ಮ ಪುನರುಜ್ಜೀವನಕ್ಕೆ ಶ್ರಮಿಸಿದವರು.



ಪ್ರೊ. ಬಿ. ಕೃಷ್ಣಪ್ಪ(1938-1997)
ಕರ್ನಾಟಕ ದಲಿತ ಸಂಘರ್ಷ ಸಮಿತಿಯ ಸಂಸ್ಥಾಪಕರಲ್ಲಿ ಪ್ರಮುಖರು. ಬೌದ್ಧ ಧರ್ಮದಲ್ಲಿ ಅತೀವ ಒಲವು ಹೊಂದಿದ್ದ
ಇವರು ತಮ್ಮ ಭಾಷಣಗಳ ಮೂಲಕ ಬರಹಗಳ ಮೂಲಕ ಬುದ್ಧನ ತತ್ವಗಳು, ಅಂಬೇಡ್ಕರವರ
ಧಾರ್ಮಿಕ, ಸಾಂಸ್ಕೃತಿಕ ವಿಚಾರಗಳ ಮಹತ್ವನ್ನು ಪ್ರಚಾರ ಮಾಡಿದವರು

24



ಪೂಜ್ಯ ಬಂತೆ ಮಹಾಸ್ಥವಿರ ಸಂಘ ರಕ್ಷಿತರು
ಸಂಸ್ಥಾಪಕ ಅಧ್ಯಕ್ಷರು ,ತ್ರೈಲೋಕ್ಯ ಬೌದ್ಧ
ಮಹಾಸಂಘ ಸಹಾಯಕಗಣ ,ಪುಣೆ (TBMSG)

ಡಾ. ಬಾಬಾಸಾಹೇಬ ಅಂಬೇಡ್ಕರವರ ಬೌದ್ಧ ಧರ್ಮ
ಸಾಂಸ್ಕೃತಿಕ ಮಾದರಿಯನ್ನು ದಲಿತ ಬೌದ್ಧರಲ್ಲಿ
ಅಳವಡಿಸಲು1970 ರ ದಶಕದಿಂದ ಪ್ರಾರಂಭಿಸಿದರು







ಧರ್ಮಾಚಾರಿ ಅನಗಾರಿಕ ಸುಭೂತಿ
ಧರ್ಮ ದೀಕ್ಷೆ, ಧರ್ಮಾಚಾರಿ ದೀಕ್ಷೆ
ಕೊಡುವ ನೇತೃತ್ವವಹಿಸಿದ್ದಾರೆ.



ಧರ್ಮಾಚಾರಿಗಳಾಗಿ ದೀಕ್ಷೆ ಪಡೆದ
ದಲಿತ ಯುವಕರು.



ಡಾ. ಬಿ.ಆರ್.ಅಂಬೇಡ್ಕರವರು ಬೆಂಗಳೂರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಕರ್ನಾಟಕದ ದಲಿತ ಮುಖಂಡರೊಂದಿಗೆ ಇರುವುದನ್ನು ಕಾಣಬಹುದು.



ಬಹುಜನ ಸಮಾಜ ಪಕ್ಷದ ನಾಯಕಿ ಕುಮಾರಿ:ಮಾಯಾವತಿ ಇವರು ಕೋರಿಯಾ ದೇಶಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಅಲ್ಲಿನ ಬೌದ್ಧ ವಿಹಾರಕ್ಕೆ ಸಂದರ್ಶಿಸಿದಾಗ ಅಲ್ಲಿನ ಪ್ರಧಾನ ಬಿಕ್ಕುಗಳು ಕು:ಮಾಯಾವತಿಯವರು ಕೈಗೊಂಡ ಬೌದ್ಧ ಪುನರುಜ್ಜೀವನ ಕಾರ್ಯವನ್ನು ಪ್ರಶಂಸಿಸಿ ದಮ್ಮವನ್ನು ಇನ್ನಷ್ಟು ಪ್ರಸಾರಗೊಳಿಸಲು ಹಾರೈಸಿ 'ಬೋಧಿ ವೃಕ್ಷ'ದ ಸಸಿಯನ್ನು ನೀಡಿ ಅಭಿನಂದಿಸಿರುವುದು. ಪಕ್ಕದಲ್ಲಿ ಕಾಂಗ್ರೆಸ್ಸಿನ ಹಿರಿಯ ಧುರೀಣ ಶ್ರೀ ಗುಲಾಂ ನಬೀ ಆಜಾದ ಇವರನ್ನು ಕಾಣಬಹುದು.



ಬೌದ್ಧ ಸಂಸ್ಕೃತಿ ಸರಣಿ ಉಪನ್ಯಾಸ ಮಾಲೆಯಲ್ಲಿ' ಬುದ್ಧ ಬರಲಿ ನಮ್ಮ ಮನ-ಮನೆಗೆ 'ವಿಷಯ ಪ್ರಸ್ತಾಪಿಸುತ್ತಿರುವ ದಲಿತ-ಕಾರ್ಮಿಕ ಧುರೀಣರು, ಬೌದ್ಧ ಸಾಹಿತ್ಯ ವಿಚಾರಪರ ಮುಖಂಡರಾದ ಶ್ರೀ ಎಫ್. ಹೆಚ್. ಜಕ್ಕಪ್ಪನವರ (ವಿಶ್ವಸಂಸ್ಥೆಯ ವೇದಿಕೆಗಳಲ್ಲಿ ದಲಿತರ ಮಾನವ ಹಕ್ಕುಗಳ ಹೋರಾಟದಲ್ಲಿ ಪಾಲ್ಗೊಂಡಿದ್ದಾರೆ).



ಬೌದ್ಧ ಪೂರ್ಣಿಮೆ ಹಾಗೂ ನಾಮಕರಣ ಸಮಾರಂಭದಲ್ಲಿ ಭಾಗವಹಿಸಿದ ಆಮಂತ್ರಿತರು (2004)



ಅಂತರಾಷ್ಟ್ರೀಯ ದಲಿತ ಧುರೀಣರಾದ ಶ್ರೀ ಯೋಗೇಶ ವರ್ಹಾಡೆಯವರು ವಿಶ್ವಸಂಸ್ಥೆಯ ವೇದಿಕೆಯಲ್ಲಿ ' ಜಾತಿ ಆಧಾರಿತ ದೌರ್ಜನ್ಯ'
ವಿವರಿಸಿ ಧಾರ್ಮಿಕ ಸ್ವಾತಂತ್ರ್ಯದ ಪ್ರಸ್ತಾಪ ಮಾಡುತ್ತಿರುವುದು (2002)



ದಕ್ಷಿಣ ಆಫ್ರಿಕಾದ ದರ್ಬಾನ್‌ನಲ್ಲಿ ನಡೆದ 'ವಿಶ್ವ ಜನಾಂಗ ದ್ವೇಷ ವಿರುದ್ಧದ ಸಮಾವೇಶದಲ್ಲಿ'
(WCAR,Durban 2001 ' ) ಜಾತಿ ಆಧಾರಿತ ಅಸಮಾನತೆಯನ್ನು ಮಾನವ ಹಕ್ಕುಗಳ ಅರ್ಥೈಸುವಿಕೆಯಲ್ಲಿ
ಪರಿಗಣಿಸುವಂತೆ ಒತ್ತಾಯಿಸಿ ನಡೆಸಿದ ಚಳುವಳಿಯಲ್ಲಿ ಡಾ. ಅಂಬೇಡ್ಕರ್
ನ್ಯಾಯ ಮತ್ತು ಶಾಂತಿಗಾಗಿ ವೇದಿಕೆ (Ambedkar Centre for Justice and Peace) ಯ ಸಂಸ್ಥಾಪಕ ಅಧ್ಯಕ್ಷರಾದ
ಶ್ರೀ ಯೋಗೇಶ ವರಾಡೆಯವರೊಂದಿಗೆ ಕರ್ನಾಟಕ ದಲಿತ ಮುಖಂಡರಾದ
ಶ್ರೀ ಎಪ್. ಹೆಚ್. ಜಕ್ಕಪ್ಪನವರ ಇರುವ ಸಂದರ್ಭ. (Dalit Human Rights Organization Booth, Darban )



' ಬುದ್ಧ ಗಯಾ ವಿಮೋಚನಾ ಆಂದೋಲನ ನೇತೃತ್ವವಹಿಸಿರುವ ಪೂಜ್ಯ ಬದಂತ ನಾಗಾರ್ಜುನ ಸುರಾಯಿ ಸುಸಾಯಿಯವರು ವಿಶ್ವಸಂಸ್ಥೆಯ 'ಮಾವನ ಹಕ್ಕುಗಳ ಉನ್ನತಾಯುಕ್ತರಾದ' ಶ್ರೀಮತಿ.ಮೇರಿ ರಾಬಿನ್‌ಸನ್ ರವರಿಗೆ ಬುದ್ಧನ ಕಂಚಿನ ಮೂರ್ತಿ ನೀಡಿ ಅಭಿನಂದಿಸುತ್ತಿರುವುದು (2002)ಹಾಗೂ ಮನವಿ ಅರ್ಪಿಸುತ್ತಿರುವುದು.



ಪೂಜ್ಯ ಬದಂತ ನಾಗಾರ್ಜುನ ಸುರಾಯ ಸುಸಾಯಿ ಅವರು ಯುನೆಸ್ಕೋದ ಮಹಾನಿರ್ದೇಶಕರಿಗೆ ಬೌದ್ಧರ ಪವಿತ್ರ ಸ್ಥಳ ಬುದ್ಧಗಯಾವನ್ನು ಪೂರ್ಣ ಬೌದ್ಧರಿಗೆ ಹಸ್ತಾಂತರಿಸಲು ಮಧ್ಯ ಪ್ರವೇಶಿಸಬೇಕೆಂದು ಒತ್ತಾಯಿಸಿ ಅಂತರಾಷ್ಟ್ರೀಯ ದಲಿತ ಮುಖಂಡರೊಂದಿಗೆ ಮನವಿ ಅರ್ಪಿಸಿದ ಸಂದರ್ಭ.(2002)

"ಜೈ ಭೀಮ್"

ಸಮತಾ ಸೈನಿಕ ದಳ ವತಿಯಿಂದ

ಉತ್ತರ ಕರ್ನಾಟಕದಿಂದ

ದೀಕ್ಷಾ ಭೂಮಿ ನಾಗಪೂರ

ಚಲೋ ಕಾರ್ಯಕ್ರಮ

ಹುಬ್ಬಳ್ಳಿಯ 'ಸಮತಾ ಸೈನಿಕ ದಳವು' ನಾಗಪುರಕ್ಕೆ ದಲಿತ ಯುವಕ ಯುವತಿಯರನ್ನು ಬೌದ್ಧ ಧರ್ಮ ದೀಕ್ಷೆ ಕೊಡಿಸುವ, ಪ್ರೇರಣೆ ನೀಡುವ ಉದ್ದೇಶದಿಂದ ಪ್ರತಿ ವರ್ಷ ಅಕ್ಟೋಬರ್ ತಿಂಗಳಲ್ಲಿ ಜರುಗುವ' ಧರ್ಮಚಕ್ರ ಪ್ರವರ್ತನ' ಉತ್ಸವಕ್ಕೆ ಕರೆದುಕೊಂಡು ಹೋಗುತ್ತಾರೆ. ನಾಗಪುರ ದೀಕ್ಷಾ ಭೂಮಿ ಚಲೋ ಚಳುವಳಿ ಹಮ್ಮಿಕೊಳ್ಳುತ್ತಾರೆ. ಆ ಕಾರ್ಯಕ್ರಮದ ಕರ ಪತ್ರದ ಮೇಲ್ಭಾಗ.

"ಜೈ ಭೀಮ್"

ಶೀಲ ಸಂಪನ್ನತೆ | ಚಿತ್ತ ಶುದ್ಧಿ | ಪ್ರಜ್ಞಾ ವಿಕಾಸ

ಡಾ॥ ಬಾಬಾಸಾಹೇಬ ಅಂಬೇಡ್ಕರ

ಇವರ 48ನೇಯ ಪರಿನಿರ್ವಾಣದ ನಿಮಿತ್ಯ

ಸಮತಾ ಸೈನಿಕ ದಳ ಹಾಗೂ

ಡಾ॥ ಬಾಬಾಸಾಹೇಬ ಅಂಬೇಡ್ಕರ ಜ್ಞಾನಪ್ರಸಾರ ಕೇಂದ್ರ ಸಮಿತಿ ವತಿಯಿಂದ

ಚೈತ್ಯಭೂಮಿ (ಮುಂಬೈ-ದಾದರ್) ಚಲೋ ಕಾರ್ಯಕ್ರಮ

ಮೇಲೆ ಹೇಳಿದಂತೆ' ಸಮತಾ ಸೈನಿಕ ದಳವು' ಡಾ. ಅಂಬೇಡ್ಕರವರು ಮಹಾ ಪರಿ ನಿರ್ವಾಣ ಹೊಂದಿದ ನಂತರ ಮುಂಬೈನ ದಾದರ ಚೌಪಾಟಿಯಲ್ಲಿ ನಿರ್ಮಿಸಿದ ಅವರ ಗೌರಾವಾರ್ಥ ನಿರ್ಮಿಸಿದ ' ಚೈತ್ಯ ಭೂಮಿ' ದರ್ಶನಕ್ಕೆ ನೂರಾರು ಯುವಕರನ್ನು ಕರೆದುಕೊಂಡು ಹೋಗಲು ಪ್ರತಿವರ್ಷ ಡಿಸೆಂಬರ್ 6 ರ ಸುಮಾರಿಗೆ' ಚೈತ್ಯ ಭೂಮಿ' ಚಲೋ ಕಾರ್ಯಕ್ರಮ ಹಮ್ಮಿಕೊಳ್ಳುತ್ತಾರೆ. (ಕರ ಪತ್ರದ ಮೇಲ್ಭಾಗ)



ಆಯುಷ್ಮಾನ್ ಪಿತಾಂಬ್ರಪ್ಪ ಬಿಳಾರ

ಕಳೆದ 17 ವರ್ಷಗಳಿಂದ ಉತ್ತರ ಕರ್ನಾಟಕದ ಹುಬ್ಬಳ್ಳಿ, ಹಾವೇರಿ, ಧಾರವಾಡ, ಗದಗ ಮತ್ತಿತರ ಪ್ರದೇಶಗಳಲ್ಲಿ ಗ್ರಾಮೀಣ ಯುವಕ, ಯುವತಿಯರಲ್ಲಿ ಬೌದ್ಧ ಧರ್ಮ ತತ್ವಗಳ ಪ್ರಸಾರ, ಸಂಘಟನೆಯ ಕಾರ್ಯದಲ್ಲಿ ತೊಡಗಿದ್ದಾರೆ. ಮೇಲಿನ ಕಾರ್ಯಕ್ರಮಗಳನ್ನು ತಪ್ಪದೇ ಸಂಘಟಿಸುತ್ತಾರೆ.



ರಮಾಯಿ ಸ್ಮೃತಿ ಬುದ್ಧವಿಹಾರ ಬಿಜ್ಜರಗಿ ತಾ.ಜಿ. ಬಿಜಾಪೂರ



ಬೌದ್ಧ ವಿಹಾರದಲ್ಲಿ ನಿಂತಿರುವ ಬುದ್ಧನ ಕಂಚಿನ ಮೂರ್ತಿ ಪಕ್ಕದಲ್ಲಿ ಬಾಬಾಸಾಹೇಬ ಡಾ. ಬಿ.ಆರ್. ಅಂಬೇಡ್ಕರವರ ಭಾವಚಿತ್ರವನ್ನು ಇಟ್ಟಿರುವುದು



ಉಪಾಸಕರೊಬ್ಬರು ಮರಣ ಹೊಂದಿದ ನಂತರ ಬಿಜ್ಜರಗಿಯ ಸ್ಮಶಾನದಲ್ಲಿ
ನಿರ್ಮಿಸಿದ ಸ್ತೂಪ ಮಾದರಿಯ ಚೈತ್ಯ
(ಪಕ್ಕದಲ್ಲಿ ಹಿಂದೂ ಪದ್ಧತಿಯಂತೆ ನಿರ್ಮಿಸಿದ ಸ್ಮಾರಕಗಳು)



ಮೇಲಿನ ಭಾವಚಿತ್ರದ ಸಮೀಪದ ನೋಟ



ಸಾರಿ ಪುತ್ರ ಬೌದ್ಧ ವಿಹಾರ, ಜಲನಗರ ಬಿಜಾಪೂರ
(ಕಟ್ಟಡ ನಿರ್ಮಾಣ ಪ್ರಗತಿಯಲ್ಲಿದೆ)




ಸಾರಿಪುತ್ರ ಬೌದ್ಧ ವಿಹಾರ ಬಿಜಾಪುರ ಇಲ್ಲಿನ ಆವರಣದಲ್ಲಿರುವ ಧ್ಯಾನ ಕೇಂದ್ರ
One drop meditation hall



ವಿಹಾರದಲ್ಲಿ ಉಪಾಸಕರು ಬುದ್ಧ ವಂದನೆ ಸಲ್ಲಿಸುವ ಭಂಗಿ



ದೀಕ್ಷಾ ಭೂಮಿ ನಾಗಪುರಕ್ಕೆ ತೆರಳುವ ಧಮ್ಮ ಯಾತ್ರಿಕರಿಗೆ ನಾಗಪುರದ ಹತ್ತಿರದ
ರಸ್ತೆ ಪಕ್ಕದ ಹಳ್ಳಿಗಳಲ್ಲಿ ದಲಿತ ಕುಟುಂಬಗಳು ಊಟ ಉಪಚಾರ ಏರ್ಪಡಿಸುತ್ತಾರೆ. ಮನೆಯ ಮುಂದೆ ಪೆಂಡಾಲಗಳನ್ನು ಹಾಕಿ ಬುದ್ಧ,
ಅಂಬೇಡ್ಕರವರಿಗೆ ಗೌರವ ಸಲ್ಲಿಸಿ ಯಾತ್ರಿಕರು ವಿಶ್ರಾಂತಿ ತೆಗೆದುಕೊಳ್ಳಲು ಸೌಕರ್ಯ ಕಲ್ಪಿಸುತ್ತಾರೆ.
( ಈ ಊರು ನಾಗಪುರದಿಂದ 200 ಕೀ.ಮೀ ಅಂತರದಲ್ಲಿದೆ ).



ದೀಕ್ಷಾ ಭೂಮಿ , ನಾಗಪುರ

ಪ್ರತಿವರ್ಷ 5 ರಿಂದ 10 ಲಕ್ಷ ಬೌದ್ಧ ಅನುಯಾಯಿಗಳು ವಿಶೇಷವಾಗಿ ಅಂಬೇಡ್ಕರವರ ವಿಚಾರಣೆಗಳಿಂದ ಪ್ರೇರೆಪಿತರಾದವರೆಲ್ಲರೂ ಸಂದರ್ಶಿಸುತ್ತಾರೆ.



ಗೌತಮ ಬುಕ್ ಸೆಂಟರ್, ದೆಹಲಿ ಇವರಿಂದ ದಲಿತ ಚಳುವಳಿ ಬೌದ್ಧ ಸಾಹಿತ್ಯ ಕುರಿತು ಪುಸ್ತಕ ಮಾರಾಟ ಮಳಿಗೆ, ಇಂತಹ ನೂರಾರು ಪುಸ್ತಕ ಮಳಿಗೆಗಳು ಇರುತ್ತವೆ ಭಾರತದಲ್ಲಿಯೇ ಇದೊಂದು 'ವಿಶಿಷ್ಟವಾದ ಪುಸ್ತಕ ಜಾತ್ರೆ' ಇಲ್ಲಿಗೆ ಬರುವ ಹಳ್ಳಿಯ ಅಜ್ಜ, ಅಜ್ಜಿಯರು ತಮ್ಮ ಮೊಮ್ಮಕ್ಕಳಿಗೆ ಆಟಿಕೆಗಳನ್ನು ಖರೀದಿಸುವುದಿಲ್ಲ, ಬದಲಾಗಿ ಪುಸ್ತಕಗಳನ್ನು ಖರೀದಿಸಿ ಕೊಡುತ್ತಾರೆ.

-ಗೌತಮ್ ಬುಕ್ ಸೆಂಟರ್ ಪ್ರವರ್ತಕ




ಮಹಾಬೋಧಿ ಸಂಘ ಎಕ್ಸಂಬಾ (ತಾ. ಚಿಕ್ಕೋಡಿಯ) ಬೌದ್ಧ ಸಮಿತಿಯ ಬೌದ್ಧ ಉಪಾಸಕರು ಡಾ. ಅಂಬೇಡ್ಕರವರು ರಚಿಸಿದ 22 ಬೌದ್ಧ ಸೂತ್ರಗಳನ್ನು ವಧು-ವರರಿಗೆ ಬೋಧಿಸುತ್ತಿದ್ದಾರೆ.




ಬೌದ್ಧ ರೀತಿಯಲ್ಲಿ ದಲಿತ ಯುವಕರು ಮದುವೆ ಸಮಾರಂಭ ಏರ್ಪಡಿಸಿಕೊಳ್ಳುತ್ತಿದ್ದಾರೆ. (1994)



ಬೌದ್ಧ ರೀತಿಯಲ್ಲಿ ನಡೆದ ಮದುವೆ ಸಮಾರಂಭಕ್ಕೆ ಆಗಮಿಸಿದ ಗ್ರಾಮೀಣ, ನಗರ ಪ್ರದೇಶದ ಆಮಂತ್ರಿತರು ಆಸಕ್ತಿಯಿಂದ ಮದುವೆ ಸಮಾರಮಭದ ವಿಧಿಗಳನ್ನು ಗಮನಿಸುತ್ತಿರುವುದು.

Vaisak Greetings

B.E., 2548 (4-5-2004)

HONOUR TO HIM, THE MASTER, THE EXALTED, THE BUDDHA SUPREME

HAPPY IS THE BIRTH OF THE BUDDHAS. - Dh. 194

The Triple Gem-the Buddha-Dhamma-Sangha

May the Triple Gem the Lord Buddha, the Dhamma and the Sangha protect all peoples and lead them to enlightenment and world peace.

"If there is any religion that could cope with modern scientific needs, it would be Buddhism" one of the greatest scientist - Albert Einstein

With all good wishes on the Auspicious occasion of

"Buddha Jayanthi"

From :

The Buddhist Society of India (ESTD - 1907)

Marikuppam Post, K.G.F. - 563 119, (Karnataka State)

Venus Graphics, K.G.F. ✆ : 366772

ಕೋಲಾರದ ಹಿರಿಯ ಬೌದ್ಧ ಉಪಾಸಕರಾದ ಐ. ಲೋಗನಾಥನ್ ರವರು ಪ್ರತಿವರ್ಷ ' ವೈಶಾಖಿ ' ಬುದ್ಧ ಜಯಂತಿಯ ಆಚರಣೆಯ ಸಂದರ್ಭದಲ್ಲಿ ನಾಡಿನ ಹಲವಾರು ಬಾಂಧವರಿಗೆ, ಗಣ್ಯರಿಗೆ ಈ ರೀತಿಯ ಶುಭಾಶಯ ಪತ್ರ ಕಳುಹಿಸುತ್ತಾರೆ.

ಕರ್ನಾಟಕ ದಲಿತ ಸಂಘರ್ಷ ಸಮಿತಿ(ರಿ.)

ಬೆಳಗಾವಿ ವಿಭಾಗೀಯ ಶಾಖೆ

ಧಾರವಾಡ

ಮಹಾತ್ಮ ಬುದ್ಧ

ಹಾಗೂ

ಬಾಬಾಸಾಹೇಬ್ ಅಂಬೇಡ್ಕರ್

ಇವರು

ಜನ್ಮದಿನೋತ್ಸವ

ಪ್ರಯುಕ್ತ

ಗೃಹ ಪ್ರವೇಶ

ಮತ್ತು

'ಬೌದ್ಧ ಧರ್ಮ' ಕುರಿತು ವಿಚಾರ ಸಂಕಿರಣ

ಕಾರ್ಯಕ್ರಮಗಳು

ಸ್ಥಳ:

'ಸಂಘರ್ಷ', ಮನೆ ನಂ.10/2/32 ಸಂಪಿಗೆ ನಗರ,

ಪೊಲೀಸ್ ಹೆಡ್‌ಕ್ವಾರ್ಟರ್ಸ್ ಹಿಂಭಾಗ, ಧಾರವಾಡ.

ದಿನಾಂಕ: 11.5.98 ಬೆಳಿಗ್ಗೆ 10 ಗಂಟೆ

ಇತ್ತೀಚಿಗೆ ದಲಿತ ಚಳುವಳಿಯ ಕಾರ್ಯಕರ್ತರಲ್ಲಿ ಬೌದ್ಧ ಜೀವನ ಶೈಲಿಯು ಬೆಳೆಯುತ್ತಿರುವುದರಿಂದ ಸಾಂಕೇತಿಕವಾಗಿ ತಮ್ಮ ನೂತನ ಗೃಹ ಪ್ರವೇಶ ಕಾರ್ಯಕ್ರಮದಲ್ಲಿ ಬೌದ್ಧ ಧರ್ಮ ವಿಚಾರ ಸಂಕಿರಣ ಹಮ್ಮಿಕೊಂಡಿರುವುದು. ಬೌದ್ಧ ಆಚಾರಗಳೊಂದಿಗೆ ವಿಚಾರವೂ ಸಮ ಸಮವಾಗಿ ಪ್ರವಹಿಸುತ್ತಿರುವುದರ ಸ್ವರೂಪವನ್ನು ಕಾಣುತ್ತೇವೆ. (ಶ್ರೀಮಂತ ನಡುವಿನಕೇರಿ ದಲಿತ ಧುರೀಣರು, ಧಾರವಾಡ, 1998)

51



ಮೈಸೂರಿನ ಮಹಾಬೋಧಿ ಶಾಲೆಯ ಮಕ್ಕಳು ಬೌದ್ಧ ಪೂರ್ಣಿಮೆಯಂದು ಸಾಮೂಹಿಕ ಬುದ್ಧ ವಂದನೆ ಸಲ್ಲಿಸುತ್ತಿರುವುದು. ಇಲ್ಲಿನ ವಸತಿ ಶಾಲೆಯಲ್ಲಿ ದಲಿತ ವರ್ಗದ ಮಕ್ಕಳೂ ಸಹ ಬೌದ್ಧ ಶಿಕ್ಷಣ ಕ್ರಮದಂತೆ ತರಬೇತಿ ಹೊಂದುತ್ತಿದ್ದಾರೆ. (ಚಿತ್ರ ಕೃಪೆ: ಡೆಕ್ಕಲ್ ಹೆರಾಲ್ಡ್ 5.5.2004)

*Your gracious presence with family and friends is solicited on the occasion of marriage of my sons*

**Chi. CHANDRAMANI**

WITH

**Chi. Sou. JYOTHI**

(D/o. Late. Sri. S.H. Keshwapur of Hubli)

**and**

**Chi. SAMANT**

WITH

**Chi. Sou. PRAMILA**

(D/o. Smt. & Sri S.B. Basalingol, Dharwad)

*at 11-55 AM.*

*on Sunday the 24th February-2002*

*at Ramai Smruthi Buddhavihar, Bijjaragi, Taluk & Dist. Bijapur.*

*Your's*

R.A. Audi

ಬಿಜಾಪೂರ ಜಿಲ್ಲೆಯಲ್ಲಿ ಬೌದ್ಧ ಧರ್ಮ ಪುನರುಜ್ಜೀವನ ಕಾರ್ಯದಲ್ಲಿ ಹೆಚ್ಚಿನ ಪಾತ್ರವಹಿಸಿರುವ ಹಿರಿಯ ಉಪಾಸಕ ಶ್ರೀ ಆರ್.ಎ. ಬೌಧಿ ಅವರು ತಮ್ಮ ಮಕ್ಕಳಿಗೆ ಬೌದ್ಧ ಹೆಸರುಗಳನ್ನು ಇಟ್ಟಿರುವುದು. ಮತ್ತು ಅವರ ವಿವಾಹದ ಆಮಂತ್ರಣ ಪತ್ರಿಕೆ, ವಿವಾಹ ಎಲ್ಲವನ್ನು ಬೌದ್ಧ ರೀತಿಯಲ್ಲಿ ಏರ್ಪಡಿಸಿರುವುದು. ದಲಿತ ಬೌದ್ಧರು ಹಿಂದೂ ಆಚರಣೆಗಳನ್ನು ಸಂಪೂರ್ಣ ತ್ಯಜಿಸಿರುವುದರ ಸಂಕೇತವಾಗಿ ಇಂತಹ ಬದಲಾವಣೆಗಳನ್ನು ಗಮನಿಸಬಹುದಾಗಿದೆ.

52



ಬೌದ್ಧ ಪೂರ್ಣಿಮೆಯಂದು ಏರ್ಪಡಿಸಿದ ನಾಮಕರಣ ಸಮಾರಂಭವನ್ನು ಹುಬ್ಬಳ್ಳಿಯ ಬೌದ್ಧ ಬಿಕ್ಕುಗಳಾದ ಪೂಜ್ಯ ಬುದ್ಧಪ್ರಿಯ ಬಂತೇಜಿ ಇವರು ನೆರವೇರಿಸುತ್ತಿರುವುದು



ಹುಬ್ಬಳ್ಳಿಯ ಬೌದ್ಧ ಪೂರ್ಣಿಮೆ ಕಾರ್ಯಕ್ರಮದಲ್ಲಿ ಮುಂಡಗೋಡಿನ ಟಿಬೇಟಿಯನ್ ಬೌದ್ಧ ಲಾಮಾಗಳಿಂದ ಬೌದ್ಧ ಪ್ರಾರ್ಥನೆ




"ಬುದ್ಧ ಬರಲಿ ನಮ್ಮ ಊರಿಗೆ"
ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿ 1999ರಲ್ಲಿ ಡಿಸೆಂಬರ 6 ರಿಂದ 30ರವರೆಗೆ ರಾಜ್ಯಾದ್ಯಂತ ವಿಶೇಷವಾಗಿ ಹಳ್ಳಿ ಹಳ್ಳಿಗಳಿಗೆ ಬುದ್ಧನ ತತ್ವ ಸಂದೇಶಗಳನ್ನು ಆಚರಣೆಗಳನ್ನು ಪ್ರಚಾರ ಮಾಡಿದ ವಿನೂತನ ಕಾರ್ಯಕ್ರಮ.

ಡಿಸೆಂಬರ ೬ ರಿಂದ ೧೩ರವರೆಗೆ ೧೯೯೭ ಧಾರವಾಡ

ವಿಚಾರ ಸಂಕಿರಣ

೧೩-೧೨-೧೯೯೭

ಬೌದ್ಧ ಭಾರತ

ವ್ಯವಸ್ಥೆ

ಕರ್ನಾಟಕ ದಲಿತ ಸಂಘರ್ಷ ಸಮಿತಿ (ರಿ)

ದಲಿತ ವಿದ್ಯಾರ್ಥಿ ಒಕ್ಕೂಟ. ಧಾರವಾಡ ಜಿಲ್ಲಾ ಶಾಖೆ

ದಲಿತ ಮಹಿಳಾ ಒಕ್ಕೂಟ. ಧಾರವಾಡ ಜಿಲ್ಲಾ ಶಾಖೆ

1997 ರಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಹಮ್ಮಿಕೊಂಡ ಬೌದ್ಧ ಭಾರತ ವಿಚಾರ ಸಂಕಿರಣದ ಆಮಂತ್ರಣ ಪತ್ರಿಕೆಯ ಮುಖಪುಟ (ಡಿಸೆಂಬರ 6 ರಿಂದ 13ರವರೆಗೆ ರಾಜ್ಯಾದ್ಯಂತ ಹಮ್ಮಿಕೊಂಡ ಬೌದ್ಧ ಧರ್ಮ ಸಪ್ತಾಹದ ಅಂಗವಾಗಿ

ಸಂಘಟನೆ ಹೋರಾಟ

ಬುದ್ಧ ಬೆಳಗಲಿ
ಮಾನವತೆ ಅರಳಲಿ

ಬುದ್ಧಜಯಂತಿ ಪ್ರಯುಕ್ತ

ರಾಜ್ಯ ಮಟ್ಟದ ವಿಚಾರ ಸಂಕಿರಣ

ಸ್ಥಳ: ಸೆನೆಟ್ ಹಾಲ್, ಸೆಂಟ್ರಲ್ ಕಾಲೇಜ್ ಆವರಣ, ಡಾ|| ಅಂಬೇಡ್ಕರ್ ರಸ್ತೆ, ಬೆಂಗಳೂರು

ದಿನಾಂಕ 28-5-2000 ಬೆಳಿಗ್ಗೆ 11 ಗಂಟೆಗೆ

ಬುದ್ಧ ಬೆಳಗಲಿ ಮಾನವತೆ ಅರಳಲಿ ರಾಜ್ಯ ಮಟ್ಟದ ವಿಚಾರ ಸಂಕಿರಣ (ಬೆಂಗಳೂರು:2000) ಕಾರ್ಯಕ್ರಮ



ದೀಕ್ಷಾ ಭೂಮಿಯಲ್ಲಿ ಬುದ್ಧ, ಅಂಬೇಡ್ಕರರ ಕಂಚಿನ ಪುತ್ಥಳಿಗಳ ಮಾರಾಟ ಮಳಿಗೆಗಳು
ಇಂತಹ ನೂರಾರು ಮಳಿಗೆಗಳು ಇರುತ್ತವೆ.




"ಬುದ್ಧ ಬರಲಿ ನಮ್ಮ ಮನ - ಮನೆಗೆ" ಎನ್ನುವ ಬೌದ್ಧ ಸಂಸ್ಕೃತಿ ಚಿಂತನ ಸರಣಿ ಉಪನ್ಯಾಸ
ಮಾಲೆಯ ಭಾವ ಚಿತ್ರ, ( ಶಿಕ್ಷಣ ಸಂಗ್ರಾಮ ಪ್ರಕಾಶನ , ಹುಬ್ಬಳ್ಳಿ 23.05.2005 )

Dr. B.R. AMBEDKAR BIRTH CENTENARY

Bharat Ratna Dr. B.R. Ambedkar, was an eminent multi splendoured personality in social religious and political life of the 20th century India. He hailed from a depressed class family and underwent enormous sufferings. He waged a long and valiant struggle for generating self-respect, self-confidence, courage and awareness among the down trodden people. He was verily their emancipator. A great champion of equality, liberty and fraternity, he found solace in the sublime teachings of the Buddha and accepted the Buddha Dhamma along with a large number of his followers. His admirers will actively participate in the centenary functions and during the Convention a paper will be presented on [illegible]

CENTENARY SOUVENIR "DHAMMA"

The Buddha Vachana Trust which has been handling the programme of the Maha Bodhi Society for publishing books on the teachings of the Buddha, has not only published a large number of books but has been bringing out a Magazine named 'DHAMMA'. On the occassion of the Centenary of the Maha Bodhi Society, it is proposed to publish a special centenary issue of 'DHAMMA'.

MAHA BODHI SOCIETY
CENTENARY CELEBRATIONS
1891 – 1991

BUDDHA DHAMMA SANGHA
MAHA BODHI SOCIETY

PROGRAMS

' ಮಹಾಬೋಧಿ ಸೊಸೈಟಿ ಬೆಂಗಳೂರು ಇವರು 1991ರಲ್ಲಿ ಡಾ. ಬಿ.ಆರ್.ಅಂಬೇಡ್ಕರವರ ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ ಅವರ 'ಬೌದ್ಧ ಧರ್ಮದ ಪುನರುಜ್ಜೀವನ ಕಾರ್ಯವನ್ನು ಸ್ಮರಿಸಿರುವುದರ ಸಂಕೇತ' ವಾಗಿ ವಿಚಾರ ಸಂಕಿರಣ ಏರ್ಪಡಿಸಿರುವುದು.



ಮೈಸೂರಿನ 'ಮಹಾಬೋಧಿ ಸೊಸೈಟಿಯ ' ಆವರಣದಲ್ಲಿರುವ ''ಮಹಾಬೋಧಿ ಲೋಕ ಕರುಣ ಚೈತ್ಯ'' ದ ನೋಟ.


AMITA

ಮಹಾಬೋಧಿ ಸೊಸೈಟಿ ಬೆಂಗಳೂರು ಇವರು ಬೌದ್ಧ ಶಿಕ್ಷಣ ಕ್ರಮಕ್ಕೆ ಹೆಚ್ಚಿನ ಆದ್ಯತೆ ನೀಡಿದ್ದು ಅದನ್ನು ಪ್ರಾಯೋಗಿಕವಾಗಿ ಅನುಷ್ಠಾನಗೊಳಿಸುತ್ತಿರುವುದು. ಮೇಲೆ ವಿದ್ಯಾರ್ಥಿಗಳು ಸ್ವಾವಲಂಭಿ ಕೈಕಸಬುಗಳಲ್ಲಿ ತರಬೇತಿ ಪಡೆಯುತ್ತಿರುವುದು. ಕೆಳಗೆ ಪಕ್ಕದಲ್ಲಿ ಸಾಮೂಹಿಕ ಬೌದ್ಧ ಪ್ರಾರ್ಥನೆಯಲ್ಲಿ ನಿರತರಾಗಿರುವುದು.



ಬೆಂಗಳೂರಿನ ಮಹಾಬೋಧಿ ಸೊಸೈಟಿ ಆವರಣದಲ್ಲಿರುವ ಚೈತ್ಯಕ್ಕೆ ವಂದನೆ ಸಲ್ಲಿಸುತ್ತಿರುವ ಸಮಣೇರ ಬಾಲಕರು.






















ಶ್ರೀ ವೈ. ಬಿ. ನಂದನ
ಖ್ಯಾತ ಬೌದ್ಧ ಸಾಹಿತಿಗಳು

ಹಿರಿಯ ಬೌದ್ಧ ಉಪಾಸಕರಾದ ಇವರು ಈ ಎಲ್ಲ ಮೇಲಿನ ಗ್ರಂಥಗಳನ್ನು ರಚಿಸುವುದರೊಂದಿಗೆ ಕರ್ನಾಟಕದಲ್ಲಿ ಬೌದ್ಧ ಧರ್ಮ ಪುನರುಜ್ಜೀವನಕ್ಕೆ ಮಹತ್ವದ ಕೊಡುಗೆ ಸಲ್ಲಿಸಿದ್ದಾರೆ.




ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿ ಪ್ರಥಮ ಬಾರಿಗೆ ಬೌದ್ಧ ಧರ್ಮದ ತತ್ವಗಳನ್ನು ಹಳ್ಳಿ ಹಳ್ಳಿಗಳಿಗೆ ಪ್ರಕಾರ ಮಾಡುವ ಸಲುವಾಗಿ " ಬುದ್ಧ ಬರಲಿ ನಮ್ಮ ಊರಿಗೆ " ಎಂಬ ಚಳುವಳಿ ಹಮ್ಮಿಕೊಂಡಿತ್ತು. ರಾಜ್ಯಾದ್ಯಂತ ಹಮ್ಮಿಕೊಂಡ ಈ ಕಾರ್ಯಕ್ರಮದ ಅಂಗವಾಗಿ ಮೈಸೂರು ಶಾಖೆ ಪ್ರಕಟಿಸಿದ ಕಿರುಹೊತ್ತಿಗೆ (1999)






ಮೈಸೂರಿನ ಪ್ರೊ. ಎಂ ಮರಿಸ್ವಾಮಿ ( ಮನೋರಕ್ಷಿತ) ರವರು ರಚಿಸಿದ ಈ ಗ್ರಂಥವು ಕರ್ನಾಟಕದ ಬೌದ್ಧ ಸಾಹಿತ್ಯದಲ್ಲಿ ಮಹತ್ವದ ಕೃತಿಯಾಗಿದೆ. ಅಂಬೇಡ್ಕರವರ ವಿಚಾರಗಳನ್ನು ಆಧರಿಸಿ ರಚಿಸಿದ ಈ ಪುಸ್ತಕದ ಲೇಖಕರು ನಾಮಾಂತರ ಹೊಂದಿ ' ಮನೋರಕ್ಷಿತ 'ರಾಗಿ ಚಾಮರಾಜನಗರ, ಮೈಸೂರು ಭಾಗದಲ್ಲಿ ಬುದ್ಧ ಧರ್ಮ ಪ್ರಸಾರ ಕಾರ್ಯ ಮಾಡುತ್ತಿದ್ದಾರೆ.

67




ಶ್ರೀ ಮಾವಳ್ಳಿ ಶಂಕರ್ ನೇತೃತ್ವದ ಕರ್ನಾಟಕ ದಲಿತ ಸಂಘರ್ಷ (ರಿ) ಅಂಬೇಡ್ಕರವಾದ, ಬೆಂಗಳೂರು ಇವರು ಹೊರಡಿಸಿದ ' ಬೌದ್ಧ ಧಮ್ಮ ದೀಕ್ಷಾ' ಸಂಚಿಕೆ (2003)




ಕರ್ನಾಟಕ ರಾಜ್ಯ ದಲಿತ ಸಂಘರ್ಷ ಸಮಿತಿಯ ಮುಖವಾಣಿ ಪತ್ರಿಕೆಯಲ್ಲಿ ಬುದ್ಧನ ತತ್ವಗಳು , ಅಂಬೇಡ್ಕರವರ ಧಾರ್ಮಿಕ ವಿಚಾರಗಳನ್ನು ಪ್ರಕಟಿಸಿರುವುದು (2003)

68



ಸಮಣೇರ ದೀಕ್ಷಾ ಸಮಾರಂಭ

ಆಧುನಿಕ ಕರ್ನಾಟಕದ ಪ್ರಥಮ ಗ್ರಾಮೀಣ ಬೌದ್ಧ ವಿಹಾರ ಎಂಬ ಹಿರಿಮೆಗೆ ಪಾತ್ರವಾಗಿರುವ ಬೀದರ ಜಿಲ್ಲೆಯ ಬಸವಕಲ್ಯಾಣ ತಾಲೂಕಿನ ಮೋರಖಂಡಿ ಗ್ರಾಮದಲ್ಲಿ ಸ್ಥಾಪಿತವಾದ ಜೇತವನ ಬೌದ್ಧ ವಿಹಾರದಲ್ಲಿ ಬಿಕ್ಕು ಉಪಾಲಿ ಬದಂತರ ನೇತೃತ್ವದಲ್ಲಿ 22 ಮೇ 1978 ರಿಂದ ಹಮ್ಮಿಕೊಂಡ ಸಮಣೇರ ದೀಕ್ಷಾ ಶಿಬಿರದ ಬೌದ್ಧ ಉಪಾಸಕರು.



2002ರಲ್ಲಿ ವಾಲಿಂಡಗೋಡದ ಟಿಬೇಟಿನ್ ಬೌದ್ಧ ಕಾಲನಿಯಲ್ಲಿ ಉದ್ಘಾಟನೆಗೊಂಡಿರುವ
ಜಾಂಕ್ಸೆ ಬೌದ್ಧ ವಿಹಾರ ಮತ್ತು ಬೌದ್ಧ ಧರ್ಮ ಉನ್ನತ ವಿಶ್ವವಿದ್ಯಾಲಯ
(ಚಿತ್ರ: ತರಂಗ: 24 ಜನೇವರಿ 2002 ಪುಟ 37)




ಬೆಳಗಾವಿ ಜಿಲ್ಲೆಯ ಭೀಮಸೇನಾ ಸಂಘಟನೆಯ ವತಿಯಿಂದ ಸಂಘಟಿಸಿದ್ದ
ಬೌದ್ಧ ಸಮಣೇರ ದೀಕ್ಷಾ ಕಾರ್ಯಕ್ರಮ (2005 )
ನೇತೃತ್ವ:ಪೂಜ್ಯ ಬಿಕ್ಕು ನವಪಾಲ ಬಂತೇಜಿ , ಶ್ರೀಲಂಕಾ ( ಬುದ್ಧ, ಫುಲೆ , ಅಂಬೇಡ್ಕರ ಭಾವಚಿತ್ರಗಳು)



ಮಹಾಬೋಧಿ ಸೊಸೈಟಿ ಮೈಸೂರು ಇಲ್ಲಿ ಸ್ವಿಜ್ಜರಲ್ಯಾಂಡಿನ ಬೌದ್ಧ ಅನುಯಾಯಿಯಾದ ಶ್ರೀಮತಿ ಕಾರ್ಲಾ ಇವರು
ನಿರ್ಮಿಸಿದ ಮಹಾಬೋಧಿ ಕಾರ್ಲಾ ಸ್ಟುಡೆಂಟ್ಸ ಹೋಮ .

ಬೌದ್ಧಧಮ್ಮ ದೀಕ್ಷಾ ಸಮಾರಂಭ ಸಿದ್ಧತಾ ಸಮಿತಿ

ಆರ್. ಎ. ಔದಿ, ಕಾರ್ಯಾಧ್ಯಕ್ಷರು ಮತ್ತು ಸದಸ್ಯರುಗಳಾದ - ಬುದ್ಧಸೇನ ಮೋರಯ್ಯ, ವೈ.ಬಿ. ನಂದನ, ಧಮ್ಮರಕ್ಷಿತ, ಡಿ.ಜಿ. ಸಾಗರ್, ಪಿ.ಎಂ. ಮುನಿಯಪ್ಪ, ಮಾವಳ್ಳಿ ಶಂಕರ್, ಎನ್. ಶಿವಣ್ಣ, ಎಂ. ವೆಂಕಟಸ್ವಾಮಿ, ಇಂದೂಧರ ಹೊನ್ನಾಪುರ, ಎನ್. ಮಹೇಶ್, ಎನ್. ನಾಗರಾಜ್, ಎಸ್. ಆರ್. ಕೊಲ್ಲೂರ್, ಕೆ. ಚಂದ್ರಶೇಖರ್, ಬುದ್ಧಘೋಷ ದೇವೇಂದ್ರ ಹೆಗ್ಗಡೆ, ಜಿಗಣಿ ಶಂಕರ್, ಪಟಾಪಟ್ ನಾಗರಾಜ್, ಲಕ್ಷ್ಮೀನಾರಾಯಣ ನಾಗವಾರ, ವಿ. ನಾಗರಾಜ್, ಎಫ್. ಎಚ್. ಜಕ್ಕಪ್ಪನವರ್, ಹೆಚ್. ಎಸ್. ಮಹೇಶ್, ಪುರುಷೋತ್ತಮ ದಾಸ್, ತ್ಯಾಗರಾಜ್, ಮರಿಯಪ್ಪ, ಆರ್. ಮೋಹನ್ ರಾಜ್, ಮುಡ್ನಾಕೂಡು ಚಿನ್ನಸ್ವಾಮಿ, ಸುಬ್ರಮಣ್ಯಂ, ಅಗ್ಗಯ್ಯ, ರಾಮದೇವಪ್ಪ, ಪಿ. ಸಂಘಸೇನಾ, ಕೆ. ಕುಮಾರ್, ಗುಂಡಪ್ಪ ದೊಳ್ಳೆ, ಆರ್. ಮಹದೇವಪ್ಪ, ಡಾ|| ಪೂಣೇಶ್ ರಾಜು, ಸಿದ್ದರಾಮು, ರಾಜಶೇಖರ್ ಯಡ್ವಳ್ಳಿ, ಹನುಮಂತರಾಯಪ್ಪ, ಎಂ. ಎಂ. ಕಷ್ಟಯ್ಯ, ಡಾ|| ರಾಜಾನಂದ ಮೂರ್ತಿ, ಹೆಚ್. ಎಂ. ಸೋಲಂಕಿ, ಕನಕರಾಜ್, ಜಯರಾಂ, ಡಿ. ಗೋಪಾಲಕೃಷ್ಣ, ಧರ್ಮಸೇನಾ ರಮೇಶ್ ಡಾಕುಳಕಿ, ರಮೇಶ್ ಆಸಂಗಿ, ಗಾ.ನ. ಅಶ್ವತ್ಥ್, ಮ.ಶ್ರಾ. ವೆಂಕಟೇಶ್, ಮು. ತಿಮ್ಮಯ್ಯ, ಸುಬ್ಬು ಹೊಲೆಯಾರ್, ಡಾ|| ಶಿವಲಿಂಗಯ್ಯ, ಸಿದ್ಧಲಿಂಗಯ್ಯ, ಎಂ. ಹೊತ್ತಪ್ಪ, ಜೆ.ಎಂ. ಚಲುವರಾಜು, ಡಾ|| ನರೇಂದ್ರಕುಮಾರ್, ಎಲ್. ರಾಮದಾಸ್, ಜಿ.ವಿ. ಕೃಷ್ಣಪ್ರಸಾದ್, ಬಾಲಕೃಷ್ಣನ್, ಹೊನ್ನಪ್ಪ, ಕಾಳೇಸಿಂಗೆ, ಬಿ. ವಿಜಯಕುಮಾರ್, ಹೆಚ್. ಡಿ. ಚಂದ್ರಯ್ಯ, ಓ. ರಾಜಣ್ಣ, ಡಾ|| ಸಿದ್ದರಾಜು, ಡಾ|| ಕೆ. ಹೆಚ್. ಜ್ಞಾನೇಂದ್ರಪ್ಪ, ಪ್ರಕಾಶ್ ಪಟಾಪಟ್, ರಾಮಕೃಷ್ಣಯ್ಯ, ಗೌತಮ್ ಪಾಟೀಲ್, ರೋಹಿತಾಕ್ಷ, ಎಸ್. ನಾರಾಯಣಸ್ವಾಮಿ, ಪಿ. ಲಕ್ಷ್ಮಣ್, ವಿಠಲ್ ದೊಡ್ಡಮನಿ, ತಿಪ್ಪಣ್ಣ ಅರತಿ, ಎಂ. ಮುನಿಯಲ್ಲಪ್ಪ.

ಬನ್ನಿ ಭಾಗವಹಿಸಿ ಕಾರ್ಯಕ್ರಮ ಯಶಸ್ವಿಗೊಳಿಸಿ

ಎಲ್ಲರಿಗೂ ಆದರದ ಸ್ವಾಗತ

ಬೋಧಿಸತ್ವ ಡಾ. ಬಾಬಾಸಾಹೇಬ ಅಂಬೇಡ್ಕರ್ ರವರ

48 ನೇ ಧಮ್ಮ ಚಕ್ರ ಪರಿವರ್ತನಾ ದಿನದ ಅಂಗವಾಗಿ

ಬೌದ್ಧ ಧಮ್ಮ ದೀಕ್ಷಾ ಸಮಾರಂಭ

ಅಕ್ಟೋಬರ್ 14, 2003 ಬೆಂಗಳೂರು

**ಕರ್ನಾಟಕ ದಲಿತ ಚಳುವಳಿಯ ಚರಿತ್ರೆಯಲ್ಲಿ ಮೈಲುಗಲ್ಲು.**

**ಪ್ರಥಮ ಬಾರಿಗೆ ದಲಿತ ಚಳುವಳಿಯ ಎಲ್ಲಾ ಬಣಗಳು, ದಲಿತ ಮುಖಂಡರು, ಎಲ್ಲಾ ಸಂಘಟನೆಗಳು ಜಂಟಿಯಾಗಿ 1 ಲಕ್ಷ ದಲಿತರಿಗೆ ' ಬೌದ್ಧ ಧಮ್ಮ ದೀಕ್ಷಾ ' ಸಮಾರಂಭ ಏರ್ಪಡಿಸಿರುವುದು. ಬಿಜಾಪೂರದ ಆರ್.ಎ. ಔದಿಯವರ ಅಧ್ಯಕ್ಷತೆಯಲ್ಲಿ ರಚಿಸಿದ ಸಮಿತಿಯಲ್ಲಿ ವೈ.ಬಿ.ನಂದನ ದಮ್ಮರಕ್ಷಿತ, ಡಿ.ಜಿ.ಸಾಗರ, ಪಿ.ಎಂ. ಮುನಿಯಪ್ಪ ಮಾವಳ್ಳಿ ಶಂಕರ, ಎಂ.ವೆಂಕಟಸ್ವಾಮಿ, ಇಂದೂಧರ ಹೊನ್ನಾಪುರ, ಎನ್. ಮಹೇಶ್, ಮೂಡ್ನಾಕೂಡು ಚಿನ್ನಸ್ವಾಮಿ, ಹೀಗೆ ಪ್ರಸ್ತುತ ಅಧ್ಯಯನದಲ್ಲಿಪ್ರಸ್ತಾಪಕ್ಕೆ ಬಂದಿರುವ ಎಲ್ಲಾ ಬುದ್ಧಿ ಜೀವಿಗಳು , ದಲಿತ ಚಳುವಳಿಯ ನೇತಾರರು ಒಟ್ಟಿಗೆ ಕೂಡಿಕೊಂಡು ಬೌದ್ಧ ಧರ್ಮ ದೀಕ್ಷಾ ಸಮಾರಂಭ ಏರ್ಪಡಿಸಿರುವುದರ ಮೂಲಕ ಕರ್ನಾಟಕದಲ್ಲಿ ಬೌದ್ಧ ಧರ್ಮ ಪುನರುಜ್ಜೀವನಕ್ಕೆ (Revival) ಚಾಲನೆ ನೀಡಿರುವುದು.**

## ಅನುಬಂಧ - II (ಅ)

## ದಲಿತ ಬೌದ್ಧ ಉಪಾಸಕ / ಉಪಾಸಕಿಯರ ಸಂದರ್ಶನ

## (ಸಂದರ್ಶನ / ಮಾಹಿತಿ ಸಂಗ್ರಹ ನಮೂನೆ)

### ಅ) ಸಾಮಾನ್ಯ ಮಾಹಿತಿ :

1. ಸಂದರ್ಶನದ ದಿನಾಂಕ :
2. ನಿರೂಪಕರ ಹೆಸರು / ವಿಳಾಸ / ವಯಸ್ಸು:
3. ಕೌಟುಂಬಿಕ ಹಿನ್ನಲೆ / ನೋಂದಣಿ ವಿವರಗಳು :
4. ವೃತ್ತಿ / ಆದಾಯ :
5. ಇತರೆ :

### ಬ) ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದ ಪ್ರಶ್ನೆಗಳು :

1. ನೀವು ಬೌದ್ಧ ಧರ್ಮದ ಪ್ರಭಾವಕ್ಕೆ ಒಳಗಾದದ್ದು ಯಾವಾಗ ?
2. ಬೌದ್ಧ ಧರ್ಮಾನುಯಾಯಿಯಾಗಬೇಕೆಂದು ನಿಮಗೆ ಏಕೆ ಅನ್ನಿಸಿತು?
3. ನೀವು ಮನೆಯಲ್ಲಿ ಆಚರಿಸುವ ಬೌದ್ಧ ಆಚರಣೆಗಳಾವುವು ?
4. ಬೌದ್ಧ ದೀಕ್ಷೆ ಹೊಂದಿದ ನಂತರ ನೀವು ನಾಮಾಂತರ ಹೊಂದಿರುವಿರಾ ?
   ಅ) ಮೊದಲಿನ ಹೆಸರು
   ಆ) ನಂತರದ ಹೆಸರು
5. ನೀವು ಮತಾಂತರ ಹೊಂದಿದ ನಂತರ ನಿಮ್ಮ ದೈನಂದಿನ ಜೀವನದಲ್ಲಾದ ಬದಲಾವಣೆಗಳು ಯಾವುವು ?
6. ನೀವು ಮಾಂಸಾಹಾರಿಗಳೇ ? ಬೌದ್ಧ ಪದ್ಧತಿಯ ಜೀವನ ನಡೆಸುವ ನೀವು ಮಾಂಸ ಸೇವನೆ ಬಗ್ಗೆ ಏನು ಹೇಳುತ್ತೀರಿ ?
7. ನೀವು ಬೌದ್ಧರಾಗಿ ಮತಾಂತರ ಹೊಂದಿದ ನಂತರ ಉಳಿದ ದಲಿತ ಕುಟುಂಬಗಳ ಜೊತೆ ನಿಮ್ಮ ಸಂಬಂಧ ಹೇಗಿದೆ ?

8. ಬೌದ್ಧ ಧರ್ಮ ಸ್ವೀಕರಿಸಿದ ನಿಮ್ಮ ಜೊತೆಗೆ, ನಿಮಗೆ ಪರಿಚಯವಿರುವ ಮೇಲ್ವರ್ಗದ ಜನರು ಯಾವ ರೀತಿ ಪ್ರತಿಕ್ರಿಯಿಸುತ್ತಾರೆ ?

9. ಬೌದ್ಧ ಧರ್ಮಿಯರಾದ ನಿಮಗೆ ಇವತ್ತಿನ ಧಾರ್ಮಿಕ ಸ್ಥಾನ - ಮಾನದಿಂದ ತೃಪ್ತಿ ಇದೆಯೇ ?

10. ನೀವು ಯಾವುದಾದರೂ ಧಾರ್ಮಿಕ ಸಂಘ - ಸಂಸ್ಥೆಯ ಅಥವಾ ವಿಹಾರದ ಸದಸ್ಯರಾಗಿರುವಿರಾ ?

ಅ) ಸದಸ್ಯರಾಗಿದ್ದರೆ ಅಂತಹ ಸಂಘ - ಸಂಸ್ಥೆಯ / ವಿಹಾರದ ಉದ್ದೇಶಗಳು ಯಾವುವು ?
ಆ) ಸಂಘ - ಸಂಸ್ಥೆಯ / ವಿಹಾರದ ಕಾರ್ಯಕ್ರಮಗಳು ಯಾವುವು ?

11. ನೀವು ಬೌದ್ಧ ವಿಹಾರಕ್ಕೆ ನಿಯಮಿತವಾಗಿ ಭೇಟಿ ನೀಡುತ್ತೀರಾ ?

ಅ) ಭೇಟಿ ನೀಡಿದ ವಿಹಾರದ ಹೆಸರು
ಆ) ಭೇಟಿ ನೀಡಿದ ವಿಹಾರದಲ್ಲಿ ನಡೆಯುವ ಆಚರಣೆಗಳು
ಇ) ಎಷ್ಟು ದಿನಗಳಿಗೊಮ್ಮೆ ಭೇಟಿ ನೀಡುತ್ತೀರಿ ?
ಈ) ವಿಹಾರಕ್ಕೆ ಹೋಗುವಾಗ ಯಾವ ಯಾವ ವಸ್ತುಗಳನ್ನು ತೆಗೆದುಕೊಂಡು ಹೋಗುತ್ತೀರಿ ?

12. ನೀವು ಬೌದ್ಧರಾಗಿದ್ದರಿಂದ ಬೇರೆ ಮತಾನುಯಾಯಿಗಳಿಂದ ಏನಾದರೂ ತೊಂದರೆಗಳನ್ನು ಎದುರಿಸಿದ್ದೀರಾ?

13. ನೀವು ಬೌದ್ಧ ಸಾಹಿತ್ಯವನ್ನು ಓದಿರುವಿರಾ ? ಅವುಗಳ ವಿವರಗಳನ್ನು ತಿಳಿಸಿ.

14. ನೀವು ಬೌದ್ಧ ಕಲೆ ಹಾಗೂ ಸಂಸ್ಕೃತಿಯಲ್ಲಿ ಯಾವ ರೀತಿ ಭಾಗವಹಿಸಿರುವಿರಿ ?

15. ನೀವು ಹಾಗೂ ನಿಮ್ಮ ಕುಟುಂಬದ ಸದಸ್ಯರು ಬೌದ್ಧ ಯಾತ್ರಾ ಸ್ಥಳಗಳಿಗೆ ಭೇಟಿ ನೀಡಿರುವಿರಾ ?

ಅ) ಭೇಟಿ ನೀಡಿದ ಸ್ಥಳಗಳ ವಿವರಣೆ ತಿಳಿಸಿ.
ಆ) ಎಷ್ಟು ದಿನಗಳಿಗೊಮ್ಮೆ ಈ ಸ್ಥಳಗಳಿಗೆ ಭೇಟಿ ನೀಡುತ್ತೀರಿ.

16. ನೀವು ದಲಿತ ಬೌದ್ಧರಾಗಿ ಸರಕಾರದ ಸೌಲಭ್ಯ ಹಾಗೂ ಇತರೇ ಹಕ್ಕುಗಳಿಂದ ವಂಚಿತರಾಗಿರುವಿರಾ ?

**ಕ) ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನಕ್ಕೆ ಸಂಬಂಧಿಸಿದ ಪ್ರಶ್ನೆಗಳು :**

1. ನೀವು ಬೌದ್ಧ ಧರ್ಮ ಸ್ವೀಕರಿಸಿದ ನಂತರ ಒಟ್ಟಾರೆ ಸಮಾಜಕ್ಕೆ ನೀವು ಏನನ್ನು ಕೊಡುಗೆಯಾಗಿ ಕೊಡಲಿಚ್ಛಿಸುವಿರಿ ?

2. ದಲಿತ ಬೌದ್ಧರ ಶೈಕ್ಷಣಿಕ ಪ್ರಗತಿಯ ಕುರಿತು ನಿಮ್ಮ ದೃಷ್ಟಿಕೋನಗಳು ಏನು ?

ಅ) ಭಾರತದಂತಹ ಸಂಸದೀಯ ಪ್ರಜಾಪ್ರಭುತ್ವ ರಾಷ್ಟ್ರಕ್ಕೆ ಬದ್ಧನಾಗಿರುವ ಮಗುವನ್ನು ತಯಾರಿಸಬೇಕಾದರೆ ಎಂತಹ ಶಿಕ್ಷಣ ಕ್ರಮ ಇರಬೇಕೆಂದು ನಿಮ್ಮ ಅನಿಸಿಕೆ ?

ಆ) ಆಧುನಿಕ ವಿದ್ಯಾಭ್ಯಾಸದ ಬಗ್ಗೆ ನಿಮ್ಮ ಅನಿಸಿಕೆಗಳೇನು ?

ಇ) ದಲಿತ ಬೌದ್ಧರ ಶೈಕ್ಷಣಿಕ ಪ್ರಗತಿಯ ಬಗ್ಗೆ ನೀವು ಹಾಕಿಕೊಂಡ ಅಥವಾ ಹಾಕಿಕೊಳ್ಳುವ ಕಾರ್ಯ ಯೋಜನೆಗಳು ಯಾವುವು ?

3. ಬೌದ್ಧರಾಗದೇ ಉಳಿದಿರುವ ದಲಿತರನ್ನು ಮತಾಂತರ ಮಾಡುವುದರ ಕುರಿತು ನಿಮ್ಮ ಅಭಿಪ್ರಾಯಗಳೇನು?

4. ಇಂದಿನ ಬಹುಸಂಖ್ಯಾತ ದಲಿತರು ಅದರಲ್ಲೂ ಮುಖ್ಯವಾಗಿ ದಲಿತ, ಹಿಂದುಳಿದ ಬುದ್ದಿ ಜೀವಿಗಳು ಅಂಬೇಡ್ಕರ್‌ವರನ್ನು ಒಪ್ಪುತ್ತಾರೆ. ಆದರೆ ಸಮಾನತೆಯ ಸಮಾಜ ನಿರ್ಮಾಣದ ಬುನಾದಿ ತತ್ವಗಳನ್ನು ಹೊಂದಿರುವ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿ ಬೌದ್ಧ ಧರ್ಮೀಯರಾಗಲು ಬಯಸುವುದಿಲ್ಲ ಏಕೆ?

5. ಡಾ. ಅಂಬೇಡ್ಕರ್‌ರವರು ಬೌದ್ಧ ಸ್ವೀಕಾರ ಮಾಡಿದಾಗಿನ ಭಾರತೀಯ ಸಾಮಾಜಿಕ ಸಂದರ್ಭ ಬೇರೆಯಾಗಿತ್ತು. ಇವತ್ತಿನ ಕಾಲಘಟ್ಟದಲ್ಲಿ ಬೌದ್ದ ಧರ್ಮಕ್ಕೆ ಮತಾಂತರ ಹೊಂದುವ ಅವಶ್ಯಕತೆ ಇದೆಯೇ? ನಾವು ಅಂಬೇಡ್ಕರ್‌ವಾದಿಗಳು ಹಾಗಾಗಿ ಬೌದ್ದ ಮತಕ್ಕೆ ಮತಾಂತರ ಹೊಂದುವ ಮಹತ್ವ ಇಲ್ಲ ಎಂದು ಅನೇಕ ದಲಿತ ಪ್ರಜ್ಞಾವಂತರು ಅಭಿಪ್ರಾಯ ಪಡುತ್ತಾರೆ. ಈ ರೀತಿಯ ಹೇಳಿಕೆಗಳ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು ?

6. ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ ದಲಿತರಿಗೆ ಇರುವ ಸಮಸ್ಯೆಗಳು ಯಾವುವು ?

7. ದಲಿತ ಬೌದ್ಧರ ಸಮಗ್ರ ಅಭಿವೃದ್ದಿಗೆ ನೀವು ಹಾಕಿಕೊಂಡ ಕಾರ್ಯಕ್ರಮಗಳು ಯಾವುವು ?

8. ನೀವು ಸಂಘಟಿಸಿದ ಪ್ರಮುಖ ಬೌದ್ಧ ಧಾರ್ಮಿಕ ಕಾರ್ಯಕ್ರಮಗಳು ಯಾವುವು ?

9. ನೀವು ಸಂಪರ್ಕವಿಟ್ಟುಕೊಂಡ ಬೌದ್ಧ ಬಿಕ್ಕುಗಳು, ವಿದ್ವಾಂಸರು ಯಾರು?

10. 'ಕರ್ನಾಟಕದ ದಲಿತ ಬೌದ್ದರ ಸಾಂಸ್ಕೃತಿಕ ಅಧ್ಯಯನ' ಈ ಸಂಶೋಧನಾ ಅಧ್ಯಯನವು ದಲಿತರು ಇಂದು ಎದುರಿಸುತ್ತಿರುವ ಹಲವಾರು ಸಾಂಸ್ಕೃತಿಕ ಸವಾಲುಗಳನ್ನು, ಅದರಲ್ಲೂ ಮುಖ್ಯವಾಗಿ ದಲಿತರ ಸಾಂಸ್ಕೃತಿಕ ಐಡೆಂಟಿಟಿಯ ಸಮಸ್ಯೆಯನ್ನು ವಿಶ್ಲೇಷಣೆ ಮಾಡುವ ಒಂದು ಪ್ರಯತ್ನ ಮತ್ತು ಮಹದುದ್ದೇಶವನ್ನು ಹೊಂದಿದೆ. ಈ ಕುರಿತು ನಿಮ್ಮ ಅನಿಸಿಕೆ ಏನು?

## ಅನುಬಂಧ - II (ಬ)

## ಬೌದ್ಧ ವಿಹಾರಗಳು ಹಾಗೂ ಸಾಂಸ್ಕೃತಿಕ / ಶೈಕ್ಷಣಿಕ ಸಂಘ - ಸಂಸ್ಥೆಗಳು (ಸಂದರ್ಶನ / ಮಾಹಿತಿ ಸಂಗ್ರಹ ನಮೂನೆ)

**ಅ) ಸಾಮಾನ್ಯ ಮಾಹಿತಿ :**

1. ಸಂದರ್ಶನದ ದಿನಾಂಕ :

2. ನಿರೂಪಕರ ಹೆಸರು / ವಿಳಾಸ / ವಯಸ್ಸು:

3. ಕೌಟುಂಬಿಕ ಹಿನ್ನಲೆ / ನೋಂದಣಿ ವಿವರಗಳು :

4. ವೃತ್ತಿ / ಆದಾಯ :

5. ಇತರೆ :

**ಬ) ವಿಹಾರದ / ಸಂಘ - ಸಂಸ್ಥೆಯ ವಿಷಯಗಳು :**

1. ಈ ವಿಹಾರವು / ಸಂಘ - ಸಂಸ್ಥೆಯು ಯಾವಾಗ ಪ್ರಾರಂಭಗೊಂಡಿತು ?
2. ಈ ವಿಹಾರದ / ಸಂಘ - ಸಂಸ್ಥೆಯ ಪ್ರಾರಂಭದ ಪ್ರೇರಣೆಗಳೇನು ?
3. ಈ ವಿಹಾರದ / ಸಂಘ - ಸಂಸ್ಥೆಯ ಮೂಲ ಗುರಿ ಹಾಗ ಉದ್ದೇಶಗಳು ಏನು ?
4. ಈ ವಿಹಾರದಲ್ಲಿ / ಸಂಘ - ಸಂಸ್ಥೆಯಲ್ಲಿ ಆಚರಿಸುವ ಬೌದ್ಧ ಆಚರಣೆಗಳು ಯಾವುವು ?
5. ಈ ವಿಹಾರಕ್ಕೆ / ಸಂಘ - ಸಂಸ್ಥೆಗೆ ಎಷ್ಟು ಜನ ಸದಸ್ಯರಿರುತ್ತಾರೆ ?
6. ಈ ವಿಹಾರಕ್ಕೆ /ಸಂಘ - ಸಂಸ್ಥೆಗಳಿಗೆ ಸದಸ್ಯರಾಗಿರುವ ಉಪಾಸಕ / ಉಪಾಸಕಿಯರ ಸಾಮಾಜಿಕ ಹಿನ್ನಲೆ ಎಂತಹದು ?
7. ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ ದಲಿತರ ಆರಂಭಿಕ ಪ್ರೇರಣೆಗಳು ಯಾವುವು ?
8. ಬೌದ್ಧ ಧರ್ಮಕ್ಕೆ ಮತಾಂತರಿಸಲು ಈ ವಿಹಾರವು/ ಸಂಘ-ಸಂಸ್ಥೆಯು ಹಾಕಿಕೊಂಡ ಕಾರ್ಯಕ್ರಮಗಳೇನು?

9. ದಲಿತರು ಬೌದ್ಧ ಧರ್ಮಕ್ಕೆ ಮತಾಂತರಗೊಳ್ಳುವ ಸಂದರ್ಭದಲ್ಲಿ ಎದುರಿಸಿದ ಸಮಸ್ಯೆಗಳು ಯಾವುವು?

10. ದಲಿತರು ಬೌದ್ಧ ಧರ್ಮಕ್ಕೆ ಮತಾಂತರ ಹೊಂದುವಲ್ಲಿ ಕೇವಲ ಸಾಂಸ್ಕೃತಿಕ ಹಿತಾಸಕ್ತಿ ಅಡಗಿದೆಯೇ ಅಥವಾ ಡಾ. ಅಂಬೇಡ್ಕರವರ ತತ್ವಗಳಿಂದ ಪ್ರೇರಿತವಾಗಿರುವ ಪ್ರಕ್ರಿಯೆಯೇ ?

11. ಈ ವಿಹಾರಕ್ಕೆ / ಸಂಘ - ಸಂಸ್ಥೆಗಳಿಗೆ ಭೇಟಿ ನೀಡಿದ ಮಹತ್ವದ ವ್ಯಕ್ತಿಗಳು ಯಾರು ಯಾರು ?

| ಭೇಟಿ ನೀಡಿದವರ ಹೆಸರುಗಳು | ದಿನಾಂಕ / ವರ್ಷ | ಉದ್ದೇಶ |
|---|---|---|

12. ಈ ವಿಹಾರಕ್ಕೆ / ಸಂಘ - ಸಂಸ್ಥೆಗೆ ಸರಕಾರದಿಂದ ದೊರಕಿದ ಸೌಲಭ್ಯಗಳು ಯಾವುವು?

13. ಈ ವಿಹಾರವು / ಸಂಘ - ಸಂಸ್ಥೆಯು ದಲಿತ ಬೌದ್ಧರ ಶೈಕ್ಷಣಿಕ ಅಭಿವೃದ್ಧಿಗೆ ಹಾಕಿಕೊಂಡ ಕಾರ್ಯಕ್ರಮಗಳು ಯಾವುವು ?

14. ಪ್ರಸ್ತುತ ಸಂದರ್ಭದಲ್ಲಿ ದಲಿತ ಬೌದ್ಧರು ಎದುರಿಸುತ್ತಿರುವ ಸಾಂಸ್ಕೃತಿಕ ಹಾಗೂ ಧಾರ್ಮಿಕ ಸವಾಲುಗಳಿಗೆ ಈ ವಿಹಾರವು / ಸಂಘ - ಸಂಸ್ಥೆಯು ಯಾವ ರೀತಿ ಬೆಂಬಲಕ್ಕೆ ನಿಲ್ಲುತ್ತದೆ ?

15. 'ಕರ್ನಾಟಕದ ದಲಿತ ಬೌದ್ಧರ ಸಾಂಸ್ಕೃತಿಕ ಅಧ್ಯಯನ' ಈ ಸಂಶೋಧನಾ ಅಧ್ಯಯನವು ದಲಿತರು ಇಂದು ಎದುರಿಸುತ್ತಿರುವ ಹಲವಾರು ಸಾಂಸ್ಕೃತಿಕ ಸವಾಲುಗಳನ್ನು, ಅದರಲ್ಲೂ ಮುಖ್ಯವಾಗಿ ದಲಿತರ ಸಾಂಸ್ಕೃತಿಕ ಐಡೆಂಟಿಟಿಯ ಸಮಸ್ಯೆಯನ್ನು ವಿಶ್ಲೇಷಣೆ ಮಾಡುವ ಒಂದು ಪ್ರಯತ್ನ ಮತ್ತು ಮಹದುದ್ದೇಶವನ್ನು ಹೊಂದಿದೆ. ಈ ಕುರಿತು ನಿಮ್ಮ ಅನಿಸಿಕೆ ಏನು?

## ಅನುಬಂಧ - II (ಕ)

# ಕರ್ನಾಟಕದ ಪ್ರಗತಿಪರ ಸಾಹಿತಿಗಳು, ಬುದ್ಧಿಜೀವಿಗಳು ಮತ್ತು ದಲಿತ ಬಹುಜನ ಚಳುವಳಿಯ ನೇತಾರರು

## (ಸಂದರ್ಶನ / ಮಾಹಿತಿ ಸಂಗ್ರಹ ನಮೂನೆ)

### ಅ) ಸಾಮಾನ್ಯ ಮಾಹಿತಿ :

1. ಸಂದರ್ಶನದ ದಿನಾಂಕ :

2. ನಿರೂಪಕರ ಹೆಸರು / ವಿಳಾಸ :

3. ವೃತ್ತಿ/ ವಯಸ್ಸು:

4. ಕಾರ್ಯನಿರ್ವಹಿಸುತ್ತಿರುವ / ಭಾಗವಹಿಸಿದ ಚಳುವಳಿ ಮತ್ತು ವೇದಿಕೆಗಳು :

5. ನೀವು ಕಾರ್ಯನಿರ್ವಹಿಸುತ್ತಿರುವ ಸಂಘ ಸಂಸ್ಥೆಯ, ಆಂದೋಲನದ, ವೇದಿಕೆಯ ಉದ್ದೇಶಗಳೇನು?

### ಬ) ಬರವಣಿಗೆ /ಕ್ಷೇತ್ರಕ್ಕೆ ಸಂಬಂಧಿಸಿದ ಪ್ರಶ್ನೆಗಳು :

6. ನೀವು ಬೌದ್ಧಧರ್ಮದ ಬಗ್ಗೆ ಲೇಖನ / ಕವಿತೆ ಬರೆದಿರುವಿರಿ ಮತ್ತು ಮೇಲಿಂದ ಮೇಲೆ ಬೌದ್ಧಧರ್ಮದ ಕುರಿತು ಮಾತನಾಡುತ್ತೀರಿ. ಇದಕ್ಕೆ ಇರುವ ಪ್ರೇರಣೆಗಳು ಯಾವುವು?

7. ಜಗತ್ತಿನ ಸುಮಾರು ಇಪ್ಪತ್ತಕ್ಕಿಂತ ಹೆಚ್ಚು ರಾಷ್ಟ್ರಗಳಲ್ಲಿ ಬೌದ್ಧ ಧರ್ಮ ಇಂದು ಪ್ರವರ್ಧಮಾನ ಸ್ಥಿತಿಯಲ್ಲಿದೆ. ಆದರೆ ಅದು ಜನ್ಮತಳೆದ ಭಾರತದಲ್ಲಿಯೇ ಅದಕ್ಕೆ ಹಿನ್ನಡೆಯಾಯಿತು. ಈ ಕುರಿತು ನಿಮ್ಮ ಅಭಿಪ್ರಾಯವೇನು?

8. ಅಂಬೇಡ್ಕರ್‌ರವರು ಬೌದ್ಧಧರ್ಮಕ್ಕೆ ಮತಾಂತರಗೊಂಡ ಸಂದರ್ಭ ಹಾಗೂ ಅನಿವಾರ್ಯತೆಯ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು?

9. ಅಂಬೇಡ್ಕರ್‌ರವರು ಬೌದ್ಧಧರ್ಮಕ್ಕೆ ಮತಾಂತರವಾದಾಗ ಅಂದಿನ ಕಾಲಘಟ್ಟ ಬೇರೆಯಾಗಿತ್ತು ಇಂದು ಅದರ ಪ್ರಸ್ತುತತೆಯ ಅವಶ್ಯಕತೆಯ ಬಗ್ಗೆ ಪರಾಮರ್ಶಿಸಬೇಕೆಂದು ಹಲವಾರು ಬುದ್ಧಿಜೀವಿಗಳು/ದಲಿತ ನಾಯಕರು ಅಭಿಪ್ರಾಯ ಪಡುತ್ತಾರೆ. ಈ ಕುರಿತು ನಿಮ್ಮ ಪ್ರತಿಕ್ರಿಯೆ ಏನು?

10. ದಲಿತ ಚಳುವಳಿ, ದಲಿತರ ಒಟ್ಟು ಸಾಂಸ್ಕೃತಿಕ ವಿಮೋಚನೆಯ ಪ್ರಕ್ರಿಯೆಯಾಗಬೇಕಾಗಿತ್ತು. ಆದರೆ ಅದು ಕೇವಲ ಕೆಲವು ರಾಜಕೀಯ ಚಟುವಟಿಕೆಗಳಿಗೆ ಸೀಮಿತವಾಗಿ ಒಟ್ಟು ಸಾಂಸ್ಕೃತಿಕ ವಿಮೋಚನೆಯ ಆಂದೋಲನಕ್ಕೆ ಹಿನ್ನಡೆಯಾಯಿತು. ಈ ಕುರಿತು ನಿಮ್ಮ ಅಭಿಪ್ರಾಯಗಳೇನು?

11. ಸಾವಿರಾರು ವರ್ಷ ಅಸಮಾನತೆಯ ಹಾಗೂ ಹಿಂಸೆಯ ತಳಹದಿಯ ಮೇಲೆ ರೂಪಿತವಾದ ಧಾರ್ಮಿಕ ವ್ಯವಸ್ಥೆಯಡಿಯಲ್ಲಿ ಸಾಂಸ್ಕೃತಿಕ ದಬ್ಬಾಳಿಕೆಗೆ ಒಳಗಾದ ದಲಿತ-ಬಹುಜನರೆಲ್ಲ ಬೌದ್ಧಧರ್ಮದಡಿ ಬಂದರೆ ಮತ್ತೆ ಸಮತಾ ಸಮಾಜದ ಹೋರಾಟಕ್ಕೆ ಚಾಲನೆ ಸಿಗಬಹುದೇ?

12. ಸ್ವಾತಂತ್ರ್ಯ ಬಂದು ಐದು ದಶಕಗಳು ಕಳೆಯುತ್ತಾ ಬಂದರೂ ದಲಿತ-ಬಹುಜನರ ಮಾನವ ಹಕ್ಕುಗಳ ಉಲ್ಲಂಘನೆ ಸತತವಾಗಿ ನಡೆದಿದೆ. ಇಂದೂ ಸಹಿತ ಅಸಂಖ್ಯಾತ ದಲಿತ ಬಹುಜನರು ಬೌದ್ಧಧರ್ಮಕ್ಕೆ, ಕ್ರೈಸ್ತ ಧರ್ಮಕ್ಕೆ ಮತಾಂತರಗೊಳ್ಳುವ ಮೂಲಕ ತಮ್ಮ ಸಂಸ್ಕೃತಿ ಸಿಟ್ಟನ್ನು ಪ್ರತಿಬಿಂಬಿಸುತ್ತಿದ್ದಾರೆ ಹಾಗೂ ಎಲ್ಲ ಮಾಧ್ಯಮಗಳಲ್ಲಿ ಗಮನಿಸುವಂತೆ ಈ ಪ್ರಕ್ರಿಯೆ ಹಿಂದೆಂದಿಗಿಂತಲೂ ಇಮ್ಮಡಿಯಾಗಿದೆ. ಈ ಕುರಿತು ನಿಮ್ಮ ಅಭಿಪ್ರಾಯವೇನು?

13. ದಲಿತ-ಬಹುಜನರು ತಮ್ಮ ಮಾನವ ಹಕ್ಕುಗಳ ಸಂರಕ್ಷಣೆಗೋಸ್ಕರ, ತಮಗೆ ಸಂವಿಧಾನ ಬದ್ಧವಾಗಿ ದಕ್ಕಿರುವ ಧಾರ್ಮಿಕ ಸ್ವಾತಂತ್ರ್ಯದ ಹಕ್ಕು, ನಂಬಿಕೆಯ ಹಾಗೂ ಪ್ರಜ್ಞೆಯ ಹಕ್ಕು (Right to Conscience) ಇವುಗಳ ಅಡಿಯಲ್ಲಿ ಮತಾಂತರಗೊಳ್ಳುವುದಕ್ಕೆ ಇಂದು ಸರ್ಕಾರಗಳು ತಡೆಯೊಡ್ಡಿದ್ದನ್ನು ನಾವು ನೋಡಿದ್ದೇವೆ. ಉದಾ: ತಮಿಳುನಾಡಿನ ಮತಾಂತರ ನಿಷೇಧ ಕಾಯ್ದೆ ಇತ್ಯಾದಿ ಈ ಕುರಿತು ನಿಮ್ಮ ಅಭಿಪ್ರಾಯಗಳೇನು?

14. ದಲಿತರು ಬೌದ್ಧ ಧರ್ಮಕ್ಕೆ ಮತಾಂತರಗೊಳ್ಳುವ ಸಂದರ್ಭದಲ್ಲಿ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಈ ಕುರಿತು ನೀವು ಪ್ರತಿನಿಧಿಸುವ ಸಂಘಟನೆ / ವೇದಿಕೆಯಿಂದ ಯಾವ ಸಂರಕ್ಷಣಾ ಮಾರ್ಗೋಪಾಯಗಳನ್ನು ಹಾಕಿಕೊಂಡಿರುವಿರಿ?

15. ಇಂದು ಬೌದ್ಧ ಅನುಯಾಯಿಗಳಾಗಿರುವ ದಲಿತ-ಬಹುಜನರು ಅತ್ತ ಪೂರ್ಣ ಪ್ರಮಾಣದ ಧಾರ್ಮಿಕ ಜೀವನ ನಡೆಸಲೂ ಆಗದೇ ಇತ್ತ ಸಮಗ್ರವಾದ ಪರ್ಯಾಯ ವ್ಯವಸ್ಥೆ ನಿರ್ಮಾಣಗೊಳ್ಳದೇ ಒಂದು ರೀತಿಯ ಸಾಂಸ್ಕೃತಿಕ ಸಂದಿಗ್ಧತೆ (Cultural Crisis) ಒಳಗಾಗಿದ್ದಾರೆ. ಈ ಕುರಿತು ನಿಮ್ಮ ಅನಿಸಿಕೆಗಳೇನು?

16. ದಲಿತ-ಬಹುಜನ ವರ್ಗದ ಮಕ್ಕಳು ಕೇವಲ ಔಪಚಾರಿಕ ಶಿಕ್ಷಣ ವ್ಯವಸ್ಥೆಯಿಂದ ಅವರಿಗಂಟಿದ ಸಾಂಸ್ಕೃತಿಕ ಕೀಳರಿಮೆಯಿಂದ ಹೊರಬರಲು ಸಾಧ್ಯವೇ? ನೀವು ಅಭಿಪ್ರಾಯ ಪಡುವಂತೆ ಇಂತಹ ಸಾಂಸ್ಕೃತಿಕ ಕೀಳರಿಮೆ ಹಾಗೂ ಸಾಂಸ್ಕೃತಿಕ ಗುರುತಿಸುವಿಕೆಗೆ (cultural identity) ಸೂಕ್ತವಾದ ಪರ್ಯಾಯ ಹಾಗೂ ವಿಭಿನ್ನ ಶೈಕ್ಷಣಿಕ ಕ್ರಮ ಅಗತ್ಯವೆಂದು ನೀವು ಭಾವಿಸುತ್ತೀರಾ?

17. ಕನ್ನಡ ನಾಡಿನ ಒಂದು ಮಹತ್ವದ ಚಳುವಳಿಯ / ಸಂಘಟನೆಯ /ವೇದಿಕೆಯ / ಕ್ರಿಯಾಶೀಲ ನೇತಾರರಾದ ತಾವು ಹಾಗೂ ತಮ್ಮಂಥವರು ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ತತ್ವಗಳನ್ನು ಬೋಧಿಸುವ ಬುದ್ಧನ ಅನುಯಾಯಿಗಳಾಗಿ ನೇರವಾಗಿ ಗುರುತಿಸಿಕೊಳ್ಳಲು ಹಾಗೂ ಬುದ್ಧ ಬಸವ, ಅಂಬೇಡ್ಕರರವರ ತತ್ವಗಳಿಗೆ ಹೊಂದುವ ಧಾರ್ಮಿಕ ಜೀವನ ಶೈಲಿಯನ್ನು ರೂಪಿಸಲು ಏಕೆ ಪ್ರಯತ್ನಿಸುತ್ತಿಲ್ಲ? ಅಂತಹ ಅನಿವಾರ್ಯತೆ ವೈಯಕ್ತಿಕ ನೆಲೆಯಲ್ಲಿ ನಿಮಗೆ ಅಪ್ರಸುತ್ತವೆನಿಸಿದರೂ ಹಲವಾರು ವರ್ಷಗಳಿಂದ ಅನಕ್ಷರತೆ ಗಾಢಾಂಧಕಾರದಲ್ಲಿ ಮೂಢನಂಬಿಕೆಗಳಲ್ಲಿ ಮುಳುಗಿದ ಬಹುಸಂಖ್ಯಾತ ದಲಿತ-ಬಹುಜನರಿಗೆ ಅಂತಹ ಧಾರ್ಮಿಕ ಜೀವನ ಶೈಲಿ ರೂಪಿಸಲು ಏಕೆ ಪ್ರಯತ್ನಿಸುತ್ತಿಲ್ಲ?

18. 'ಕರ್ನಾಟಕದ ದಲಿತ ಬೌದ್ಧರ ಸಾಂಸ್ಕೃತಿಕ ಅಧ್ಯಯನ' ಈ ಸಂಶೋಧನಾ ಅಧ್ಯಯನವು ದಲಿತರು ಇಂದು ಎದುರಿಸುತ್ತಿರುವ ಹಲವಾರು ಸಾಂಸ್ಕೃತಿಕ ಸವಾಲುಗಳನ್ನು, ಅದರಲ್ಲೂ ಮುಖ್ಯವಾಗಿ ದಲಿತರ ಸಾಂಸ್ಕೃತಿಕ ಐಡೆಂಟಿಟಿಯ ಸಮಸ್ಯೆಯನ್ನು ಹಾಗೂ ಮಾನವ ಹಕ್ಕುಗಳ ಉಲ್ಲಂಘನೆಗಳನ್ನು ವಿಶ್ಲೇಷಣೆ ಮಾಡುವ ಒಂದು ಪ್ರಯತ್ನ ಮತ್ತು ಮಹದುದ್ದೇಶವನ್ನು ಹೊಂದಿದೆ. ಈ ಕುರಿತು ನಿಮ್ಮ ಅನಿಸಿಕೆ ಏನು?

## ಅನುಬಂಧ - III (ಅ)
## ಸಂಶೋಧನಾರ್ಥಿ ಸಂದರ್ಶಿಸಿದ ಬೌದ್ಧ ಉಪಾಸಕ, ಉಪಾಸಕಿಯರು, ಧಮ್ಮ ಸಂಘಟಕರು *

| ಅ. ನಂ. | ಹೆಸರು, ವಯಸ್ಸು ಮತ್ತು ವಿಳಾಸ | ಷರಾ |
|---|---|---|
| 1. | ತುಕಾರಾಮ ಸೋನ ಕಾಂಬಳೆ (78) (ಮಾಸ್ತರಸಾಬ) ದಲಿತ ಬೌದ್ಧ ಸಮಾಜದ ಮುಖಂಡರು, ಸಾ : ಮೋರಖಂಡಿ, ತಾ : ಬಸವ ಕಲ್ಯಾಣ, ಜಿಲ್ಲಾ : ಬೀದರ | ಕಾಲುನಡಿಗೆಯಿಂದಲೇ ನಾಗಪುರಕ್ಕೆ ಹೋಗಿ ಡಾ. ಬಾಬಾಸಾಹೇಬ ಅಂಬೇಡ್ಕರ್‌ವರಿಂದ ಬೌದ್ಧ ಧರ್ಮ ದೀಕ್ಷೆ ಪಡೆದು ಬಂದವರು. |
| 2. | ತುಳಸೀರಾಮ್ (ಕಾಂಬಳೆ) (76) ಮಾಜಿ ಅಧ್ಯಕ್ಷರು, ಜೇತವನ ಬುದ್ಧ ವಿಹಾರ ಸಮಿತಿ, ಮೋರಖಂಡಿ | ಬಾಬಾಸಾಹೇಬ ಅಂಬೇಡ್ಕರವರಿಗೆ ಭೇಟಿಯಾಗಿ ಬಂದಿದ್ದಾರೆ. |
| 3. | ನಿವರತಿ ಬನಾಜಿ ಸೋನ ಕಾಂಬಳೆ (80) ಸಾ : ಮೋರಖಂಡಿ, ಜೇತವನ ಬುದ್ಧ ವಿಹಾರದ ಪ್ರಥಮ ಅಧ್ಯಕ್ಷರು | ಬಾಬಾಸಾಹೇಬರ ಅಂಬೇಡ್ಕರ್‌ರವರಿಗೆ ಬಂದಿದ್ದಾರೆ. |
| 4. | ಬಲರಾಮ್ (52) ಗಾಯನ ಸಮಾಜದ ಮುಖಂಡರು, ಸಾ : ಮೊರಖಂಡಿ | ಬೌದ್ಧ ಹಾಗೂ ಅಂಬೇಡ್ಕರ್ ಕುರಿತು ಭಜನಾ ಹಾಡುಗಳನ್ನು ಹೇಳುತ್ತಾರೆ. |
| 5. | ಗೋವಿಂದರಾಜ್ ಗಾಯಕವಾಡ (60) ಸಮಾಜ ಸೇವಕರು, ಸಾ : ಮೋರಖಂಡಿ | 80 ಜನರಿಗೆ ಬೌದ್ಧ ಕ್ಷೇತ್ರಗಳಿಗೆ ಪ್ರವಾಸ ಸಂಘಟಿಸಿದ ಉಪಾಸಕರು. |
| 6. | ವಿಜಯಕುಮಾರ (21), ಸಾ : ಮೋರಖಂಡಿ | ಇತ್ತೀಚೆಗೆ ನಾಗಪೂರದಲ್ಲಿ ಹೋಗಿ ದೀಕ್ಷೆ ಪಡೆದುಕೊಂಡು ಬಂದಿದ್ದಾರೆ. |
| 7. | ರಾಹುಲಕುಮಾರ ಸಾಧು ಗಾಯಕವಾಡ (18), | |
| 8. | ವಿದ್ಯಾಸಾಗರ ಗಾಯಕೂಡ (34), ಸಾ : ಮೋರಖಂಡಿ | |
| 9. | ಗೌತಮ ಕಾಂಬಳೆ (24), ಸಾ : ಮೋರಖಂಡಿ | |
| 10. | ಕೆ. ಗೋಪಾಲ (65), ಅಜಂತಾ ಟೇಲರ್ಸ್ ಗೂಡಶೆಡ್ ರಸ್ತೆ ಹುಬ್ಬಳ್ಳಿ. | 30 ವರ್ಷಗಳವರೆಗೆ ಬೌದ್ಧ ಧರ್ಮ ಪ್ರಚಾರ ಮಾಡಿದ ಹಿರಿಯ ಉಪಾಸಕರು. |
| 11. | ಶಿವರಾಂ ಮೋಘಾ (70), ಗುಲ್ಬರ್ಗಾ | ಹಿರಿಯ ಸಮಾಜ ಸೇವಕರು, ಭಾರತೀಯ ರಿಪಬ್ಲಿಕನ್ ಪಕ್ಷದ ನಾಯಕರು. |
| 12. | ಹೆಚ್.ಎಂ. ಶ್ರೇಯಸ್ಕರ (60), ಗುಲ್ಬರ್ಗಾ | ಹಿರಿಯ ಸಮಾಜ ಸೇವಕರು, ದಲಿತ ಚಳುವಳಿಯನ್ನು ಪ್ರಾರಂಭಿಸಿದ ಶ್ರೀ ಬಿ. ಶ್ಯಾಮ ಸುಂದರವರ ಅನುಯಾಯಿಗಳು. |

| | | |
|---|---|---|
| 13. | ಐ. ಲೋಕನಾಥನ್ (70),<br>ಅಧ್ಯಕ್ಷರು, ದಿ. ಬುದ್ದಿಸ್ಟ್ ಸೊಸೈಟಿ ಆಫ್ ಇಂಡಿಯಾ,<br>ಕೆ.ಜಿ.ಎಫ್. ಕೋಲಾರ. | ಪ್ರಸುತ್ತ ಅಧ್ಯಕ್ಷರು, ಭಾರತ ಬೌದ್ಧ ಸಂಘ,<br>ಕೆ.ಜಿ.ಎಫ್. ಕೋಲಾರ, (The Buddhist Society of India)<br>ಹಿರಿಯ ಬೌದ್ಧ ಸಂಘಟಿಕರು ಹಾಗೂ ಬೌದ್ಧ ಸಾಹಿತ್ಯ ಬರಹಗಾರರು, |
| 14. | ಸಂತೋಷ ಸಾಳುಂಕೆ (38), ಬೆಂಗಳೂರು. | ಅಂತರ್‌ರಾಷ್ಟ್ರೀಯ ಬೌದ್ಧ ಮಿತ್ರರ ಸಂಘಟನೆ, ಬೆಂಗಳೂರು. |
| 15. | ಷಣ್ಮುಗಂ, ಬೌದ್ಧ ವಿಹಾರ (80), ಹುಬ್ಬಳ್ಳಿ. | ಹಿಂದಿನ ಅಧ್ಯಕ್ಷರು, ಹುಬ್ಬಳ್ಳಿ ಬೌದ್ಧ ಸಂಘ (Hubli Buddhist Association) |

★ ಈ ಪಟ್ಟಿ ಪ್ರಾತಿನಿಧಿಕವಾದುದೇ ಹೊರತು, ಇನ್ನೂ ಹಲವಾರು ಉಪಾಸಕ, ಉಪಾಸಕಿಯರು ಹಾಗೂ ಬೌದ್ಧ ಧರ್ಮದ ಬಗ್ಗೆ ಅಧ್ಯಯನದಲ್ಲಿ ತೊಡಗಿರುವ ಹಲವಾರು ಬರಹಗಾರರನ್ನು, ಚಿಂತಕರನ್ನು ಸಂದರ್ಶಿಸಲಾಗಿದೆ.

## ಅನುಬಂಧ - III (ಬ)

## ಪ್ರಶ್ನಾವಳಿಯ ಮೂಲಕ ಪ್ರತಿಕ್ರಿಯೆ ಕಳುಹಿಸಿದವರು

i) **ಬೌದ್ಧ ಉಪಾಸಕರು :**

1. ಆಯುಷ್ಯಮಾನ ಶಿವಲಿಂಗ ಎಸ್. ಮಾಡಬಳ್ಳೂರ್, ಸಾ: ಮಾಡಬೂಳ, ತಾ : ಚಿತ್ತಾಪೂರ, ಜಿಲ್ಲಾ: ಗುಲ್ಬರ್ಗಾ.
2. ಷಣ್ಮುಗಂ, ಹಿಂದಿನ ಅಧ್ಯಕ್ಷರು, ಹುಬ್ಬಳ್ಳಿ ಬೌದ್ಧಸಂಘ, ಹುಬ್ಬಳ್ಳಿ.
3. ಕು. ಚೂಡಾಮಣಿ, ಬೌದ್ಧಉಪಾಸಕಿ, ಸಂಶೋಧನಾ ವಿದ್ಯಾರ್ಥಿ, ಕುಲಕರ್ಣಿ ಹಕ್ಕಲ, ಹುಬ್ಬಳ್ಳಿ.
4. ಮಲ್ಲಿಕಾರ್ಜುನ ರವೀಂದ್ರ ಸಜ್ಜನಕರ, ಸಾ : ಮಾಡಬೂಳ, ತಾ : ಚಿತ್ತಾಪೂರ, ಜಿ: ಬೆಳಗಾವಿ.
5. ಎಂ. ಮಧುರೈ ಮುತ್ತು, ಮಧುರಾ ಎಸ್ಟೇಲ್, ಹುಬ್ಬಳ್ಳಿ.
6. ಐ. ಲೋಗನಾಥನ್, ಹಿರಿಯ ಉಪಾಸಕರು ಹಾಗೂ ದಿ. ಬುದ್ಧಿಸ್ಟ್ ಸೊಸೈಟಿ ಆಫ್ ಇಂಡಿಯಾದ ಅಧ್ಯಕ್ಷರು ಮಾರಿಕುಪ್ಪಂ, ಕೆ.ಜಿ.ಎಫ್. ಕೋಲಾರ.
7. ಪ್ರೊ. ಡಿ. ನಂಜುಂಡಯ್ಯ, ಬೌದ್ಧ ಚಿಂತಕರು, ಉಪಾಸಕರು ಸಸ್ಯ ಶಾಸ್ತ್ರ ವಿಭಾಗ, ಯುವರಾಜ ಕಾಲೇಜು, ಮೈಸೂರು.
8. ಆಯುಷ್ಯಮಾನ್, ಸಿ. ರಂಗಸ್ವಾಮಿ, ಬೌದ್ಧ ಉಪಾಸಕರು, ಧಮ್ಮದೀಪ, ವಿಜಯನಗರ, 2 ನೇ ಹಂತ, ಮೈಸೂರು.
9. ಸಂತೋಷ ಸಾಳುಂಕೆ, ಉಪಾಸಕರು, ಅಂತರರಾಷ್ಟ್ರೀಯ ಯುವ ಬೌದ್ಧಸಂಘಟನೆ, ಬೆಂಗಳೂರು.

ii) **ಬೌದ್ಧ ಸಂಘ ಸಂಸ್ಥೆಗಳು :**

1. ಮಹಾಬೋಧಿ ಸೊಸೈಟಿ., ಸರಸ್ವತಿಪುರಂ, ಮೈಸೂರು.
2. ಸುಬೋಧಿ ಬುದ್ಧವಿಹಾರ, ನೇರಲಿ, ತಾ : ಹುಕ್ಕೇರಿ, ಜಿಲ್ಲಾ:ಬೆಳಗಾವಿ.

3. ಬುದ್ಧಪ್ರತಿಷ್ಠಾನ, 106, ವಳಗೇರಹಳ್ಳಿ, ಕೆಂಗೇರಿ, ಉಪನಗರ, ಬೆಂಗಳೂರು.

4. ಮಹಾಬೋಧಿ ಸಂಘ, ಯಕ್ಸಂಬಾ, ತಾ : ಚಿಕ್ಕೋಡಿ, ಜಿಲ್ಲಾ : ಬೆಳಗಾವಿ.

5. ವಿಶ್ವಬುದ್ಧ ಪರಿಷತ್, ಬುದ್ಧಗಯಾ ನಿಲಯ, ಗಾಯತ್ರಿಪುರಂ, ಮೈಸೂರು-14.

iii) <u>ಬೌದ್ಧ ಚಿಂತಕರು, ಪ್ರಗತಿಪರ ಸಾಹಿತಿಗಳು ಮತ್ತು ದಲಿತ ಬಹುಜನ ಚಳುವಳಿಯ ನೇತಾರರು:</u>

1. ಶ್ರೀ ವೈ. ಬಿ. ನಂದನ, ಬೌದ್ಧ ಸಾಹಿತಿಗಳು,
ನಂ. 52, ಎಸ್.ಎಚ್.ಎಸ್. 208 ಸೆಕ್ಟರ್, ಯಲಹಂಕ ಉಪನಗರ, ಬೆಂಗಳೂರು.

2. ಡಾ. ಮ.ನ. ಜವರಯ್ಯ, ಹಿರಿಯ ದಲಿತ ಚಿಂತಕರು, ಸಾಹಿತಿಗಳು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು.

3. ಡಾ. ಚೆನ್ನಣ್ಣ ವಾಲೀಕಾರ್, ದಲಿತ ಚಿಂತಕರು, ಸಾಹಿತಿಗಳು ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

4. ಡಾ. ವ್ಹಿ ಮುನಿವೆಂಕಟಪ್ಪ, ಹಿರಿಯ ದಲಿತ ಚಿಂತಕರು, ಕುವೆಂಪು ನಗರ, ಮೈಸೂರು.

5. ಶ್ರೀ ವಿಚಾರವಾದಿ, ಮೈಸೂರು ಮಂಟೇಲಿಂಗಯ್ಯ, ನಂ. 279, ಸಂಘ ಸೇನಾ ಮುಖ್ಯ ರಸ್ತೆ ನ್ಯೂಲೇಜೌಟ್, ಎನ್.ಆರ್. ಮೊಹಲ್ಲಾ ಮೈಸೂರು.

6. ಡಾ. ಟಿ.ಎಂ. ಭಾಸ್ಕರ್, ದಲಿತ ಸಾಹಿತಿಗಳು, ಕನ್ನಡ ಅಧ್ಯಯನ ಸಂಸ್ಥೆ ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ.

7. ಡಾ. ಅರ್ಜುನ ಗೊಳಸಂಗಿ, ದಲಿತ ಸಾಹಿತಿಗಳು, ಪದವಿಪೂರ್ವ ಕಾಲೇಜು, ಹುಲಕೋಟಿ, ತಾ : ಜಿಲ್ಲಾ : ಗದಗ.

8. ಶ್ರೀ ಜಿ.ಎನ್. ಮಲ್ಲಿಕಾರ್ಜುನ, ಸಾಹಿತಿಗಳು, ಸರ್ಕಾರಿ ಕಲಾ ಕಾಲೇಜು, ಚಿತ್ರದುರ್ಗ.

9. ಡಾ. ಡಿ.ಜಿ. ಹಾಜವಗೋಳ, ದಲಿತ ಸಾಹಿತಿಗಳು, ಕರ್ನಾಟಕ ಕಲಾ ಮಹಾವಿದ್ಯಾಲಯ, ಧಾರವಾಡ.

1



परम पूज्य डॉ. बाबासाहेब आंबेडकर स्मारक समिती

बौद्ध दीक्षा प्रमाणपत्र

ಕರ್ನಾಟಕದ ಎಲ್ಲಾ ಭಾಗಗಳಿಂದ ಪ್ರತಿ ವರ್ಷ ಅಕ್ಟೋಬರ ತಿಂಗಳಿನಲ್ಲಿ' ಧರ್ಮ ಪ್ರವರ್ತನ ದಿನಾಚರಣೆಯ ಸಂದರ್ಭದಲ್ಲಿ ನಾಗಪುರಕ್ಕೆ ಹೋಗುತ್ತಾರೆ. 'ದೀಕ್ಷಾ ಭೂಮಿ' ಯಲ್ಲಿ ಬೌದ್ಧ ಧರ್ಮ ಸ್ವೀಕರಿಸುವ ಉದ್ದೇಶದಿಂದ ಹಲವಾರು ಯುವಕ, ಯುವತಿಯರುಹೋಗುತ್ತಾರೆ. ಹಾಗೆಯೇ ಧರ್ಮ ಸ್ವೀಕಾರ ಮಾಡಿದವರಿಗೆ ಡಾ.ಬಾಬಾಸಾಹೇಬ ಅಂಬೇಡ್ಕರ ಸ್ಮಾರಕಸಮಿತಿಯವರೇ ಹಿರಿಯ ಬೌದ್ಧ ಬಿಕ್ಕುಗಳಿಂದ ಮತಾಂತರ ಕಾರ್ಯಕ್ರಮ ಹಮ್ಮಿಕೊಂಡಿರುತ್ತಾರೆ.ಹಾಗೆ 2001 ರಲ್ಲಿ ಬೀದರ ಜಿಲ್ಲೆಯಿಂದ ಯುವಕರಿಗೆ ನೀಡಿದ ಪ್ರಮಾಣ ಪತ್ರ . ಇದರಲ್ಲಿ' ಬೌದ್ಧ ಧರ್ಮ ದೀಕ್ಷೆ ಪಡೆದ ಇವರು ಇಂದಿನಿಂದ ಭಾರತ ಸಂವಿಧಾನದ ನಿರ್ದೇಶನದಂತೆ ಧಾರ್ಮಿಕವಾಗಿ 'ಬೌದ್ಧ' ರೆಂದು ಪರಿಗಣಿಸಲ್ಪಟ್ಟಿದ್ದಾರೆ ಎಂದು ನಮೂದಿಸಿದ್ದನ್ನು ಕಾಣಬಹುದು.

ಸಹಿ: ಪೂಜ್ಯ ಬದಂತ ಆಚಾರ್ಯ ನಾಗಾರ್ಜುನ ಸುರಾಯಿ ಸಸಾಯಿ

2

3



Regd.: MAH/706/94

**International Buddhist Youth Organisation, Nagpur (India)**

State KARANATAKA Branch BIJAPUR

## Lay-ordination Certificate

佛
BUDDHA

This is to Certify that Upasak / Upasika Ays SHIVALING S. MADBOOLKAR age 35 Residing at Village MADBOOL Taluka CHITTAPUR District GULBARGA State KARANATAKA Has taken a Lay-ordination Ten precepts under the guidance of Most Ven.: SHODO HARADA on dated 24-8-2004 at Sariputra Boudh Vihar (INDOSAN ITTEKIJI) S.R. colony Jainagar Bijapur-586101, Karnataka State

僧 SANGHA

法 DHAMMA

### TEN PRECEPTS

1) Do not take a life of animals and Human beings
2) Do not steal
3) Do not have a unclear relationship with man and women
4) Do not lie
5) Do not Indulge your self in an intoxication
6) Do not speak of the faults of Bodhisatava whether they be lay-men or monks
7) Do not be too Proud to Praise others
8) Do not possess
9) Do not get angry
10) Do not blame Buddha, Dhama, sangha

***Lay Ordination is a ceremony which is performed for those who cannot have the possibility to go in to the monastery and Practice as a monk taking this precepts one has to live his/her a life according the Buddha Dhamma rest of his / her life.

1) Do not do bad 2) Do good 3) Save all sentient beings

原田正道

Ordination Master

*Ven Shodo Harada*

Date: 24/08/2004.

Place: BIJAPUR.

Most Ven.

Seal

ಅಂತರರಾಷ್ಟ್ರೀಯ ಯುವ ಬೌದ್ಧ ಸಂಘಟನೆ, ಬಿಜಾಪುರ ಶಾಖೆ ಇವರು ಸಂಘಟಿಸಿದ 'ಬೌದ್ಧ ದೀಕ್ಷಾ' ಕಾರ್ಯಕ್ರಮದಲ್ಲಿ ದೀಕ್ಷೆ ಪಡೆದ ಗುಲ್ಬರ್ಗಾ ಜಿಲ್ಲೆಯ ದಲಿತರಿಗೆ ನೀಡಿದ ಪ್ರಮಾಣ ಪತ್ರ ಜಪಾನ್ ದೇಶದ ಪೂಜ್ಯ ಬಿಕ್ಕು ಶೋದೋ ಹರದ ಸಹಿ ಮಾಡಿರುವುದು.

4

NAMO THASSA BHAGVATHO ARAHATHO SAMMA SAMBUDDHASSA

**Buddha Prathistana**

ಬುದ್ಧ ಪ್ರತಿಷ್ಠಾನ

No. 108, Behind Gopi Farm,
Ring Road, Kengeri Satellite Town,
Bangalore - 560 060.

Chiram Thittathu Lokasmim Samma Sambuddha Sasanam

Dhamma Initiation (Dheeksha) Certificate

The above Upasaka/upasika have decided to get initiated (Dhamma Dheeksha) voluntarily to Buddhism for which they have accepted Thisarana and Panchasheela and progress in the path of Sheela Samadhi and pariya (Prajna). Prathistana congrajulates and welcomes whole heartedly

Initiation by Ven. Dhammachari

President / Member

ಬೆಂಗಳೂರಿನ ಬುದ್ಧ ಪ್ರತಿಷ್ಠಾನದವರು ಬೌದ್ಧ ಧರ್ಮ ದೀಕ್ಷೆ ಪಡೆದವರಿಗೆ ನೀಡುವ ಪ್ರಮಾಣ ಪತ್ರ

बौद्ध धम्मदीक्षेचे प्रमाणपत्र

प्रमाणित करणेत येते की, आयुष्यमान / आयुष्यमती

नाव वय शिक्षण

१)
२)
३)
४)
५)

आज पासून हे बौद्ध धर्मीय म्हणून ओळखण्यात येतील.

भदन्त राहुल बोधी (विपश्यनाचार्य)

ಮಹಾರಾಷ್ಟ್ರದ ಕೊಲ್ಹಾಪುರ ಜಿಲ್ಲೆಯ ಶಿರೋಳ ತಾಲೂಕಿನ ಬೌದ್ಧ ಧರ್ಮ ಪ್ರಚಾರ ಸಮಿತಿಯು ಬೌದ್ಧ ಧರ್ಮ ದೀಕ್ಷೆ ಪಡೆದವರಿಗೆ ನೀಡಿದ ಪ್ರಮಾಣ ಪತ್ರದ ಮಾದರಿ. ಹಿರಿಯ ಬಿಕ್ಕು ಗಳಾದ ವಿಪಶ್ಯನಾಚಾರ್ಯ ಬದಂತ ರಾಹುಲ ಬೋಧಿ, ಅಧ್ಯಕ್ಷರು. ( United Buddhist Mission , Mumbai) ಪ್ರಮಾಣ ಪತ್ರಕ್ಕೆ ರುಜು ಹಾಕಿರುವುದು

3

# Buddhist council condemns VHP's charges

By Our Staff Reporter

NEW DELHI, OCT. 27. Asserting that all preparations for the forthcoming Buddhist ceremony here on November 4 are well in place, the All-India Confederation of SC/ST Organisations and Lord Buddha Club chairman, Mr. Ram Raj, today dismissed the charges levelled by the senior Vishwa Hindu Parishad leader, Acharya Giriraj Kishore, that the conclave was aimed at forcibly converting Dalits to Buddhism.

Mr. Ram Raj, whose organisation is holding the function where around one lakh Dalits will embrace Buddhism, alleged that the VHP was trying to instigate violence during the ceremony by engaging in rumour mongering.

"[illegible] — the Sangh Parivar has been levelling false charges and [illegible] the Government [illegible] to allow the function to be held," Mr. Ram Raj alleged.

Stating that he would be meeting the Union Home Minister, Mr. L.K. Advani, and the Delhi Police Commissioner, Mr. Ajai Raj Sharma, demanding security for himself as well as during the ceremony, Mr. Ram Raj alleged that the Sangh Parivar was planning to disturb the function.

"The Centre should take immediate action against the VHP leaders who are trying to disrupt social harmony."

Alleging that the VHP had unleashed a misleading campaign that Christian and Muslim organisations were behind the programme wanting these people to convert to Christianity and Islam, Mr. Ram Raj said, "All these charges were totally unfounded and no Christian or Muslim organisation is involved in it."

"Dalits will embrace Buddhism as its teachings nurture within it how to eradicate all social evils. Every person has the constitutional right to choose his faith and no one can take that right from us."

ನವೆಂಬರ 4 2001 ಉದಿತ್ ರಾಜ್ ಬೌದ್ಧ ಮತಾಂತರ ಚಳುವಳಿ ಕುರಿತು
ವಿ.ಹೆಚ್.ಪಿ. ಮುಖಂಡರು ಹಬ್ಬಿಸಿದ ವದಂತಿಗಳನ್ನು ಖಂಡಿಸಿ ನೀಡಿದ
ಬೌದ್ಧ ಸಂಘಟನೆಗಳ ಪತ್ರಿಕಾ ಹೇಳಿಕೆಗಳು. ('ದಿ ಹಿಂದೂ 28.10.2001)

# 'Dalai Lama not for converting Hindus'

NEW DELHI, OCT. 4. The Tibetan spiritual leader, Dalai Lama, has no plans of mass conversion of Hindus to Buddhism, his office said today.

Terming as "untrue and totally irresponsible" media reports that the Dalai Lama planned to convert one million Hindus to Buddhism, Mr. Samdhong Lobsang Tenzin, chairman of Kashag, said such "baseless" news was being planted by vested interests.

"I would like to state here categorically that His Holiness, the Dalai Lama, has never converted any Hindus to Buddhism at any point of time and will not convert any Hindus to Buddhism in the future," Mr. Tenzin said in a statement here.

"The Dalai Lama is always against conversion of people, community or an individual, from one religion to another." — PTI

ಪೂಜ್ಯ ದಲಾಯಿ ಲಾಮಾ ಅವರು, ಹಿಂದುಗಳನ್ನು ಬೌದ್ಧ ಧರ್ಮಕ್ಕೆ ಮತಾಂತರಿಸುವ
ಕಾರ್ಯಕ್ರಮ ಹಾಕಿಕೊಂಡಿಲ್ಲವೆಂದು ಹೇಳುವುದರ ಮೂಲಕ ತಮ್ಮ ಮೇಲೆ
ಹಿಂದೂ ಕೋಮುವಾದಿಗಳು ಮಾಡಿದ ಆರೋಪ ನಿರಾಕರಿಸಿ ಪತ್ರಿಕೆಗೆ ಹೇಳಿಕೆ ನೀಡಿರುವುದು
(ದಿ ಹಿಂದೂ 5.10.2001)

4

7



'ಧಾರ್ಮಿಕ ದಾಳಿಗೆ ಬೌದ್ಧ ಧರ್ಮ ಪತನ'

ಖ್ಯಾತ ಕವಿ ಡಾ. ಬುದ್ದಣ್ಣ ಹಿಂಗಮಿರೆ ಅವರ 'ಬುದ್ಧ ಕಾವ್ಯ ದರ್ಶನ' ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಹಿರಿಯ ಕವಿಗಳಾದ ಶ್ರೀ ಚೆನ್ನವೀರ ಕಣವಿ ,ಡಾ. ಎಂ.ಎಂ. ಕಲಬುರ್ಗಿ ಮತ್ತಿತರರು ಭಾಗವಹಿಸಿ ಮಹತ್ವದ ಹೇಳಿಕೆ ನೀಡಿರುವುದು.

1. ಡಾ. ಅಂಬೇಡ್ಕರವರು ಬೌದ್ಧ ಧರ್ಮಕ್ಕೆ ಮತಾಂತರ ಗೊಂಡಿರುವುದರಿಂದಲೇ ಬೌದ್ಧ ಧರ್ಮ ಸಮಾಜಿಕ ಸ್ತರ ಕಳೆದುಕೊಂಡಿಲ್ಲ - ಡಾ. ಎಂ. ಎಂ ಕಲಬುರ್ಗಿ.
2. ' ದೇಹ ಕಡೆಸಿ ಆತ್ಮ ನಂಬುವ ತತ್ವವನ್ನು ನಿರಾಕರಿಸಿದ ಬೌದ್ಧ ಧರ್ಮಕ್ಕೆ ದಲಿತ ಚಳುವಳಿಯಿಂದ ಮಹತ್ವ ಬಂದಿದೆ'. ಶ್ರೀ ಚನ್ನವೀರ ಕಣವಿ. (ಸಂಯುಕ್ತ ಕರ್ನಾಟಕ ದಿ: 12.10.04)

## ಬುದ್ಧ ವಿಹಾರದ ಸಾಧಕರ ಮೇಲೆ ಪೊಲೀಸರ ಹಲ್ಲೆ-ಆರೋಪ

ಹುಬ್ಬಳ್ಳಿ, 25- ಇಲ್ಲಿನ ಶಿವಸೋಮೇಶ್ವರ ನಗರದಲ್ಲಿರುವ ಬುದ್ಧ ವಿಹಾರದ ಅಮಾಯಕ ಸಾಧಕರ ಮೇಲೆ ಹಳೇಹುಬ್ಬಳ್ಳಿ ಪೊಲೀಸ್ ಠಾಣೆಯ ಅಧಿಕಾರಿಗಳು ವಿನಾಕಾರಣ ಗುರುವಾರ ಹಲ್ಲೆ ನಡೆಸಿದ್ದಾರೆಂದು ಬುದ್ಧ ವಿಹಾರದ ಬುದ್ಧಪ್ರಿಯ ಬಂತೇಜಿ ಸ್ವಾಮಿಗಳು ಆರೋಪಿಸಿದ್ದಾರೆ.

ಇಂದಿಲ್ಲಿ ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ಗುರುವಾರ ಸಂಜೆ 5ರ ಸುಮಾರಿಗೆ ಆಗಮಿಸಿದ ಪೊಲೀಸರು ಬುದ್ಧ ವಿಹಾರದ ಎದುರು ಕೆಲಸದಲ್ಲಿ ಮಗ್ನರಾಗಿದ್ದ ಸಾಧಕರನ್ನು ಮನಬಂದಂತೆ ಥಳಿಸಿದರೆಂದು ದೂರಿದರು.

ಬುದ್ಧ ವಿಹಾರ ಹಾಗೂ ಸಾಧಕರ ವಿರುದ್ಧ ಯಾವುದೇ ದೂರುಗಳು ಇಲ್ಲ, ಇಲ್ಲಿ ಕೇವಲ 24 ಗಂಟೆಗಳ ಕಾಲ ಧ್ಯಾನ ಮಾಡಲಾಗುತ್ತದೆ, ಆದರೂ ನಿನ್ನೆ ಏಕಾಏಕಿ ಆಗಮಿಸಿದ ಪೊಲೀಸರು ಒಬ್ಬೊಬ್ಬ ಸಾಧಕರನ್ನು ಕರೆದು ಸಂಬಂಧಿಸಿದ ವಿಷಯಗಳ ಬಗ್ಗೆ ವಿವರಣೆ ಕೇಳಿ ಥಳಿಸಿದರೆಂದು ಅವರು ಆಪಾದಿಸಿದ್ದಾರೆ. 24/09/04 ಸಂಯುಕ್ತ ಕರ್ನಾಟಕ

ಬೌದ್ಧ ವಿಹಾರ ಪ್ರಗತಿಯಲ್ಲಿ, ಬೌದ್ಧ ಧರ್ಮ ಪ್ರಸಾರಕ್ಕೆ ಈಗಲೂ ಅಡ್ಡಿ ಆತಂಕ ಸೃಷ್ಟಿಸುತ್ತಿರುವ ಕೃತ್ಯಗಳು ನಿಂತಿಲ್ಲ. ಹುಬ್ಬಳ್ಳಿಯಲ್ಲಿ 10 ವರ್ಷಗಳಿಂದ ಪ್ರಭಾವಶಾಲಿಯಾಗಿ ಬೆಳೆಯುತ್ತಿರುವ ಬೌದ್ಧ ವಿಹಾರದ ಉಪಾಸಕರ ಮೇಲೆ ಹಲ್ಲೆ ನಡೆದ ವರದಿ

(ಸಂಯುಕ್ತ ಕರ್ನಾಟಕ ದಿ: 26-9-2004)

8

9



ನಾಗಪುರ ದೀಕ್ಷಾಭೂಮಿ (ಮಹಾರಾಷ್ಟ್ರ)ಡಾ. ಬಿ. ಆರ್. ಅಂಬೇಡ್ಕರವರು 5 ಲಕ್ಷ ಅನುಯಾಯಿಗಳೊಂದಿಗೆ 14.10.1956 ರಂದು ಬೌದ್ಧ ಧರ್ಮ ದೀಕ್ಷೆ ಪಡೆದ ಸ್ಥಳ (ಚಿತ್ರ:2004)

# Thousands arrive for Pravartan Din

**■ Staff Reporter**

THOUSANDS of devotees from various parts of the country have started arriving in the city on Thursday to participate in the 48th Dhamma Chakra Pravartan Din programme to be held on Friday at Deekshabhoomi at 6 pm.

The celebrations began on Thursday with Member of Dr Babasaheb Ambedkar Smarak Samiti D R Patil hoisting Panchsheel flag at Deekshabhoomi in the morning. Umrao Murarkar, Eknath Haware, N R Sute, Kailash Warke, Vilas Gajghate, P N Bansod, Dr Motiram Gaval, Devidas Waghmare, Nilu Bhagat

Later, a cultural programme will be held there.

The employees of Nagpur Improvement Trust has put up a water kiosk in the vicinity of Deekshabhoomi that was inaugurated at the hands of NIT Chairman Manu Kumar Shrivastava on Thursday. NIT Trustee Jaiprakash Gupta presided over the function. Trustee Pramod Darne, Vijay Babhre and former Superintending Engineer Chikate were the guests of honour.

Kalyan Mitra Urban Cooperative Credit Society has made arrangements for distributing meals to Dhamma devotees at Kala Bhavan. Similarly, All India Backward Classes Telecom



ನಾಗಪುರ ದೀಕ್ಷಾಭೂಮಿಯಲ್ಲಿ ಪ್ರತಿವರ್ಷ 5-6 ಲಕ್ಷ ಜನರು ಆಗಮಿಸುತ್ತಾರೆ. ಆದರೆ ನಾಗಪುರದ ಪತ್ರಿಕೆಯೊಂದು ಸಾವಿರಾರು ಸಂಖ್ಯೆಯಲ್ಲಿ ಬೌದ್ಧರು ಬರುತ್ತಾರೆಂದು ವರದಿ ಮಾಡಿರುವದು. (ಹಿತವಾದ 22.10.2004)

10

11



2001ರಲ್ಲಿ ನವೆಂಬರ್ 4 ರಂದು ದೆಹಲಿಯಲ್ಲಿ ಉದಿತ್ ರಾಜ್ (ಮೊದಲು ರಾಮ್ ರಾಜ್) 10 ಲಕ್ಷ ದಲಿತರೊಂದಿಗೆ ಮತಾಂತರ ಚಳುವಳಿ ಹಮ್ಮಿಕೊಂಡಿದ್ದ ಸಂದರ್ಭ. ಇಲ್ಲಿ ಬೌದ್ಧ ಬಿಕ್ಕುಗಳೇ ಉದಿತ್ ರಾಜ್‌ರವರ ಕೇಶಮಂಡನ ಮಾಡುತ್ತಿರುವುದು. ಹಾಗೂ ದೀಕ್ಷೆಗೆ ಅಣಿಗೊಳಿಸುತ್ತಿರುವುದು (ಕೃಪೆ: ಹಿಂದೂ ಪತ್ರಿಕೆ 11/11/01)



ಉದಿತ್ ರಾಜ್ ಕರೆಗೆ ನವ ದೆಹಲಿಯಲ್ಲಿ ಬೌದ್ಧ ಧರ್ಮ ದೀಕ್ಷೆ ಪಡೆಯಲು ಆಗಮಿಸಿದ ಅಸಂಖ್ಯಾತ ದಲಿತರು (ಚಿತ್ರ ಕೃಪೆ: ಹಿಂದೂ ಪತ್ರಿಕೆ 11.11.2001)

12

## ಅನುಬಂಧ - VI

### 1920 ರಲ್ಲಿ ಬೆಂಗಳೂರಿನಲ್ಲಿ ನಡೆದ

# ದಕ್ಷಿಣ ಭಾರತ ಬೌದ್ಧ ಸಮ್ಮೇಳನದ ಗೊತ್ತುವಳಿಗಳು*

ಸ್ಥಳ: ಮಾಯೋ ಹಾಲ್, ಬೆಂಗಳೂರು. ದಿನಾಂಕ: 21-11-1920

ಅಧ್ಯಕ್ಷತೆ: ಪಿ. ಲಕ್ಷ್ಮೀ ನರಸು, ಬಿ.ಎ.
ಪ್ರಾಚಾರ್ಯರು,
ಪಾಚಯಪ್ಪ ಕಾಲೇಜು, ಮದ್ರಾಸು

**ಗೊತ್ತುವಳಿ - 1 :**

ಈ ಸಮ್ಮೇಳನವು ಗೌರವಾನ್ವಿತ ದೊರೆಗಳು, ಭಾರತದಲ್ಲಿನ ಬ್ರಿಟಿಷರ ಸರ್ಕಾರದ ಮುಖ್ಯಸ್ಥರು ಆದ ಮೆಜೆಸ್ಟಿ ದೊರೆ 5 ನೇ ಜಾರ್ಜ ಸಾಮ್ರಾಟರಿಗೆ ಭಕ್ತಿ ಮತ್ತು ವಿನಮ್ರತೆಯನ್ನು ಅಭಿವ್ಯಕ್ತಿಸುತ್ತದೆ.

**ಗೊತ್ತುವಳಿ - 2 :**

ಈ ಸಮ್ಮೇಳನವು ಎಲ್ಲ ಬಡಜನತೆಗೆ, ವಿಶೇಷವಾಗಿ 60 ಮಿಲಿಯನ್ ಶೋಷಿತ ವರ್ಗಗಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ನೀಡಬೇಕೆಂದು ಭಾರತ ಸರ್ಕಾರವನ್ನು ಪ್ರಾರ್ಥಿಸುತ್ತದೆ. ಈ ಬೇಡಿಕೆಯನ್ನು ಮಾಂಟೆಗ್ಯೂ ಚೆಮ್ಸ್ ಪರ್ಡರವರ ಹೊಸ ರಾಜಕೀಯ ಸುಧಾರಣೆಗಳ ಹಿನ್ನಲೆಯಲ್ಲಿ ಮಾನ್ಯ ಮಾಡಲು ಹಾಗೂ ಈ ಶೋಷಿತ ವರ್ಗಗಳು ಆ ಮೂಲಕ ಉನ್ನತ ಶಿಕ್ಷಣ ಪಡೆಯಲು ಸವಲತ್ತುಗಳನ್ನು ನೀಡಲು ಪ್ರಾರ್ಥಿಸುತ್ತದೆ.

**ಗೊತ್ತುವಳಿ - 3 :**

ಈ ಸಮ್ಮೇಳನವು ಬರುವ 1921 ರ ಜನಗಣತಿಯಲ್ಲಿ ಭಾರತದ ಬೌದ್ಧರನ್ನು ಪ್ರತ್ಯೇಕ ಕಾಲಂಗಳಲ್ಲಿ ನಮೂದಿಸಲು ಪ್ರಾರ್ಥಿಸುತ್ತದೆ. ಸರ್ಕಾರದ ಎಲ್ಲಾ ಇಲಾಖೆಗಳಲ್ಲಿ ಜನಸಂಖ್ಯೆಯ ವರ್ಗೀಕರಣ ಮಾಡುವಾಗ ಪ್ರತ್ಯೇಕ ಕಾಲಂಗಳನ್ನು ಬೌದ್ಧರಿಗಾಗಿ ಸೃಜಿಸಲು ವಿನಂತಿಸುತ್ತದೆ.

---

* Aloysius G. (1998) : Religion as Emancipatory Identity New Age International Pvt. Ltd., Bangalore.

**ಗೊತ್ತುವಳಿ - 4 :**

ಪರಮಪೂಜ್ಯ ಗೌರವಾನ್ವಿತ ಮೈಸೂರು ಮಹಾರಾಜರಿಗೆ ತಾವು, ಪ್ರಜೆಗಳ ಕಲ್ಯಾಣಕ್ಕಾಗಿ ವಿಶೇಷವಾಗಿ ಶಿಕ್ಷಣಕ್ಕಾಗಿ ತೆಗೆದುಕೊಂಡಿರುವ ವಿಶೇಷ ಆಸಕ್ತಿಗಳಿಗಾಗಿ ಈ ಸಮ್ಮೇಳನವು ವಿನಮ್ರತೆಯ ವಂದನೆಗಳನ್ನು ಅರ್ಪಿಸುತ್ತದೆ.

**ಗೊತ್ತುವಳಿ - 5 :**

ಈ ಸಮ್ಮೇಳನವು ಪರಮಪೂಜ್ಯ ಗೌರವಾನ್ವಿತ ಮೈಸೂರು ಮಹಾರಾಜರಿಗೆ ಗಂಡು ಮಗು ಜನಿಸಿದ್ದಕ್ಕೆ ಹರ್ಷ ವ್ಯಕ್ತಪಡಿಸುತ್ತದೆ. ಮೈಸೂರಿನ ಮುಂದಿನ ದಿನಗಳಲ್ಲಿ ಪಟ್ಟಕ್ಕೆ ಏರುವ ದೊರೆಗೆ ಉತ್ತಮ ಭವಿಷ್ಯಕ್ಕಾಗಿ ಹಾರೈಸುತ್ತದೆ.

**ಗೊತ್ತುವಳಿ - 6 :**

ಮೈಸೂರು ಸರ್ಕಾರವು ಇನ್ಸ್‌ಪೆಕ್ಟರ್ ಜನರಲ್ ಆಫ್ ಎಜ್ಯುಕೇಷನ್‌ರವರ ಮೂಲಕ ಇತರ ಹಿಂದುಳಿದ ವರ್ಗಗಳಿಗೆ ಪರಮಪೂಜ್ಯ ಗೌರವಾನ್ವಿತ ಮೈಸೂರು ದೊರೆಗಳು ನೀಡಿರುವ ವಿದ್ಯಾರ್ಥಿ ವೇತನ, ಉನ್ನತ ಶಿಕ್ಷಣದ ಸೌಲಭ್ಯಗಳನ್ನು ದಲಿತರಾದ ಬೌದ್ಧ ಕುಟುಂಬಗಳಿಗೆ ಮಂಜೂರು ಮಾಡಲು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

**ಗೊತ್ತುವಳಿ - 7 :**

ಈ ಸಮಾವೇಶವು ಭಾರತ ಸರ್ಕಾರವನ್ನು ಭಾರತೀಯ ಬೌದ್ಧರನ್ನು ರಾಜ್ಯಸಭೆಗೆ, ವಿಧಾನ ಪರಿಷತ್ತುಗಳಿಗೆ ಸದಸ್ಯರನ್ನಾಗಿ ನಾಮಕರಣ ಮಾಡಿಕೊಳ್ಳಲು, ಕ್ರೈಸ್ತ ಮತ್ತು ಮುಸ್ಲಿಂರನ್ನು ಹೊರತುಪಡಿಸಿ ಇರುವ ಜಾತಿ ಸಮುದಾಯವನ್ನು ಅಂದರೆ - ದಲಿತ ಹಿಂದುಳಿದವರನ್ನು ಪ್ರತಿನಿಧಿಸಲು ನಾಮಕರಣ ಮಾಡಿಕೊಳ್ಳಲು ಪ್ರಾರ್ಥಿಸುತ್ತದೆ.

**ಗೊತ್ತುವಳಿ - 8 :**

ಈ ಸಮ್ಮೇಳನವು ಕೇಂದ್ರ ಸರ್ಕಾರವನ್ನು ಭಗವಾನ್ ಬುದ್ದರ ಜನ್ಮ ದಿನವನ್ನು 'ವೈಶಾಖಿ' ರಜಾ ದಿನವೆಂದು ಘೋಷಿಸಲು ವಿನಮ್ರವಾಗಿ ಪ್ರಾರ್ಥಿಸುತ್ತದೆ.

**ಗೊತ್ತುವಳಿ - 9 :**

ಈ ಸಮ್ಮೇಳನವು ಬೌದ್ಧ ಜನತೆಯ ಮದುವೆ, ವಿಚ್ಛೇದನ ಮತ್ತು ಸಂಪ್ರದಾಯಗಳ (Inheritance) ಕುರಿತು ಕಾನೂನು ನಿಯಮಗಳನ್ನು, ವಿಧಿಗಳನ್ನು ರಚಿಸಲು ಈ ಕೆಳಗಿನ ಗೌರವಾನ್ವಿತರನ್ನು ಒಳಗೊಂಡ ಒಂದು ಸಮಿತಿಯನ್ನು ರಚಿಸಲು ತೀರ್ಮಾನಿಸುತ್ತದೆ.

| | | | | |
|---|---|---|---|---|
| 1. | ಪ್ರೊ॥ ಪಿ. ಲಕ್ಷ್ಮೀ ನರಸು | ಅಧ್ಯಕ್ಷರು | ಬೌದ್ಧ ಸಂಘ | ಮದ್ರಾಸ್ |
| 2. | ಎಂ. ವೈ. ಮುರುಗೇಸಂ | ಅಧ್ಯಕ್ಷರು | ಬೌದ್ಧ ಸಂಘ | ಮಾರಿಕುಪ್ಪಂ, ಕೆ.ಜಿ.ಎಫ್.ಕೋಲಾರ |
| 3. | ಎಂ. ರಂಗಸಾಮಿಯಾರ್ | ಅಧ್ಯಕ್ಷರು | ಬೌದ್ಧ ಸಂಘ | ಬೆಂಗಳೂರು |
| 4. | ಎ. ಪಿ. ಪೆರಿಯಸ್ವಾಮಿ ಪುಲವರ್ | ಅಧ್ಯಕ್ಷರು | ಬೌದ್ಧ ಸಂಘ | ತಿರುಪತ್ತೂರ, |
| 5. | ಜಿ. ಅಪ್ಪಾದೊರೈಯಾರ್ | ಅಧ್ಯಕ್ಷರು | ಬೌದ್ಧ ಸಂಘ | ಚಾಂಪಿಯನ್ ರೀಪ್, ಕೆ.ಜಿ.ಎಫ್.ಕೋಲಾರ |
| 6. | ವಿ. ಕೃಷ್ಣಸ್ವಾಮೈಯರ್ | ಅಧ್ಯಕ್ಷರು | ಬೌದ್ಧ ಸಂಘ | ರಂಗೂನ (ಭರ್ಮಾ) |
| 7. | ಸಿ. ಮಾಣಿಕ್ಕೇರ್ | ಕಾರ್ಯದರ್ಶಿ | ಬೌದ್ಧ ಸಂಘ | ಪೆರಂಬೂರ |
| 8. | ವಿ.ಪಿ. ಕುಬ್ರಮಣಿಯಾರ್ | ಕಾರ್ಯದರ್ಶಿ | ಬೌದ್ಧ ಸಂಘ | ನರಸಿಂಗಪುರ |
| 9. | ಟಿ. ಸೈರ್ವಿ ಮುರುಗೇಸರ್ | ಕಾರ್ಯದರ್ಶಿ | ದಕ್ಷಿಣ ಭಾರತೀಯ ಬೌದ್ಧ ಸಮ್ಮೇಳನ | ಬೆಂಗಳೂರು |
| 10. | ಆರ್. ಎಲ್. ಭಮಾಘಡಿಯಾರ್ | ಕಾರ್ಯದರ್ಶಿ | ಬೌದ್ಧ ಸಂಘ | ಮಾರಿಕುಪ್ಪಂ ಕೆ.ಜಿ.ಎಫ್.ಕೋಲಾರ |
| 11. | ಆರ್. ವಿ. ಸಭಾಪತಿಯಾರ್ | ಕಾರ್ಯದರ್ಶಿ | ಬೌದ್ಧ ಸಂಘ | ಸಿಕಂದರಾಬಾದ್ |
| 12. | ಸಿ.ಪಿ. ಪಟ್ಟಾಭಾರಾಮರ್ | ಸಂಪಾದಕರು | ಬೌದ್ಧ ಸಂಘ | 'ದಿ ತಮಿಳನ್ ಪತ್ರಿಕೆ |
| 13. | ಸಿ. ದೊರೆಸ್ವಾಮಿಯರ್ | ಕಾರ್ಯದರ್ಶಿ | ಬೌದ್ಧ ಸಂಘ | ಸಿಕಂದರಾಬಾದ್ |
| 14. | ಎ. ಯತಿರಾಜರ್ | ಕಾರ್ಯದರ್ಶಿ | ಬೌದ್ಧ ಸಂಘ | ಅಗರಂ, ಬೌದ್ಧ ಸಂಘ |
| 15. | ಟಿ. ಚಿತ್ರೆ ಉಪಾಸಕರ್ | ಅಧ್ಯಕ್ಷರು | ಬೌದ್ಧ ಸಂಘ | ಪೆರಂಬೂರು |

**ಗೊತ್ತುವಳಿ - 10 :**

ಈ ಸಮ್ಮೇಳನವು ಭಾರತ ಸರ್ಕಾರಕ್ಕೆ ದಯಾಪರವಾಗಿ ವಿನಂತಿಸಿಕೊಳ್ಳುತ್ತದೆ. ಅದೇನೆಂದರೆ, ಈ ಸಮ್ಮೇಳನದ ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ ಎಂ. ವೈ. ಮುರುಗೇಸಂ ಇವರನ್ನು ಪತ್ರ ವ್ಯವಹಾರ ಮಾಡಲು ಹಾಗೂ ಈ ಸಮ್ಮೇಳನದ ಗೊತ್ತುವಳಿಗಳನ್ನು ಭಾರತ ಸರ್ಕಾರಕ್ಕೆ ಹಾಗೂ ಈ ಕೆಳಗಿನ ಪ್ರಾಧಿಕಾರಗಳಿಗೆ ಕಳುಹಿಸಲು ನಾಮಕರಣ ಮಾಡುತ್ತದೆ. ಗೊತ್ತುವಳಿಗಳಿಗೆ ಸಂಬಂಧಿಸಿದಂತೆ ಸರ್ಕಾರದ ತುರ್ತುಗಮನ ಸೆಳೆಯಲು ಈ ಸಮ್ಮೇಳನದ ಗೊತ್ತುವಳಿ ಪ್ರತಿಗಳನ್ನು ಕಳುಹಿಸಲು ತೀರ್ಮಾನಿಸುತ್ತದೆ.

1. ಕಾರ್ಯದರ್ಶಿಗಳು, ಭಾರತ ಸರ್ಕಾರ, ದೆಹಲಿ.
2. ಮಿಲಿಟರಿ ಕಾರ್ಯದರ್ಶಿಗಳು, ಭಾರತ ಸರ್ಕಾರ, ರಕ್ಷಣಾ ಇಲಾಖೆ, ಸಿಮ್ಲಾ
3. ಕಾರ್ಯದರ್ಶಿಗಳು, ಮದ್ರಾಸ ಸರ್ಕಾರ, ಮದ್ರಾಸ.
4. ಕಾರ್ಯದರ್ಶಿಗಳು, ಪೂಜ್ಯ ಮೈಸೂರು ಮಹಾರಾಜರ ಸರ್ಕಾರ, ಮೈಸೂರು.
5. ಕಾರ್ಯದರ್ಶಿಗಳು, ಪೂಜ್ಯ ಹೈದರಾಬಾದ್ ನಿಜಾಮರ್ ಸರ್ಕಾರ, ಹೈದರಾಬಾದ್.

